# ಕಥಾಸಂಗ್ರಹ

## Vol. II.

COMPILED BY

DANIEL SANDERSON,
WESLEYAN MISSIONARY.

NEW AND REVISED EDITION.

Mysore:
WESLEYAN PUBLISHING HOUSE
1916.

Price, Re. 1.] 

# CONTENTS.

## PART IV.

### EXTRACTS FROM THE RAMAYANA.

# PART V.

## THE TEN INCARNATIONS OF VISHNU.



# PART VI.

# ಕಥಾಸಂಗ್ರಹ

## ೪ ನೆಯ ಭಾಗ

# ರಾಮಾಯಣಾದಿ ಗ್ರಂಥಗಳಿಂದ ಸಂಗ್ರಹಿಸಿದ ಕಥೆಗಳು

---

## 1. RAVANA'S CONQUEST OF THE UNIVERSE.

## ೧. ರಾವಣನ ದಿಗ್ವಿಜಯವು.

ಒಂದಾನೊಂದು ಕಾಲದಲ್ಲಿ ಸನಕ ಸನಂದನ ಸನತ್ಕುಮಾರನೇ ಮೊದಲಾದ ಮಹ
ರ್ಷಿಗಳು ಲಕ್ಷ್ಮೀಪತಿಯಾದ ನಾರಾಯಣನನ್ನು ಸೇವಿಸುವುದಕ್ಕಾಗಿ ವೈಕುಂಠಲೋಕ
ವನ್ನೈಯ್ದಿ ಆ ಮಹಾತ್ಮನ ಸನ್ನಿಧಿಯನ್ನು ಕುರಿತು ಹೋಗುತ್ತಿರಲು ; ಅರಮನೆಯ
ದ್ವಾರಪಾಲಕರಾದ ಜಯವಿಜಯರು—ನಮ್ಮೊಡೆಯನ ಅಪ್ಪಣೆಯಿಲ್ಲದೆ ಒಳಗೆ ಪ್ರವೇಶಿ
ಸಕೂಡದೆಂದು ತಡೆದುದರಿಂದ ಆ ಋಷಿಗಳು ಬಹು ಕುಪಿತರಾಗಿ—ಅಹಂಕಾರಿಗಳಾದ
ಎಲೈ ದೌವಾರಿಕರೇ, ನೀವು ಭೂಲೋಕದಲ್ಲಿ ರಾಕ್ಷಸರಾಗಿ ಹುಟ್ಟಿರಿ ಎಂದು ಶಾಪ
ವನ್ನೀಯಲು ; ಆ ಮೇಲೆ ಆ ಜಯವಿಜಯರು ಭಯಭ್ರಾಂತರಾಗಿ ಆ ಯೋಗಿಗಳನ್ನು
ಒಳಗೆ ಬಿಟ್ಟರು. ಆಗ ಅವರು ಒಳಪೊಕ್ಕು ಮಹಾವಿಷ್ಣುವನ್ನು ಸೇವಿಸಿ ಅಲ್ಲಿಂದ
ಹೊರಟು ತಮ್ಮ ನಿವಾಸಸ್ಥಾನವಾದ ಸತ್ಯಲೋಕವನ್ನು ಕುರಿತು ತೆರಳಿದರು. ತರು
ವಾಯ ಜಯವಿಜಯರು ಚಿಂತಾಕ್ರಾಂತರಾಗಿ ವಿಷ್ಣುವಿನ ಬಳಿಗೆ ಹೋಗಿ ದೈನ್ಯದಿಂದ
ಕೂಡಿದವರಾಗಿ ತಮಗೆ ಬಂದೊದಗಿದ ಮುನಿಶಾಪವೃತ್ತಾಂತವನ್ನು ಹೇಳಿಕೊಂಡು
ಬಹಳವಾಗಿ ದುಃಖಿಸಲು; ವಿಷ್ಣುವು ಸ್ವಲ್ಪಕಾಲ ಯೋಚಿಸಿ, ಅವರನ್ನು ಕುರಿತು—ಎಲೈ
ಜಯವಿಜಯರಿರಾ, ಆ ಮುನೀಂದ್ರರ ಶಾಪವು ಅನುಭವದಿಂದಲ್ಲದೆ ಅನ್ಯಥಾ ಕ್ಷಯಿ

ಸುವುದಿಲ್ಲವು. ಆದರೆ ಭೂಲೋಕದಲ್ಲಿ ನೀವು ಏಳು ಜನ್ಮಗಳೆನ್ನೆತ್ತಿ ನನಗೆ ಸ್ನೇಹಿತರಾಗಿಯೇ ಇದ್ದು ತಿರಿಗಿ ನನ್ನ ಸನ್ನಿಧಾನಕ್ಕೆ ಬರುವುದು ನಿಮಗೆ ಇಷ್ಟವೋ? ಅಥವಾ ಮೂರು ಜನ್ಮಗಳನ್ನೆತ್ತಿ ನನಗೆ ವಿರೋಧಿಗಳಾಗಿದ್ದು ಆ ಮೇಲೆ ನನ್ನ ಸನ್ನಿಧಿಗೆ ಬರುವಿರೋ? ಈ ಎರಡು ವಿಧಗಳಲ್ಲಿ ನಿಮಗೆ ಸಮ್ಮತವಾದುದನ್ನು ಹೇಳಿರಿ ಎಂದನು. ಆಗ ಅವರು--ಸ್ವಾಮೀ, ಸಪ್ತಜನ್ಮಗಳಾಗುವ ವರೆಗೂ ನಾವು ನಿನ್ನ ಸನ್ನಿಧಿಯನ್ನು ಬಿಟ್ಟಿರಲಾರೆವು. ನಾವು ನಿನಗೆ ವಿರೋಧಿಗಳಾದಾಗ್ಯೂ ಚಿಂತೆಯಿಲ್ಲ. ಜನ್ಮತ್ರಯದಲ್ಲಿಯೇ ತಿರಿಗಿ ನಿನ್ನ ಸನ್ನಿಧಿಯನ್ನು ಹೊಂದುವ ಹಾಗೆ ಅನುಗ್ರಹಿಸಬೇಕೆಂದು ಬಹುವಾಗಿ ಬೇಡಿಕೊಳ್ಳಲು; ಆಗ ವಿಷ್ಣುವು ಅವರಿಗೆ ಹಾಗೇ ಆಗಲಿ ಎಂದು ಅಪ್ಪಣೆಯನ್ನು ಕೊಟ್ಟು ಕಳುಹಿಸಿದನು.

ಅನಂತರದಲ್ಲಿ ಅವರು ಮೊದಲನೆಯ ಸಾರಿ ಕಶ್ಯಪಮುನಿಯ ಪತ್ನಿಯಾದ ದಿತಿ ಎಂಬವಳ ಗರ್ಭದಲ್ಲಿ ಹುಟ್ಟಿ ಹಿರಣ್ಯಾಕ್ಷ, ಹಿರಣ್ಯಕಶಿಪು ಎಂಬ ಹೆಸರುಗಳನ್ನಾಂತು ವೃದ್ಧಿಯಾಗುತ್ತ ವಿಷ್ಣುವಿನಲ್ಲಿ ಹಗೆತನವನ್ನು ಬೆಳೆಸುತ್ತ ಬಂದರು. ಆಗ ವಿಷ್ಣುವು ವರಾಹಾವತಾರವನ್ನು ಧರಿಸಿ ಹಿರಣ್ಯಾಕ್ಷನನ್ನೂ ನೃಸಿಂಹಾವತಾರವನ್ನು ಧರಿಸಿ ಹಿರಣ್ಯಕಶಿಪುವನ್ನೂ ಸಂಹರಿಸಿದನು. ಆ ಮೇಲೆ ಅವರು ಎರಡನೆಯ ಜನ್ಮವನ್ನು ಹೊಂದಿದ ಸಂಗತಿಯು ಹೇಗೆಂದರೆ—ಬ್ರಹ್ಮನ ಮಾನಸಪುತ್ರನಾದ ಪುಲಸ್ತ್ಯನೆಂಬೋರ್ವ ಮುನಿಯಿದ್ದನು. ಆತನಿಗೆ ವಿಶ್ರವಸ್ಸು ಎಂಬ ಕುಮಾರನುದಿಸಿದನು. ಇವನ ಧರ್ಮಪತ್ನಿಯ ಗರ್ಭದಲ್ಲಿ ಜನಿಸಿದ ಒಬ್ಬ ಮಗನು ವೈಶ್ರವಣನೆಂಬ ನಾಮವನ್ನು ಧರಿಸಿ, ಅಪಾರವಾದ ತಪಸ್ಸಿನಿಂದ ಕಮಲಸಂಭವನನ್ನು ಮೆಚ್ಚಿಸಿ ಆತನಿಂದ ಉತ್ತರದಿಗೀಶತ್ವವನ್ನೂ ಧನಾಧೀಶತ್ವವನ್ನೂ ಮತ್ತು ಕಾಮಗಾಮಿಯಾದ ಒಂದು ವಿಮಾನವನ್ನೂ ಪಡೆದುಕೊಂಡು ತಂದೆಯಾದ ವಿಶ್ರವಸ್ಸಿನ ಬಳಿಗೆ ಬಂದು ನಮಸ್ಕರಿಸಿ, ತಾನು ಸಂಪಾದಿಸಿಕೊಂಡು ಬಂದ ವರಗಳ ವೃತ್ತಾಂತವನ್ನೆಲ್ಲಾ ಸಾಂಗವಾಗಿ ವಿವರಿಸಿ, ತನ್ನ ನಿವಾಸಕ್ಕೆ ಯೋಗ್ಯವಾದ ಒಂದು ಸ್ಥಳವನ್ನು ನಿರ್ದೇಶಿಸಿ ಅಪ್ಪಣೆಯನ್ನು ಕೊಡಿಸಬೇಕೆಂದು ಕೇಳಿಕೊಂಡುದರಿಂದ ಸಂತುಷ್ಟನಾದ ವಿಶ್ರವಸ್ಸು—ಎಲೈ ಕುಲಭೂಷಣನಾದ ಕುಮಾರನೇ, ಕೇಳು. ಒಡಹುಟ್ಟುಗಳಾದ ಮಾಲಿ ಸುಮಾಲಿ ಮಾಲ್ಯವಂತ ಎಂಬ ಈ ಮೂರು ಮಂದಿ ರಕ್ಕಸರು ಮೊದಲು ದಕ್ಷಿಣದಿಕ್ಕಿನಲ್ಲಿರುವ ಲವಣಸಮುದ್ರ ಮಧ್ಯದಲ್ಲಿ ಶತಯೋಜನವಿಸ್ತಾರವಾದ ತ್ರಿಕೂಟಾಚಲದ ನಟ್ಟನಡುವೆ ಅಮರಾವತಿಗಿಂತ ಅತಿಸುಂದರವಾದ ಲಂಕೆ ಎಂಬೊಂದು ನಗರವನ್ನು ಮಾಡಿ ಅಲ್ಲಿ ವಾಸಮಾಡಿಕೊಂಡಿದ್ದರು. ಒಂದು ಕಾಲದಲ್ಲಿ ವಿಷ್ಣುವು ದೇವತೆಗಳಿಗಾಗಿ ಅವರೊಡನೆ ಯುದ್ಧವನ್ನು ಮಾಡಿ ಸೋಲಿಸಿದುದರಿಂದ ಅವರು ಭಯಕಂಪಿತರಾಗಿ ಲಂಕಾನಗರವನ್ನು ಬಿಟ್ಟು ತಮ್ಮ ತಮ್ಮ ಸಂಸಾರಸಮೇತರಾಗಿ ಓಡಿಹೋಗಿ ರಸಾತಲದಲ್ಲಿ ಅವಿತುಕೊಂಡಿದ್ದಾರೆ. ಅದುಕಾರಣ ಆ ಲಂಕಾಪುರವು ನೀನಿರುವುದಕ್ಕೆ ಅನುಕೂಲಸ್ಥಾನವಾಗಿದೆ. ಅಲ್ಲಿಗೆ ಹೋಗಿ ಸುಖದಿಂದಿರು ಎಂದು ಅಪ್ಪಣೆಯನ್ನಿತ್ತನು. ಅನಂತರದಲ್ಲಿ ವೈಶ್ರವಣನು ಉತ್ತರದಿಕ್ಕಿನಲ್ಲಿರುವ ಯಕ್ಷಜನಜಾಲವನ್ನು ಕರೆದುಕೊಂಡು ಬ್ರಹ್ಮನು

ಕೊಟ್ಟಿದ್ದ ವಿಮಾನವನ್ನೇರಿ ಹೊರಟು ಆ ಲಂಕಾನಗರವನ್ನು ಸೇರಿ ಅಲ್ಲಿ ಪ್ರಭುತ್ವ ವನ್ನು ಮಾಡಿಕೊಂಡು ಸುಖದಿಂದಿರುತ್ತಿದ್ದನು.

ಹೀಗಿರಲು ಮೊದಲು ಹೋಗಿ ರಸಾತಲದಲ್ಲಿ ಅವಿತುಕೊಂಡಿದ್ದ ಮಾಲಿ ಸುಮಾಲಿ ಮಾಲ್ಯವಂತರೆಂಬ ಮೂರು ಮಂದಿ ರಕ್ಕಸರಲ್ಲಿ ಒಬ್ಬನಾದ ಸುಮಾಲಿ ಎಂಬವನು ಭೂಲೋಕದಲ್ಲಿ ಸಂಚರಿಸಬೇಕೆಂಬ ಅಭಿಪ್ರಾಯದಿಂದ ತನ್ನ ಮಗಳಾದ ಕೈಕಸೆಯನ್ನು ಕರೆದುಕೊಂಡು ರಸಾತಲದಿಂದ ಹೊರಟು ಬಂದು ಭೂಲೋಕದಲ್ಲಿ ಸಂಚರಿಸುತ್ತಿರಲು; ಒಂದಾನೊಂದು ದಿನ ವೈಶ್ರವಣನು ಪಿತೃದರ್ಶನಾಸಕ್ತನಾಗಿ ವಿಮಾನದಲ್ಲಿ ಕುಳಿತು ಹೊರಟು ಗಗನಮಾರ್ಗದಲ್ಲಿ ದ್ವಿತೀಯಸೂರ್ಯನಂತೆ ಪ್ರಕಾಶಿಸುತ್ತ ತಂದೆಯ ಬಳಿಗೆ ಬಂದು ಆತನಿಗೆ ವಂದಿಸಿ ತಿರಿಗಿ ಲಂಕಾಪಟ್ಟಣವನ್ನು ಕುರಿತು ತೆರಳಿದುದನ್ನು ನೋಡಿ ಅಸೂಯಾಭರಿತನಾಗಿ—ನಮ್ಮ ಲಂಕಾನಗರವನ್ನು ಇವನಿಂದ ಕಿತ್ತುಕೊಂಡು ನಮ್ಮ ನಿವಾಸಯೋಗ್ಯವಾಗಿ ಮಾಡಿಕೊಳ್ಳುವುದಕ್ಕೆ ಏನು ಉಪಾಯವನ್ನು ಮಾಡಬೇಕೆಂದು ಸ್ವಲ್ಪಕಾಲದ ವರೆಗೂ ಯೋಚಿಸಿ ಸಮೀಪವರ್ತಿನಿಯಾಗಿರುವ ತನ್ನ ಮಗಳಾದ ಕೈಕಸೆಯನ್ನು ನೋಡಿ—ಎಲೈ ಪುತ್ರಿಯೇ, ನೀನು ಈ ಆಶ್ರಮದಲ್ಲಿರುವ ವಿಶ್ರವಸ್ಸೆಂಬ ಮಹಾಮುನಿಯ ಬಳಿಗೆ ಹೋಗಿ ಆತನನ್ನು ವರಿಸಿ ಆ ಮಹಾತ್ಮನಿಂದ ಮಕ್ಕಳನ್ನು ಪಡೆದರೆ ಆ ಮಕ್ಕಳ ಸಹಾಯದಿಂದ ನಾವು ಲಂಕಾಪಟ್ಟಣವನ್ನು ಪುನಃ ಹೊಂದಬಹುದು ಎಂದು ಹೇಳಿ ಆಕೆಯನ್ನು ಆ ಮುನಿಯ ಬಳಿಗೆ ಕಳುಹಿಸಿದನು.

ಆಗ ಸರ್ವಾಂಗಸುಂದರಿಯೂ ಕೋಮಲೆಯೂ ಆದ ಆ ಕೈಕಸೆಯು ಸಾಯಂಸಂಧ್ಯಾಸಮಯದಲ್ಲಿ ಆ ಮುನಿಪತಿಯ ಸಮೀಪವನ್ನೈಯ್ದಿ ನಮ್ರಾನನೆಯಾಗಿ ನಿಂತು ತನ್ನ ಪಾದಾಂಗುಷ್ಠದಿಂದ ಭೂಮಿಯನ್ನು ಗೀರುತ್ತ ಇರಲು; ಆತನು ತನ್ನ ಜ್ಞಾನದೃಷ್ಟಿಯಿಂದ ಈಕೆಯ ಮನೋಗತವನ್ನು ತಿಳಿದು ಈಕೆಯನ್ನು ಕುರಿತು—ಎಲೈ ಕಾಂತಾಮಣಿಯೇ, ನೀನು ಬಂದುದಕ್ಕೆ ಕಾರಣವು ತಿಳಿಯಿತು. ರಾಕ್ಷಸ ಸಂಚಾರಕ್ಕೆ ಯೋಗ್ಯವಾದ ಈ ಮುಚ್ಚಂದೆಯ ಹೊತ್ತಿನಲ್ಲಿ ನೀನು ಪುತ್ರಾಪೇಕ್ಷಿಣಿಯಾಗಿ ನನ್ನ ಬಳಿಗೆ ಬಂದುದರಿಂದ ಲೋಕಕಂಟಕರೂ ಭಯಂಕರಾಕಾರರೂ ಆದ ಇಬ್ಬರು ಮಕ್ಕಳೂ ಒಬ್ಬಳು ಮಗಳೂ ನಿನ್ನ ಗರ್ಭದಲ್ಲಿ ಹುಟ್ಟುವರು ಎಂದು ಹೇಳಲು ; ಆಕೆಯು ಅಪಾರದುಃಖದಿಂದ ಆ ಮುನಿಯನ್ನು ನೋಡಿ—ಧಾರಾರೂಪವಾಗಿ ಕಣ್ಣೀರನ್ನು ಸುರಿಸಲು; ಆಗಲಾ ಯತಿಯು ದಯಾವಂತನಾಗಿ—ಎಲೈ ಸುಂದರಿಯೇ, ಧರ್ಮಿಷ್ಠನಾಗಿಯೂ ನಮ್ಮ ಕುಲಕ್ಕೆ ಭೂಷಣನಾಗಿಯೂ ಮತ್ತು ಸಜ್ಜನನಾಗಿಯೂ ಇರುವ ಇನ್ನೊಬ್ಬ ಮಗನು ಹುಟ್ಟುವನು. ಹೋಗು ಎಂದು ತಿರಿಗಿ ಅಪ್ಪಣೆಯನ್ನು ಕೊಟ್ಟುದರಿಂದ ಆ ಕೈಕಸೆಯು ಆತನಿಗೆ ನಮಸ್ಕಾರವನ್ನು ಮಾಡಿ ಹಿಂದಿರುಗಿ ತಂದೆಯ ಬಳಿಗೆ ಬಂದು ನಡೆದ ವರ್ತಮಾನವನ್ನೆಲ್ಲಾ ಹೇಳಿದಳು. ಆಗ ಸುಮಾಲಿಯು ಸಂತೋಷಿಸಿ ಮೊಮ್ಮಕ್ಕಳ ಉದಯವನ್ನು ನಿರೀಕ್ಷಿಸುತ್ತ ಆ ಮುನಿವನದಲ್ಲಿಯೇ ಇರುತ್ತಿದ್ದನು.

ಅನಂತರದಲ್ಲಿ ಕೆಲವು ದಿನಗಳು ಕಳೆದುಹೋದ ಮೇಲೆ ಕೈಕಸೆಯು ಹತ್ತು ತಲೆಗಳೂ ಇಪ್ಪತ್ತು ತೋಳುಗಳೂ ಉಳ್ಳ ಒಂದು ಪುರುಷಶಿಶುವನ್ನು ಪಡೆದಳು.

ಆಗ ಭೂಮ್ಯಾಕಾಶಗಳಲ್ಲಿ ಭಯಂಕರವಾದ ಉತ್ಪಾತಗಳಾದುವು. ಇಂದ್ರಾದಿದೇವ ತೆಗಳೆಲ್ಲಾ ಗಡಗಡನೆ ನಡುಗಿದರು. ಮೇಘಗಳು ರಕ್ತವೃಷ್ಟಿಯನ್ನು ಸುರಿಸಿದುವು. ನಕ್ಷತ್ರಗಳು ಭೂಮಿಗೆ ಉದುರಿದುವು. ಇಂದ್ರಧನುಸ್ಸು ಮೂಡಿ ಆಕಾಶದಲ್ಲಿ ಕವಿ ಯಿತು. ಆ ಮೇಲೆ ವಿಶ್ರವಸ್ಸು ಅನ್ವರ್ಥವಾಗಿ ಆ ಶಿಶುವಿಗೆ ದಶಮುಖನೆಂದು ನಾಮ ಧೇಯವನ್ನಿಟ್ಟನು. ಅನಂತರದಲ್ಲಿ ಮತ್ತೂ ಕೆಲವು ದಿನಗಳು ಗತಿಸಲು ; ಈ ಲೋಕ ಗಳನ್ನೆಲ್ಲಾ ಒಂದೇ ತುತ್ತುಮಾಡಿ ನುಂಗುವ ದ್ವಿತೀಯ ಯಮನಂತಿರುವ ಕರಾಳಾ ಕಾರನಾದ ಮತ್ತೊಬ್ಬ ಮಗನನ್ನು ಕೈಕಸೆಯು ಹೆತ್ತಳು. ಅವನ ಕಿವಿಗಳು ಬಾನೆಗ ಳಿಗಿಂತ ದೊಡ್ಡವುಗಳಾಗಿದ್ದುದರಿಂದ ಅವನ ತಂದೆಯು ಅವನನ್ನು ಕುಂಭಕರ್ಣನೆಂದು ಕರೆದನು. ಮತ್ತು ಕೆಲವು ದಿವಸಗಳು ಕಳೆದ ಮೇಲೆ ಆ ಕೈಕಸೆಯು ಸೌಮ್ಯಾಕಾರವೂ ಹುಣ್ಣಿಮೆಯ ಚಂದ್ರನಂತೆ ಮುಖವೂ ಕಮಲದೆಸಳುಗಳಂತಿರುವ ಕಣ್ಗಳೂ ವಿಸ್ತಾರ ವಾದ ವಕ್ಷಸ್ಥಲವೂ ತೋರವಾದ ತಲೆಯೂ ನೀಳವಾದ ತೋಳುಗಳೂ ಆನೆಗಳ ಸೊಂಡಿಲುಗಳಂತಿರುವ ತೊಡೆಗಳೂ ಉಳ್ಳವನಾಗಿ ಸೂರ್ಯನಂತೆ ತೇಜಸ್ಸಿನಿಂದ ಪ್ರಕಾಶಿಸುತ್ತಿರುವವನಾದ ಇನ್ನೊಬ್ಬ ಸುಕುಮಾರನನ್ನು ಹೆತ್ತಳು. ಆ ಮುನಿಯು ಆ ಮಗನನ್ನು ನೋಡಿ ಬಹಳವಾಗಿ ಸಂತೋಷಿಸಿ ಅವನಿಗೆ ವಿಭೀಷಣನೆಂದು ನಾಮ ವನ್ನಿಟ್ಟನು. ಮತ್ತು ಕೆಲವು ದಿನಗಳು ಗತಿಸಿದ ಮೇಲೆ ಮೊರದೋಪಾದಿಯಲ್ಲಿ ಉಗುರುಗಳುಳ್ಳವಳೂ ವಿಕಾರವಾದ ಒಡಲುಳ್ಳವಳೂ ಆದ ಒಬ್ಬ ಮಗಳನ್ನು ಹೆತ್ತಳು. ಮುನಿಯು ಅವಳಿಗೆ ಶೂರ್ಪನಖಿ ಎಂದು ಹೆಸರಿಟ್ಟನು. ಈ ನಾಲ್ಕು ಮಂದಿಗಳಲ್ಲಿ ದಶಮುಖ ಕುಂಭಕರ್ಣರೆಂಬವರೇ ಮೊದಲು ವೈಕುಂಠದ್ವಾರಪಾಲಕ ರಾಗಿದ್ದು ಮುನಿಶಾಪದಿಂದ ಎರಡನೆಯ ಜನ್ಮದಲ್ಲಿರುವ ಜಯವಿಜಯರು.

ಅನಂತರದಲ್ಲಿ ಆ ಮುನಿಯು ಮೂರು ಮಂದಿ ಮಕ್ಕಳಿಗೂ ಚೌಲೋಪನಯ ನಾದಿ ಕರ್ಮಗಳನ್ನು ವಿಧ್ಯನುಸಾರವಾಗಿ ಮಾಡಿಸಿದನು. ಹಿರಿಯ ಮಗನಾದ ದಶಾ ನನನಿಗೆ ಲೋಕದ ಜನರಿಗೆ ತೊಂದರೆಯನ್ನೂ ಸಂಕಟವನ್ನೂ ಕೊಡುವುದೇ ಬಲುಗೆಲ ಸವಾಗಿದ್ದಿತ್ತು. ಎರಡನೆಯವನಾದ ಕುಂಭಕರ್ಣನಿಗೆ ಸಿಕ್ಕಿದ ಜನರನ್ನು ಹಿಡಿದು ಭಕ್ಷಿ ಸುವುದೇ ಮುಖ್ಯೋದ್ಯೋಗವಾಗಿದ್ದಿತ್ತು. ವೇದಶಾಸ್ತ್ರಾಗಮಾದಿಗಳ ವಿನೋದವು ವಿಭೀಷಣನ ಕೃತ್ಯವಾಯಿತು. ಹೀಗಿರಲು ಮತ್ತೊಂದು ದಿವಸ ಪಿತೃದರ್ಶನಾರ್ಥ ವಾಗಿ ಲಂಕಾನಗರದಿಂದ ಬಂದು ಹೋಗುತ್ತಿದ್ದ ವೈಶ್ರವಣನನ್ನು ನೋಡಿದ ಕೈಕ ಸೆಯು ತನ್ನ ಹಿರಿಯ ಮಗನನ್ನು ಕರೆದು—ಎಲೈ ದಶವದನನೇ ! ಬ್ರಹ್ಮಕುಲಸಂಜಾ ತನಾದುದಕ್ಕೆ ಈ ಕುಬೇರನಂತೆ ಪೂರ್ಣೈಶ್ವರ್ಯಸಂಪನ್ನನಾದರೆ ಸಾಫಲ್ಯವು. ಹಾಗಾಗದಿದ್ದರೆ ಯಲಹದ ಮರವು ಕಾಯಿಬಿಟ್ಟಂತಾಗುವುದು ಎನಲು ; ಆಗ ದಶ ಮುಖನು—ಎಲೈ ತಾಯಿಯೇ, ನಾನು ಹೆಚ್ಚಾಗಿ ಮಾತಾಡಿದರೆ ನನ್ನನ್ನು ಗಳಹು ರವನೆನ್ನುವಿರಿ. ನಾನು ನಿಮ್ಮ ದಯೆಯಿಂದ ಇನ್ನುಮೇಲೆ ತಪಸ್ಸನ್ನು ಮಾಡುವುದಕ್ಕೆ ಆರಂಭಿಸುವೆನು. ಆದರಿಂದ ನಮ್ಮ ಮುತ್ತಜ್ಜನಾದ ಬ್ರಹ್ಮದೇವರನ್ನು ಮೆಚ್ಚಿಸಿ ಬಹು ವಿಧವಾದ ವರಗಳನ್ನು ಪಡೆದು ನಮ್ಮಣ್ಣನಾದ ಈ ಕುಬೇರನ ಭಾಗ್ಯಕ್ಕಿಂತಲೂ

ಮಿಗಿಲಾದ ಭಾಗ್ಯವುಳ್ಳವನೆಂಬ ಪ್ರಖ್ಯಾತಿಯನ್ನು ಹೊಂದುವೆನು ಎಂಬುದಾಗಿ ಹೇಳಿ ಸಹೋದರರೊಡನೆ ಹೊರಟು ಪಡುವಣ ಕಡಲ ದಡದಲ್ಲಿರುವ ಗೋಕರ್ಣವೆಂಬ ಮಹಾ ಪುಣ್ಯಕ್ಷೇತ್ರಕ್ಕೆ ಬಂದನು. ಆ ಪ್ರದೇಶದಲ್ಲಿ ತಪೋಯೋಗ್ಯವಾದ ಆಶ್ರಮ ವನ್ನು ಮಾಡಿಕೊಂಡು ಅಲ್ಲಿ ಶಾಸ್ತ್ರೋಕ್ತವಾದ ವಿಧಿವಿಧಾನಗಳಿಂದಲೂ ನೇಮನಿಷ್ಠೆಗ ಳಿಂದಲೂ ಕೂಡಿದವರಾದ ಮೂರು ಮಂದಿ ಸಹೋದರರೂ ನಿಶ್ಚಲಚಿತ್ತರಾಗಿಯೂ ತ್ವಕ್ಕು ಚಕ್ಷುಸ್ಸು ಶ್ರೋತ್ರ ಜಿಹ್ವಾ ಘ್ರಾಣಗಳೆಂಬ ಪಂಚೇಂದ್ರಿಯಗಳಿಗೆ ಸ್ಪರ್ಶ ರೂಪ ಶಬ್ದ ರಸ ಗಂಧಗಳೆಂಬ ವಿಷಯಗಳೊಡನೆ ಸಂಬಂಧವಿಲ್ಲದವರಾಗಿಯೂ ನಿರಾ ಹಾರಿಗಳಾಗಿಯೂ ಇದ್ದುಕೊಂಡು ಚಿತ್ತೈಕಾಗ್ರತೆಯನ್ನು ಹೊಂದಿ ಅತ್ಯುಗ್ರವಾದ ತಪಸ್ಸನ್ನು ಮಾಡಲಾರಂಭಿಸಿದರು. ಅವರೊಳಗೆ ಮೊದಲನೆಯವನಾದ ದಶಮುಖನು ಮಳೆ ಚಳಿಗಾಲಗಳಲ್ಲಿ ಬೆಟ್ಟದ ತಪ್ಪಲುಗಳಲ್ಲಿರುವ ಹೊಳೆಗಳಲ್ಲಿಯೂ ಬೇಸಿಗೆಯ ಕಾಲದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿಯೂ ನಿಂತು ಘೋರವಾದ ತಪಸ್ಸನ್ನು ಮಾಡು ತ್ತಿದ್ದನು. ಕುಂಭಕರ್ಣನು ಒಂದೇ ಕಾಲಿನಿಂದ ನಿಂತು ತಪಸ್ಸನ್ನು ಮಾಡುತ್ತಿದ್ದನು. ವಿಭೀಷಣನು ಊರ್ಧ್ವಮುಖಿಯಾಗಿ ನಿಂತು ಸೂರ್ಯನನ್ನು ನೋಡುತ್ತಾ ತಪಸ್ಸನ್ನು ಮಾಡುತ್ತಿದ್ದನು.

ಹೀಗಿರಲು ದಶಮುಖನು ತನ್ನ ತಪಸ್ಸಿನಲ್ಲಿ ಕಳೆದುಹೋಗುತ್ತಿರುವ ಪ್ರತಿಸಂವ ತ್ಸರದ ಕಡೆಯ ದಿನದಲ್ಲಿ ಕ್ರಮವಾಗಿ ತನ್ನದೊಂದೊಂದು ತಲೆಯನ್ನು ಕಡಿದು ಅಗ್ನಿ ಯಲ್ಲಿ ಹೋಮಮಾಡುತ್ತ ಬಂದು ಹತ್ತನೆಯ ಸಂವತ್ಸರದ ಕಡೆಯಲ್ಲಿ ಎಂದಿನಂತೆ ತನ್ನ ಹತ್ತನೆಯ ತಲೆಯನ್ನು ಕತ್ತರಿಸುವುದಕ್ಕೆ ಪ್ರಯತ್ನಿಸಲು ; ಆಗ ಬ್ರಹ್ಮದೇವನು ಅವನ ಬಳಿಗೆ ಬಂದು—ಎಲೈ ಮಗನಾದ ದಶಮುಖನೇ, ನೀನು ಬಹಳವಾಗಿ ಬಳಲಿದೆ. ನಿನಗೆ ಬೇಕಾದ ವರಗಳನ್ನು ಕೇಳು, ಕೊಡುವೆನೆನಲು ; ಆಗ ದಶಮುಖನು ಕಣ್ದೆರೆದು ತನ್ನ ಮುತ್ತಜ್ಜನನ್ನು ನೋಡಿ, ಅತಿ ಭಯಭಕ್ತಿಯಿಂದ ಆತನ ಪಾದಗಳಿಗೆ ವಂದಿಸಿ ಎದ್ದು ಕೈಮುಗಿದುಕೊಂಡು ನಿಂತು—ಎಲೈ ಜಗಜ್ಜನಕನಾದ ಕರುಣಾಳುವೇ, ಸುರಾಸು ರೋರಗ ಯಕ್ಷರಾಕ್ಷಸ ಗರುಡ ಗಂಧರ್ವ ಸಿದ್ಧಸಾಧ್ಯಾದಿಗಳೊಳಗೆ ಯಾರಿಂದಲೂ ಮರಣವು ಸಂಭವಿಸದಂತೆ ನನಗೆ ವರವನ್ನು ಕೊಡು. ಉಳಿದ ಮನುಷ್ಯರೂ ಮೃಗಪ ಕ್ಷಿಗಳೂ ನನಗೆ ಗಣನೆಯಿಲ್ಲವೆಂದು ಹೇಳಲು; ಚತುರ್ಮುಖನು—ಹಾಗೆಯೇ ಆಗಲಿ ಎಂದು ಹರಸಿ ವರವನ್ನು ಕೊಟ್ಟು—ನೀನು ಮೊದಲು ಕಡಿದು ಹೋಮಮಾಡಿದ ತಲೆಗಳೆಲ್ಲಾ ತಿರುಗಿ ಹುಟ್ಟಲಿ, ಇನ್ನು ಮೇಲೆ ನಿನ್ನ ತಲೆಯನ್ನು ಯಾರು ಕಡಿದಾಗ್ಯೂ ಯಥಾವತ್ತಾಗಿ ಮೂಡುತ್ತಿರಲಿ ಎಂದು ಸಂತೋಷದಿಂದ ತಾನಾಗಿಯೇ ಎರಡು ವರ ಗಳನ್ನು ಕೊಟ್ಟು ಅಲ್ಲಿಂದ ಹೊರಟು ವಿಭೀಷಣನಿದ್ದ ಸ್ಥಳಕ್ಕೆ ಬಂದು—ಮಗನಾದ ಎಲೈ ವಿಭೀಷಣನೇ, ತಪಸ್ಸಿನಿಂದ ಬಹಳವಾಗಿ ಬಳಲಿದೆಯಲ್ಲಾ! ಕಂದಾ, ಕುಲಶಿರೋ ಮಣಿಯೇ! ನಿನಗಿಷ್ಟವಾದ ವರಗಳನ್ನು ಬೇಡು ಎನಲು; ಅವನು ತನ್ನ ಮುತ್ತಾತನಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ, ಕೈಗಳನ್ನು ಜೋಡಿಸಿ, ನಿಂತುಕೊಂಡು—ಎಲೈ ಮಹಾತ್ಮನಾದ ಮುತ್ತಜ್ಜನೇ, ನಾನು ನಿನ್ನ ಪಾದಕಮಲಗಳನ್ನು ಕಂಡುದರಿಂದ ಕೃತ

ಕೃತ್ಯನಾದೆನು. ಯಾವ ವಿಧವಾದ ಆಪತ್ತು ಬಂದರೂ ಧರ್ಮಕ್ಕೆ ಚ್ಯುತಿಯಿಲ್ಲದಂತೆ ಕಾಪಾಡಿಕೊಳ್ಳುವುದಕ್ಕೆ ಯೋಗ್ಯವಾದ ವರವನ್ನು ನನಗೆ ದಯಪಾಲಿಸು ಮತ್ತು ಅಭ್ಯಾಸವನ್ನು ಮಾಡದ ನಿನ್ನ ಅಸ್ತ್ರವೇ ಮೊದಲಾದ ಸಕಲದೇವತಾಮಂತ್ರಾಸ್ತ್ರಗಳ ಸಂಧಾನವನ್ನೂ ಉಪಸಂಹಾರವನ್ನೂ ಮಾಡುವ ವಿದ್ಯೆಯು ನನಗೆ ಲಭಿಸುವ ಹಾಗೆ ವರವನ್ನು ಕರುಣಿಸಬೇಕು ಎಂದು ಬೇಡಿಕೊಂಡನು. ಆಗ ಕಮಲಸಂಭವನು ಅವನು ಪ್ರಾರ್ಥಿಸಿಕೊಂಡ ಎರಡು ವರಗಳನ್ನೂ ಕೊಟ್ಟು ಚಿರಜೀವಿಯಾಗಿರು ಎಂದು ತಾನಾಗಿ ಮತ್ತೊಂದು ವರವನ್ನು ದಯಪಾಲಿಸಿ ಆಶೀರ್ವದಿಸಿದನು.

ಅನಂತರದಲ್ಲಿ ಹಿರಣ್ಯಗರ್ಭನು ಕುಂಭಕರ್ಣನಿಗೆ ವರವನ್ನು ಕೊಡಬೇಕೆಂದು ಆತನಿರುವ ತಪೋವನಾಭಿಮುಖನಾಗಿ ಬರುತ್ತಿರಲು ; ಆಗ ಇಂದ್ರಾದಿ ದೇವತೆಗಳೆಲ್ಲರೂ ಬಂದು ಸರಸ್ವತೀಪತಿಯನ್ನು ಕುರಿತು—ದೇವನೇ, ನೀನು ಕುಂಭಕರ್ಣನಿಗೆ ವರವನ್ನು ಕೊಡುವುದು ಉಚಿತವಲ್ಲ. ಇವನು ಈಗಲೇ ತ್ರಿಜಗಜ್ಜನರನ್ನೆಲ್ಲಾ ಹಿಡಿದು ಹಿಂಸಿಸುತ್ತ ಭಕ್ಷಿಸುತ್ತ ಇರುವನು. ಇಂಥ ದುಸ್ಸ್ವಭಾವವುಳ್ಳವನಿಗೆ ನೀನು ಹೋಗಿ ವರವನ್ನೂ ಕೊಟ್ಟರೆ ಎಲ್ಲಾ ಲೋಕಗಳೂ ಒಂದೇ ದಿವಸದಲ್ಲಿ ವಿನಾಶವಾಗುವುವು ಎಂದು ಕೈಮುಗಿದು ಬಹುವಿಧವಾಗಿ ಬೇಡಿಕೊಳ್ಳಲು; ಆಗ ಬ್ರಹ್ಮನು ಸರಸ್ವತಿಯನ್ನು ಬರಮಾಡಿ—ಎಲೈ ವಾಣಿಯೇ, ಈ ಕುಂಭಕರ್ಣನು ವರವನ್ನು ಕೇಳಿಕೊಳ್ಳುವ ಸಮಯದಲ್ಲಿ ನೀನು ಇವನ ಹೃದಯದಲ್ಲಿ ಸೇರಿಕೊಂಡಿದ್ದು ದೇವತೆಗಳಿಗೆ ಹಿತವಾಗುವುದಕ್ಕೆ ಯೋಗ್ಯವಾದ ಮಾತುಗಳನ್ನು ಇವನ ಬಾಯಿಂದ ಹೊರಡಿಸು ಎಂದು ಮೊದಲೇ ಹೇಳಿಕಳುಹಿಸಲು ; ಆಕೆಯು ಅದರಂತೆ ಹೋಗಿ ಅವನ ಹೃದಯವನ್ನು ಪ್ರವೇಶಿಸಿ ಸ್ವಾನುಕೂಲ ವಿಷಯದಲ್ಲಿ ಅವನಿಗೆ ವಿಕಲ್ಪವಾದ ಬುದ್ಧಿಯನ್ನುಂಟುಮಾಡಿದಳು. ಆ ಸಮಯದಲ್ಲಿ ಬ್ರಹ್ಮನು ಕುಂಭಕರ್ಣನ ಬಳಿಗೈತಂದು—ಎಲೈ ಖಳಶಿರೋಮಣಿಯಾದ ಕುಂಭಕರ್ಣನೇ, ನಾನು ನಿನ್ನ ತಪಸ್ಸಿಗೆ ಮೆಚ್ಚಿದೆನು. ವರಗಳನ್ನು ಬೇಡು, ಕೊಡುವೆನು ಎನ್ನಲು ; ಆಗ ಆ ಕುಂಭಕರ್ಣನು—ಎಲೈ ಅಬ್ಜಸಂಭವನೇ, ಬಹುಕಾಲ ನಿದ್ರೆಯನ್ನು ಅನುಭವಿಸುತ್ತಿರುವ ಹಾಗೆ ನನಗೆ ವರವನ್ನು ಕರುಣಿಸೆನಲು ; ಚತುರಾನನನು ಹಾಗೇ ಆಗಲಿ ಎಂದು ಹರಸಿ ಸರಸ್ವತೀ ಸಮೇತನಾಗಿ ಹೊರಟು ಸತ್ಯಲೋಕವನ್ನು ಕುರಿತು ತೆರಳಿದನು. ಅನಂತರದಲ್ಲಿ ಸರಸ್ವತಿಯಿಂದ ಬಿಡಲ್ಪಟ್ಟ ಕುಂಭಕರ್ಣನು—ದೇವತೆಗಳ ಮೋಸಕೃತ್ಯದಿಂದ ತನಗೆ ಈ ವಿಧವಾದ ಅವಿಚಾರಮತಿಯುಂಟಾಯಿತೆಂದು ತನ್ನ ಅಕೃತ್ಯವನ್ನು ನಿಂದಿಸಿ ವ್ಯಸನಪಟ್ಟನು. ಅನಂತರದಲ್ಲಿ ಸಹೋದರರಾದ ಆ ಮೂರು ಮಂದಿಯೂ ಬ್ರಹ್ಮದೇವನಿಂದ ವರಗಳನ್ನು ಪಡೆದುಕೊಂಡು ಬಂದು ಇನ್ನು ಮೇಲೆ ನಾವು ಮಾಡತಕ್ಕ ಕಾರ್ಯವಾವುದು ಎಂದು ಯೋಚಿಸುತ್ತ ಶ್ಲೇಷ್ಮಾತಕವೆಂಬ ವನದಲ್ಲಿರುತ್ತಿದ್ದರು.

ಅನಂತರದಲ್ಲಿ ಸುಮಾಲಿಯು ತನ್ನ ಮಗಳ ಮಕ್ಕಳು ತಪಸ್ಸು ಮಾಡಿ ಬ್ರಹ್ಮನಿಂದ ವರಗಳನ್ನು ಪಡೆದ ವರ್ತಮಾನವನ್ನು ಕೇಳಿ ಬಹಳವಾಗಿ ಸಂತೋಷಿಸಿದವನಾಗಿ ಮಹೋದರ ವಜ್ರದಂಷ್ಟ್ರ ಸುಪಾರ್ಶ್ವ ಮಾರೀಚ ಪ್ರಹಸ್ತ ಅಕಂಪ ಧೂಮ್ರಾಕ್ಷ

ವಿಕಟ ಸಂಪಾತಿ ಶುಕ ಸಾರಣರೆಂಬಿವರೇ ಮೊದಲಾದ ತನ್ನ ಮಕ್ಕಳು ಮೊಮ್ಮಕ್ಕಳು ಮಗಳ ಮಕ್ಕಳು ದಾಯಾದರು ನೆಂಟರು ಇಷ್ಟರು ಇವರುಗಳೊಡನೆ ಕೂಡಿ ರಸಾತಲದಿಂದ ಹೊರಟು ಭೂಲೋಕಕ್ಕೆ ಬಂದು ದಶಾನನನೇ ಮೊದಲಾದ ಮೂರು ಜನ ದೌಹಿತ್ರರನ್ನೂ ಕಾಣಿಸಿಕೊಳ್ಳಲು; ಅವರು ತಮ್ಮ ಮಾತಾಮಹನಿಗೆ ದೀರ್ಘದಂಡ ನಮಸ್ಕಾರವನ್ನು ಮಾಡಿ ವಿನಯದಿಂದ ನಿಂತಿರಲು; ಆಗ ಸುಮಾಲಿಯು ಸಂತೋಷದಿಂದ ಅವರನ್ನು ಬಿಗಿದಪ್ಪಿ ಹರಸಿ ಅವರಲ್ಲಿ ಜ್ಯೇಷ್ಠನಾದ ದಶಮುಖನನ್ನು ನೋಡಿ— ತಂದೆಯೇ! ನೀನು ತಮ್ಮಂದಿರೊಡನೆ ಕೂಡಿ ಉಗ್ರವಾದ ತಪಸ್ಸನ್ನು ಮಾಡಿ ಬ್ರಹ್ಮದೇವನಿಂದ ವರವನ್ನು ಪಡೆದು ಈ ವರೆಗೂ ಭಯವೆಂಬ ಸಮುದ್ರದಲ್ಲಿ ಮುಳುಗಿ ಹೋಗಿದ್ದ ಅಶೇಷರಾಕ್ಷಸಕುಲವನ್ನೂ ಉದ್ಧಾರಮಾಡಿದೆ. ಇದೋ, ಇವನು ಮಹೋದರನು ಇವನು ಪ್ರಹಸ್ತನು ಇವನು ಮಾರೀಚನು ಅವನು ಸುಪಾರ್ಶ್ವನು ಇವರು ನಾಲ್ಕು ಮಂದಿಯೂ ನಿನಗೆ ಸೋದರಮಾವಂದಿರು. ಈ ಸರ್ವರೂ ಸಾಮಾದ್ಯುಪಾಯಗಳಲ್ಲಿ ಸಮರ್ಥರು. ಇಲ್ಲಿಂದ ಮುಂದೆ ಇವರೆಲ್ಲರೂ ನಿನಗೆ ವಿಧೇಯರೂ ಸಹಾಯಕರೂ ಆಗಿರುವರು. ಲಂಕಾಪಟ್ಟಣವು ಮೊದಲು ನಾವು ಕಟ್ಟಿದುದು. ಆದರೂ ವಿಷ್ಣುವಿನ ಭಯದಿಂದ ಅಲ್ಲಿ ನಿಲ್ಲಲಾರದೆ ನಾವೆಲ್ಲರೂ ಬಂದು ಕಾಡಿನಲ್ಲಿ ರಸಾತಲಕ್ಕೆ ಓಡಿಹೋದೆವು. ಅದೇ ಕಾಲದಲ್ಲಿ ನಿನ್ನ ಬಲತಾಯಿಯ ಮಗನಾದ ಕುಬೇರನು ಆ ಲಂಕಾನಗರವನ್ನು ಪ್ರವೇಶಿಸಿ ಅಲ್ಲಿ ವಾಸಮಾಡಿಕೊಂಡಿದ್ದಾನೆ. ನೀನು ನನಗೆ ದೌಹಿತ್ರನಾದುದರಿಂದ ಹೋಗಿ ಆತನನ್ನು ಅಲ್ಲಿಂದ ಹೊರಡಿಸಿ ಆ ಲಂಕಾನಗರವನ್ನು ಸ್ವಾಧೀನಮಾಡಿಕೊಂಡು ಅಲ್ಲಿಯೇ ರಾಜ್ಯಭಾರ ಮಾಡಿಕೊಂಡಿರು ಎಂದು ಹೇಳಿದನು.

ಆ ಮಾತನ್ನು ಕೇಳಿ ದಶಮುಖನು—ಎಲೈ ಮಾತಾಮಹನೇ, ನೀನು ಹೇಳಿದ ಮಾತು ನಿಜವೇ ಸರಿ; ಆದರೂ ಕುಬೇರನು ನನ್ನ ಅಣ್ಣನಲ್ಲವೇ? ಆತನನ್ನು ಹೊರಡಿಸಿ ನಾನು ಅಲ್ಲಿರುವುದು ಉಚಿತವೇ? ಹೇಳು ಎನಲು; ಆಗ ಸುಮಾಲಿಯು ಗಹಗಹಿಸಿ ನಗುತ್ತ—ನೀನಿಂಥ ಮಾತುಗಳನ್ನಾಡಬಹುದೇ? ಸಪತ್ನೀಪುತ್ರರಿಗೆ ಸ್ವಭಾವವೈರವುಂಟೆಂದು ನೀತಿಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ಅದುಕಾರಣ ಕುಬೇರನು ನಿನಗೆ ವಿರೋಧಿಯೇ ಹೊರತು ಅಣ್ಣನೆಂದು ಎಂದಿಗೂ ಬಗೆಯದಿರು. ಇದೋ ಈ ಸಾಮ್ಯವನ್ನು ಕೇಳು. ಕಶ್ಯಪಮುನಿಗೆ ದಿತಿ ಅದಿತಿ ಎಂಬವರಿಬ್ಬರೂ ಪತ್ನಿಯರು. ಅವರೊಳಗೆ ದಿತಿಯಲ್ಲಿ ದೈತ್ಯರೂ ಅದಿತಿಯಲ್ಲಿ ಆದಿತೇಯರೂ ಹುಟ್ಟಿದರು. ಈಗ ಅವರವರ ಭ್ರಾತೃತ್ವವು ಹೇಗಿದೆ, ನೋಡು. ದೇವತೆಗಳು ತಮಗಿಂತಲೂ ಅಗ್ರಜರೆಂದು ಭಾವಿಸಿ ದೈತ್ಯರನ್ನು ಸಂಹರಿಸದೆ ಬಿಟ್ಟರೇ? ಈಗ ನೀನು ಅಣ್ಣನೆಂಬ ಭಕ್ತಿಯಿಂದ ಹಿಂದೆಗೆದರೆ ಆ ಮೇಲೆ ಕುಬೇರನು ನಿನ್ನನ್ನು ಕೊಲ್ಲದೆ ಬಿಡುವನೇ? ಇಲ್ಲವು. ಅದುಕಾರಣ ನೀನು ಈಗಲೇ ನಾನು ಹೇಳಿದಂತೆ ಮಾಡು ಎಂದನು. ಆ ಮೇಲೆ ಖೂಳನಾದ ದಶಕಂಧರನು ಅವನ ಮಾತಿಗೆ ಒಪ್ಪಿಕೊಂಡು ಕೂಡಲೆ ಪ್ರಹಸ್ತನನ್ನು ಕರೆದು—ಎಲೈ ಸೋದರಮಾವನೇ! ನೀನು ಮೊದಲು ನಮ್ಮಣ್ಣನ ಬಳಿಗೆ ಹೋಗಿ—ನೀನಿರುವ ಈ ಲಂಕಾನಗರವು ನಮ್ಮ

ಮಾತಾಮಹರಿಂದ ಸಂಪಾದಿಸಲ್ಪಟ್ಟುದು. ಆದುದರಿಂದ ಅದು ನನಗೆ ಸಲ್ಲತಕ್ಕುದಾಗಿದೆ. ನೀನು ಅದನ್ನು ಬಿಟ್ಟು ಹೋಗಬೇಕು ಎಂದು ನಾನು ಹೇಳಿದೆನೆಂಬುದಾಗಿ ಮೊದಲು ಸಾಮದಿಂದ ತಿಳಿಸು ಎಂದು ಹೇಳಿ ಕಳುಹಿಸಿದನು. ಆ ಮೇಲೆ ಪ್ರಹಸ್ತನು ಅಲ್ಲಿಂದ ಹೋಗಿ ಲಂಕಾದ್ವೀಪದಲ್ಲಿದ್ದ ಕುಬೇರನೊಡನೆ ಈ ವರ್ತಮಾನವನ್ನು ತಿಳಿಸಲು ; ಆತನು ಒಂದರೆಗಳಿಗೆಯ ವರೆಗೂ ಆಲೋಚಿಸಿ, ಪ್ರಹಸ್ತನನ್ನು ಲಂಕೆಯಲ್ಲಿಯೇ ಬಿಟ್ಟು ತನ್ನ ತಂದೆಯಾದ ವಿಶ್ರವಸ್ಸಿನ ಬಳಿಗೆ ಶೀಘ್ರವಾಗಿ ಬಂದು ದಶಮುಖನು ತನಗೆ ಹೇಳಿಕಳುಹಿಸಿದ ವಾರ್ತೆಯನ್ನು ಬಿನ್ನವಿಸಲು ; ಆ ಮುನಿಯು–ಎಲೈ ಮಗನೇ, ಕೇಳು ; ಆ ದಶಕಂಠನು ಬಲು ಕೆಟ್ಟವನು. ಆದುದರಿಂದ ನೀನು ಆ ಲಂಕಾನಗರವನ್ನು ಬಿಟ್ಟು ಕೈಲಾಸಪರ್ವತಕ್ಕೆ ಹೋಗಿ ಅಲ್ಲಿ ಒಂದು ಪಟ್ಟಣವನ್ನು ಮಾಡಿಕೊಂಡು ಉತ್ತರದಿಗಧಿಪತಿಯಾಗಿರು, ಹೋಗು. ನಿನಗೆ ಶಿವನೊಡನೆ ಸ್ನೇಹವುಂಟಾಗುವುದು ಎಂದು ಹೇಳಿದನು. ಆ ಮೇಲೆ ಕುಬೇರನು ತಂದೆಗೆ ನಮಸ್ಕರಿಸಿ ಲಂಕಾನಗರಕ್ಕೆ ಬಂದು ಪ್ರಹಸ್ತನನ್ನು ಕುರಿತು—ಎಲೈ ಮಂತ್ರಿಯೇ, ದಶಕಂಠನು ಹೇಳಿಕಳುಹಿಸಿದ ಮಾತು ಯುಕ್ತವಾದುದೇ ಸರಿ. ಇನ್ನು ಮೇಲೆ ನಾನು ಇಲ್ಲಿಂದ ಹೊರಟುಹೋಗುವೆನು. ಅವನು ಬಂದು ಇಲ್ಲಿ ಸುಖದಿಂದಿರಲಿ. ಈ ಸಂಗತಿಯನ್ನು ಅವನಿಗೆ ತಿಳಿಸು ಎಂದು ಹೇಳಿ ಆ ಪ್ರಹಸ್ತನನ್ನು ಅಲ್ಲಿಂದ ಕಳುಹಿಸಿ ಆ ಮೇಲೆ ಕುಬೇರನು ತನ್ನ ಪರಿವಾರದೊಡನೆ ವಿಮಾನಾರೂಢನಾಗಿ ಲಂಕೆಯನ್ನು ಬಿಟ್ಟು ಹೊರಟು ಕೈಲಾಸಾಚಲಕ್ಕೆ ಬಂದು ಅಲ್ಲಿ ವಿಶ್ವಕರ್ಮನಿಂದ ಮನೋಹರವಾದ ಒಂದು ಪಟ್ಟಣವನ್ನು ಕಟ್ಟಿಸಿ ಅದಕ್ಕೆ ಅಲಕಾನಗರವೆಂದು ಹೆಸರಿಟ್ಟು ಶಿವನ ಸ್ನೇಹವನ್ನು ಸಂಪಾದಿಸಿಕೊಂಡು ಅಲ್ಲೇ ಸುಖದಿಂದಿರುತ್ತಿದ್ದನು.

ಇತ್ತಲಾ ಪ್ರಹಸ್ತನು ದಶಮುಖನ ಬಳಿಗೆ ಬಂದು—ನೀನು ಹೇಳಿಕಳುಹಿಸಿದ ಮಾತ್ರದಿಂದಲೇ ಕುಬೇರನು ಹೆದರಿ ಲಂಕಾನಗರವನ್ನು ಬಿಟ್ಟು ಓಡಿಹೋದನು ಎಂದು ಹೇಳಲು ; ಆಗ ದಶಗ್ರೀವನು ಸಂತೋಷದಿಂದ ಕೂಡಿದವನಾಗಿ ತನ್ನ ರಾಕ್ಷಸಪರಿವಾರದೊಡನೆ ಹೊರಟು ಬಂದು ಮೃಗರಾಜನು ಹಿಮನಗದ ಗುಹೆಯನ್ನು ಪ್ರವೇಶಿಸುವಂತೆ ಲಂಕಾನಗರವನ್ನು ಪ್ರವೇಶಿಸಿದನು. ಅಲ್ಲಿ ಪ್ರಹಸ್ತ ಮಾರೀಚಾದಿ ಮಂತ್ರಿಗಳು ಸುಮಾಲಿ ಮಾಲ್ಯವಂತಾದಿ ರಾಕ್ಷಸನಾಯಕರನ್ನು ಕೂಡಿಸಿಕೊಂಡು ರಾಕ್ಷಸರಾಜ್ಯಾಧಿಪತ್ಯಾರ್ಥವಾಗಿ ದಶಾನನನಿಗೆ ವಿಜೃಂಭಣೆಯಿಂದ ಪಟ್ಟಾಭಿಷೇಕವನ್ನು ಮಾಡಿದರು. ಆ ಮೇಲೆ ರಾಕ್ಷಸೇಶ್ವರನಾದ ದಶಮುಖನು ತನ್ನ ಸಹೋದರಿಯಾದ ಶೂರ್ಪನಖಿಯನ್ನು ಕಾಲಕೇಯರೆಂಬ ಅಸುರರಲ್ಲಿ ಬಹು ಬಲಿಷ್ಠನಾದ ವಿದ್ಯುಜ್ಜಿಹ್ವನೆಂಬವನಿಗೆ ಕೊಟ್ಟು ಅತಿವಿಭವದಿಂದ ಮದುವೆಮಾಡಿ ಸುಖವಾಗಿ ಲಂಕಾಪಟ್ಟಣವನ್ನು ಆಳುತ್ತಿದ್ದನು.

ಹೀಗಿರುವಲ್ಲಿ ಒಂದಾನೊಂದು ದಿವಸ ದಶಕಂಠನು ಬೇಟೆಯಾಡಬೇಕೆಂದು ಅಪೇಕ್ಷಿಸಿ ಸಾಯುಧರಾದ ಬೇಟೆಗಾರರೊಡನೆ ಕೂಡಿ ಹೊರಟು ಮೃಗಾನ್ವೇಷಣಾರ್ಥವಾಗಿ ಅರಣ್ಯಗಳಲ್ಲಿಯೂ ಪರ್ವತಗಳಲ್ಲಿಯೂ ಸಂಚರಿಸುತ್ತ ಪೊದೆಗಳೊಳಡಗಿ ಶಬ್ದವ

ನ್ನಾಲಿಸುತ್ತ ಗುಹೆಗಳನ್ನು ಪ್ರವೇಶಿಸಿ ನೋಡುತ್ತ ನಾನಾ ವಿಧವಾದ ಮೃಗಗಳನ್ನು ಕೊಲ್ಲುತ್ತ ಬರುತ್ತಿರಲು ; ಅಲ್ಲೊಂದು ಕಡೆಯಲ್ಲಿ ತನ್ನ ಮಗಳೊಡನೆ ವಾಸಿಸುತ್ತಿದ್ದ ಮಯನೆಂಬವನನ್ನು ನೋಡಿ—ನೀನು ಯಾರು ? ಈ ಕಾಡಿನಲ್ಲಿ ವಾಸಿಸುವುದಕ್ಕೆ ಕಾರಣವೇನು ? ಈ ಅಬಲೆಯು ಯಾರ ಮಗಳು ? ನಿನ್ನ ಉದ್ಯೋಗವಾವುದು ? ಎಂದು ಕೇಳಲು ; ಅದಕ್ಕೆ ಮಯನು—ಎಲೈ ವೀರನೇ, ಕೇಳು ; ಈ ಲೋಕದಲ್ಲಿ ನನ್ನನ್ನು ಮಯನೆಂದು ಕರೆಯುತ್ತಾರೆ. ನನಗೆ ಸಂಪ್ರಾಪ್ತವಾಗಿರುವ ಅಪಾರವಾದ ದುಃಖವನ್ನು ಯಾರುತಾನೆ ಪರಿಹರಿಸಬಲ್ಲರು ? ಆದರೂ ಹೇಳುತ್ತೇನೆ ಕೇಳು. ಅಪ್ಸರ ಸ್ತ್ರೀಯರೊಳಗೆ ಶ್ರೇಷ್ಠಳಾದ ಹೇಮೆ ಎಂಬ ವನಿತಾಮಣಿಯ ವಿಷಯವನ್ನು ನೀನು ಕೇಳಿಬಲ್ಲೆಯಷ್ಟೆ ? ದೇವತೆಗಳು ಪ್ರೀತಿಯಿಂದ ಆಕೆಯನ್ನು ನನಗೆ ಹೆಂಡತಿಯನ್ನಾಗಿ ಮಾಡಿಕೊಟ್ಟರು. ನಾನು ಐನೂರು ಸಂವತ್ಸರಗಳ ವರೆಗೂ ಆಕೆಯೊಡನೆ ಸುಖಿಯಾಗಿ ದ್ದೆನು. ಆ ಮೇಲೆ ನನಗೆ ಆ ಸುಂದರಿಯಲ್ಲಿ ಮಾಯಾವಿ ದುಂದುಭಿ ಎಂಬಿಬ್ಬರು ಗಂಡುಮಕ್ಕಳೂ ಸ್ತ್ರೀ ಶಿರೋಮಣಿಯಾದ ಮಂಡೋದರಿ ಎಂಬ ಈ ಹೆಣ್ಣುಮಗಳೂ ಹುಟ್ಟಿದರು. ಆ ಮೇಲೆ ನನ್ನ ದೌರ್ಭಾಗ್ಯವಶದಿಂದ ಆಕೆಯೊಡನೆ ನನಗೆ ವಿಯೋಗ ವುಂಟಾಯಿತು. ಪ್ರಾಣಪ್ರಿಯಳಾದ ಪತ್ನಿಯ ವಿಯೋಗತಾಪವನ್ನು ಸಹಿಸಿಕೊಂಡು ಯಾವನು ತಾನೇ ಬದುಕಬಲ್ಲನು ? ಕಠಿಣಹೃದಯನಾದ ನಾನು ಮೊದಲು ಆಕೆಯನ್ನು ವಿವಾಹವಾಗಿ ಮಾಯೆಯಿಂದ ಹೇಮೆ ಎಂಬ ಪುರವನ್ನು ನಿರ್ಮಿಸಿಕೊಂಡು ಅಲ್ಲಿ ಸುಖಿಯಾಗಿದ್ದೆನು. ಈಗ ಸಹಿಸಲಶಕ್ಯವಾದ ದುಃಖದಿಂದ ಅನಾಥನಾಗಿ ಆ ಪಟ್ಟಣ ವನ್ನೂ ಬಿಟ್ಟು ಈ ಮಗಳನ್ನು ಕರೆದುಕೊಂಡು ಹೊರಟುಬಂದು ಸದ್ವಂಶಜನೂ ಯೋಗ್ಯನೂ ಆದ ಒಬ್ಬ ವರನಿಗೆ ಈಕೆಯನ್ನು ಕೊಡಬೇಕೆಂಬ ನಿರೀಕ್ಷೆಯಿಂದ ಈ ಅರ ಣ್ಯದಲ್ಲಿ ಸೇರಿಕೊಂಡಿದ್ದೇನೆಂದು ಹೇಳಿ, ನೀನು ಯಾರು ? ಎಂದು ಕೇಳಿದನು. ದಶಮು ಖನು—ಎಲೈ ಮಯನೇ, ಕೇಳು. ನಾನು ಪುಲಸ್ತ್ಯಮಹಾಮುನಿಯ ಪುತ್ರನಾದ ವಿಶ್ರವಸ್ಸಿನ ತನಯನು. ನನ್ನನ್ನು ದಶಕಂಠನೆಂದು ಕರೆಯುವರು ಎಂದು ಹೇಳಲು; ಈ ಮಾತನ್ನು ಕೇಳಿದ ಮಯನು ಸಂತೋಷಿಸಿ—ಈಗ ನನ್ನಿಷ್ಟಾರ್ಥವು ಸಿದ್ಧಿಸಿತು. ಈ ಪುತ್ರಿಗೆ ಯೋಗ್ಯನಾದ ವರನು ದೊರಕಿದನು ಎಂದು ಮನಸ್ಸಿನಲ್ಲಿ ಆಲೋಚಿಸಿ, ದಶ ಗ್ರೀವನನ್ನು ಕುರಿತು—ಎಲೈ ಮಹಾತ್ಮನೇ, ಬ್ರಹ್ಮಕುಲಸಂಭವನಾದ ನಿನಗಿಂತಲೂ ಸತ್ಕುಲೋತ್ಪನ್ನನದಾರುಂಟು ? ಸುಂದರಿಯೂ ಸುಶೀಲೆಯೂ ಆದ ಈ ನನ್ನ ಪುತ್ರಿ ಯನ್ನು ಪತ್ನೀಭಾವದಿಂದ ಪರಿಗ್ರಹಿಸಬೇಕೆಂದು ಪ್ರಾರ್ಥಿಸಲು ; ದಶವದನನು ಹಾಗೇ ಆಗಲೆಂದು ಒಪ್ಪಿಕೊಂಡನು. ಆ ಮಯನ ಮಾಯಾಬಲವಿಂತಿರುವುದೆಂದು ಹೇಳಬಲ್ಲ ವರಾರು ? ನವರತ್ನಖಚಿತವಾಗಿಯೂ ವಿಚಿತ್ರತರವಾಗಿಯೂ ಸರ್ವಲೋಕರಮ್ಯವಾ ಗಿಯೂ ಇರುವ ವಿವಾಹಮಂಟಪವು ಆ ಕ್ಷಣದಲ್ಲಿಯೇ ಉಂಟಾಗಿ ಪರಿಶೋಭಿಸಿತು. ಆಗ ಮಯನು ಅನೇಕರಾದ ತತ್ವಜ್ಞಾನಿಗಳನ್ನು ಕರೆಯಿಸಿಕೊಂಡು, ವೈದಿಕವಿ ಧಾನದಿಂದ ಅಗ್ನಿಯಲ್ಲಿ ಹೋಮಮಾಡಿ ಮಂಡೋದರಿಯನ್ನು ರಾವಣನಿಗೆ ಧಾರಾ ಪೂರ್ವಕವಾಗಿ ಮದುವೆ ಮಾಡಿಕೊಟ್ಟನು. ಆ ಮೇಲೆ ಅಳಿಯನಿಗೆ ಬಹುಮಾನವಾಗಿ

ಒಂದು ಶಕ್ತಿಯನ್ನಿತ್ತು ತಾನು ಅಂತರಿಕ್ಷಮಾರ್ಗದಲ್ಲಿ ಹೊರಟುಹೋದನು. ಅನಂತರದಲ್ಲಿ ದಶಗ್ರೀವನು ಪತ್ನಿಯಾದ ಮಂಡೋದರಿಯೊಡನೆ ಲಂಕಾನಗರವನ್ನು ಪ್ರವೇಶಿಸಿ ತನ್ನ ಹಿರಿಯ ತಮ್ಮನಾದ ಕುಂಭಕರ್ಣನಿಗೆ ಪೌರೋಚನನ ಮಗಳ ಮಗಳಾದ ವಜ್ರಜ್ವಾಲೆ ಎಂಬವಳನ್ನೂ ಕಿರಿಯ ತಮ್ಮನಾದ ವಿಭೀಷಣನಿಗೆ ಶೈಲೂಷನೆಂಬ ಗಂಧರ್ವನ ಮಗಳಾದ ಸರಮೆ ಎಂಬವಳನ್ನೂ ತಂದು ಅತಿಸಂಭ್ರಮದಿಂದ ಮದುವೆ ಮಾಡಿಸಿದನು.

ಅನಂತರದಲ್ಲಿ ಕೆಲವು ದಿನಗಳು ಕಳೆದ ಮೇಲೆ ಮಂಡೋದರಿಯು ಗರ್ಭವನ್ನು ಧರಿಸಿ ಒಂದು ಗಂಡು ಮಗುವನ್ನು ಹೆತ್ತಳು. ಆ ಕೂಸಿನ ರೋದನಧ್ವನಿಯು ಘನಗರ್ಜಿತದಂತೆ ಗಂಭೀರವಾಗಿಯೂ ಭಯಂಕರವಾಗಿಯೂ ಇದ್ದುದರಿಂದ ದಶವದನನು ಆ ಶಿಶುವಿಗೆ ಮೇಘನಾದನೆಂಬ ಅನ್ವರ್ಥನಾಮವನ್ನಿಟ್ಟನು. ಕುಂಭಕರ್ಣನಿಗೆ ಬ್ರಹ್ಮದತ್ತವರಪ್ರಭಾವದಿಂದ ನಿದ್ರಾಭಾರವು ಅಧಿಕವಾಗಲು ; ಒಂದು ದಿನ ಅವನು ದಶಕಂಧರನ ಬಳಿಗೆ ಬಂದು—ನಿದ್ರೆಯು ನನ್ನನ್ನು ಸಂಪೂರ್ಣವಾಗಿ ಬಾಧಿಸುತ್ತದೆ. ಒಂದು ಶಯ್ಯಾಗೃಹವನ್ನು ಮಾಡಿಸಿಕೊಡು ಎಂದು ಕೇಳಲು ; ಅವನು ದೇವತೆಗಳ ಬಡಗಿಯಾದ ವಿಶ್ವಕರ್ಮನನ್ನು ಕರಿಸಿ ಸುವರ್ಣಸ್ತಂಭಗಳಿಂದ ಕೂಡಿಯೂ ನವರತ್ನ ಖಚಿತವಾಗಿಯೂ ಶಯನೋಚಿತ ಸಾಮಗ್ರೀ ಸಮೇತವಾಗಿಯೂ ಇರುವ ಒಂದು ಮನೆಯನ್ನು ಮಾಡಿಸಿಕೊಟ್ಟನು. ಕುಂಭಕರ್ಣನು ಆ ಮನೆಯನ್ನು ನೋಡಿ ಸಂತುಷ್ಟನಾಗಿ ಅಲ್ಲಿ ಬಹಳ ಕಾಲದ ವರೆಗೂ ಮಲಗಿಕೊಂಡು ನಿರ್ಬಾಧಕವಾದ ನಿದ್ರಾಸುಖವನ್ನನುಭವಿಸುತ್ತಿದ್ದನು.

ಇತ್ತಲಾ ದಶಕಂಧರನು ಶೌರ್ಯಾಧಿಕ್ಯದಿಂದುಂಟಾದ ಗರ್ವವುಳ್ಳವನಾಗಿ ಮುನಿಜನಗಳನ್ನು ಬಾಧಿಸಿ ಕೊಲ್ಲುತ್ತ, ದಾನವ ದೈತ್ಯ ಸುರ ನರ ನಾಗ ಕಿನ್ನರಾದಿಗಳ ಸಂದಣಿಗಳನ್ನು ಸವರುತ್ತ, ಕೆರೆ ತೊರೆ ಕುಂಟೆ ಕಾಲಿವೆ ಮೊದಲಾದ ಜಲಾಶಯಗಳನ್ನು ಧ್ವಂಸಮಾಡುತ್ತ ಮದಿಸಿ ಸೊಕ್ಕಿದಾನೆಯ ಚಂದದಿಂದ ಹೊರಟು ಪರ್ವತಶಿಖರಗಳನ್ನು ಕಿತ್ತುರುಳಿಸುತ್ತ ಪುರಗೋಪುರಗಳನ್ನು ತುಳಿದು ಹಾಳುಮಾಡುತ್ತ ಯಾರೂ ಎದುರಾಳಿಲ್ಲದೆ ಮದೋನ್ಮತ್ತತೆಯಿಂದ ನಿರರ್ಗಳವಾಗಿ ತಿರುಗುತ್ತಿದ್ದನು.

ಹೀಗಿರುವಲ್ಲಿ ಉತ್ತರದಿಗೀಶನಾದ ಕುಬೇರನು ಒಂದು ದಿವಸ ತನ್ನ ತಮ್ಮನಾದ ದಶಮುಖನು ದುರ್ಮಾರ್ಗಿಯಾಗಿರುವುದನ್ನು ಕೇಳಿ—ಅಯ್ಯೋ, ಶ್ರೇಷ್ಠವಾದ ನಮ್ಮ ಕುಲದಲ್ಲಿ ಇಂಥ ದುಷ್ಟನು ಹುಟ್ಟಿದನಲ್ಲಾ ! ಎಂದು ಬಹಳವಾಗಿ ವ್ಯಸನಪಡುತ್ತ ಒಬ್ಬ ಚಾರನನ್ನು ಕರೆದು—ಎಲೈ, ನೀನು ದಶಾನನನ ಬಳಿಗೆ ಹೋಗಿ—ಇಂಥ ದುಷ್ಟತ್ವವನ್ನು ಬಿಟ್ಟು ಸುಖಿಯಾಗಿರು ಎಂದು ನಾನು ಹೇಳಿದೆನೆಂಬುದಾಗಿ ತಿಳಿಸು ಎಂದು ಹೇಳಿಕಳುಹಿಸಿದನು. ಅವನು ಬಂದು ದಶವದನನಿಗೆ ನಮಸ್ಕರಿಸಿ—ಎಲೈ ರಾಕ್ಷಸೇಂದ್ರನೇ, ನಿಮ್ಮಣ್ಣನಾದ ಕುಬೇರನು ಕೈಲಾಸಪರ್ವತದಲ್ಲಿ ಅಲಕಾವತಿಯೆಂಬೊಂದು ಪಟ್ಟಣವನ್ನು ಮಾಡಿಕೊಂಡು ಹರನೊಡನೆ ಸ್ನೇಹವನ್ನು ಸಂಪಾದಿಸಿಕೊಂಡು ಸುಖಿಯಾಗಿದ್ದಾನೆ. ಆತನು ನಿನಗೋಸ್ಕರ ನನ್ನೊಡನೆ ಹೇಳಿಕಳುಹಿಸಿರುವ

ಮಾತುಗಳನ್ನು ಕೇಳು. ನೀನು ಬ್ರಹ್ಮ ಕುಲದಲ್ಲಿ ಹುಟ್ಟಿ ಮುನಿಗಳನ್ನೂ ದೇವತೆಗಳನ್ನೂ ಹೀಗೆ ಬಾಧಿಸುತ್ತ ಬರುವುದರಿಂದ ನಿನಗೆ ಮಹತ್ತರವಾದ ಹಾನಿಯುಂಟಾಗುವುದೇ ಹೊರತು ಸೌಖ್ಯವುಂಟಾಗಲಾರದು. ಆದುದರಿಂದ ಇನ್ನು ಮೇಲೆಯಾದರೂ ಇಂಥ ದುಷ್ಕೃತ್ಯಗಳನ್ನು ಮಾಡದೆ ಸನ್ಮಾರ್ಗದಲ್ಲಿ ನಡೆಯುತ್ತ ಎಲ್ಲರಿಂದಲೂ ಒಳ್ಳೆಯವನೆನಿಸಿಕೊಂಡು ಸುಖವಾಗಿ ಬದುಕೆಂದು ಹೇಳಿಕಳುಹಿಸಿದನು ಎನಲು ; ಈ ಮಾತುಗಳನ್ನು ಕೇಳಿದ ಕೂಡಲೆ ದಶಾಸ್ಯನು ಕೋಪಾಟೋಪದಿಂದ ಕೂಡಿ ಕೆಂಗಣ್ಣಾಗುತ್ತಿರಲು ; ಹುಬ್ಬುಗಳನ್ನು ಹಾರಿಸುತ್ತ ತುಟಿಗಳನ್ನು ಕುಣಿಸುತ್ತ ಆ ದೂತನನ್ನು ನೋಡಿ—ಎಲೆಲಾ, ಕುಬೇರನು ತಾನು ಹರಸಖನಾಗಿದ್ದೇನೆಂಬ ದುರ್ಗರ್ವದಿಂದ ನನಗೆ ವಿವೇಕವನ್ನು ಹೇಳೆಂದು ನಿನ್ನನ್ನು ಕಳುಹಿಸಿದನೇ ? ದೇವತೆಗಳಿಂದಲೂ ಮುನಿಗಳಿಂದಲೂ ನನಗೆ ಬರುವ ಕೇಡೂ ಉಂಟೇ ? ಬಲುಮಾತುಗಳಿಂದೇನು ? ಅಣ್ಣನಾದರಾಗಲಿ. ಮೊದಲು ಆತನನ್ನು ಕೊಂದು ಆ ಮೇಲೆ ಲೋಕನಾಯಕರನ್ನು ಮೃತ್ಯುಜಠರಕ್ಕೆ ಸೇರಿಸಿ ಲೋಕಗಳನ್ನೆಲ್ಲಾ ವಿನಾಶಮಾಡುವೆನು. ಸುರನರೋರಗಾದಿ ನಾಯಕರನ್ನೂ ಆದಿತ್ಯಚಂದ್ರಾದಿ ಜ್ಯೋತಿರ್ಮಂಡಲಾಧೀಶರನ್ನೂ ಬಲುಗಡಿತದಿಂದುರುಳಿಸುವೆನೆಂದು ವಿಜೃಂಭಿಸಿ ಗಿರಿಸದೃಶವಾದ ತೇರನ್ನೇರಿ ಉತ್ತರದಿಗಭಿಮುಖನಾಗಿ ನಡೆದನು. ಅವನೊಡನೆಯೇ ಆನೆ ಕುದುರೆ ತೇರು ಕಾಲಾಳುಗಳ ತಂಡವು ನೆಲದಗಲಕ್ಕೂ ಹೊರಟುದಲ್ಲದೆ ಶುಕಸಾರಣಾದಿ ಮಂತ್ರಿಗಳೂ ಸೇನಾಪತಿಗಳೂ ಬೆಂಬಲವಾಗಿ ಮುಂಕೊಂಡರು. ಈ ಸೇನೆಯನ್ನು ಭೂಮಿಯೇ ಹೆತ್ತುದೋ ? ಅಥವಾ ಎಂಟು ದಿಕ್ಕುಗಳೇನಾದರೂ ಈದುವೋ ? ಎಂಬಂತೆ ಮಿತಿಮೀರಿದ ದಂಡೈತರುತ್ತಿರಲು ; ಅದರ ಪದಘಾತದಿಂದೆದ್ದ ಧೂಳಿಯು ಸೂರ್ಯಮಂಡಲವನ್ನು ಆವರಿಸಿಕೊಂಡು ದಿನವನ್ನು ದುರ್ದಿನವನ್ನಾಗಿ ಮಾಡಿತು. ಈ ರೀತಿಯಾಗಿ ಸಕಲ ಸನ್ನಾಹದಿಂದ ಕೂಡಿದ ದಶಮುಖನು ಗಿರಿ ವನ ಪಟ್ಟಣ ನದ ನದ್ಯಾದಿ ಪ್ರದೇಶಗಳನ್ನು ಕಳೆದು ಕೈಲಾಸಾಚಲದ ತಪ್ಪಲಲ್ಲಿರುವ ಅಲಕಾವತೀನಗರದ ಸಮೀಪಕ್ಕೆ ಬಂದು ಹೆಬ್ಬಾಗಿಲಲ್ಲಿ ನಿಂತು ದ್ವಾರಪಾಲಕರಲ್ಲಿ ಒಬ್ಬ ಯಕ್ಷನನ್ನು ಕರೆದು—ಎಲೈ ದ್ವಾರಪಾಲಕನೇ, ನೀನು ನಿಮ್ಮೊಡೆಯನ ಬಳಿಗೆ ಹೋಗಿ—ಲೋಕೈಕವೀರನಾದ ದಶಕಂಠನು ಯುದ್ಧಕ್ಕೆ ಬಂದಿದ್ದಾನೆ. ನಿನ್ನನ್ನು ಶೀಘ್ರವಾಗಿ ಬರಹೇಳಿದನೆಂದು ತಿಳಿಸೆನಲು ; ಅವನು ಕೂಡಲೆ ಕುಬೇರನ ಓಲಗದ ಚಾವಡಿಗೆ ಬಂದು ಭೀತಿಯಿಂದ ಕೈಮುಗಿದು—ಒಡೆಯನೇ, ಏಳು. ದಶಕಂಠನೊಡನೆ ಯುದ್ಧಮಾಡು ನಡೆ. ಅವನು ನಮ್ಮಲ್ಲಿ ತೋಳ್ಪೇಟೆಯನ್ನು ಕಳೆಯುವನಂತೆ. ನಾನು ಅವನ ಗರ್ವಾತಿಶಯೋಕ್ತಿಗಳನ್ನು ವಿವರಿಸಲಾರೆನು. ಬೇಗ ಯುದ್ಧಕ್ಕೆ ಸೈನ್ಯವನ್ನು ಕಳುಹಿಸು ಎಂದು ಹೇಳಲು ; ಕುಬೇರನು ಆ ಮಾತನ್ನು ಕೇಳಿ—ಹೇಳು, ಹೇಳು, ದಶಾನನನ ಆಳುತನದ ಮಾತುಗಳನ್ನು ಇನ್ನೊಂದು ಸಾರಿ ಹೇಳು. ದಶಮುಖನಿಗೆ ನಮ್ಮೊಡನೆ ಕಾಳಗವೇ ? ಶಿವ, ಶಿವಾ ! ಇದು ವಿಪರೀತಕಾಲಗತಿಯು ಎಂದು ಅರೆಗಳಿಗೆಯ ವರೆಗೂ ಚಿಂತಿಸಿ ಭೃತ್ಯನನ್ನು ನೋಡಿ—ಎಲೈ, ಮಹಾಗರ್ವದೂಷಿತನಾದ ಖಳಪತಿಯೊಡನೆ ಕಾಳಗಕ್ಕೆ ಶೂರರಾದ ನಮ್ಮ ಭಟರು ಸನ್ನದ್ಧರಾಗಿ ಒದು

ವಂತೆ ತಿಳಿಸೆಂದು ಆಜ್ಞಾಪಿಸಲು ; ಕೂಡಲೆ ಯಕ್ಷಕಿನ್ನರಾದಿಗಳ ಸೇನಾಸಮುದ್ರವು ದಶಕಂಠನೊಡನೆ ಯುದ್ಧಮಾಡಲೋಸುಗ ಬಂದು ನಿಂತಿತು.

ಆಗ ರಾಕ್ಷಸರ ಬಲವು ಬಂದು ಯಕ್ಷರ ಬಲಕ್ಕೆದುರಾಗಿ ನಿಂತು—ದಶಾನನನೂ ಧನಪತಿಯೂ ಭ್ರಾತೃಗಳೆಂದು ನಾವೀವರೆಗೂ ಮನ್ನಿಸಿದರೆ ನೀವಿಂತು ಕೊಬ್ಬಿದಿರಾ ? ಎಂದಬ್ಬರಿಸಿ ಮುಂದುವರಿದು ಯಕ್ಷಸೇನೆಗೆ ಬರಸಿಡಿಲೆರಗುವಂತೆರಗಿ ಪುರಬಡಿವುತ್ತಿರಲು ; ಜವನೋಕರಿಸಿದನೋ ಎಂಬಂತೆ ಬಿದ್ದಿರುವ ಮೆದುಳ್ಗಳಿಂದಲೂ ಮಜ್ಜಾಮಾಂಸಗಳಿಂದಲೂ ಕುಣಿಕುಣಿದಾಡುವಟ್ಟೆಗಳಿಂಡಲೂ ತಲೆಬುರುಡೆಗಳಿಂದಲೂ ನದೀರೂಪವಾಗಿ ಪ್ರವಹಿಸುತ್ತಿರುವ ರಕ್ತದಿಂದಲೂ ನಿಮೇಷಕಾಲದಲ್ಲಿ ವ್ಯಾಪ್ತವಾದ ಆ ರಣರಂಗವು ನೋಡುವುದಕ್ಕೆ ಭಯಂಕರವಾಗಿದ್ದಿತು. ಯಕ್ಷಾನೀಕಿನಿಯೂ ಕೂಡ ಧೈರ್ಯಗೆಡದೆ ರಾಕ್ಷಸಪತಾಕಿನಿಯನ್ನು ಬಹಳವಾಗಿ ಕೊಂದಿತು. ಆಗ ದಶವದನನು ಯಕ್ಷರ ಗುಂಪಿನ ಮೇಲೆ ತನ್ನ ಬಾಣಪರಂಪರಾವೃಷ್ಟಿಯನ್ನು ಸುರಿಸಲು ; ಆ ಬಾಣಹತಿಯಿಂದ ಅನೇಕರು ಕೈಕಾಲ್ಮುರಿದು ಕಿವಿಮೂಗುಗಳು ಹರಿದು ತಲೆಗಳೊಡೆದು ಚೂರುಗಳಾಗಿ ನಾಶವಾದುದನ್ನು ಉಳಿದವರೆಲ್ಲರೂ ನೋಡಿ ದಿಕ್ಕುದಿಕ್ಕಿಗೆ ಓಡಿಹೋಗಲು ; ಕೂಡಲೆ ಕುಬೇರನು ಮಾಣಿಭದ್ರನೆಂಬ ತನ್ನ ಸೇನಾಪತಿಯೊಡನೆ ಕೂಡಿ ಯುದ್ಧಕ್ಕೆ ಬರಲು ; ಆಗ ದಶಗ್ರೀವನು ಬಂದು ಕುಬೇರನಿಗೆದುರಾಗಿ ನಿಂತನು. ಪ್ರಹಸ್ತನು ಬಂದು ಮಾಣಿಭದ್ರನನ್ನೆದುರಿಸಿ ನಿಂತನು. ಆ ಮೇಲೆ ಮಾಣಿಭದ್ರನು ಪ್ರಹಸ್ತನೊಡನೆ ಯುದ್ಧಕ್ಕೆ ಆರಂಭಿಸಿ, ಅವನ ಗದಾಘಾತದಿಂದ ಕಿವಿ ಕಣ್ಮೂಗುಗಳಲ್ಲಿ ರಕ್ತವು ಸುರಿಯುವುದಕ್ಕೆ ಆರಂಭಿಸಲು ; ಬಲಹೀನನಾಗಿ ಭೂಮಿಯ ಮೇಲೆ ಬಿದ್ದು ಮೈಮರೆತನು. ದಶಮುಖನು ಬ್ರಹ್ಮವರಪ್ರಭಾವದಿಂದ ಯುದ್ಧದಲ್ಲಿ ಕುಬೇರನನ್ನು ಸೋಲಿಸಿ ಆತನಿಗೆ ಬ್ರಹ್ಮನು ಕೊಟ್ಟಿದ್ದ ವಿಮಾನವನ್ನು ಕಿತ್ತುಕೊಂಡು ತನ್ನ ಸಕಲಸೇನೆಯೊಡನೆ ಕೂಡಿ ಹೊರಟು ಆಕಾಶಮಾರ್ಗದಲ್ಲಿ ಬರುತ್ತ ಶರವಣವೆಂಬ ಸ್ಥಳವನ್ನು ನೋಡಿ ಕೈಲಾಸಗಿರಿಯ ಮೇಲ್ಗಡೆಗೆ ವಿಮಾನವನ್ನು ಹತ್ತಿಸಲು ; ಅದು ಮುಂದಕ್ಕೆ ನಡೆಯದೆ ಕಾಲ್ಮುರಿದ ಕೋಳಿಯಂತೆ ನಿಂತಿತು.

ಆಗ ದಶಮುಖನು—ಈ ವಿಮಾನವು ಇಲ್ಲಿ ಮಾತ್ರ ನಿಲ್ಲುವುದಕ್ಕೆ ಕಾರಣವೇನು ? ಯಕ್ಷರ ಮಾಯವೋ ? ಅಥವಾ ಇದರ ನಡೆಯುಡುಗಿತೋ ? ಬುದ್ಧಿಶಾಲಿಯಾದ ಎಲೈ ಮಾರೀಚನೇ, ಇದರ ನಿಜಸ್ಥಿಯನ್ನು ಹೇಳೆಂದು ಕೇಳಲು ; ಆ ಮಾರೀಚನು—ಈ ವಿಮಾನವು ವೈಶ್ರವಣನಿಗಲ್ಲದೆ ಮತ್ತೊಬ್ಬರಿಗೆ ನಡೆಯದಿರಬಹುದೆಂದು ಹೇಳುತ್ತಿರುವಷ್ಟರಲ್ಲಿ—ಈ ಕೈಲಾಸಪರ್ವತಾಗ್ರದಲ್ಲಿ—ಬ್ರಹ್ಮೇಂದ್ರಾದಿ ದೇವತೆಗಳಿಗೂ ಯಕ್ಷ ರಾಕ್ಷಸ ಕಿನ್ನರ ಕಿಂಪುರುಷಾದಿ ಕಾಮಚಾರಿಗಳಿಗೂ ಮಹಾದೇವನ ಪ್ರಭಾವದಿಂದ ಗಮಿಸುವುದು ಅಶಕ್ಯವಾಗಿರುವುದು ; ಹಿಂದಿರುಗು. ಮುಂದಕ್ಕೆ ಹೋದರೆ ಕೆಡುವೆ ಎಂದು ದಶವದನನನ್ನು ಕುರಿತು ನಂದೀಶ್ವರನು ಹೇಳಿದನು. ಆಗ ದಶಕಂಠನು ಶಂಕರನ ಎರಡನೆಯ ರೂಪಿಯಾದ ನಂದಿಕೇಶ್ವರನ ಮುಖವನ್ನು ನೋಡಿ—ನಿನ್ನ ಮೋರೆಯು ಕೋತಿಯ ಮೋಡಿಗೆ ಸರಿಯಾಗಿರುವುದರಿಂದ ಬುದ್ಧಿ

ಶೂನ್ಯನಾಗಿ ಹೀಗೆ ಹರಟುತ್ತೀಯೆ ಎಂದು ಅಪಹಾಸ್ಯಮಾಡಲು ; ನಂದೀಶ್ವರನು ಇವನ ದುರಹಂಕಾರಕ್ಕೆ ಬಹುಕುಪಿತನಾಗಿ ದಶಕಂಠನನ್ನು ಕುರಿತು—ಎಲೈ ಖಳಾಧಮನೇ, ನಿನ್ನ ಶೌರ್ಯವು ನನ್ನಿಂದ ತೃಣಕ್ಕಾದರೂ ಎಣೆಯಾಗಿ ಎಣಿಸಲ್ಪಡುವುದಿಲ್ಲವು. ನಿನ್ನನ್ನು ಕೊಲ್ಲುವುದು ನನಗೆ ಗಣನೆಯಲ್ಲವು. ನಿನ್ನ ಕೆಟ್ಟ ನಡತೆಗಳಿಂದ ನೀನೇ ಸಮೂಲನಾಗಿ ನಿರ್ಮೂಲನಾಗುವೆ. ಇದು ನಿಜವು. ನೀನು ನನ್ನ ಮುಖವನ್ನು ನೋಡಿ ಕೋತಿಯ ಮುಖದಂತಿದೆ ಎಂದು ಹಾಸ್ಯಮಾಡಿದುದರಿಂದ ನಿನಗೆ ಕೋತಿಗಳಿಂದಲೇ ಪರಾಜಯವುಂಟಾಗಲಿ ಎಂದು ಶಾಪವನ್ನಿತ್ತನು. ಆ ಮೇಲೆ ದಶವಕ್ತ್ರನು—ಈ ಕೈಲಾಸಪರ್ವತವಲ್ಲವೇ ನನ್ನ ವಿಮಾನದ ಗತಿಯನ್ನು ತಡೆಯಿತು ? ಒಳ್ಳೆಯದು. ಮೊದಲಿದರ ಮಹಿಮೆಯನ್ನು ಮುಂದು ಆ ಮೇಲೆ ಶಿವನ ಬಲುಮೆಯನ್ನು ನೋಡುವೆನು ಎಂದು ವಿಮಾನದಿಂದಿಳಿದು ಮೊದಲು ಸುರಾಸುರರು ಸಮುದ್ರಮಥನಕ್ಕಾಗಿ ಮಂದರಾಚಲವನ್ನು ಮಹಾ ವಾಸುಕಿಯಿಂದ ಬಿಗಿದಂತೆ ಆ ಹರಾದ್ರಿಯನ್ನು ತನ್ನಿಪ್ಪತ್ತು ತೋಳ್ಗಳಿಂದಲೂ ಬಿಗಿದು ಊರ್ಧ್ವಲೋಕವು ಅಲ್ಲಾಡುತ್ತಿರಲು ಭೂತಲವು ರಸಾತಲಕ್ಕಿಳಿಯುತ್ತಿರಲು ದಿಗಂತಗಳು ಬಿರಿಯುತ್ತಿರಲು ಆರ್ಭಟಿಸಿ ಕಿತ್ತೆತ್ತಿದನು. ಅವನ ಬಾಹುಬಲವಿನ್ನೆನಿತಿರುವುದೋ ? ಖಳನು ಕಿತ್ತೆತ್ತಲು ಕೈಲಾಸಗಿರಿಯು ಮೇಲೆದ್ದಿತು. ಅವನಾಳುತನದ ಬಿಂಕಕ್ಕೆ ಅಖಿಳ ಜನವೂ ಗಡಗಡನೆ ನಡುಗಿತು. ಹರನಿಗೆ ಪಾರ್ವತಿಯಿಂದ ಅಪ್ರಾರ್ಥಿತಾಲಿಂಗನೆಯು ದೊರೆಯಿತು. ಮೃತ್ಯುಂಜಯನು—ಇದು ದಶಕಂಠನ ದುಶ್ಚೇಷ್ಟೆಯೆಂದರಿತು ಕೂಡಲೆ ತನ್ನ ಪಾದಾಂಗುಷ್ಠದಿಂದ ಮೆಟ್ಟಲು ಗಿರಿಯು ಕೆಳಗಿಳಿಯಿತು. ತಿರಿಗಿ ದಶಕಂಠನು ಮೇಲೆತ್ತಿದನು. ಹೀಗೇ ಅನೇಕಾವೃತ್ತಿ ದಶಕಂಠನು ಎತ್ತುತ್ತ ಭೂತೇಶನು ಅಮುಕುತ್ತ ಇರಲು ; ಆ ಕೈಲಾಸನಗವು ಭೂದೇವಿಯಾಡುತ್ತಿರುವ ತಿರಿಕಲ್ಲಿನಂತೊಪ್ಪುತ್ತಿದ್ದಿತು.

ಇಂತಿರಲು ಒಂದುಸಾರಿ ರಕ್ಕಸನ ಇಪ್ಪತ್ತು ನಿಡುದೋಳ್ಗಳೂ ಆ ಗಿರಿಯ ಇರುಬಿನಲ್ಲಿ ಸಿಕ್ಕಲು ; ಅವನು ಕೋಪದಿಂದುಬ್ಬಿ ಬೊಬ್ಬಿರಿದೊಳನೂಕಿ ಎತ್ತಲಾಗಿ ಆಗ ಶಿವನು ಬಲವಾಗಿ ಮೆಟ್ಟಿದನು. ಆ ಮೇಲೆ ಖಳನ ದಿಟ್ಟತನವಡಗಿತು. ಮನಸ್ಸು ವ್ಯಥೆಗೊಳಗಾಯಿತು. ಬುದ್ಧಿಯು ವಿಚಾರಗೆಟ್ಟಿತು. ಕಾರ್ಯವೇಗದಲ್ಲಿ ಮಾಂದ್ಯವುಂಟಾಯಿತು. ಆಗ ಇತಿಕರ್ತವ್ಯತಾಮೂಢನಾಗಿ ಭೂಮಿಯು ಬಿರಿಯುವಂತೆ ಆರ್ಭಟಿಸಿ ಬಹುಬಾಧೆಗೊಳಗಾಗಿ ಕೊರಗುತ್ತಿರಲು ; ಇದೇನು ? ಅತ್ಯದ್ಭುತಾರ್ಭಟಧ್ವನಿಯು ! ಲೋಕಾವಸಾನಸಮಯವೋ ? ಎಂದು ಮಾನವಾಮರ ನಾಗಾದಿಲೋಕಗಳು ಬಲು ನಡುಗಿದುವು. ಆ ಸಮಯದಲ್ಲಿ ಅವನ ಮಂತ್ರಿಗಳು ತಮ್ಮೊಡೆಯನ ವಿಪದವಸ್ಥೆಯನ್ನು ಕಂಡು—ಎಲೈ ದಶವದನನೇ, ನಿನ್ನ ಬಲವೇನಾಯಿತು ? ಜಗದೀಶನೊಡನೆ ನಿನಗೆ ಕಲಹವೇ ? ಸರ್ವಲೋಕಾಂತಕಾರಿಯನ್ನು ಕೆಣಕಿ ಬದುಕುವವರುಂಟೇ ? ಇಲ್ಲವು. ಅದುಕಾರಣ ನೀನು ಶೀಘ್ರವಾಗಿ ಲೋಕಶಂಕರನಾದ ಶಂಕರನನ್ನು ಭಜಿಸು, ವೇದಗಳಿಂದ ಸ್ತುತಿಸು ಎಂದು ಹೇಳಲು ; ದಶಾಸ್ಯನು ಹಾಗೇ ಆಗಲೆಂದು ಅನೇಕ ಸಹಸ್ರ ಸಂವತ್ಸರಗಳ ವರೆಗೂ ಸಾಮಗಾನದಿಂದ ಸ್ತುತಿಸಿದನು. ಆಗ

ಕಿಂಕರಸೇವಿತ ಪಾದಪಂಕಜನಾದ ಶಂಕರನು ತುಷ್ಟನಾಗಿ ಗಿರಿಜಾತೆಯೊಡನೈ ತಂದು, ದಶಕಂಠನ ಅಪರಾಧಗಳನ್ನು ಮನ್ನಿಸಿ—ಎಲೈ ಅಸದೃಶವೀರನೇ, ನಿನ್ನ ಭುಜ ವಿಕ್ರಮಕ್ಕೆ ನಾನು ಮೆಚ್ಚಿದೆನು. ನೀನು ಧ್ವನಿಯಿಂದ ಲೋಕತ್ರಯಗಳನ್ನೂ ಬೆಚ್ಚಿಸಿ ದವನಾದುದರಿಂದ ಇನ್ನು ಮೇಲೆ ನಿನಗೆ ರಾವಣನೆಂದು ಹೆಸರುಂಟಾಗಲಿ. ಸಂತೋ ಷದಿಂದ ಹೋಗು ಎಂದು ಹೇಳಿದನು. ಆ ಮೇಲೆ ರಾವಣನು ಭಯಭರಿತಭಕ್ತಿಯಿಂದ ಕೂಡಿ, ಕೈಮುಗಿದು ನಿಂತುಕೊಂಡು—ಎಲೈ ದೇವದೇವನೇ, ನೀನು ನನ್ನಲ್ಲಿ ಕೃಪೆ ಯುಳ್ಳವನಾದರೆ ಅಪೂರ್ವವಾದೊಂದು ಖಡ್ಗವನ್ನು ಕರುಣಿಸಬೇಕೆಂದು ಬೇಡಿಕೊಳ್ಳ ಲು; ಚಂದ್ರಶೇಖರನು ಚಂದ್ರಹಾಸವೆಂಬೊಂದು ಕತ್ತಿಯನ್ನಿತ್ತು ಅಂತರ್ಧಾನನಾದನು.

ಆ ಬಳಿಕ ರಾವಣನು ಅಲ್ಲಿಂದ ಹೊರಟು ಭೂಲೋಕದಲ್ಲಿ ಸಂಚರಿಸುತ್ತ ತೋ ಳವು ಕುರಿಮಂದೆಗಳನ್ನು ಕಡಿದೊಟ್ಟುವಂತೆ ಆಜಿರಂಗದಲ್ಲಿ ಬಲವಂತರಾದ ಅರಸುಗ ಳನ್ನು ಸಂಹರಿಸುತ್ತ ಬಂದು ಹಿಮನಗದ ತಪ್ಪಲಲ್ಲಿರುವ ಮಹಾರಣ್ಯವನ್ನು ಹೊಕ್ಕು ನೋಡಲು; ಅಲ್ಲೊಂದೆಡೆಯಲ್ಲಿ ಅಸಮಾನಸೌಂದರ್ಯದಿಂದ ಕಂಗೊಳಿಸುತ್ತ ದ್ವಿತೀಯ ರತಿಯಂತೆ ಕುಳಿತು ತಪಸ್ಸನ್ನು ಮಾಡುತ್ತಿದ್ದ ಒಬ್ಬ ಸ್ತ್ರೀಯನ್ನು ನೋಡಿ—ಎಲೈ ಸ್ತ್ರೀಯಳೇ, ಇದೇನು ? ಅತ್ಯಾಶ್ಚರ್ಯವು ! ನೀನಾರು ? ನಿನ್ನ ಹೆಸರೇನು ? ಈ ವನ ಭೂಮಿಯಲ್ಲಿ ಸುಕುಮಾರಾಂಗಿಯಾದ ನೀನೊಬ್ಬಳೇ ಇದ್ದುಕೊಂಡು ಕಠಿಣತರ ತಪಶ್ಚರಣಕ್ಕೆ ಕಾರಣವೇನು ? ಈ ಮೊದಲಾದ ವರ್ತಮಾನಗಳನ್ನು ವಿಶದವಾಗಿ ತಿಳಿಸು ಎನ್ನಲು ; ಆಕೆಯು ಪ್ರೀತಿಯಿಂದ ರಾವಣನನ್ನು ಸತ್ಕರಿಸಿ—ಕೇಳೈ, ಬೃಹಸ್ಪ ತಿಯ ಕುಮಾರನಾದ ಕುಶಧ್ವಜನೆಂಬವನು ವೇದವನ್ನು ಪಠಿಸುತ್ತಿರುವಾಗ ನಾನು ಆತನ ಬಾಯಿಯಿಂದ ಹುಟ್ಟಿದವಳಾದಕಾರಣ ಲೋಕದಲ್ಲಿ ನನಗೆ ವೇದವತಿಯೆಂದು ಹೆಸರಾಯಿತು. ನನ್ನ ತಂದೆಯು ಬಹು ಪ್ರೀತಿಯಿಂದ ನನ್ನನ್ನು ಕಾಪಾಡುತ್ತಿರಲು ; ಮನು ಮುನಿ ಸುರ ಕಿನ್ನರ ಯಕ್ಷ ಕಿಂಪುರುಷಾದಿಗಳಲ್ಲಿ ಸುಂದರರಾದ ಪುರುಷರು ಬಂದು ನನ್ನನ್ನು ಬೇಡಲು ; ಅವರೊಡನೆ ನನ್ನ ತಂದೆಯು—ಈಕೆಯು ಅಯೋನಿಜೆ ಯಾದುದರಿಂದ ಬಹು ಪವಿತ್ರಳು. ಈಕೆಯನ್ನು ವಿಷ್ಣುವಿಗಲ್ಲದೆ ಮತ್ತಾರಿಗೂ ಕೊಡುವುದಿಲ್ಲವೆಂದು ಹೇಳಿಬಿಟ್ಟನು ಆ ಮೇಲೆ ಶಂಭುವೆಂಬೊಬ್ಬ ರಾಕ್ಷಸನು ಬಂದು ನನ್ನನ್ನು ಕೇಳಲು ; ನನ್ನ ತಂದೆಯು ಅವನಿಗೂ ಯಥಾವತ್ತಾಗಿ ಹೇಳಿಬಿಡಲು ; ಅವನು ಕ್ರುದ್ಧನಾಗಿ ನನ್ನ ತಂದೆಯ ತಲೆಯನ್ನು ಕಡಿದು ಬಿಸುಟು ಹೊರಟುಹೋ ದನು. ಆಗ ನನ್ನ ತಾಯಿಯೂ ಸಹಗಮನಕ್ರಿಯೆಯಿಂದ ಪ್ರಾಣತ್ಯಾಗವನ್ನು ಮಾಡಿ ದಳು. ಆ ಮೇಲೆ ಅನಾಥಳಾದ ನಾನು ತಾಯ್ತಂದೆಗಳಿಗೆ ಔರ್ಧ್ವದೇಹಿಕವನ್ನು ನಿರ್ವ ರ್ತಿಸಿ ನನ್ನ ತಂದೆಯ ಬಯಕೆಯನ್ನು ಕೊನೆಗಾಣಿಸುವುದಕ್ಕಾಗಿ ವಿಷ್ಣುಪ್ರೀತ್ಯರ್ಥ ವಾಗಿ ತಪಸ್ಸನ್ನು ಮಾಡುತ್ತ ಇಲ್ಲಿದ್ದೇನೆ ಎಂದು ಹೇಳಿದಳು. ಆಗ ರಾವಣನು— ಎಲೈ ಸ್ತ್ರೀಯೇ, ಕೇಳು. ಹರಿಯೆಲ್ಲಿ ? ನೀನೆಲ್ಲಿ ? ಇಂಥ ನವಯೌವನಕಾಲದಲ್ಲಿ ಸುಖ ವಾಗಿರುವುದನ್ನು ಬಿಟ್ಟು ಹೀಗೆ ಮೂಢಳಾಗಿ ತಪಶ್ಚರಿಸುವುದರಿಂದ ನಿನ್ನ ಯೌವನವು ಅರಣ್ಯಪತಿತ ಚಂದ್ರಿಕೆಯಂತೆ ನಿರುಪಯೋಗವಾಗಿ ಹೋಗುವುದು. ಅದುಕಾರಣ

ನೀನು ಮತಿಹೀನತೆಯನ್ನು ಬಿಟ್ಟು ಜಗದೇಕವೀರನೂ ಸಮಸ್ತ ದೇವತೆಗಳಿಗೂ ಒಡೆಯನೂ ಆದ ನನ್ನನ್ನು ಮದುವೆಯಾಗಿ ಸುಖದಲ್ಲಿರು ಎಂದು ಎಷ್ಟು ವಿಧವಾಗಿ ಹೇಳಿದರೂ ಆಕೆಯು ಒಪ್ಪದಿದ್ದಕಾರಣ ರಾವಣನು ಆಕೆಯನ್ನು ಬಲಾತ್ಕರಿಸುವುದಕ್ಕೆ ಯತ್ನಿಸಲು ; ಆಗ ಆ ವೇದವತಿಯು ಅಗ್ನಿಗೆ ಸಮಾನವಾದ ಕೋಪದಿಂದ ಕಣ್ಣುಗಳು ಕೆಂಪಡರಲು—ಎಲೈ ಮೂಢಾತ್ಮನೇ, ಇಂಥ ದುರ್ವೃತ್ತಿಯಿಂದ ಬಹು ಪಾಪಿಯಾದ ನಿನ್ನನ್ನು ಕೊಲ್ಲುವುದು ನನಗೆ ಅಗಾಧವಲ್ಲ. ಆದರೆ ನನ್ನ ತಪಃಫಲವು ನಿರರ್ಥಕವಾಗುವುದು. ಅಲ್ಲದೆ ಸ್ತ್ರೀಯು ಪುರುಷನನ್ನು ವಧಿಸುವುದು ಧರ್ಮಶಾಸ್ತ್ರದಲ್ಲಿ ನಿಷೇಧಿಸಲ್ಪಟ್ಟಿದೆ. ಅದುಕಾರಣ ನಾನು ಈ ದೇಹವನ್ನು ಬಿಟ್ಟು ಪುನಃ ಸೀತೆಯೆಂಬಭಿಧಾನದಿಂದವತರಿಸಿ ರಾಮನಾಮದಿಂದವತರಿಸುವ ವಿಷ್ಣುವನ್ನು ವರಿಸಿ ಮದುವೆಯಾಗಿ ಆತನ ಕೈಯಿಂದ ನಿನ್ನನ್ನು ಕೊಲ್ಲಿಸುವೆನೆಂದು ಬಿರುನುಡಿಯಂ ನುಡಿದು ಆ ಕ್ಷಣವೇ ಅಗ್ನಿಯಲ್ಲಿ ಹೊಕ್ಕು ಶರೀರವನ್ನು ತ್ಯಜಿಸಿದಳು.

ಅನಂತರದಲ್ಲಿ ರಾವಣನು ಹತಾಶನಾಗಿ ಪುಷ್ಪಕಾರೋಹಣವನ್ನು ಮಾಡಿ ಭೂಮಂಡಲದಲ್ಲಿ ಸಂಚರಿಸುತ್ತ ಮರುತ್ತನೆಂಬ ಮಹಾರಾಜನು ಯಜ್ಞಮಾಡುತ್ತಿರಲು ; ಅಲ್ಲಿಗೆ ಬಂದನು. ಆಗ ಯಜ್ಞದಲ್ಲಿ ಹವಿರಾಹರಣಾರ್ಥವಾಗಿ ಬಂದಿದ್ದ ಇಂದ್ರನು ದುಷ್ಟನಾದ ರಾವಣನನ್ನು ನೋಡಿ ಭಯಕಂಪಿತನಾಗಿ ಕೂಡಲೆ ನವಿಲಾದನು. ಯಮನು ಕಾಗೆಯಾದನು. ವರುಣನು ಹಂಸವಾದನು. ಕುಬೇರನು ಗೋಸುಂಬೆಯಾದನು. ಈ ರೀತಿಯಾಗಿ ದೇವತೆಗಳೆಲ್ಲರೂ ಬೇರೆ ಬೇರೆಯಾದ ಪ್ರಾಣಿಗಳಂತಿರುವ ರೂಪವನ್ನು ಹೊಂದಿ ನಿಜರೂಪಗಳನ್ನು ಮರೆಮಾಡಿಕೊಂಡರು. ಋಷಿಗಳೆಲ್ಲರೂ ತೋರಿದ ಕಡೆಗೆ ಓಡಿಹೋದರು. ರಾವಣನು ಮರುತ್ತರಾಜನೆಡೆಗೈತಂದ.—ಎಲೈ ಅರಸೇ, ನೀನು ಶೂರನಾಗಿದ್ದರೆ ಈ ಕ್ಷಣವೇ ನನ್ನೊಡನೆ ಯುದ್ಧಕ್ಕೆ ಸನ್ನದ್ಧನಾಗು. ಹೇಡಿಯಾದರೆ ಸೋತೆನೆಂದು ಹೇಳಿಬಿಡು. ನಿನ್ನನ್ನು ಕೊಲ್ಲದೆ ಬಿಡುತ್ತೇನೆನಲು; ಆಗ ಮರುತ್ತರಾಜನು—ಎಲಾ, ಮೂರ್ಖನಾದ ನೀನಾರು ? ಏಕಿಲ್ಲಿಬಂದೆ ? ಎಂದು ಕೇಳಲು—ನಾನು ಧನಪತಿಯಾದ ಕುಬೇರನ ತಮ್ಮನು. ದಶಾಸ್ಯನೆಂಬ ನನ್ನ ಹೆಸರು ಸರ್ವಲೋಕವಿದಿತವಾಗಿರುವುದು. ಮತ್ತು ನಾನು ಯುದ್ಧರಂಗದಲ್ಲಿ ಕುಬೇರನನ್ನು ಸೋಲಿಸಿ ಆತನ ವಿಮಾನವನ್ನು ಕಿತ್ತುಕೊಂಡುದರಿಂದ ಶೂರನೆಂದು ಲೋಕದಲ್ಲೆಲ್ಲಾ ಪ್ರಖ್ಯಾತನಾಗಿರುವೆನು. ಹೀಗಿರುವಲ್ಲಿ ನೀನು ಮಾತ್ರ ನನ್ನನ್ನು ತಿಳಿಯದಿರುವುದು ಅತ್ಯಾಶ್ಚರ್ಯವಾಗಿದೆ. ಅಥವಾ ನೀನು ಮೂಢನೂ ಅಪ್ರಸಿದ್ಧನೂ ಆಗಿರಬಹುದು ಎಂದು ಹೇಳಲು ; ಮರುತ್ತರಾಜನು—ಆಹಾ ! ನೀನು ಉತ್ತಮಪುರುಷನು ! ಅಣ್ಣನೊಡನೆ ಯುದ್ಧಮಾಡಿ ಗೆದ್ದವನು ! ನೀನು ಸ್ವಲ್ಪವಾದರೂ ಧರ್ಮಮಾರ್ಗವನ್ನು ತಪ್ಪಿ ನಡೆವವನಲ್ಲ ಎಂದು ಸ್ತುತಿನಿಂದಾವಚನಗಳನ್ನಾಡಿ—ಒಳ್ಳೆಯದು, ಯುದ್ಧಕ್ಕೆ ನಿಲ್ಲೆಂದು ಹೇಳಿ, ತಾನು ಸನ್ನದ್ಧನಾಗುತ್ತಿದ್ದನು. ಆ ಸಮಯದಲ್ಲಿ ಬೃಹಸ್ಪತಿಯ ತಮ್ಮನಾದ ಸಂವರ್ತನೆಂಬ ಪುರೋಹಿತನು ಬಂದು—ಎಲೈ ರಾಯನೇ, ಈಗ ನೀನು ಯಜ್ಞದೀಕ್ಷಿತನಾಗಿದ್ದೀಯೆ. ಈ ವೇಳೆಯಲ್ಲಿ ಇಂಥ ದುಷ್ಟನೊಡನೆ ಯುದ್ಧಕ್ಕೆ

ಹೋಗುವುದು ಯುಕ್ತವಲ್ಲವೆಂದುಸಿರಲು ; ಅರಸನು ಆ ಮಾತುಗಳನ್ನು ಗ್ರಹಿಸಿ ಹಿಡಿದಿದ್ದ ಬಿಲ್ಲನ್ನು ಕೆಳಗಿಟ್ಟು ರಾವಣನ ಬಳಿಗೆ ಬಂದು—ಎಲೈ ವೀರನೇ, ನಾನು ನಿನಗೆ ಸೋತೆನೆಂದು ಹೇಳಿಬಿಟ್ಟನು.

ಆ ಮೇಲೆ ರಾವಣನು ಅಲ್ಲಿಂದ ಹೊರಟುಹೋಗಲು; ಮೊದಲಿನಂತೆ ನಿಜರೂಪ ಧಾರಿಗಳಾದ ಇಂದ್ರಾದಿ ದೇವತೆಗಳೂ ಮುನಿಗಳೂ ಯಜ್ಞಶಾಲೆಗೆ ಬಂದು—ಅಕಸ್ಮಾತ್ತಾಗಿ ನಮಗೊದಗಿದ್ದ ರಾಕ್ಷಸರೂಪಮೃತ್ಯುವು ತಪ್ಪಿಹೋಯಿತೆಂದು ಸಂತೋಷಿಸಿದರು. ಇಂದ್ರನು ತಾನು ನವಿಲಾಗಿದ್ದು ವಿಪತ್ತನ್ನು ತಪ್ಪಿಸಿಕೊಂಡನಾದುದರಿಂದ ಆ ನವಿಲನ್ನು ಕುರಿತು—ನಿನ್ನ ರೆಕ್ಕೆಯಲ್ಲಿ ನನ್ನ ಕಣ್ಣುಗಳಂತಿರುವ ಚಿನ್ಹೆಗಳುಂಟಾಗಲಿ ಮತ್ತು ವರ್ಷಕಾಲದಲ್ಲಿ ನಿನಗೆ ವಿಶೇಷವಾಗಿ ಸಂತೋಷೋದಯವಾಗಲಿ ಎಂದು ವರವನ್ನಿತ್ತನು. ಯಮನು ಹಾಗೇ ಕಾಗೆಯನ್ನು ನೋಡಿ—ಎಲೈ ವಾಯಸವೇ, ಈ ದಿವಸ ಮೊದಲು ನಿನಗೆ ಬೇಗ ಮರಣವಾಗದೆ ಅನೇಕ ದಿನಗಳ ವರೆಗೂ ಬದುಕುತ್ತ ಚಿರಜೀವಿಯೆನ್ನಿಸಿಕೊಂಡಿರು. ಇದುಮೊದಲು ಲೋಕದ ಜನರು ಮಾಡುವ ಪಿತೃಕಾರ್ಯಗಳಲ್ಲಿ ಪಿತೃಪ್ರೀತ್ಯರ್ಥವಾಗಿ ಹಾಕುವ ಪಿಂಡಗಳನ್ನು ನೀನು ಭಕ್ಷಿಸಿದರೆ ಅದರಿಂದ ನಾನು ಬಹಳವಾಗಿ ತೃಪ್ತಿಯನ್ನು ಹೊಂದುವೆನೆಂದು ವರವನ್ನು ಕೊಟ್ಟನು. ಕುಬೇರನು ಗೋಸುಂಬೆಯನ್ನು ನೋಡಿ ನಿನ್ನ ಕಂಠದಲ್ಲಿ ಸುವರ್ಣರೇಖೆಯಂತಿರುವ ಗೆರೆಯು ಯಾವಾಗಲೂ ಇರಲೆಂದು ವರವನ್ನಿತ್ತನು. ಆ ಮೇಲೆ ಎಲ್ಲರೂ ಯಜ್ಞವನ್ನು ಮುಗಿಸಿಕೊಂಡು ಯಥಾಸ್ಥಾನಗಳನ್ನು ಕುರಿತು ತೆರಳಿದರು.

ಇತ್ತ ರಾವಣನು ಅಯೋಧ್ಯಾನಗರವನ್ನು ಕುರಿತು ಹೋಗಿ ಅನರಣ್ಯನೆಂಬ ಆ ಪುರಾಧಿಪತಿಯನ್ನು ಕಂಡು—ಎಲೈ ನೃಪನೇ, ಯುದ್ಧಕ್ಕೆ ಬರುವಿಯೋ? ಅಥವಾ ಸೋತೆನೆಂದು ಹೇಳಿಬಿಡುವಿಯೋ? ಎಂದು ಬಲಾತ್ಕರಿಸಲು ; ಆಗ ರಾಯನು ಮಹಾಕೋಪವುಳ್ಳವನಾಗಿ ಧನುರ್ಬಾಣಗಳನ್ನು ತೆಗೆದುಕೊಂಡು ಬಂದು ರಾವಣನೊಡನೆ ಬಹುದಿನಗಳ ವರೆಗೂ ಯುದ್ಧವನ್ನು ಮಾಡಿ ಕಡೆಗೆ ಅವನ ಬಾಣಘಾತದಿಂದ ನೊಂದು ಭೂಮಿಯಲ್ಲಿ ಬಿದ್ದು ಅಂತ್ಯಾವಸ್ಥೋಚಿತವಾದ ಬಾಧೆಯನ್ನನುಭವಿಸುತ್ತಿರಲು ; ಆ ಸಮಯದಲ್ಲಿ ರಾವಣನು ಅವನ ಬಳಿಗೆ ಬಂದು—ಏನೈಯ್ಯಾ ಅಲ್ಪಬಲಿಯಾದ ಅರಸೇ, ಅಗ್ನಿಯೊಡನೆ ಕಲಹಮಾಡಿದ ಮಿಡಿತೆಯಂತೆ ವ್ಯರ್ಥವಾಗಿ ಸಾಯುತ್ತಿರುವಿಯಲ್ಲಾ! ನೀನೆಂಥ ಮೂಢನು? ಮೊದಲೇ ಸೋತೆನೆಂದು ಹೇಳಿಬಿಟ್ಟಿದ್ದರೆ ಜೀವಿಸಿಕೊಂಡಿರಬಹುದಾಗಿದ್ದಿತ್ತು ಎಂದು ಗರ್ವೋಕ್ತಿಗಳಿಂದ ಹಾಸ್ಯಮಾಡಲು; ಅದಕ್ಕಾರಾಯನು—ಎಲೈ ಮೂರ್ಖನೇ, ಯುದ್ಧದಲ್ಲಿ ಜಯಾಪಜಯಗಳು ದೈವಾಧೀನವಾದುವುಗಳು. ಯುದ್ಧದಲ್ಲಿ ಎದುರಾಂತ ವಿರೋಧಿಗಳನ್ನು ಜಯಿಸುವುದೂ ಹಗೆಗಳಿಂದ ಸಾಯುವುದೂ ಶೂರರಾದವರಿಗೆ ನೈಜಧರ್ಮವು. ಇದರಿಂದ ಬಹುಮಾನಾಪಮಾನಗಳುಂಟಾಗುವುದಿಲ್ಲ. ನೀನು ದುರಹಂಕೃತಿಯುಳ್ಳವನಾಗಿ ಇಂಥ ಕಾಲದಲ್ಲಿ ನನ್ನನ್ನು ಹಾಸ್ಯಮಾಡಿದ ಕಾರಣ ಮುಂದೆ ನನ್ನ ವಂಶದಲ್ಲಿ ರಾಮನೆಂಬವನು ಹುಟ್ಟಿ ನಿನ್ನನ್ನು ಕೊಲ್ಲುವನೆಂದು ಶಾಪವನ್ನಿತ್ತು ಪ್ರಾಣವನ್ನು ಬಿಟ್ಟನು.

ಆಗ ದೇವತೆಗಳು ರಾವಣನ ವಿನಾಶಕ್ಕೆ ಕಾರಣಭೂತವಾಗಿ ಸಂಭವಿಸಿದ ಶಾಪಕ್ಕೋಸ್ಕರ ಸಂತೋಷಿಸಿ ಲೋಕಗಳೆಲ್ಲವೂ ಗಂಭೀರಧ್ವನಿಮಯವಾಗುವಂತೆ ದಿವ್ಯ ದುಂದುಭಿಗಳನ್ನು ತಾಡಿಸಿದರು. ' ಆ ಶಾಪಕ್ಕೆ ಖಳಪತಿಯಂಜುವನೇ ? ನೃಪವರನು ಮೃತನಾಗಲು; ಅಲ್ಲಿಂದ ಹೊರಟು ತೋಳ್ದೀಟೆಯನ್ನು ಅಡಗಿಸಿಕೊಳ್ಳುವುದಕ್ಕೆ ಅಲ್ಪ ಬಲಯುಕ್ತವಾದ ಈ ನರಸಂಕುಲವು ನನಗೀಡಲ್ಲವೆಂದು ಆಲೋಚಿಸುತ್ತ, ಗಗನ ಮಾರ್ಗದಲ್ಲಿ ಬರುತ್ತಿರಲು; ಅಲ್ಲಿ ಸ್ವೈರಗಾಮಿಯಾದ ನಾರದಮುನಿಯನ್ನು ಕಂಡು ನಮಸ್ಕರಿಸಲು; ಆ ಮುನೀಂದ್ರನು ಹರಸಿ—ಎಲೈ ಲಂಕಾಧೀಶನೇ, ನಿನಗೆ ಸೌಖ್ಯವೇ? ಎಂದು ವಿನಯದಿಂದ ಯೋಗಕ್ಷೇಮವನ್ನು ಕೇಳಿ—ಈಗ ನಿನ್ನ ಶೌರ್ಯೋದ್ರೇಕ ವೆಂಬ ಪ್ರಳಯಾಗ್ನಿಜ್ವಾಲೆಯಲ್ಲಿ ಲೋಕವೆಲ್ಲವೂ ಬೆಂದುಹೋಯಿತು. ಅಲ್ಪರಾದ ಈ ಮನುಷ್ಯರನ್ನು ಕೊಲ್ಲುವುದು ನಿನಗೆ ಹಿರಿದಲ್ಲವು. ಈ ಮನುಷ್ಯರಲ್ಲಿ ನಿನಗೆ ಎದುರಾಗಿ ನಿಂತು ಯುದ್ಧಮಾಡುವವರುಂಟೇ ? ಇಲ್ಲವು. ಮಹಾವೀರನಾದ ನೀನು ಇಂಥ ಹೀನಬಲರನ್ನು ಕೊಂದರೆ ಅಪ್ರತಿಹತವಾದ ನಿನ್ನ ಭುಜಬಲಕ್ಕೆ ಪ್ರಾಶಸ್ತ್ಯ ವುಂಟಾದೀತೇ ? ಎಂದಿಗೂ ಇಲ್ಲವು. ಈ ನರರು ಅಲ್ಪಾಯುಷ್ಕರು ಮತ್ತು ರೋಗ ಶೋಕ ಕ್ಷುತ್ಪಿಪಾಸಾದಿಗಳಿಂದ ಸ್ವಲ್ಪಕಾಲದೊಳಗೆ ತಾವಾಗಿಯೇ ಮೃತ್ಯುವಶ ರಾಗುವವರು. ಇಂಥವರನ್ನು ಕೊಲ್ಲುವುದು ನಿನಗೆ ಅಕೀರ್ತಿಕರವು. ಆದುದರಿಂದ ಇವರನ್ನು ಬಿಟ್ಟುಬಿಡು. ಯಮನೇ ಮೊದಲಾದ ಲೋಕಪಾಲಕರು ಬಹು ಬಲಿಷ್ಠ ರಾಗಿರುವರು. ಅವರು ನಿನಗೆ ಸಮಾನವಾದ ಭುಜಬಲವುಳ್ಳವರು. ನೀನು ಹೋಗಿ ಯುದ್ಧದಲ್ಲಿ ಅವರನ್ನು ಸೋಲಿಸಿದರೆ ಮಹಾಕೀರ್ತಿಯುಂಟಾಗುವುದು. ಅವರೊ ಳಗೆ ತೆಂಕಣದೆಸೆಗೊಡೆಯನಾದ ಯಮನೆಂಬವನು ಕಾಲದಂಡವನ್ನು ಧರಿಸಿದವ ನಾಗಿ ದೇವ ದಾನವ ಮಾನವೋರಗಾದಿ ಸಕಲ ಪ್ರಾಣಿಗಳನ್ನೂ ಬಾಧಿಸುತ್ತಿರುವನು. ನೀನು ಹೋಗಿ ಅವನನ್ನು ಕೊಂದುಹಾಕಿದರೆ ಸರ್ವಪ್ರಾಣಿಗಳೂ ಕ್ಷೇಮದಿಂದಿರು ವುವು ಎನ್ನಲು ; ರಾವಣನು—ಎಲೈ ಮುನೀಂದ್ರನೇ, ನೀನು ಹೇಳಿದ ಮಾತು ಯು ಕ್ತವೇ ಸರಿ. ನಾನು ಹೀಗೆಯೇ ಯೋಚಿಸುತ್ತಿದ್ದೆನು. ನೀನು ಹೇಳಿದಂತೆ ದಿಕ್ಪಾಲಕ ರಲ್ಲಿ ಒಬ್ಬನಾದ ಕುಬೇರನನ್ನು ಮೊದಲೇ ಜಯಿಸಿದ್ದೇನೆ. ಇನ್ನು ಯಮವರುಣೇಂ ದ್ರಾದಿ ದಿಗೀಶರನ್ನು ಜಯಿಸಿ ಆ ಮೇಲೆ ರಸಾತಲವನ್ನು ಹೊಕ್ಕು ದೈತ್ಯ ದಾನವ ಪನ್ನಗರೇ ಮೊದಲಾದವರನ್ನು ಸೋಲಿಸಿ ಕೀರ್ತಿಯನ್ನು ಹೊಂದುವೆನೆಂದು ಹೊರ ಡಲು ; ನಾರದಮುನಿಯು ಅವನಿಗಿಂತಲೂ ಮೊದಲೇ ಯಮಲೋಕಕ್ಕೆ ಬಂದು ಯಮನಿಂದ ಸತ್ಕೃತನಾಗಿ ಅವನನ್ನು ಕುರಿತು—ರಾವಣನು ನಿನ್ನೊಡನೆ ಯುದ್ಧ ಮಾಡುವುದಕ್ಕೆ ಬರುವನು. ಅವನನ್ನು ಕಾಲದಂಡದಿಂದ ಬಡಿದು ಕೊಂದುಹಾಕು. ಲೋಕಕ್ಕೆಲ್ಲಾ ಕ್ಷೇಮವುಂಟಾಗುವುದೆಂದು ಹೇಳಿ ಹೊರಟುಹೋದನು.

ಅನಂತರದಲ್ಲಿ ರಾವಣನು ರಾಕ್ಷಸಸೇನಾಸಮೇತನಾಗಿ ಹೊರಟು ಯಮಲೋ ಕಕ್ಕೆ ಬಂದು ನೋಡಲು ; ನರಕಗಳಲ್ಲಿ ಯಮದೂತರು ಪಾಪಾತ್ಮರನ್ನು ಹಿಡಿದು ಕಾಯ್ದ ಮಳಲಲ್ಲಿ ಎಳೆಯುತ್ತಿರುವುದನ್ನೂ ಕಾಯಿಸಿದ ಉಕ್ಕಿನ ಶಲಾಕೆಗಳಿಂದ

ಕಣ್ಣುಗಳನ್ನು ಇರಿಯುತ್ತಿರುವುದನ್ನೂ ಕಬ್ಬಿಣದ ಕಾಗೆಗಳಿಂದ ಮಾಂಸಖಂಡಗಳನ್ನು ಕೀಳಿಸುತ್ತಿರುವುದನ್ನೂ ಕೆಂಪಗೆ ಕಾಯ್ದ ಉಕ್ಕಿನ ಕಂಬಗಳನ್ನು ತಬ್ಬಿಸುತ್ತಿರುವುದನ್ನೂ ಕೀವು ರಕ್ತ ಇವುಗಳನ್ನು ಕುಡಿಸುತ್ತಿರುವುದನ್ನೂ ವೈತರಣಿಯೆಂಬ ನರಕಕೂಪದಲ್ಲಿ ನೂಕಿ ಮುಳುಗಿಸುತ್ತಿರುವುದನ್ನೂ ನೋಡಿ ಕರುಣದಿಂದ ಕೂಡಿ ಆ ಯಮಭಟರ ಮೇಲೆ ಬಾಣಪ್ರಯೋಗವನ್ನು ಮಾಡಿ ಅವರನ್ನೆಲ್ಲಾ ಓಡಿಸಲು ; ಆಗ ಪಾಪಿಗಳೆಲ್ಲಾ ಕೂಡಿ—ಈ ಮಹಾತ್ಮನಿಂದ ನಮ್ಮ ಬಾಧೆಗಳೆಲ್ಲಾ ತಪ್ಪಿದುವೆಂದು ಸಂತೋಷಿಸಿ ರಾವಣನ ಬಳಿಗೆ ಬಂದು ನಮಸ್ಕರಿಸಿ ನಿಂತುಕೊಂಡು—ನಾವೂ ನಿನ್ನೊಡನೆ ಸೇರಿ ಯಮನ ಸಂಗಡ ಯುದ್ಧಮಾಡುವುದಕ್ಕೆ ಬರುತ್ತೇವೆಂದು ಬೊಬ್ಬಿರಿದು ಕೂಗಿದರು. ರಾವಣನು ಆ ಪ್ರೇತಗಳನ್ನೂ ಜತೆಯಲ್ಲಿ ಕರೆದುಕೊಂಡು ಬರುತ್ತ ಅಲ್ಲಿ ಮತ್ತೊಂದು ಸ್ಥಳದಲ್ಲಿ ಒಪ್ಪುತ್ತಿರುವ ದಿವ್ಯಸಭೆಯಲ್ಲಿ ಹಸಿವು ಬಾಯಾರಿಕೆಗಳಿಲ್ಲದೆ ದಿವ್ಯದೇಹಗಳನ್ನು ಧರಿಸಿಕೊಂಡು ಅಮೂಲ್ಯವಸ್ತ್ರಾಭರಣಗಳನ್ನುಟ್ಟು ತೊಟ್ಟು ಉತ್ತಮ ಪರಿಮಳ ದ್ರವ್ಯಗಳನ್ನು ಲೇಪಿಸಿಕೊಂಡು, ನಿತ್ಯಸುಗಂಧ ಯುಕ್ತವಾದ ಪುಷ್ಪಮಾಲಿಕೆಗಳನ್ನು ಧರಿಸಿಕೊಂಡು ಮನೋಜ್ಞವಾದ ಗಾನಗಳನ್ನು ಸಾವಧಾನದಿಂದ ಆಕರ್ಣಿಸುತ್ತಿರುವ ಪುಣ್ಯಾಶಾಲಿಗಳನ್ನು ನೋಡುತ್ತ ಬಂದು ಜವನರಮನೆಯ ಹೆಬ್ಬಾಗಿಲಲ್ಲಿ ನಿಂತು ಸಂಯಮನೀನಗರವು ತಲ್ಲಣಿಸುವಂತೆ ಬೊಬ್ಬಿರಿದನು. ಆಗ ಯಮನು ಅಕಸ್ಮಾತ್ತಾಗಿ ಉಂಟಾದ ಬಲುಬೊಬ್ಬೆಯನ್ನು ಕೇಳಿ ಬೆಚ್ಚಿ ಖೂಳನು ಜಗಳಕ್ಕೆ ಬಂದನೆಂದೆದ್ದು ಕಾಲದಂಡವೇ ಮೊದಲಾದ ಸಮಸ್ತಾಯುಧಗಳನ್ನೂ ತೆಗೆದುಕೊಂಡು ಕೋಣನ ಮೇಲೇರಿ ರೂಪವನ್ನು ಧರಿಸಿರುವ ಕ್ಷಯವೇ ಮೊದಲಾದ ಸರ್ವರೋಗಗಳನ್ನೂ ಭಯಂಕರವಾದ ಕಾಲಮೃತ್ಯುವನ್ನೂ ಸಂಗಡ ಕರೆದುಕೊಂಡು ಹೊರಟುಬಂದು ರಾವಣನೆದುರಿನಲ್ಲಿ ನಿಂತು ಧನುಷ್ಟಂಕಾರವನ್ನು ಮಾಡಿ ನಿಶಾತಮಾರ್ಗಣ ವೃಷ್ಟಿಯನ್ನು ಸುರಿಸಲು ; ಮಹೋದರ ಮಾರೀಚ ಪ್ರಹಸ್ತಾದಿ ರಾಕ್ಷಸ ವೀರರು ಯಮನ ಬಾಣಪ್ರಘಾತಗಳನ್ನು ತಡೆಯಲಾರದೆ ಕಂಗೆಟ್ಟು ನೆಲದಲ್ಲಿ ಬಿದ್ದು ಮೂರ್ಛೆಯನ್ನು ಹೊಂದಿದರು. ಲೋಕದಲ್ಲಿ ದೇವ ದಾನವಮಾನವಾದಿ ಸಮಸ್ತ ಪ್ರಾಣಿಗಳಿಗೂ ಅಂತ್ಯವನ್ನುಂಟುಮಾಡುವುದರಲ್ಲಿ ಅಧಿಕರ್ತೃವಾದ ಯಮನು ಎದುರಿಗೆ ಬಂದು ಕಾಳಗಕ್ಕೆ ನಿಂತರೆ ಅವನೆದುರಿನಲ್ಲಿ ನಿಂತು ಬದುಕಬಲ್ಲವರಾರುಂಟು ? ಇಂಥವನಿಗೆದುರಾಂತು ನಿಂತ ರಾವಣನ ಶೌರ್ಯಧೈರ್ಯಗಳನ್ನು ಬಣ್ಣಿಸುವವರಾರು? ಅಚಲಸದೃಶವಾದ ಧೈರ್ಯದಿಂದ ಕೂಡಿ ಯಮನಿದಿರಿನಲ್ಲಿ ನಿಂತು ಶಕ್ತಿ ತೋಮರಗದೆ ಕುಂತ ಇವೇ ಮೊದಲಾದ ನಾನಾ ವಿಧಾಯುಧಗಳಿಂದ ಪ್ರಹರಿಸಲು ; ಯಮನವುಗಳನ್ನೆಲ್ಲಾ ಕ್ಷಣಕಾಲದಲ್ಲಿ ಕಡಿದು ತನ್ನ ಕ್ರೂರವಾದ ಬಾಣಪ್ರಹಾರಗಳಿಂದ ದಶಗಳನ ಪುಷ್ಪಕವೆಂಬ ವಿಮಾನವನ್ನು ಕಡಿದಿಡಲು ಅದು ಸರೋಜಭವನ ವರಪ್ರಭಾವದಿಂದ ತಿರಿತಿರಿಗಿ ಮೊದಲಿನಂತೆಯೇ ಬೆಳೆಯುತ್ತಿದ್ದಿತು.

ಆಗ ರಾವಣನು ಬಹುಕೋಪೋದ್ದೀಪಿತನಾಗಿ ಬತ್ತಳಿಕೆಯಿಂದ ಹತ್ತು ಭಾಣಗಳನ್ನು ತೆಗೆದು ಶಿಂಜಿನಿಯಲ್ಲಿ ಹೂಡಿ ಆಕರ್ಣಾಂತವಾಗಿ ಸೇದಿ ಗುರಿಗಟ್ಟಿ ಯಮನ

ಕೋಣನಿಗೆ ಹೊಡೆದು ಕೂಡಲೆ ಕುಪ್ಪಳಿಸಿ ಮುಂದೆ ಬಂದು ಕೋದಂಡದಿಂದಪ್ಪಳಿಸಿ ಹತ್ತು ತೋಳ್ಗಳನ್ನೂ ಮೇಲೆತ್ತಿ ದೀವಟಿಗೆಗಳಂತಿರುವ ಕಣ್ಣುಗಳನ್ನು ತಿರುಗಿಸುತ್ತ ಗಿರಿಗುಹೆಗಳಂತಿರುವ ಹತ್ತು ಬಾಯಿಗಳನ್ನೂ ತೆರೆದುಬ್ಬಿಯುಬ್ಬರಿಸಿದನು. ಕಲ್ಪಾಂತ ಘನಗರ್ಜಿತದ ಒಡನಾಡಿಯಂತಿರುವ ಅತ್ಯುಗ್ರಾರ್ಭಟಧ್ವನಿಯನ್ನು ಕೇಳಿದ ಕೋಣವು ದ್ವಿಗುಣಿತವಾದ ಭಯಭ್ರಾಂತಿಯಿಂದ ಕಂಗೆಟ್ಟು ಹಾರಿಯಾಡುತ್ತಿರಲು ; ನಿಲ್ಲಿಸಲೆತ್ನಿಸುತ್ತಿರುವ ಪ್ರೇತನಾಯಕನನ್ನು ಗಣಿಸದೆ ಹೊರಟು ಹರಿದಾರಿಯ ದೂರದಲ್ಲಿ ನೆಗೆದು ಅವನನ್ನು ನೆಲಕ್ಕೊಗೆದು ಓಡಿಹೋಯಿತು. ಆಗ ರಾಕ್ಷಸರ ಗುಂಪಿನಲ್ಲಿ ಅಪಹಾಸ್ಯಕರವಾದ ಅಟ್ಟಹಾಸವುಂಟಾಯಿತು. ಏನು ಹೇಳುವುದು ? ಯಮನ ವಿಪತ್ತನ್ನು ನೋಡಿ ಯಮಭಟರೆಲ್ಲರೂ ಬೆಪ್ಪಾಗಿ ನಿಂತರು. ಆ ಮೇಲೆ ಯಮನೆದ್ದು ಬಂದು ನಿಲ್ಲಲು ; ಕಾಲಮೃತ್ಯುವು ಅವನನ್ನು ನೋಡಿ—ಎಲೈ ಮಹಾನುಭಾವನೇ, ಶೀಘ್ರವಾಗಿ ನನಗಪ್ಪಣೆಯನ್ನು ಕೊಡು. ಇವನಿಗಿಂತಲೂ ಅತಿ ಬಲರನ್ನಾದರೂ ಸ್ವಾಧೀನಪಡಿಸಿಕೊಳ್ಳುವಂಥ ನನಗೆ ಈ ಖೂಳನಾದ ದಶಕಂಠನೆಷ್ಟುಮಾತ್ರದವನು ಎಂದು ಹೇಳಲು ; ಯಮನು—ಎಲೈ ಮೃತ್ಯುವೇ, ಒಂದು ನಿಮೇಷಮಾತ್ರ ಸಹಿಸಿ ನೋಡು ಎಂದು ಹೇಳಿ ಘೋರಾಕಾರವನ್ನು ಧರಿಸಿ ಈ ಖೂಳನನ್ನು ಸದೆಯುವೆನೆಂದು ಭಯಂಕರವಾದ ಕಾಲದಂಡವನ್ನು ತೆಗೆದುಕೊಳ್ಳಲು ; ಆಗ ಸ್ವರ್ಗವೇ ಮೊದಲಾದ ಸಮಸ್ತ ಲೋಕಗಳೂ ಭಯಕಂಪಿತಗಳಾದುವು. ಆಗ ಇಂದ್ರಾದಿದೇವತೆಗಳೆಲ್ಲಾ ಹಾಹಾಕಾರವನ್ನು ಮಾಡುತ್ತ ಬೊಮ್ಮನ ಬಳಿಗೋಡಿಬಂದು ಕೈಮುಗಿದು—ಅಕಾಲದಲ್ಲಿ ಮಹಾ ಪ್ರಳಯವುಂಟಾಗುವುದೆಂದು ಮೊರೆಯಿಡಲು ; ಪದ್ಮಜನು ತ್ವರಿತದಿಂದ ಯಮಲೋಕಕ್ಕೈತಂದು ಎಲ್ಲರಿಗೂ ಅದೃಶ್ಯನಾಗಿ ಅಂತಕನಿಗೆ ಮಾತ್ರ ದೃಶ್ಯನಾಗಿ—ಎಲೈ ವೈವಸ್ವತನೇ, ಈಗ ಕಾಲದಂಡವನ್ನು ಕೈಕೊಳ್ಳಬೇಡ. ಯಾಕೆಂದರೆ ಈ ಕಾಲದಂಡವನ್ನು ಯಾರ ಮೇಲೆ ಪ್ರಯೋಗಿಸಿದರೂ ಅವರು ಸಾಯಲೇಬೇಕೆಂದು ನಾನು ಮೊದಲೇ ವರವನ್ನು ಕೊಟ್ಟಿದ್ದೇನೆ. ಈ ರಾವಣನಿಗೆ ಮನುಷ್ಯರೂ ತಿರ್ಯಗ್ಜಂತುಗಳೂ ಹೊರತಾಗಿ ಉಳಿದ ದೇವತೆಗಳೇ ಮೊದಲಾದ ಯಾರಿಂದಲೂ ಮರಣವುಂಟಾಗಭಾರದೆಂದೂ ನಾನೇ ವರವನ್ನು ಕೊಟ್ಟಿದ್ದೇನೆ. ಆದುದರಿಂದ ಈ ಕಾಲದಂಡವು ರಾವಣನನ್ನು ಕೊಲ್ಲದಿದ್ದರೂ ಇದರಿಂದ ರಾವಣನು ಮೃತನಾದರೂ ನನ್ನ ಮಾತು ಹುಸಿಯಾಗುವುದು. ಹಾಗೆ ನನ್ನ ಮಾತು ಅನೃತವಾದರೆ ಸಕಲಲೋಕಗಳೂ ವಿನಾಶವಾಗಿ ಹೋಗುವುವು. ಅದುಕಾರಣ ನೀನು ಈಗ ಯುದ್ಧಾಂಗಣದಿಂದ ಮರೆಯಾಗಿ ಹೋಗೆಂದು ಹೇಳಿ ತನ್ನ ಲೋಕವನ್ನು ಕುರಿತು ತೆರಳಲು ; ಆ ಮೇಲೆ ಯಮನು ಬ್ರಹ್ಮದೇವನ ಮಾತಿನಂತೆ ಅದೃಶ್ಯನಾಗಿ ಹೋಗಲು ; ಆಗ ರಾವಣನು ಯಮನೂ ನನಗೆ ಹೆದರಿ ಯುದ್ಧಭೂಮಿಯಿಂದ ತಪ್ಪಿಸಿಕೊಂಡು ಓಡಿಹೋದನೆಂದು ತಿಳಿದುಕೊಂಡು ಸಂತೋಷಿಸಿ ಜಯಭೇರಿಯನ್ನು ಹೊಡಿಸುತ್ತ ಸಮಸ್ತ ಸೇನಾಪರಿವೃತನಾಗಿ ಅಲ್ಲಿಂದ ಹೊರಟು ರಸಾತಲಕ್ಕೆ ಬಂದು ಅಲ್ಲಿ ನಿವಾತಕವಚರೆಂಬ ದೈತ್ಯರೊಡನೆ ಜಗಳಕ್ಕೆ ತೊಡಗಿ ಒಂದು ಸಂವತ್ಸರಾಂತದ ವರೆಗೂ ಕಾದಾಡಿದಾಗೂ

ಒಬ್ಬರಿಗೂ ಜಯಪರಾಜಯಗಳುಂಟಾಗದಿರಲು; ಆಗ ಪ್ರತ್ಯಕ್ಷನಾಗಿ ಬಂದ ಸರಸ್ವತೀಪತಿಯ ಅಪ್ಪಣೆಯಿಂದ ಉಭಯಪಕ್ಷದ ವೀರರೂ ಕೂಡಿ ಅಗ್ನಿಸಾಕ್ಷಿಯಾಗಿ ಸ್ನೇಹವನ್ನು ಮಾಡಿಕೊಂಡರು.

ಅನಂತರದಲ್ಲಿ ರಾವಣನು ಅಲ್ಲಿಂದ ಹೊರಟು ಅಶ್ಮಪುರವೆಂಬ ನಗರಕ್ಕೆ ಬಂದು ಅಲ್ಲಿರುವ ಕಾಲಕೇಯರೆಂಬ ದೈತ್ಯನಾಯಕರೊಡನೆ ಬಡಿದಾಟಕ್ಕೆರಗಿ ಕಡೆಗೆ ಅನೇಕ ದೈತ್ಯರೊಡನೆ ಶೂರ್ಪನಖಿಯ ಗಂಡನಾದ ವಿದ್ಯುಜ್ಜಿಹ್ವನನ್ನೂ ಕೊಂದು ಆ ನಗರವನ್ನೆಲ್ಲಾ ಸೂರೆಗೆಯ್ದು ಅಲ್ಲಿಂದ ಹೊರಟು ವರುಣನ ನಗರಾಭಿಮುಖನಾಗಿ ಬಂದು ಯುದ್ಧರಂಗದಲ್ಲಿ ಅವನ ಮಕ್ಕಳನ್ನು ಮೈಮರೆವಂತೆ ಬಡಿದೊರಗಿಸಿದನು. ಆ ಮೇಲೆ ವರುಣನ ಬೊಕ್ಕಸಕ್ಕೆ ನುಗ್ಗಿ ಅಲ್ಲಿದ್ದ ಅನರ್ಘ್ಯರತ್ನಗಳನ್ನು ಅಪಹರಿಸಿಕೊಂಡು ನಾಗ ದೇವ ದೈತ್ಯಾದಿ ಜಾತೀಯರಾದ ಯೌವನಸ್ತ್ರೀಯರನೇಕರನ್ನು ಬಲಾತ್ಕಾರದಿಂದ ಎಳೆದುಕೊಂಡು ವಿಮಾನಾರೂಢನಾಗಿ ಜಯಭೇರಿಗಳನ್ನು ಹೊಡಿಸುತ್ತ ತಿರಿಗಿ ಲಂಕಾಪಟ್ಟಣಕ್ಕೆ ಬರಲು; ಆಗ ನಗರನಾರೀಜನವು ಸಂಭ್ರಮದಿಂದ ನಲಿಯುತ್ತ ಚಿನ್ನದ ಹರಿವಾಣಗಳಲ್ಲಿ ಸೊಡರುಗಳನ್ನು ಹೊತ್ತಿಸಿಟ್ಟುಕೊಂಡು ನವರತ್ನದ ಆರತಿಗಳನ್ನು ತಂದು ರಾವಣನಿಗೆ ನಿವಾಳಿಸಿದರು. ಆಗ ರಾವಣನು ಪರಿವಾರಪರಿವೃತನಾಗಿ ಓಲಗದ ಚಾವಡಿಯಲ್ಲಿ ಕುಳಿತುಕೊಂಡು ವಿಭೀಷಣ ಮಾಲ್ಯವಂತಾದಿ ರಾಕ್ಷಸ ಪ್ರಮುಖರ ಯೋಗಕ್ಷೇಮಗಳನ್ನು ವಿಚಾರಿಸಿ ತಾನು ಮಾಡಿದ ದಿಗ್ವಿಜಯ ವಿಷಯಕವಾದ ವೃತ್ತಾಂತವನ್ನು ಅವರೆಲ್ಲರಿಗೂ ತಿಳಿಸಿ ಅಂತಃಪುರಕ್ಕೆ ಬಂದು ಪಟ್ಟಮಹಿಷಿಯಾದ ಮಂಡೋದರಿಯನ್ನು ಕಂಡು ಸಂತೋಷಿಸಿ ಆಕೆಯೊಡನೆ ಸುಖವಾಗಿದ್ದುಕೊಂಡು ರಾಜ್ಯಭಾರ ಮಾಡುತ್ತಿದ್ದನು.

ಹೀಗಿರಲು ಒಂದಾನೊಂದು ದಿನ ಶೂರ್ಪನಖಿಯು ಅಣ್ಣನಾದ ರಾವಣನ ಬಳಿಗೆ ಬಂದು--ಎಲೈ ಅಣ್ಣನೇ, ನನಗೆ ಓಲೆಗಳೂ ಮಾಂಗಲ್ಯಸೂತ್ರವೂ ಇರಬಾರದು. ಇವಳು ಯಾವಾಗಲೂ ಮುಂಡೆಯಾಗಿ ಅಮಂಗಲೆಯೆನ್ನಿಸಿಕೊಂಡಿರಲೆಂದು ನನ್ನ ಗಂಡನನ್ನು ಕೊಂದೆಯಾ? ಗಂಡಸಿಲ್ಲದವಳ ಬಾಳು ಬಂಡಬಾಳಲ್ಲವೇ? ಈಗಲೇ ನನ್ನನ್ನೂ ಕೊಂದು ಪತಿಯಾದ ವಿದ್ಯುಜ್ಜಿಹ್ವನ ಬಳಿಗೆ ಕಳುಹಿಸೆಂದು ಆತನ ಕಾಲುಗಳ ಮೇಲೆ ಬಿದ್ದು ದುಃಖಿಸುತ್ತ ಮೊರೆಯಿಡುತ್ತಿರಲು; ಆಗ ರಾವಣನು ಮನಸ್ಸಿನಲ್ಲಿ ಬಹುವಾಗಿ ವ್ಯಸನಪಡುತ್ತ ತಂಗಿಯನ್ನು ಹಿಡಿದೆತ್ತಿ ರಣರಂಗದಲ್ಲಿ ಕಾಲಕೇಯರನ್ನು ಕೊಲ್ಲುವ ಸಮಯದಲ್ಲಿ ಕ್ರೋಧದಿಂದ ಮದಿಸಿ ಮೈಮರೆತಿದ್ದೆನಾದುದರಿಂದ ಕಾಣದೆ ನಿನ್ನ ಗಂಡನನ್ನೂ ಕೊಂದುಬಿಟ್ಟೆನು. ಕೈಮೀರಿ ಹೋದ ಕಾರ್ಯಕ್ಕಾಗಿ ಚಿಂತಿಸುವುದರಿಂದ ಪ್ರಯೋಜನವಿಲ್ಲವು. ನನ್ನ ಸಕಲೈಶ್ವರ್ಯವೂ ನಿನ್ನ ವಶವಾಗಿರುವುದು. ನೀನು ಯಾವುದಕ್ಕೂ ಚಿಂತಿಸಬೇಡೆಂದು ಸಮಾಧಾನಪಡಿಸಿ ಖರ ದೂಷಣಾದಿ ರಾಕ್ಷಸರನ್ನು ಕರಿಸಿ—ನೀವು ಹದಿನಾಲ್ಕುಸಾವಿರ ಮಂದಿ ರಕ್ಕಸರನ್ನು ಕರೆದುಕೊಂಡು ಈ ಶೂರ್ಪನಖೀ ಸಮೇತರಾಗಿ ಹೋಗಿ ದಂಡಕವನದಲ್ಲಿರುವ 'ಜನಸ್ಥಾನವೆಂದು ಹೆಸರುಳ್ಳ ಈ ಲಂಕಾನಗರದ ಉಕ್ಕಡದಲ್ಲಿರತಕ್ಕುದೆಂದು ಅಪ್ಪಣೆಯನ್ನು

ಕೊಡಲು ; ಆಗ ರಾವಣನ ಚಿಕ್ಕಮ್ಮನ ಮಗನಾದ ಖರಾಸುರನು ಶೂರ್ಪನಖೀಸಹಿತನಾಗಿ ಹೊರಟು ಜನಸ್ಥಾನಕ್ಕೆ ಬಂದು ಅಲ್ಲಿ ಸುಖದಿಂದಿರುತ್ತಿದ್ದನು.

ಅಲ್ಲಿ ಹಾಗಿರಲು ; ಇತ್ತ ರಾವಣನು ರಾಕ್ಷಸಕುಲದೇವತೆಯಾದ ಕಾಳಿಕಾದೇವಿಯಿರುವ ನಿಕುಂಭಿಳೆಯೆಂಬ ಉದ್ಯಾನವನಕ್ಕೆ ಬಂದು ನೋಡಲು ; ಅಲ್ಲಿ ಶತಯೂಪಸ್ತಂಭಗಳನ್ನು ನೆಟ್ಟು ಅಸುರಮಂತ್ರಪಠನ ಧ್ವನಿಯಿಂದ ಕೂಡಿ ಆಶ್ಚರ್ಯವಾಗಿ ಶೋಭಿಸುತ್ತಿರುವ ಯಾಗಮಂಟಪದಲ್ಲಿ ಕೃಷ್ಣಾಜಿನ ಜಟಾಭಸ್ಮ ರುದ್ರಾಕ್ಷಿಗಳನ್ನು ಧರಿಸಿಕೊಂಡು ಯಜ್ಞದೀಕ್ಷಾಬದ್ಧನಾಗಿ ಕುಳಿತು ತದುಚಿತ ಕರ್ಮಗಳನ್ನು ಮಾಡುತ್ತಲಿರುವ ತನ್ನ ಕುಮಾರನಾದ ಮೇಘನಾದನನ್ನು ನೋಡಿ ಹರ್ಷದಿಂದ ಬಿಗಿದಪ್ಪಿ ಮುದ್ದಿಸಿ—ಇದೇನು ನಿನ್ನ ಮಹೋದ್ಯೋಗವು ? ಶೀಘ್ರವಾಗಿ ತಿಳಿಸೆನಲು ; ಆಗ ಕುಲಗುರುವಾದ ಶುಕ್ರಾಚಾರ್ಯನು ರಾವಣನನ್ನು ಕುರಿತು—ಎಲೈ ರಾಕ್ಷಸರಾಜನೇ, ನಿನ್ನ ಕುಮಾರನಾದ ಮೇಘನಾದನು ಅಶ್ವಮೇಧ ಅಗ್ನಿಷ್ಟೋಮ ಅಪ್ತೋರ್ಯಾಮ ಗೋಮೇಧ ವೈಷ್ಣವ ರಾಜಸೂಯವಾಜಪೇಯಗಳೆಂಬ ಸಪ್ತಯಜ್ಞಗಳನ್ನು ಮಾಡಿ ಮುಗಿಸಿ ಆ ಮೇಲೆ ಮಾಹೇಶ್ವರ ಯಜ್ಞವನ್ನು ಆರಂಭಿಸಿದನು. ವಿಧ್ಯನುಸಾರವಾಗಿ ಅದೂ ಮುಗಿಯುವ ಕಾಲದಲ್ಲಿ ತುಷ್ಟನಾದ ಪರಮೇಶ್ವರನು ಪ್ರತ್ಯಕ್ಷನಾಗಿ ಬಂದು ಧನುರ್ಬಾಣ ಶಕ್ತಿಗದಾ ಖಡ್ಗ ಕುಠಾರಾದ್ಯಾಯುಧಗಳನ್ನೂ ರಣದಲ್ಲಿ ಅರಿದುರ್ಜಯವಾದ ರಥವನ್ನೂ ಯುದ್ಧಕಾಲದಲ್ಲಿ ತಾನು ವೈರಿಗಳಿಗೆ ಗೋಚರನಾಗದೆ ಇದ್ದುಕೊಂಡು ಅವರ ಮೇಲೆ ಬಾಣಪ್ರಯೋಗವನ್ನು ಮಾಡುತ್ತ ಅವರನ್ನು ಜಯಿಸುವುದಕ್ಕೆ ಸಹಾಯಭೂತವಾದ ತಾಮಸಿಯೆಂಬ ಮಾಯಾವಿದ್ಯೆಯನ್ನೂ ನಿನ್ನ ಮಗನಿಗೆ ಕರುಣಿಸಿದನು. ವಂಶರತ್ನಪ್ರಾಯನಾದ ಈ ಮೇಘನಾದನಿಂದ ಮುಂದೆ ನಿನಗೆ ಸಕಲಕಾರ್ಯಸಿದ್ಧಿಯೂ ಉಂಟಾಗುವುದು ಎಂದನು. ರಾವಣನು ಆ ಮಾತನ್ನು ಕೇಳಿ ನಸುನಗುತ್ತ—ಎಲೈ ಪುತ್ರನೇ, ನಮಗೆ ವಿರೋಧಿಪಕ್ಷದಲ್ಲಿರುವ ಇಂದ್ರಾದಿ ದೇವತೆಗಳನ್ನು ಸೇವಿಸಬಹುದೇ ? ನೀನು ಬುದ್ಧಿಯಿಲ್ಲದವನೆಂದು ಹೇಳಿ ಮಗನ ಕೈಯನ್ನು ಹಿಡಿದು ಕರೆದುಕೊಂಡು ವಿಭೀಷಣಾದಿಗಳೊಡನೆ ತನ್ನರಮನೆಗೆ ಬಂದು ಅವರವರ ಮನೆಗಳಿಗೆ ಹೋಗುವಂತೆ ಸರ್ವರಿಗೂ ಅಪ್ಪಣೆಯನ್ನು ಕೊಟ್ಟು ಕಳುಹಿಸಿದನು. ಆಗ ವಿಭೀಷಣನು ಏಕಾಂತಸ್ಥಳದಲ್ಲಿ ರಾವಣನನ್ನು ಕುರಿತು—ಎಲೈ ಅಣ್ಣನೇ, ನೀನು ದಿಗ್ವಿಜಯವನ್ನು ಮಾಡಿದುದು ಸರಿಯಾದ ಕಾರ್ಯವೇ. ಆದರೆ ನೀನು ಪರಪತ್ನಿಯರನ್ನು ಬಲಾತ್ಕಾರದಿಂದ ಹಿಡಿದು ತಂದುದು ಮಾತ್ರ ಬಲು ಕೆಟ್ಟ ಕೆಲಸವು. ಆ ಸ್ತ್ರೀಯರ ದುಃಖಾತಿರೇಕವು ನಿನ್ನ ಪರಾಕ್ರಮಾತಿಶಯಕ್ಕೆ ಅಮಂಗಲಕರವಾಗಿಯೂ ಹಾನಿಕರವಾಗಿಯೂ ಸಂಭವಿಸಿದ ವರ್ತಮಾನವನ್ನು ಹೇಳುವೆನು ಕೇಳು. ಮಧುವೆಂಬ ದನುಜನು ಬಂದು ನಿನ್ನ ಸೇನೆಯನ್ನು ಕೊಂದು ಉಳಿದುದನ್ನು ಹಿಂದಟ್ಟಿ ಅಂತಃಪುರದೊಳಹೊಕ್ಕು ನಮ್ಮ ತಾಯಿಯ ತಂಗಿಯಾದ ಕುಂಭೀನಸಿಯನ್ನು ಹಿಡಿದುಕೊಂಡು ಹೋದನು. ಮಾಡಿದವರಿಗೆ ಮಾಡಿದಷ್ಟೆಂಬ ಗಾಥೆಯು ನಿನ್ನಲ್ಲೇ ನಿದರ್ಶನಕ್ಕೆ ಬಂದಿತೆಂದು ಹೇಳಲು ; ರಾವಣನು—ಇದೇನು ಮಹಾಶ್ಚ

ರ್ಯವು? ನೀನೂ ಮೇಘನಾದನೂ ಕುಂಭಕರ್ಣನೂ ಏನು ಮಾಡುತ್ತಿದ್ದಿರಿ? ಎಲ್ಲಿದ್ದಿರಿ? ಎಂದು ಕೇಳಲು; ವಿಭೀಷಣನು—ನಾನು ಅಘಮರ್ಷಣಮಂತ್ರವನ್ನು ಜಪಿಸುತ್ತ ನೀರಿನಲ್ಲಿ ಮುಳುಗಿದ್ದೆನು. ಮೇಘನಾದನು ನಿಕುಂಭಿಳೆಯಲ್ಲಿ ಯಾಗಮಾಡುತ್ತಿದ್ದನು: ಕುಂಭಕರ್ಣನು ನಿದ್ರಿಸುತ್ತಿದ್ದನು. ಮಿಕ್ಕ ರಾಕ್ಷಸಕುಮಾರರು ಏನು ಮಾಡಬಲ್ಲರು? ಎಂದು ಹೇಳಿದನು.

ಆಗ ರಾವಣನು ಆ ಮಾತನ್ನು ಕೇಳಿದ ಮಾತ್ರದಿಂದಲೇ ಕ್ರೋಧಕಂಪಿತಶರೀರನಾಗಿ ಇಪ್ಪತ್ತು ಕಣ್ಣುಗಳಿಂದಲೂ ರಕ್ತಿಮೆಯನ್ನುಗುಳುತ್ತ ಕೂಡಲೆ ಲಂಕಾನಗರದ ಸಂರಕ್ಷಣೆಗಾಗಿ ಕೆಲವು ಜನ ರಾಕ್ಷಸ ಸೇನಾಪತಿಗಳೊಡನೆ ವಿಭೀಷಣನನ್ನು ನೇಮಿಸಿ—ಮಧುದೈತ್ಯನನ್ನು ಮೊದಲು ಯಮಪುರಕ್ಕೆ ಕಳುಹಿಸಿ ಅಲ್ಲಿಂದ ಅಮರಾವತಿಗೆ ಹೋಗಿ ಇಂದ್ರನ ಗರ್ವವನ್ನು ಮುರಿದು ದೇವತೆಗಳನ್ನು ಹಿಂಡುವೆನು. ಜಗಳದಲ್ಲಿ ನನಗೆ ಯಾರಿದಿರು? ಎಂದು ಔಡುಗಳನ್ನು ಕಚ್ಚುತ್ತ ಹಲ್ಗಡಿದು ಮೊರೆದು ಗರ್ಜಿಸುತ್ತ ಅನೇಕ ಸೇನಾಜಾಲದೊಡನೆ ಕೂಡಿ ಹೊರಡಲು; ಆಗ ಜೈತ್ರಯಾತ್ರಾಸೂಚಕವಾದ ಭೇರೀಧ್ವನಿಯು ನರನಾಗಾಮರಲೋಕಗಳನ್ನು ಬೆದರಿಸಿತು. ಕೂಡಲೆ ಕುಂಭಕರ್ಣ ಮೇಘನಾದಾದಿ ಸಮಸ್ತ ರಾಕ್ಷಸವೀರರೂ ಹೊರಟರು. ಆ ಮಹದಾಶ್ಚರ್ಯವನ್ನು ಬಣ್ಣಿಪರಾರು? ಆನೆ ಕುದುರೆ ತೇರು ಕೋಣ ಗೂಳಿ ಸಿಂಹ ಶರಭ ಹುಲಿ ಹಂದಿ ಹೇಸರಗತ್ತೆ ಇವೇ ಮೊದಲಾದ ತಮ್ಮ ತಮ್ಮ ವಾಹನಗಳನ್ನೇರಿ ವಿವಿಧಾಯುಧಗಳನ್ನು ಧರಿಸಿ ಕಾಲಭೈರವನ ದಂಡೋ? ಮೃತ್ಯುವಿನ ಬಳಗವೋ? ಭೂತರಾಜನ ಪಡೆಯೋ? ಎಂಬಂತೆ ಸಮಸ್ತ ಪ್ರಾಣಿಗಳಲ್ಲೂ ಭೀತಿಯ ಬೀಜವನ್ನು ಬಿತ್ತುತ್ತ ದಶಮುಖನ ಸೇನೆಯು ಹೊರಟಿತು. ಆಗ ಸೇನಾಗ್ರದಲ್ಲಿ ಮೇಘನಾದನೂ ಹಿಂಗಡೆಯಲ್ಲಿ ಕುಂಭಕರ್ಣನೂ ಮಧ್ಯದಲ್ಲಿ ರಾವಣನೂ ಬರುತ್ತಿದ್ದರು. ಈ ರೀತಿಯಾದ ಸಮರಸನ್ನಾಹದಿಂದ ಕೂಡಿದ ರಾಕ್ಷಸಬಲವು ವಿಲಯಕಾಲದಲ್ಲಿ ಮೇರೆದಪ್ಪಿ ಬಂದ ಮಹಾಸಾಗರವು ಬ್ರಹ್ಮಾಂಡಮಂಡಲವನ್ನು ವ್ಯಾಪಿಸುವಂತೆ ಮಧುದನುಜನಪುರವನ್ನು ಮುತ್ತಿತು. ಅಲ್ಲಿಗೊಡೆಯನಾದ ಮಧುದೈತ್ಯನು ಪೂರ್ವದಲ್ಲಿ ಸದ್ಭಕ್ತಿಯಿಂದ ಶಿವನನ್ನು ಮೆಚ್ಚಿಸಿ ಒಂದು ತ್ರಿಶೂಲಾಯುಧವನ್ನು ಪಡೆದಿರುವನು. ಅದನ್ನು ಕೈಯಲ್ಲಿ ಹಿಡಿದುಕೊಂಡು ಕಾಳಗಕ್ಕೆ ಹೊರಟರೆ ಹರನೊಬ್ಬನು ಹೊರತು ಮತ್ತಾರೂ ಎದುರಿಗೆ ನಿಂತು ತರಹರಿಸಲಾರರು. ಮಧುದೈತ್ಯನು ತನಗೆ ಇಂಥ ಉತ್ಕೃಷ್ಟಾಯುಧವಿದೆಯೆಂಬ ಗರ್ವದಿಂದ ರಾವಣನ ಸೈನ್ಯವನ್ನು ಲಕ್ಷ್ಯಕ್ಕೆ ತಾರದೆ ಧೈರ್ಯದಿಂದಿದ್ದನು. ಅಷ್ಟರಲ್ಲಿ ರಾವಣನ ಚಿಕ್ಕಮ್ಮನಾದ ಕುಂಭೀನಸಿಯು ಶೀಘ್ರವಾಗಿ ಸೇನಾಮಧ್ಯದಲ್ಲಿರುವ ರಾವಣನ ಬಳಿಗೆ ಬಂದು ನಿಂತು ಅವನನ್ನು ಕುರಿತು—ಎಲೈ ಕುಮಾರನಾದ ದಶಕಂಧರನೇ, ಕೇಳು. ನನ್ನಲ್ಲಿ ಕನಿಕರವನ್ನಿಡು. ಕುಲಸ್ತ್ರೀಯರಿಗೆ ವೈಧವ್ಯಕ್ಕಿಂತಲೂ ಅತಿಶಯವಾದ ದುಃಖವು ಮತ್ತೊಂದಿಲ್ಲ. ನನ್ನ ಮೇಲೆ ದೃಷ್ಟಿಯಿಟ್ಟು ನನ್ನ ಪತಿಯಾದ ಮಧುದನುಜನನ್ನು ಕಾಪಾಡು. ನನ್ನ ಮಾತನ್ನು ಮೀರದೆ ನಡಿಸೆಂದು ಬಹುವಿಧವಾಗಿ ಬೇಡಿಕೊಳ್ಳಲು; ಆಗ ರಾವಣನು— ನಿನ್ನ ಗಂಡನನ್ನು ಕರೆ! ಭಯ

ಪಡಬೇಡ! ಹೋಗೆಂದನು. ಆಗ ಅವಳು ನಿದ್ರಿಸುತ್ತಿರುವ ತನ್ನ ಗಂಡನ ಬಳಿಗೆ ಬಂದು ಎಬ್ಬಿಸಿ ಅವನನ್ನು ಕುರಿತು—ನನ್ನ ಮಗನಾದ ದಶಾನನನು ದೇವೇಂದ್ರನನ್ನು ಜಯಿಸುವುದಕ್ಕಾಗಿ ಸೇನೆಯೊಡನೆ ಹೊರಟುಬಂದಿರುವನು. ನೀನು ಆತನ ಬಳಿಗೆ ಹೋಗಿ ಆದರಿಸಿ ಮುಂದೆ ನಡೆಯುವ ಯುದ್ಧದಲ್ಲಿ ಅವನಿಗೆ ನಿನ್ನ ಭುಜಸಹಾಯವನ್ನು ಮಾಡೆಂದು ಹೇಳಲು; ಮಧುದೈತ್ಯನು ಆ ಮಾತುಗಳನ್ನು ಕೇಳಿ ಒಪ್ಪಿಕೊಂಡು ರಾವಣನ ಬಳಿಗೆ ಬಂದು ಯಥಾಯೋಗ್ಯವಾಗಿ ಪೂಜಿಸಿ ಮರ್ಯಾದೆಯೊಡನೆ ತನ್ನ ಮನೆಗೆ ಕರೆದುಕೊಂಡು ಬಂದು ಸತ್ಕರಿಸಿದನು.

ಆ ಬಳಿಕ ರಾವಣನು ಆ ರಾತ್ರಿಯನ್ನು ಅಲ್ಲೇ ಕಳೆದು ಮರುದಿವಸ ಬೆಳಗಾಗುತ್ತಲೆ ಎದ್ದು ಆ ಮಧುದೈತ್ಯನನ್ನೂ ಸಂಗಡವೇ ಕರೆದುಕೊಂಡು ಇಂದ್ರನ ಪಟ್ಟಣವಾದ ಅಮರಾವತಿಯನ್ನು ಕುರಿತು ಬರುತ್ತಿರಲು; ನಡುದಾರಿಯಲ್ಲಿ ಸೂರ್ಯಾಸ್ತಮಾನವಾಯಿತು. ಆಗ ಕೈಲಾಸಾಚಲದ ತಪ್ಪಲಲ್ಲಿ ಬೀಡಾರವನ್ನು ಬಿಡಿಸಿ ಕೋಮಲತರವಾದ ಚಿಗುರುಗಳನ್ನು ತರಿಸಿ ಮಂಚದ ಮೇಲೆ ಹಾಸಿಸಿ ಮಾರ್ಗಾಯಾಸ ವಿಶ್ರಾಂತ್ಯರ್ಥವಾಗಿ ತಣುಪಾದ ಗಾಳಿಗೆ ಮೆಯ್ಗೊಟ್ಟು ಮಲಗಿದ್ದನು. ಆ ಸಮಯದಲ್ಲಿ ದೇವಗಣಿಕೆಯರಲ್ಲಿ ಬಲು ಚಲುವೆಯೂ ಸೊಬಗುಳ್ಳವಳೂ ಆದ ರಂಭೆಯೆಂಬವಳು ಆ ಮಾರ್ಗದಲ್ಲಿ ಹೋಗುತ್ತಿರಲು; ದಶಾನನನು ಅವಳನ್ನು ನೋಡಿ ಕಾಮಪರವಶನಾಗಿ ಕೂಡಲೆ ಅವಳ ಬಳಿಗೆ ಹೋಗಿ ಅವಳನ್ನು ತಡೆದು ಬಲಾತ್ಕಾರಿಸಲು; ಆಕೆಯು ಆ ನಿರ್ಬಂಧವನ್ನು ತಡೆಯಲಾರದೆ ಅದೃಶ್ಯಳಾಗಿ ತಾನು ವರಿಸಿದ್ದ ಕುಬೇರನ ಕುಮಾರನಾದ ನಳಕೂಬರನ ಬಳಿಗೈಯ್ದಿ ದಾರಿಯಲ್ಲಿ ದುಷ್ಟನಾದ ದಶಾನನನು ಮಾಡಿದ ದುಶ್ಚೇಷ್ಟೆಯನ್ನು ಹೇಳಲು; ಆಗ ನಳಕೂಬರನು ಬಹು ಕುಪಿತನಾಗಿ—ದುಷ್ಟನಾದ ರಾವಣನು ಇಂದು ಮೊದಲು ಪರಸ್ತ್ರೀಯರನ್ನು ಬಲಾತ್ಕಾರದಿಂದ ಹಿಡಿದರೆ ಅವನ ಹತ್ತು ತಲೆಗಳೂ ಒಡೆದು ಸಾಯಲೆಂದು ಉಗ್ರಶಾಪವನ್ನಿತ್ತನು.

ಆ ಬಳಿಕ ರಾವಣನು ತನಗೆ ನಳಕೂಬರನಿಂದ ಬಂದ ಶಾಪದ ವೃತ್ತಾಂತವನ್ನು ಆಕಾಶವಾಣಿಯಿಂದ ಕೇಳಿದವನಾದಾಗ್ಯೂ ಅದನ್ನು ಗಣನೆಗೆ ತಾರದೆ ಸೂರ್ಯೋದಯಕಾಲದಲ್ಲೆದ್ದು ಸೇನೆಯೊಡನೆ ಕೂಡಿ ಹೊರಟು ಅಮರಾವತೀಪಟ್ಟಣದ ಬಳಿಗೆ ಬಂದನು. ಆಗ ದೇವತೆಗಳು—ಓಹೋ! ಈಗ ಸೇನೆಯೊಡನೆ ಬಂದವನು ಪರಭೀಕರನಾದ ರಾವಣನು. ಈ ಸಮಯದಲ್ಲಿ ಸಂಭವಿಸಿದ ಮಹಾವಿಪತ್ತಿನಿಂದ ತಪ್ಪಿಸಿ ನಮ್ಮನ್ನು ಕಾಪಾಡುವವರಾರೋ ಕಾಣೆವಲ್ಲಾ! ಎಂದು ಭಯಾವಿಷ್ಟರಾಗಿ ಓಡುತ್ತ ದೇವೇಂದ್ರನ ಬಳಿಗೆ ಬಂದು—ಎಲೈ ಒಡೆಯನೇ, ಈಗ ಬಲುಕೇಡಾಳಿಯಾದ ರಾವಣನಿಂದ ನಮ್ಮ ಲೋಕಕ್ಕೆ ಬಹು ಭಯವುಂಟಾಗಿರುವುದು. ಈ ಮಹಾಭಯವನ್ನು ಪರಿಹರಿಸುವ ಕಾರ್ಯವು ಹರಿಹರ ಹಿರಣ್ಯಗರ್ಭರಿಂದಲ್ಲದೆ ಮಿಕ್ಕವರಿಂದ ತೀರದೆಂದು ಹೇಳಿದರು. ಆಗ ಸಭೆಯಲ್ಲಿದ್ದ ಏಕಾದಶರುದ್ರರು ದ್ವಾದಶಾದಿತ್ಯರು ಅಷ್ಟವಸುಗಳು ಸಪ್ತಮರುತ್ತುಗಳು ಸಿದ್ಧರು ಸಾಧ್ಯರು ವಿದ್ಯಾಧರರು ಅಪ್ಸರಸ್ಸುಗಳು ಗುಹ್ಯಕರು ಇವರೇ ಮೊದಲಾದ ನಾನಾ ದೇವತೆಗಳೂ. ಕೂಡಿ

ಶೌರ್ಯಾತಿಶಯದಿಂದ ತಮ್ಮ ತಮ್ಮ ಪರಾಕ್ರಮಾಧಿಕ್ಯೋಕ್ತಿಗಳನ್ನು ಹೇಳಿಕೊಳ್ಳುತ್ತ ನಾವೆಲ್ಲರೂ ಇರುವಾಗ ಈ ಖೂಳನಾದ ದಶಕಂಧರನಿಗೆ ಹೆದರಿಕೊಳ್ಳುವುದೇಕೆ? ನಾವು ಹೋಗಿ ಅವನ ಬಲವನ್ನೆಲ್ಲಾ ಮುರಿದೊಟ್ಟಿ ಅವನನ್ನು ಲಂಕೆಗೆ ಓಡಿಸುವೆವೆಂದು ವಿವಿಧಾಯುಧಗಳನ್ನು ಧರಿಸಿ ಗರ್ಜಿಸುತ್ತ ಹೊರಡಲು; ಆಗ ಇಂದ್ರನು— ಹೋ ಹೋ! ತಾಳಿರಿ ತಾಳಿರಿ! ಈ ರಾವಣನೊಡನೆ ಯುದ್ಧಮಾಡುವುದು ನಮ್ಮಿಂದ ಸಾಧ್ಯವಲ್ಲವು ಎಂದು ಸರಿಯಾದ ಕಾರಣಗಳಿಂದ ಅವರೆಲ್ಲರನ್ನೂ ಸಮಾಧಾನಪಡಿಸಿ ನಿಲ್ಲಿಸಿ ಆ ರಾತ್ರಿಯಲ್ಲಿಯೇ ಗುಪ್ತವಾಗಿ ಹೊರಟು ಶೇಷಶಯನನಾದ ವಿಷ್ಣುವಿನ ಬಳಿಗೆ ಹೋಗಿ ಆತನ ಪಾದಗಳಿಗೆ ನಮಸ್ಕರಿಸಿ ಕೈಮುಗಿದು ನಿಂತುಕೊಂಡು— ದೇವಾ, ನನ್ನ ಬಿನ್ನಪವನ್ನು ಲಾಲಿಸು. ರಾವಣನೆಂಬ ದುಷ್ಟರಾಕ್ಷಸನು ಬ್ರಹ್ಮನ ವರದಿಂದ ಗರ್ವಿತನಾಗಿ ನಮ್ಮ ದೇವಲೋಕವನ್ನು ಹಾಳುಮಾಡಬೇಕೆಂದು ಯುದ್ಧಕ್ಕೆ ಒಂದಿದ್ದಾನೆ. ನಮ್ಮ ಪರಾಕ್ರಮಕ್ಕಿಂತಲೂ ಅವನ ಪರಾಕ್ರಮವು ನೂರ್ಮಡಿಮಿಗಿಲಾಗಿರುವುದು. ಅದುಕಾರಣ ಅವನು ನಮಗೆ ಅಜೇಯನಾಗಿರುವನು. ಭಕ್ತ ಪಂಜರನಾದ ನೀನೇ ಬಂದು ಚಕ್ರಾಯುಧದಿಂದ ಅವನ ತಲೆಯನ್ನು ಕತ್ತರಿಸಿ ನಿನ್ನ ಭಕ್ತರಾದ ನಮ್ಮನ್ನು ಕಾಪಾಡಬೇಕೆಂದು ದೈನ್ಯದಿಂದ ಬೇಡಿಕೊಂಡನು. ವಿಷ್ಣುವು ಆ ಮಾತುಗಳನ್ನು ಕೇಳಿ ಈ ಸಮಯದಲ್ಲಿ ರಾವಣನೊಡನೆ ಯುದ್ಧಮಾಡುವುದಕ್ಕೆ ನಾನೂ ಬರಕೂಡದು. ಬ್ರಹ್ಮನ ವರವನ್ನು ಮನ್ನಿಸಿ ಮುಂದೆ ಭೂಲೋಕದಲ್ಲಿ ಮನುಜನಾಗಿ ಅವತರಿಸಿ ವಾನರ ಸೇನಾಸಮನ್ವಿತನಾಗಿ ಬಂದು ಆ ರಾವಣನನ್ನು ಕೊಲ್ಲುವೆನು. ಅಲ್ಲಿನ ವರೆಗೂ ನೀವು ಆತನ ಉಪದ್ರವವನ್ನು ಸಹಿಸಿಕೊಂಡಿರಬೇಕೆಂದು ಹೇಳಿ ಕಳುಹಿಸಿದನು. ಆ ಮೇಲೆ ದೇವೇಂದ್ರನು ಅಲ್ಲಿಂದ ಹೊರಟುಬಂದು ಅಮರಾವತಿಯನ್ನು ಸೇರಿದನು.

ಆ ಮಾರನೆಯ ದಿವಸ ಸೂರ್ಯೋದಯವಾಗುವುದಕ್ಕಿಂತಲೂ ಮೊದಲೇ ಭೇರ್ಯಾದಿ ವಿವಿಧವಾದ್ಯಗಳ ಮಹಾರವದೊಡನೆ ಕೂಡಿದ ನಿಶಾಚರಬಲಜಲಧಿಯು ಸಿಂಹಗರ್ಜನೆಯನ್ನು ಮಾಡುತ್ತ ಅಮರಾವತಿಯನ್ನು ಮುತ್ತಿಕೊಂಡಿತು. ಆಗ ದೇವೇಂದ್ರನು—ಹೋ ಹೋ! ತಡವೇಕೆ? ತಡವೇಕೆ? ಯುದ್ಧಕ್ಕೆ ನಡೆಯಲಿ. ವೀರರೆಲ್ಲರೂ ಮುಂಕೊಳ್ಳಲಿ. ನಮ್ಮ ಬಲಗಳನ್ನು ಬೇಗ ಬರಹೇಳಿರಿ ಎನ್ನುತ್ತ ಕೈಬೀಸಲು; ಕೂಡಲೆ ಬಲು ಗಟ್ಟಿಗರಾದ ನಿರ್ಜರವೀರರು ಮಹಾಸೈನ್ಯದೊಡನೆ ಹೊರಟುಬಂದು ಸಮುದ್ರವು ಸಮುದ್ರವನ್ನು ತಾಗುವಂತೆ ರಾಕ್ಷಸರ ಬಲವನ್ನು ಪ್ರತಿಭಟಿಸಲು; ಆಗ ಉಭಯಬಲವೂ ಕೂಡಿ ಒನಿಕೆ ಗದೆ ಗುರಾಣಿ ಕತ್ತಿ ಮುಸುಂಡಿ ಪ್ರಾಸ ಶಕ್ತಿ ಬಾಣ ಇವೇ ಮೊದಲಾದ ನಾನಾ ವಿಧಾಯುಧಗಳಿಂದ ಕಾದುತ್ತ ಮಾತುಗಳಿಂದ ಮೂದಲಿಸುತ್ತ ಇದಿರುಬಿದ್ದವರನ್ನು ಕೊಲ್ಲುತ್ತ ಜಗಳಮಾಡುತ್ತಿರಲು; ಆಗ ರಕ್ತಲೇಪಿತವಾದ ಮೈಗಳೂ ಹೊರಗೆ ಹೊರಟ ಕರುಳ್ಗಳೂ ತುಂಡುತುಂಡಾದ ಕೈಕಾಲ್ಗಳೂ ಒಡೆದ ತಲೆಗಳೂ ಉಳ್ಳವರಾಗಿ ದೇವತೆಗಳಲ್ಲಿಯೂ ರಾಕ್ಷಸರಲ್ಲಿಯೂ ಅನೇಕರು ಮಡಿದರು. ಹೀಗೆಯೇ

ಯುದ್ಧವಾಗುತ್ತಿರಲು ; ಬಲಿಷ್ಠರಾದ ರಾಕ್ಷಸವೀರರು ಅಪ್ರತಿಮಬಲವುಳ್ಳವರಾದ ಸುರವೀರರಿಂದ ಗಾಯವಡೆದವರಾಗಿ ಕಂಗೆಟ್ಟು ದಿಕ್ಕುದಿಕ್ಕಿಗೆ ಓಡುತ್ತಿದ್ದರು. ಅದನ್ನು ಕಂಡು ರಾವಣನು—ಶುಕಸಾರಣ ಮಹೋದರ ಧೂಮ್ರಾಕ್ಷ ದುರ್ಮುಖ ಖರ ಮಹಾಪಾರ್ಶ್ವ ಮಾರೀಚ ಪ್ರಹಸ್ತ ನಿಕುಂಭ ತ್ರಿಶಿರ ದೂಷಣ ಯಜ್ಞಾಂತಕ ಸುರಾಂತಕ ನರಾಂತಕ ಸೂರ್ಯರಿಪು ವಿಕಟ ಸುಪ್ತಘ್ನ ದುರ್ಧರ ಸುಮಾಲಿ ಇವರೇ ಮೊದಲಾದ ರಾಕ್ಷಸವೀರಾಗ್ರೇಸರರನ್ನು ಯುದ್ಧಕ್ಕೆ ನೇಮಿಸಲು ; ಆಗ ಸುಮಾಲಿ ಎಂಬವನು ಬಹುರಾಕ್ಷಸಸೇನೆಗಳನ್ನು ಕರೆದುಕೊಂಡು ಬಂದು ಸರಳು ಮಳೆಯನ್ನು ಸುರಿಸುತ್ತ ತಿರುಗಿದ ಕಡೆ ಬಡಿದು ದೇವತೆಗಳನ್ನು ದಿಕ್ಕು ದಿಕ್ಕಿಗೆ ಓಡಿಸುತ್ತಿರಲು ; ವಸುಗಳಲ್ಲಿ ಎಂಟನೆಯವನಾದ ಸಾವಿತ್ರನೆಂಬವನು ಅದನ್ನು ನೋಡಿ—ರಥವನ್ನು ಹತ್ತಿ ಸುಮಾಲಿಯ ಎದುರಿಗೆ ಬಂದು ನಿಂತು ಬಿಲ್ಲಿಗೆ ಹೆದೆಯನ್ನು ಏರಿಸಿ ಝೇಂಕರಿಸಿ ಅನೇಕ ಬಾಣಗಳನ್ನು ಹೂಡಿ ಸುಮಾಲಿಯ ಮೇಲೆ ಬಿಡಲು ; ಅವನು ಆ ಬಾಣಗಳನ್ನೆಲ್ಲಾ ನಡುದಾರಿಯಲ್ಲೇ ಕತ್ತರಿಸಿ ಪ್ರತಿಯಾಗಿ ಸಾವಿತ್ರನ ಮೇಲೆ ನೂರು ಬಾಣಗಳನ್ನು ಪ್ರಯೋಗಿಸಿ ಆತನ ತೇರಿನಚ್ಚನ್ನು ಕಡಿದನು. ಆಗ ವಿರಥನಾದ ಸಾವಿತ್ರನು ರೋಷಾರುಣ ನೇತ್ರಗಳುಳ್ಳವನಾಗಿ ಮತ್ತೊಂದು ತೇರನ್ನೇರಿ ಬಂದು ಹತ್ತು ಬಾಣಗಳಿಂದ ಸುಮಾಲಿಯ ಸಾರಥಿಯ ತಲೆಯನ್ನೂ ಇಪ್ಪತ್ತು ಬಾಣಗಳಿಂದ ರಥಾಶ್ವಗಳನ್ನೂ ನಾಲ್ಕು ಬಾಣಗಳಿಂದ ಧ್ವಜಸ್ತಂಭವನ್ನೂ ಐವತ್ತು ಬಾಣಗಳಿಂದ ತೇರನ್ನೂ ನೂರು ಬಾಣಗಳಿಂದ ಸುಮಾಲಿಯ ಕರಗತಕೋದಂಡವನ್ನೂ ಕತ್ತರಿಸಿ ಬೊಬ್ಬಿರಿದನು.

ಆಗ ಸುಮಾಲಿಯು ವಿರಥನಾದಾಗ್ಯೂ ಧೈರ್ಯಹೀನನಾಗದೆ ರಥದಿಂದ ಭೂಮಿಗೆ ಧುಮುಕಿ ತೋರವಾದ ಗದೆಯನ್ನು ತೆಗೆದುಕೊಂಡು ಯುದ್ಧಕ್ಕೆ ಸಿದ್ಧನಾಗಿ ನಿಂತನು. ಆಗ ಪರಾಕ್ರಮಶಾಲಿಗಳಾದ ಅವರಿಬ್ಬರೂ ಭಯಂಕರವಾದ ಗದಾಯುದ್ಧವನ್ನು ಮಾಡುತ್ತಿರುವಲ್ಲಿ ಶೂರನಾದ ಸಾವಿತ್ರನು ಸುಮಾಲಿಯು ಹೊಡೆದ ಗದೆಯ ಮಹಾಘಾತವನ್ನು ತಪ್ಪಿಸಿಕೊಂಡು ಅವನು ಮೇಲಕ್ಕೆ ಹಾರಿಬಂದು ತನ್ನನ್ನು ಹೊಡೆಯುವ ಸಮಯದಲ್ಲಿ ಮರ್ಮವನ್ನರಿತು ತನ್ನ ಗದೆಯಿಂದ ಸುಮಾಲಿಯ ಸೊಂಟವನ್ನಪ್ಪಳಿಸಲು ಅವನು ನಡು ಮುರಿದು ಭೂಮಿಯಲ್ಲಿ ಬಿದ್ದು ಸತ್ತನು.

ಅದನ್ನು ಕಂಡು ರಾಕ್ಷಸಸೇನಾಪತಿಗಳೆಲ್ಲರೂ ಬಂದು ನಾಲ್ಕು ಕಡೆಗಳಲ್ಲಿಯೂ ಸಾವಿತ್ರನನ್ನು ಮುಸುಕಿಕೊಂಡು ಆತನ ಮೇಲೆ ಬಾಣವೃಷ್ಟಿಯನ್ನು ಕರೆಯುತ್ತಿರಲು ; ಉಳಿದೇಳುಮಂದಿ ವಸುಗಳೂ ಸಾವಿತ್ರನಿಗೆ ಸಹಾಯಕರಾಗಿ ಬಂದು ತೀವ್ರ ಬಾಣಪ್ರಯೋಗಗಳಿಂದ ರಾವಣನ ಸೇನಾಧಿಪತಿಗಳನ್ನು ಮೂರ್ಛಾಗತರನ್ನಾಗಿ ಮಾಡಿದರು. ಅದನ್ನು ನೋಡಿ ರಾವಣನು ತಾನೇ ಯುದ್ಧಸನ್ನದ್ಧನಾಗಿ ಹೊರಡುತ್ತಿರಲು ; ಅವನ ಕುಮಾರನಾದ ಮೇಘನಾದನು ಅದನ್ನು ಕಂಡು ರಾವಣನನ್ನು ನಿಲ್ಲಿಸಿ ತಾನು ಧನುರ್ಬಾಣಗಳನ್ನು ತೆಗೆದುಕೊಂಡು ಪ್ರಳಯಕಾಲದ ಯಮನಂತೆ ದೇವಸಮೂಹವನ್ನು ಹೊಕ್ಕು ಬಾಣಗಳನ್ನು ಪ್ರಯೋಗಿಸುತ್ತ ಅಷ್ಟವಸುಗಳನ್ನೂ ದ್ವಾದಶಾದಿತ್ಯರನ್ನೂ ಏಕಾದಶರುದ್ರರನ್ನೂ ಸಪ್ತಮರುತ್ತುಗಳನ್ನೂ ಮೂರ್ಛೆಗೊಳಿ

ಸುತ್ತ ದೇವಬಲವನ್ನು ಪಲಾಯನಗೊಳಿಸುತ್ತಿರಲು ; ಅದನ್ನು ಕಂಡು ದೇವೇಂದ್ರನು ಐರಾವತವನ್ನು ಏರಿ ವಜ್ರಾಯುಧವನ್ನು ಧರಿಸಿ ಯುದ್ಧಕ್ಕೆ ಸಿದ್ಧನಾಗುತ್ತಿರಲು ; ಅಷ್ಟರಲ್ಲಿಯೇ ಅವನ ಕುಮಾರನಾದ ಜಯಂತನು ತಂದೆಯನ್ನು ಕುರಿತು—ಅಲ್ಪನಾದ ಈ ರಾವಣಿಯ ಯುದ್ಧಕ್ಕೆ ನೀನೂ ಹೋಗಬೇಕೇ ? ನಾನು ಹೋಗಿ ಇವನನ್ನು ಕೊಲ್ಲುವೆನೆಂದು ಹೇಳಿ ತಂದೆಯನ್ನು ನಿಲ್ಲಿಸಿ ತಾನು ರಥಾರೂಢನಾಗಿ ಮೇಘನಾದನ ಸಮ್ಮುಖಕ್ಕೈತಂದು ನಿಂತು—ಎಲೈ ನೀಚನಿಶಾಚರನೇ, ನೀನೀವರೆಗೂ ದುರ್ಬಲರಾದ ದೇವತೆಗಳನ್ನು ಜಯಿಸಿದ ಮಾತ್ರಕ್ಕೆ ಮಹಾಶೂರನಾಗುವಿಯಾ ? ಇದೋ ! ನಾನು ಬಂದಿದ್ದೇನೆ. ಹಿಂದೆಗೆಯದೆ ನಿಂತು ನನ್ನೊಡನೆ ಒಂದು ಗಳಿಗೆಯ ವರೆಗೂ ಯುದ್ಧ ಮಾಡಿದರೆ ನಿನ್ನನ್ನು ಕೊಂದು ನಿನ್ನ ಮಾಂಸಖಂಡಗಳನ್ನು ಹಂಚಿ ನಾಯಿ ನರಿ ಹದ್ದು ಕಾಗೆಗಳಿಗೆ ಕೊಡುವೆನು ಎಂದು ಹೇಳಲು ; ಮೇಘನಾದನು ಆ ಮಾತುಗಳನ್ನು ಕೇಳಿ ನಸುನಕ್ಕು—ಎಲೈ ಜಯಂತನೇ, ಲೋಕದಲ್ಲಿ ಶೂರರಾದವರು ಯಾವ ಕಾರ್ಯವನ್ನಾದರೂ ಮಾಡಿ ತೋರಿಸುವರಲ್ಲದೆ ನಿನ್ನಂತೆ ಬಾಯಿಗೆ ಬಂದ ಹಾಗೆ ಹರಟುವುದಿಲ್ಲವೆಂದು ಹೇಳಿ ಕಾಳಸರ್ಪ ಸದೃಶಗಳಾದ ಹತ್ತು ಬಾಣಗಳಿಂದ ಆತನ ಎದೆಯು ಸೀಳಿಹೋಗುವಂತೆ ಹೊಡೆಯಲು ; ಪಾಕಶಾಸನಿಯು ಆ ಬಾಣಗಳನ್ನು ಮಧ್ಯಮಾರ್ಗದಲ್ಲಿಯೇ ಕಡಿದು ಕೆಡಹಿ ನೂರು ಬಾಣಗಳನ್ನು ಪ್ರಯೋಗಿಸಿ ರಾವಣಿಯ ರಥವನ್ನು ಕಡಿದುರುಳಿಸಿ ವಿರಥನನ್ನು ಮಾಡಿದನು. ಆಗ ಮೇಘನಾದನು ಕಾಲಾಗ್ನಿಯೋಪಾದಿಯಲ್ಲಿ ಜ್ವಲಿಸುತ್ತಿರುವ ನೇತ್ರಗಳುಳ್ಳವನಾಗಿ ಈಶ್ವರದತ್ತವಾದ ಶಕ್ತ್ಯಾಯುಧವನ್ನು ತೆಗೆದು ಆತನ ಮೇಲೆ ಪ್ರಯೋಗಿಸಲು ; ಜಯಂತನು ಅದರ ಹೊಡೆತವನ್ನು ತಡೆಯಲಾರದೆ ಕೆಳಗೆ ಬಿದ್ದು ಒದೆದುಕೊಳ್ಳುತ್ತ ಮೂರ್ಛೆಯನ್ನು ಹೊಂದಲು ; ಅವನ ಮಾತಾಮಹನಾದ ಪುಲೋಮನು ಶೀಘ್ರವಾಗಿ ಬಂದು ಆತನನ್ನೆತ್ತಿಕೊಂಡು ಹೋದನು.

ಆಗ ಬಿಡುಗಣ್ಣರೊಡೆಯನು ರಣರಂಗದಲ್ಲಿ ತನ್ನ ಮಗನನ್ನು ಕಾಣದೆ ತಾನೇ ಯುದ್ಧಕ್ಕೆ ಬರಲು ; ರಾವಣನು ಅದನ್ನು ಕಂಡು ತನ್ನ ಮಗನನ್ನು ಹಿಂದೆ ನಿಲ್ಲಿಸಿ ಹತ್ತು ಕೈಗಳಿಂದಲೂ ಹತ್ತು ಬಿಲ್ಲುಗಳನ್ನು ತೆಗೆದುಕೊಂಡು ಉಳಿದ ಹತ್ತು ಕೈಗಳಿಂದ ಅವುಗಳಲ್ಲಿ ಬಾಣಸಂಧಾನವನ್ನು ಮಾಡಿ ಆಕರ್ಣಾಂತವಾಗಿ ಸೆಳೆದು ಬಿಡುತ್ತಿರಲು ; ದೆಸೆಗಳೇನಾದುವೋ ? ಬಾನೆಲ್ಲಡಿಗಿತೋ ? ಜಗಜ್ಜನಜಾಲವೇನಾಯಿತೋ ? ಗಿರಿ ತರು ಸಮುದ್ರಗಳೇನಾದುವೋ ? ಎಂದು ಜನರು ಭಯಕಂಪಿತರಾಗಿ ಹೇಳಿಕೊಳ್ಳುತ್ತಿರಲು ; ದೇವೇಂದ್ರನು ಆ ಬಾಣಗಳನ್ನೆಲ್ಲಾ ನುಚ್ಚುನೂರಾಗಿ ಇಕ್ಕಡಿಗೆಯ್ದೊಟ್ಟಿ ಪರಂಪರಾಪ್ರಯುಕ್ತವಾದ ಬಾಣಜಾಲದಲ್ಲಿ ತಲೆಯೆತ್ತದಂತೆ ರಾವಣನನ್ನು ಹೂಳಲು; ಆಗ ದಶಕಂಠನು ಇಂದ್ರನ ಬಾಣಗಳನ್ನೆಲ್ಲಾ ತುಂಡುತುಂಡಾಗುವಂತೆ ಕಡಿದು ಭೂಮಿಗೆ ಬೀಳಿಸುತ್ತಿದ್ದನು. ಪುನಃ ದೇವೇಂದ್ರನು ಬಾಣಪ್ರಯೋಗವನ್ನು ಮಾಡಿ ರಾವಣನ ಸಾರಥಿಯನ್ನು ಕೊಂದು ರಥವನ್ನು ಕೊಚ್ಚಿ ಹತ್ತು ಕೈಗಳಲ್ಲಿದ್ದ ಬಿಲ್ಲುಗಳನ್ನೂ ಖಂಡಿಸಿ ಕವಚವನ್ನು ಕತ್ತರಿಸಿ ಮೂದಲಿಸಿ ಸಿಂಹನಾದವನ್ನು ಮಾಡಲು ;

ರಾವಣನು ಗದೆಯನ್ನು ತೆಗೆದುಕೊಂಡು ಬೀಸಿ ತನ್ನನ್ನು ಹೊಡೆಯುವುದಕ್ಕಾಗಿ ಬರುವುದನ್ನು ಶಚೀಪತಿಯು ತಿಳಿದು ತನ್ನ ವಜ್ರಾಯುಧವನ್ನು ಎತ್ತಿ ಅಪ್ಪಳಿಸಲು ; ರಾವಣನು ಕೆಳಗೆ ಬಿದ್ದು ಮೂರ್ಛಾಗತನಾಗಿ ಚೇತರಿಸಿಕೊಳ್ಳದೆ ಇದ್ದನು.

ಆಗ ರಾವಣಿಯು ಈಶ್ವರದತ್ತವಾದ ತಾಮಸೀ ಎಂಬ ಮಾಯೆಯನ್ನು ಆಶ್ರಯಿಸಿ ಇಂದ್ರನ ಕಣ್ಣಿಗೆ ಕಾಣಿಸಿಕೊಳ್ಳದೆ ಅಪರಿಮಿತವಾದ ಮಹಾಸ್ತ್ರಗಳನ್ನು ಸುರಿಸುತ್ತಿರಲು ; ಇಂದ್ರನು ವಿರೋಧಿಯನ್ನು ಕಾಣದೆ ಮಹಾಸ್ತ್ರಗಳ ಪೆಟ್ಟನ್ನು ಸಹಿಸಲಾರದೆ ಹಿಂದು ಮುಂದು ತೋರದೆ ಕಂಗೆಟ್ಟಿರುವುದನ್ನು ನೋಡಿ ರಾವಣಿಯು ಶೀಘ್ರವಾಗಿ ಬಂದು ಸುರರಾಜನ ಮೇಲೆ ಬಿದ್ದು ತನ್ನ ಬಾಹುಗಳಿಂದ ಬಿಗಿದು ಕಟ್ಟಿ ಎತ್ತಿ ತನ್ನ ರಥದ ಮೇಲೆ ಹಾಕಿಕೊಂಡು ಜಯಭೇರಿಯನ್ನು ಹೊಡಿಸುತ್ತ ಬರುತ್ತಿರಲು ; ಮೂರ್ಛಿತನಾಗಿದ್ದ ರಾವಣನು ಅಷ್ಟರಲ್ಲಿ ಬ್ರಹ್ಮವರಪ್ರಭಾವದಿಂದ ಚೇತರಿಸಿಕೊಂಡು ಪುನಃ ಇಂದ್ರನೊಡನೆ ಯುದ್ಧಮಾಡಬೇಕೆಂದು ಹೊರಟುಬರುತ್ತ ಇಂದ್ರನನ್ನು ಜಯಿಸಿ ಹಿಡಿದುಕೊಂಡು ಬರುತ್ತಿರುವ ಮಗನನ್ನು ಕಂಡು ಸಂತೋಷಸಮುದ್ರದಲ್ಲಿ ಮುಳುಗಿ ಅವನನ್ನು ಬಾಚಿ ತಬ್ಬಿ ಮುದ್ದಿಸಿ ಆ ಮೇಲೆ ಇಂದ್ರಲೋಕವನ್ನು ಸೂರೆಮಾಡಿಕೊಂಡು ಸಕಲರಾಕ್ಷಸಸೇನಾಸಮೇತನಾಗಿ ಲಂಕಾಪಟ್ಟಣಕ್ಕೆ ಬಂದು ಇಂದ್ರನನ್ನು ಕಾರಾಗೃಹದಲ್ಲಿಡಿಸಿ ತಾನು ಸುಖದಿಂದಿರುತ್ತಿದ್ದನು.

ಅನಂತರದಲ್ಲಿ ಚತುರ್ಮುಖ ಬ್ರಹ್ಮನು ಈ ವರ್ತಮಾನವನ್ನು ಕೇಳಿ ಲಂಕಾಪಟ್ಟಣಕ್ಕೆ ಬಂದು—ಎಲೈ ಮಗನಾದ ದಶಕಂಧರನೇ, ನೀನು ಮೂರು ಲೋಕಗಳನ್ನೂ ಗೆದ್ದವನಾದುದರಿಂದ ಲೋಕೈಕವೀರನೆಂದು ಪ್ರಖ್ಯಾತಿಯನ್ನು ಹೊಂದಿದವನಾದೆ. ನಿನ್ನ ಮಗನು ಶೌರ್ಯದಲ್ಲಿ ನಿನಗಿಂತಲೂ ಹೆಚ್ಚಿದವನು. ನಾನು ಅವನ ಪರಾಕ್ರಮವನ್ನು ಮೆಚ್ಚಿದೆನು. ಇಂದು ಮೊದಲು ಲೋಕದಲ್ಲಿ ಮೇಘನಾದನಿಗೆ ಇಂದ್ರಜಿತ್ತೆಂದು ಹೆಸರು ಪ್ರಖ್ಯಾತಿಯಾಗಲಿ. ಈ ದೇವೇಂದ್ರನು ನನ್ನ ಅಪ್ಪಣೆಯಿಂದ ದೇವಲೋಕವನ್ನು ಸಲಹುತ್ತಿರುವನು. ಇಷ್ಟು ಜಯಿಸಿದುದೇ ಸಾಕು. ಇನ್ನುಮೇಲೆ ಆತನನ್ನು ಬಿಟ್ಟುಬಿಡು. ನನ್ನ ಮಾತನ್ನು ನಡಿಸು ಎನಲು ; ಆಗ ಇಂದ್ರಜಿತ್ತು ಬ್ರಹ್ಮನಿಗೆ ನಮಸ್ಕರಿಸಿ—ಎಲೈ ಪಿತಾಮಹನೇ, ನಿಮ್ಮಪ್ಪಣೆಯಂತೆ ದೇವೇಂದ್ರನನ್ನು ಬಿಟ್ಟು ನಿಮ್ಮ ಮಾತನ್ನು ನಡಿಸುವೆನು. ಇಂದ್ರನನ್ನು ಜಯಿಸಿದುದರಿಂದ ನನಗೆ ಇಂದ್ರಜಿತ್ತೆಂಬ ಹೆಸರುಂಟಾಯಿತು, ಸರಿ. ನೀನು ನನ್ನಲ್ಲಿ ಪ್ರೀತಿ ಮಾಡಿದರೆ ನನಗೆ ಅಮರತ್ವವನ್ನು ಕೊಡು ಎಂದು ಕೇಳಿಕೊಳ್ಳಲು ; ಆಗ ಬ್ರಹ್ಮನು—ಲೋಕದಲ್ಲಿ ಚರಾಚರಗಳಿಗೆಲ್ಲಾ ಅಮರತ್ವದ ಬಳಕೆಯಿಲ್ಲ. ಸುರ ನರೋರಗ ದೈತ್ಯ ಇವರೇ ಮೊದಲಾದವರಿಗೂ ಕೂಡ ಸಾವು ತಪ್ಪದು. ಅದುಕಾರಣ ಇದನ್ನು ಬಿಟ್ಟು ಸುಲಭವಾದ ವರಗಳನ್ನು ಬೇಡಿಕೋ ಕೊಡುವೆನೆಂದನು. ಆಗ ಇಂದ್ರಜಿತ್ತು—ಎಲೈ ಪಿತಾಮಹನೇ, ನಾನು ಕಾಳಗಕ್ಕೆ ಹೊರಡುವ ಸಮಯದಲ್ಲಿ ಅಗ್ನಿಯನ್ನು ಆರಾಧಿಸುವೆನು. ಆ ಅಗ್ನಿಕುಂಡದಿಂದ ಒಂದು ಅಪ್ರತಿಹತವಾದ ರಥವು ಉಂಟಾಗಲಿ. ಆ ರಥದ ಮೇಲೆ ಕುಳಿತುಕೊಂಡು ಜಗಳವಾಡುವ ಕಾಲದಲ್ಲಿ ನಾನು ಯಾರಿಂದಲೂ

ಸಾಯದಂತೆ ವರವನ್ನು ಕೊಡೆಂದು ಬೇಡಿದುದಕ್ಕೆ ಬ್ರಹ್ಮನು ಆ ಪ್ರಕಾರವೇ ವರವ ನ್ನಿತ್ತು ಇಂದ್ರನನ್ನು ಬಿಡಿಸಿ ಅಮರಾವತಿಗೆ ಕರೆದುಕೊಂಡು ಹೋಗಿ ಅಲ್ಲಿ ಅವನನ್ನು ಕುರಿತು—ಮೊದಲು ನೀನು ಗೌತಮಪತ್ನಿಯಾದ ಅಹಲ್ಯೆಯನ್ನು ಕಾಮಿಸಿದುದರಿಂದ ನಿನಗೆ ಇಂಥ ಪರಾಜಯವುಂಟಾಯಿತೆಂದು ಹೇಳಿ ಆ ಪಾಪಪರಿಹಾರಕ್ಕಾಗಿ ವೈಷ್ಣವಾ ಧ್ವರವನ್ನು ಮಾಡಿಸಿ ಮನಸ್ಸನ್ನು ಸಂತೋಷಪಡಿಸಿ ಅವನನ್ನು ಸ್ವರ್ಗಲೋಕದಲ್ಲೇ ಬಿಟ್ಟು ತನ್ನ ವಾಸಸ್ಥಾನವಾದ ಸತ್ಯಲೋಕವನ್ನು ಕುರಿತು ಹೊರಟುಹೋದನು.

ಇತ್ತಲಾ ರಾವಣನು ಒಂದು ದಿವಸ ಪರಿವಾರಪರಿವೃತನಾಗಿ ತನ್ನ ಓಲಗದ ಚಾವಡಿಯಲ್ಲಿ ಕುಳಿತುಕೊಂಡು ಇಂದ್ರಾದಿ ದಿಗೀಶರನ್ನೂ ದೈತ್ಯದಾನವಾದಿಗಳನ್ನೂ ಜಯಿಸಿದೆನೆಂಬ ಗರ್ವಾತಿಶಯದಿಂದ ಮದಿಸಿದವನಾಗಿ ಮಾರೀಚಪ್ರಹಸ್ತರೇ ಮೊದ ಲಾದ ತನ್ನ ಮಂತ್ರಿಗಳನ್ನು ನೋಡಿ—ನಾವು ಇನ್ನಾರನ್ನು ಜಯಿಸಬೇಕು ? ತ್ರಿಮೂ ರ್ತಿಗಳಲ್ಲಿ ಒಬ್ಬನಾದ ಬ್ರಹ್ಮದೇವನು ನನಗೆ ಮುತ್ತಜ್ಜನು. ಕೈಲಾಸಗಿರಿಯನ್ನು ಕಿತ್ತು ಅಲ್ಲಾಡಿಸಲು ಶಿವನು ನನ್ನ ಪರಾಕ್ರಮಕ್ಕೆ ಮೆಚ್ಚಿ ಚಂದ್ರಹಾಸವೆಂಬ ಕತ್ತಿ ಯನ್ನಿತ್ತು ಸಂತೋಷಪಡಿಸಿದನು. ವಿಷ್ಣು ಒಬ್ಬನು ಮಾತ್ರ ಉಳಿದಿರುವನು. ಆತನು ಪಾಲ್ಗಡಲಲ್ಲಿ ಮಲಗಿದ್ದಾನಂತೆ. ಅಲ್ಲಿಗೆ ಹೋಗಿ ಆತನೊಬ್ಬನನ್ನೂ ಜಯಿಸಿಬಿಟ್ಟರೆ ಈರೇಳು ಲೋಕಗಳಲ್ಲೂ ನನ್ನೆದುರಿಗೆ ನಿಲ್ಲುವವರು ಯಾರೂ ಇಲ್ಲವೆಂದು ಹೇಳು ತ್ತಿರಲು ; ಆಗ ಸಭಾಸೀನನಾಗಿದ್ದ ವಿಭೀಷಣನು ರಾವಣನನ್ನು ಕುರಿತು—ಎಲೈ ರಾಕ್ಷಸರಾಜನೇ, ಲೋಕದಲ್ಲಿ ಶೂರರಿಲ್ಲವೆಂದು ಹೇಳಕೂಡದು. ಪ್ರಪಂಚದಲ್ಲಿ ಒಬ್ಬ ನಿಗಿಂತ ಇನ್ನೊಬ್ಬನು ಬಲಶಾಲಿಯು ಇದ್ದೇ ಇರುತ್ತಾನೆ. ಸಹಸ್ರಬಾಹುಗಳನ್ನು ಧರಿಸಿ ಮಹಾವೀರನಾಗಿ ಚಕ್ರವರ್ತಿಯೆನ್ನಿಸಿಕೊಂಡು ಮಾಹಿಷ್ಮತೀ ನಗರಾಧೀಶ್ವರ ನಾದ ಕಾರ್ತವೀರ್ಯಾರ್ಜುನನು ಸಾಮಾನ್ಯನೇ ? ಜಗದೇಕವೀರನಲ್ಲವೇ ? ಮತ್ತು ದೇವೇಂದ್ರನ ಮಗನಾದ ವಾಲಿಯೆಂಬವನು ವಾನರಾಧೀಶ್ವರನಾಗಿ ಕಿಷ್ಕಿಂಧಾಪಟ್ಟ ಣದಲ್ಲಿ ವಾಸಿಸುತ್ತಿರುವನು. ಆತನು ದುಂದುಭಿ ಮಾಯಾವಿಗಳೆಂಬ ಅಪರಿಮಿತ ಬಲಪರಾಕ್ರಮಶಾಲಿಗಳನ್ನು ಲೀಲಾಮಾತ್ರದಿಂದ ಜಯಿಸಿದಂಥ ಮಹಾವೀರಾಗ್ರೇ ಸರನು. ಆತನೇನು ಸಾಧಾರಣನೇ ? ಅಪ್ರತಿಮಮಲ್ಲನಲ್ಲವೇ ? ಎಂದು ಹೇಳಲು ; ಆಗ ರಾವಣನು—ಮೊದಲು ಅವರಿಬ್ಬರನ್ನೂ ಜಯಿಸಬೇಕೆಂದು ಮಾರೀಚಪ್ರಹ ಸ್ತಾದಿ ಮಂತ್ರಿಗಳೊಡನೆ ಕೂಡಿ ಮಾಹಿಷ್ಮತೀ ನಗರ ಸಮೀಪಕ್ಕೆ ಹೋಗಿ ಆ ರಾಜ ಧಾನಿಯ ಹೊರಗಣ ಉದ್ಯಾನವನದಲ್ಲಿ ಪಾಳಯವನ್ನು ಬಿಡಿಸಿಕೊಂಡು ತನ್ನ ದೂತ ರನ್ನು ಕರೆದು—ನೀನು ಕಾರ್ತವೀರ್ಯಾರ್ಜುನನ ಬಳಿಗೆ ಹೋಗಿ ನಾವು ಬಂದಿರುವ ವರ್ತಮಾನವನ್ನು ತಿಳಿಸೆಂದು ಹೇಳಿ ಕಳುಹಿಸಲು ; ಆ ದೂತನು ಬಂದು ಕಾರ್ತವೀ ರ್ಯಾರ್ಜುನನ ಮಂತ್ರಿಯನ್ನು ಕಂಡು ಆತನೊಡನೆ—ಅಯ್ಯಾ ಮಂತ್ರಿಯೇ, ನಮ್ಮೊ ಡೆಯನಾದ ದಶಕಂಧರನು ನಿಮ್ಮೊಡೆಯನಾದ ಕಾರ್ತವೀರ್ಯಾರ್ಜುನನನ್ನು ಯುದ್ಧಕ್ಕೆ ಕರೆದುಕೊಂಡು ಬರಬೇಕೆಂದು ನನ್ನನ್ನು ಇಲ್ಲಿಗೆ ಕಳುಹಿಸಿದನೆಂದು ಹೇಳಲು ; ಆಗ ಆ ಮಂತ್ರಿಯು ರಾವಣಸಂದೇಶಹಾರಿಯೊಡನೆ—ನಮ್ಮ ರಾಜನು ಅಂತಃಪುರ ಕಾಂತಾ

ಜನದೊಡನೆ ಕೂಡಿ ಜಲಕ್ರೀಡೆಗಾಗಿ ನರ್ಮದಾನದಿಗೆ ಹೋಗಿದ್ದಾನೆ. ಇನ್ನು ಒಂದೆರಡು ಗಳಿಗೆಗಳೊಳಗಾಗಿ ಇಲ್ಲಿಗೆ ಬರುವನೆನಲು ; ಆ ಮಾತುಗಳನ್ನು ಕೇಳಿದ ದೂತನು ಅಲ್ಲಿಂದ ಹಿಂದಿರುಗಿ ಬಂದು ಆ ಸಂಗತಿಯನ್ನೆಲ್ಲಾ ರಾವಣನಿಗೆ ತಿಳಿಸಲು ; ಆಗ ರಾವಣನು--ಅಷ್ಟು ಹೊತ್ತಿನ ವರೆಗೂ ಸಾವಕಾಶ ಮಾಡುವುದರಿಂದ ಪ್ರಯೋಜನವೇನು ? ನಾನೇ ಅಲ್ಲಿಗೆ ಶೀಘ್ರವಾಗಿ ಹೋಗುವೆನೆಂದು ಹೊರಟು ನರ್ಮದಾನದಿಯನ್ನು ಹುಡುಕುತ್ತ ಅಗಮ್ಯವಾದ ವಿಂಧ್ಯಾರಣ್ಯಮಾರ್ಗವಾಗಿ ಬರುತ್ತಿರಲು ; ಆಗ ಬಲು ಬಿಸಿಲ್ಬೇಗೆಯ ಹೊಯ್ಲಿನಿಂದ ಬಳಲಿ ಬಾಯಾರಿ ಕಡೆಗೆ ತನ್ನ ಆರು ಜನ ಪ್ರಧಾನರೊಡನೆ ಕೂಡಿ ನರ್ಮದೆಯನ್ನು ಕಂಡು ಅಲ್ಲಿ ಪುಷ್ಪಕವಿಮಾನವನ್ನಿಳಿಸಿ ನದೀತೀರದಲ್ಲಿರುವ ತರುಗಳ ಸಾಂದ್ರಛಾಯೆಯಿಂದ ಶೀತಲವಾದ ಮಳಲ್ದಿಣ್ಣೆಗಳಲ್ಲಿ ಕುಳಿತು ಆಯಾಸವಿಶ್ರಾಂತಿಯನ್ನು ಹೊಂದಿ ಆ ಮೇಲೆ ಮಾರೀಚಪ್ರಹಸ್ತಾದಿ ಪ್ರಧಾನರನ್ನು ಕುರಿತು—ಈ ನದೀತೀರ ಪ್ರದೇಶವು ಬಹು ಪರಿಶುದ್ಧತೆಯುಳ್ಳದಾಗಿರುವುದು. ಆದುಕಾರಣ ಈ ನದಿಯ ನಿರ್ಮಲೋದಕದಲ್ಲಿ ಸ್ನಾನಮಾಡಿ ಶಂಕರನನ್ನು ಆರಾಧಿಸುವೆನು. ನೀವು ಪೂಜೆಗೆ ಯೋಗ್ಯವಾದ ಪತ್ರಪುಷ್ಪಾದಿಗಳನ್ನು ಒದಗಿಸಿಕೊಡಿರಿ ಎಂದು ಹೇಳಲು; ಆ ಮೇಲೆ ಅವರು ನದೀತೀರ ಪ್ರದೇಶದಲ್ಲಿ ಸಂಚರಿಸುತ್ತ ಬೇಕಾದಷ್ಟು ಪತ್ರಪುಷ್ಪಾದಿಗಳನ್ನು ಒದಗಿಸಿಕೊಟ್ಟರು. ಅನಂತರದಲ್ಲಿ ನಿಶಾಚರೇಶ್ವರನು ನರ್ಮದಾನದಿಯ ನಿರ್ಮಲೋದಕದಲ್ಲಿ ಮಿಂದು ಅದರ ದಡದಲ್ಲಿ ಕುಳಿತು ಭಸ್ಮತ್ರಿಪುಂಡ್ರಾಂಕಿತನಾಗಿ ಮಧ್ಯಾಹ್ನೋಚಿತವಾದ ಕರ್ಮಗಳನ್ನು ನೆರವೇರಿಸಿ ನಿರ್ಮಲವಾದ ಮಳಲಿನಿಂದ ಲಿಂಗವನ್ನು ಮಾಡಿ ಮಂತ್ರಾವಾಹಿತನಾದ ಶಿವನನ್ನು ಅದರಲ್ಲಿ ಪ್ರತಿಷ್ಠಿಸಿ ಅರ್ಘ್ಯಪಾದ್ಯಾದಿ ಷೋಡಶೋಪಚಾರಗಳನ್ನು ಮಾಡಿ ಶಿವಸಹಸ್ರನಾಮಾವಳಿಯನ್ನು ಉಚ್ಚರಿಸುತ್ತ ಕ್ರಮವಾಗಿ ಬಿಲ್ವಪತ್ರ ಪುಷ್ಪಗಳನ್ನರ್ಪಿಸುತ್ತ ಇದ್ದನು.

ಹೀಗಿರುವಲ್ಲಿ ಇವನು ಪೂಜೆಮಾಡುತ್ತಿರುವ ಸ್ಥಳದ ಮುಂಗಡೆ ಒಂದೆಂಬಿನಿಸುಗೆಯಷ್ಟು ದೂರದಲ್ಲಿ ಆ ನದಿಯೊಳಗೆ ತನ್ನ ಸ್ತ್ರೀಯರೊಡನೆ ಕೂಡಿ ನೀರಾಟವನ್ನಾಡುತ್ತಿದ್ದ ಕಾರ್ತವೀರ್ಯಾರ್ಜುನನು ನೀರಿನೊಳಗೆ ಮುಳುಗಿ ಆಡಬೇಕೆಂಬ ಅಪೇಕ್ಷೆಯುಳ್ಳವನಾಗಿ ಆ ನದಿಯ ನೀರು ಸ್ವಲ್ಪವಾಗಿದ್ದುದರಿಂದ ಹೆಚ್ಚುಮಾಡಿಕೊಳ್ಳುವುದಕ್ಕಾಗಿ ತನ್ನ ಎಡಗಡೆಯ ಐನೂರು ತೋಳುಗಳಿಂದ ಆ ನದಿಯ ಪ್ರವಾಹವನ್ನು ತಡೆದು ನೀರನ್ನು ಹೆಚ್ಚುಮಾಡಿಕೊಂಡು ಬಲಗಡೆಯ ಐನೂರು ತೋಳುಗಳಿಂದ ಹೆಂಡಿರುಗಳೊಡನೆ ಮುಳುಗುತ್ತ ಏಳುತ್ತ ಜಲಕ್ರೀಡೆಯನ್ನು ಆಡುತ್ತಿದ್ದನು. ಆಗ ನರ್ಮದಾನದಿಯ ಪ್ರವಾಹವು ಅವನ ತೋಳುಗಳಿಂದ ತಡೆಯಲ್ಪಟ್ಟುದರಿಂದ ಹೆಚ್ಚಿ ಹಿಂದಕ್ಕೆ ಒದೆಯಲು ; ಆ ನೀರಿನಿಂದ ರಾವಣನು ಪೂಜಿಸುತ್ತಿದ್ದ ಸೈಕತಲಿಂಗವೂ ಪೂಜಾಸಾಮಗ್ರಿಗಳೂ ನೀರಿನಲ್ಲಿ ಕಲೆತು ನಿಶ್ಶೇಷವಾಗಿ ಹೋಗಲು ; ಆಗ ಶಿವಪೂಜೆಯು ನೆರವೇರದೆ ಹೋದುದರಿಂದ ಮಹಾಕೋಪವುಳ್ಳವನಾದ ರಾವಣನು ಪ್ರವೃತ್ತಿಜ್ಞಾನಾರ್ಥವಾಗಿ ದೂತರನ್ನು ಕಳುಹಿಸಿ, ನೀರು ಹೆಚ್ಚಾಗುವುದಕ್ಕೆ ಕಾರ್ತವೀರ್ಯಾರ್ಜುನನ ದುರುಳತನವೇ ಕಾರಣವೆಂದು ಅವರಿಂದ ತಿಳಿದು ಕೋಪದಿಂದ

ಕಣ್ಗಾಣದವನಾಗಿ ಅವನಿರುವ ಸ್ಥಳಕ್ಕೆ ಹೋಗಿ ಅವನನ್ನು ನೋಡಿ—ಜಗದೇಕವೀರನಾದ ನಾನು ಜಗಳಕ್ಕೆ ಬಂದು ನಿಂತಿದ್ದಾಗ್ಯೂ ನೀನು ಹೇಡಿಯ ಹಾಗೆ ಹೆಣ್ಗಳೊಡನೆ ನೀರಾಟವನ್ನಾಡುತ್ತಿರುವುದು ಶೂರತ್ವವೋ ? ನಿನಗೆ ಸಹಸ್ರಬಾಹುಗಳಿದ್ದರೂ ವ್ಯರ್ಥವೆಂದು ಹೇಳಲು ; ಕಾರ್ತವೀರ್ಯಾರ್ಜುನನು ರಾವಣನನ್ನು ನೋಡಿ, ಇವನು ಹುಚ್ಚನೆಂದು ನಸುನಕ್ಕು—ತಾನು ಕೋಡಗನಾಗಿ ವನವನ್ನಣಕಿಸಿತು ಎಂಬ ಗಾಧೆಗೆ ಸರಿಯಾಗಿ ಹೆಂಗಸರೊಡನೆ ಕ್ರೀಡಿಸುವಂಥವನ ಬಳಿಗೆ ನಾಚಿಕೆಯಿಲ್ಲದೆ ಬಂದು ಯುದ್ಧಕ್ಕೆ ಕರೆಯುವುದರಿಂದ ನಿನ್ನ ಜಗದೇಕವೀರತ್ವವೂ ಮಾನವೂ ತಿಳಿದ ಹಾಗೇ ಆಯಿತು. ಹತ್ತು ತಲೆಯ ಹುಳುವಿನಂತಿರುವ ನಿನ್ನನ್ನು ಕೊಲ್ಲಬೇಕಾದರೆ ನನ್ನ ಸಹಸ್ರಬಾಹುಗಳೂ ಬೇಕೇ ? ನಿಮೇಷಕಾಲ ಮಾತ್ರ ನಿಲ್ಲು ಎಂದು ಹೇಳಿ ಸ್ತ್ರೀಯರನ್ನೆಲ್ಲಾ ಪಟ್ಟಣಕ್ಕೆ ಕಳುಹಿಸಿ ಗದಾಯುಧವನ್ನು ತೆಗೆದುಕೊಂಡು ಹಗಲೂ ರಾತ್ರಿಯೂ ಮೂರು ದಿನಗಳ ವರೆಗೂ ರಾವಣನೊಡನೆ ಕಾದಾಡಲು; ಆ ಮೇಲೆ ರಾವಣನು ಬಲಹೀನನಾಗಿ ಕಾರ್ತವೀರ್ಯಾರ್ಜುನನ ಗದಾಘಾತದಿಂದ ಮೂರ್ಛಿತನಾಗಲು ; ಅವನನ್ನು ಎತ್ತಿ ತನ್ನ ರಥದ ಮೇಲೆ ಹಾಕಿಕೊಂಡು ಕಾರ್ತವೀರ್ಯಾರ್ಜುನನು ಮಾಹಿಷ್ಮತೀನಗರಕ್ಕೆ ಹೊರಟುಹೋದನು. ಆಗ ಪ್ರಹಸ್ತಾದಿ ಪ್ರಧಾನರೆಲ್ಲರೂ ಹೆದರಿ ಭಯಕಂಪಿತವಾದ ರಾಕ್ಷಸಸೇನೆಯೊಡನೆ ಓಡಿಬಂದು ಲಂಕಾಪಟ್ಟಣವನ್ನು ಸೇರಿ ನಿಟ್ಟುಸಿರುಬಿಟ್ಟು ಬದುಕಿದೆವೆಂದು ಹೇಳಿಕೊಂಡರು.

ಇತ್ತಲಾ ಕಾರ್ತವೀರ್ಯಾರ್ಜುನನು ಮಾಹಿಷ್ಮತೀನಗರಕ್ಕೆ ಹೋಗಿ ಮೂರ್ಛಾಗತನಾಗಿರುವ ದಶಾನನನಿಗೆ ಶೈತ್ಯೋಪಚಾರಗಳನ್ನು ಮಾಡಿಸಿ ಚೇತರಿಸಿಕೊಳ್ಳುವಂತೆ ಮಾಡಿದ ಮೇಲೆ ಅವನ ಕಾಲುಗಳಿಗೆ ಸುವರ್ಣದ ಸಂಕೋಲೆಗಳನ್ನು ಹಾಕಿಸಿ ಕಾರಾಗೃಹದಲ್ಲಿಡಿಸಿದನು. ಹೀಗೆ ರಾವಣನು ಒಂದು ಸಹಸ್ರಸಂವತ್ಸರಗಳ ವರೆಗೂ ಮಾಹಿಷ್ಮತೀನಗರದ ಕಾರಾಲಯದಲ್ಲಿರುತ್ತಿರಲು ; ಈ ವರ್ತಮಾನವನ್ನು ಕೇಳಿದ ಆತನ ಅಜ್ಜನಾದ ಪುಲಸ್ತ್ಯಮುನಿಯು ಮಾಹಿಷ್ಮತೀನಗರಕ್ಕೆ ಬಂದು ಕಾರ್ತವೀರ್ಯಾರ್ಜುನನಿಂದ ಸತ್ಕೃತನಾಗಿ ಆತನನ್ನು ಅನೇಕವಿಧವಾಗಿ ಶ್ಲಾಘಿಸಿ ನೀನು ಇಂದ್ರಾದಿದಿಗೀಶರನ್ನು ಜಯಿಸಿದ ದುರುಳನಾದ ಈ ದಶಾನನನ್ನು ಭಂಗಿಸಿ ದೇವತೆಗಳಿಗೂ ಮುನಿಗಳಿಗೂ ಸಂತೋಷವನ್ನುಂಟುಮಾಡಿದೆ. ಇವನ ಗರ್ವವನ್ನು ಮುರಿದು ಈ ರೀತಿಯಾಗಿ ಮಾನಭಂಗ ಮಾಡಿದುದೇ ಸಾಕು. ಇವನು ನನ್ನ ಮೊಮ್ಮಗನಾದುದರಿಂದ ಇವನನ್ನು ನನ್ನ ವಶಕ್ಕೆ ಕೊಡಬೇಕೆಂದು ಕೇಳಿಕೊಂಡುದರಿಂದ ಕಾರ್ತವೀರ್ಯಾರ್ಜುನನು ರಾವಣನ ಸಂಕೋಲೆಗಳನ್ನು ಕಡಿಸಿ ಮಂಗಳಸ್ನಾನಾದಿಗಳನ್ನು ಮಾಡಿಸಿ ತನ್ನ ಸಭೆಗೆ ಕರಿಸಿ ಸಂತೋಷದಿಂದ ಆಲಿಂಗಿಸಿಕೊಂಡು ದಿವ್ಯವಸ್ತ್ರಾಭರಣಗಳನ್ನು ಕೊಟ್ಟು ಶೂರರಾದವರಿಗೆ ಒಂದು ಕಾಲದಲ್ಲಿ ಜಯವೂ ಇನ್ನೊಂದು ಕಾಲದಲ್ಲಿ ಪರಾಜಯವೂ ಉಂಟಾಗುವುದು ಸ್ವಾಭಾವಿಕವು. ಅದುಕಾರಣ ಇಷ್ಟುಮಾತ್ರಕ್ಕಾಗಿ ವ್ಯಸನಪಡಬಾರದೆಂದು ಸಮಾಧಾನಪಡಿಸಿ ಅವನನ್ನು ಪುಲಸ್ತ್ಯರ ವಶಕ್ಕೆ ಕೊಡಲು ಅವರು ಅವನನ್ನು ಕರೆದುಕೊಂಡು ಬಂದು ಲಂಕೆಯಲ್ಲಿ ಬಿಟ್ಟು—ಇನ್ನು

ಮೇಲಾದರೂ ದುರ್ವ್ಯಾಪಾರದಿಂದ ನಡೆಯದೆ ವಿನಯಾದಿಗುಣಗಳಿಂದ ಕೂಡಿ ಸುಖ ವಾಗಿ ಜೀವಿಸಿಕೊಂಡಿರೆಂದು ವಿವೇಕವನ್ನು ಬೋಧಿಸಿ ಸ್ವಾಶ್ರಮವನ್ನು ಕುರಿತು ಹೊರಟುಹೋದರು.

ಅನಂತರದಲ್ಲಿ ಕ್ರೂರನೂ ಮೂರ್ಖನೂ ಆದ ದಶಕಂಧರನು ಕಾರ್ತವೀರ್ಯಾ ರ್ಜುನನಿಂದ ತನಗಾದ ಮಾನಭಂಗವನ್ನು ಮನಸ್ಸಿನಲ್ಲಿ ಗಣಿಸದೆ ಕಿಷ್ಕಿಂಧಾಧಿಪತಿ ಯಾದ ವಾಲಿಯೆಂಬ ವಾನರಚಕ್ರವರ್ತಿಯೊಡನೆ ದ್ವಂದ್ವಯುದ್ಧವನ್ನು ಮಾಡಿ ಆತನನ್ನು ಜಯಿಸಬೇಕೆಂದು ಒಬ್ಬನೇ ಲಂಕೆಯಿಂದ ಹೊರಟು ಅರುಣೋದಯ ಕಾಲದಲ್ಲಿ ಕಿಷ್ಕಿಂಧಾಪಟ್ಟಣವನ್ನು ಸೇರಿ ಆತನ ಮಂತ್ರಿಯಾದ ತಾರನೆಂಬ ಕಪಿಶ್ರೇ ಷ್ಠನನ್ನು ಕಂಡು—ಎಲೈ ಕಪಿಯೇ, ನಿನ್ನ ಅರಸಾದ ದೊಡ್ಡಕೋತಿಯು ಎಲ್ಲಿ ? ನಾನು ಶೂರನಾದ ದಶಾನನನು. ನಿಮ್ಮರಸನೊಡನೆ ದ್ವಂದ್ವಯುದ್ಧವನ್ನು ಮಾಡುವು ದಕ್ಕಾಗಿ ಬಂದಿದ್ದೇನೆ. ಈ ವರ್ತಮಾನವನ್ನು ಅವನಿಗೆ ತಿಳಿಸೆಂದು ಹೇಳಲು ; ಅದಕ್ಕೆ ಆ ತಾರನು—ಪರಾಕ್ರಮಶಾಲಿಯಾದ ನಮ್ಮ ವಾಲಿಯು ಸ್ನಾನಾರ್ಥವಾಗಿ ಪೂರ್ವ ಸಮುದ್ರವನ್ನು ಕುರಿತು ಹೋಗಿದ್ದಾನೆ. ಒಂದು ಮುಹೂರ್ತಮಾತ್ರ ಇಲ್ಲಿರು. ಆತನು ಬರುವನು ಎಂದು ಹೇಳಲು ; ಆಗ ರಾವಣನು ಅಲ್ಲಿಗೇ ಹೋಗುವೆನೆಂದು ಹೇಳಿ ಕಿಷ್ಕಿಂಧೆಯಿಂದ ಹೊರಟು ಪೂರ್ವಸಮುದ್ರತೀರಕ್ಕೆ ಬಂದು ನೋಡಲು ; ಅಷ್ಟರೊಳಗೆ ವಾಲಿಯು ಸ್ನಾನ ಮಾಡಿ ಸಮುದ್ರತೀರದಲ್ಲಿ ಕುಳಿತು ಕಣ್ಣುಗಳನ್ನು ಮುಚ್ಚಿಕೊಂಡು ಮಂತ್ರಜಪವನ್ನು ಮಾಡುತ್ತಿದ್ದನು. ಇದೇ ಸಮಯದಲ್ಲಿ ಇವನನ್ನು ನನ್ನ ಇಪ್ಪತ್ತು ತೋಳುಗಳಿಂದಲೂ ಬಿಗಿದು ಹಿಡಿದು ಜಯಿಸಬೇಕೆಂದು ಅವನ ಹಿಂದು ಗಡೆಯಲ್ಲಿ ಅವನಿಗೆ ತಿಳಿಯದಂತೆ ಹೆಜ್ಜೆಯ ಮೇಲೆ ಹೆಜ್ಜೆಯನ್ನು ಇಡುತ್ತ ಬಂದು ತಾನು ಬರುವುದನ್ನು ಕಂಡೂ ಕಾಣದವನಂತೆ ಕುಳಿತಿರುವ ವಾಲಿಯ ಎರಡು ಕಂಕು ಳುಗಳ ಸಂದುಗಳಲ್ಲಿಯೂ ತನ್ನಿಪ್ಪತ್ತು ತೋಳುಗಳನ್ನೂ ಚಾಚಲು, ಆಗ ವಾಲಿಯು ತನ್ನ ಎರಡು ಕಂಕುಳುಗಳಿಂದ ಅವನ ಇಪ್ಪತ್ತು ತೋಳುಗಳನ್ನೂ ಅಲುಗದಂತೆ ಜಪವು ಮುಗಿವ ವರೆಗೂ ಅಮುಕಿಕೊಂಡಿದ್ದು ಆ ಮೇಲೆ ಗರುಡನು ನಾಗರಹಾವನ್ನು ಕಚ್ಚಿ ಕೊಂಡು ಗಗನಾಂತರಾಳಕ್ಕೆ ಹಾರುವಂತೆ ಹಾರಿ ತೆಂಕಣಕಡಲಿಗೆ ಹೋಗಿ ಅಲ್ಲಿ ತನ್ನ ಹಿಂದುಗಡೆ ನೇತಾಡುತ್ತಿರುವ ರಾವಣನನ್ನು ಅದ್ದಿ ಅಲ್ಲಿಂದ ಪಡುವಣ ಕಡಲೆಡೆ ಗೈದಿ ಅವನನ್ನು ಅದರ ನೀರಿನಲ್ಲೂ ಅದ್ದಿ ತೆಗೆದುಕೊಂಡು ಬಂದು ಕಿಷ್ಕಿಂಧಾಪಟ್ಟ ಣದ ಹೊರಗಿರುವ ಪೂದೋಟದ ಮೇಲ್ಗಡೆಯ ಆಕಾಶದಲ್ಲಿ ನಿಂತು ಆ ವರೆಗೂ ತನ್ನ ವೇಗವನ್ನು ಸಹಿಸಲಾರದೆ ತಲೆ ತಿರುಗಿ ಕಂಗೆಟ್ಟಿರುವ ರಾವಣನನ್ನು ಕಂಕುಳೆತ್ತಿ ಕೆಡವಿಬಿಟ್ಟು ತನ್ನ ಅಂತಃಪುರಕ್ಕೆ ಹೋಗಿ ಭೋಜನಾದಿಗಳನ್ನು ಮುಗಿಸಿಕೊಂಡು ತನ್ನ ಸಕಲಪರಿವಾರ ಸಮೇತನಾಗಿ ರಾವಣನು ಬಿದ್ದಿರುವ ಸ್ಥಳಕ್ಕೆ ಬರಲು ; ಬಹು ದೂರ ಪತನದಿಂದುಂಟಾದ ಮಹಾಘಾತದಿಂದ ಬಹುಮೂರ್ಛೆಯನ್ನು ಹೊಂದಿದ್ದು ಆಗತಾನೆ ಸ್ವಲ್ಪ ಚೇತರಿಸಿಕೊಂಡಿದ್ದ ರಾವಣನನ್ನು ನೋಡಿ ಕಾಣದವನಂತೆ—ಇದೇ ನೈಯ್ಯಾ ರಾಕ್ಷಸರಾಜನೇ, ಪರಿವಾರಜನರೊಬ್ಬರೂ ಇಲ್ಲದೆ ಈ ತೋಟದಲ್ಲಿ ಈ

ರೀತಿಯಾಗಿ ಕಂಗೆಟ್ಟು ಬಿದ್ದಿದ್ದೀಯೆ ? ನಿನಗೆ ಇಂಥ ಪರಿಭವವು ಯಾರಿಂದುಂಟಾಯಿತು ? ನೀನು ದಿಕ್ಪಾಲಕರನ್ನೂ ತ್ರಿಲೋಕವನ್ನೂ ಜಯಿಸಿದ ಮಹಾವೀರನಲ್ಲಾ ! ಈ ವರ್ತಮಾನವು ನನಗೆ ಸ್ವಲ್ಪ ಮಾತ್ರ ಸೂಚಿತವಾಗಿದ್ದರೆ ನಾನು ಕೂಡಲೆ ಒಂದು ನನ್ನಿಂದ ಆದಮಟ್ಟಿಗೆ ನಿನಗೆ ಸಹಾಯವನ್ನು ಕೊಡುತ್ತಿದ್ದೆನಲ್ಲಾ ! ನೀನು ಹಾಗೆ ತಿಳಿಸದೇ ಹೋದುದು ತಪ್ಪಲ್ಲವೇ ? ಎಂದು ಹಾಸ್ಯಗರ್ಭಿತವಾಗಿ ಮಾತಾಡಲು ; ರಾವಣನು ಈ ಮಾತುಗಳನ್ನು ಕೇಳಿ ನಾಚಿ ತಲೆವಾಗಿ—ಎಲೈ ಮಹಾಶೂರನೇ, ಲೋಕದಲ್ಲಿ ಪರಾಕ್ರಮದಲ್ಲೂ ವೇಗದಲ್ಲೂ ಶಕ್ತಿಯಲ್ಲೂ ನಿನಗೆ ಸಮಾನರಾದವರನ್ನು ಕಾಣೆನು. ನಾನು ನಿನ್ನಿಂದ ಪರಾಜಿತನಾದೆನು. ಇಂಥ ಶೂರಾಗ್ರೇಸರನಾದ ನಿನ್ನೊಡನೆ ಸ್ನೇಹವನ್ನು ಅಪೇಕ್ಷಿಸುವೆನು ಎಂದು ಕೇಳಿಕೊಳ್ಳಲು ; ವಾಲಿಯು ಅವನನ್ನು ತನ್ನ ಅರಮನೆಗೆ ಕರೆದುಕೊಂಡು ಹೋಗಿ ಅಗ್ನಿಸಾಕ್ಷಿಯಾಗಿ ಸ್ನೇಹವನ್ನು ಮಾಡಿಕೊಂಡು ಒಂದು ತಿಂಗಳ ವರೆಗೂ ತನ್ನ ಮನೆಯಲ್ಲೇ ಇಟ್ಟುಕೊಂಡಿದ್ದು ಬಹುಮಾನಗಳನ್ನು ಮಾಡಿ ಲಂಕಾಪಟ್ಟಣಕ್ಕೆ ಕಳುಹಿಸಿಕೊಡಲು ; ರಾವಣನು ಲಂಕೆಗೆ ಬಂದು ಸುಖದಿಂದಿದ್ದನು.

---

## 2. RAMA'S BIRTH, MARRIAGE, AND BANISHMENT TO THE FOREST.

### ೨. ಶ್ರೀರಾಮನ ಜನನ ವಿವಾಹ ವನವಾಸ ಇವುಗಳ ಕಥೆ.

ಬ್ರಹ್ಮನಿಂದ ವರವನ್ನು ಹೊಂದಿ ಮಹಾಗರ್ವಿತನಾಗಿ ಅಪಮಾನಗಳಿಗೆ ಹೇಸದೆ ಇಂದ್ರಾದಿ ಲೋಕಪಾಲಕರನ್ನೂ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಲೋಕತ್ರಯವನ್ನೂ ಜಯಿಸಿ ಪರಭೀಕರನಾಗಿ ರಾಕ್ಷಸಚಕ್ರವರ್ತಿತ್ವವನ್ನು ಹೊಂದಿ ಲಂಕಾನಗರದಲ್ಲಿ ವಾಸಮಾಡಿಕೊಂಡಿದ್ದ ರಾವಣನು ಋಷಿಗಳು ಮಾಡುವ ತಪೋಯಜ್ಞಗಳನ್ನು ಕೆಡಿಸುತ್ತ ಸುಜನರನ್ನು ಬಾಧಿಸಿ ಬಡಿದಿಡುತ್ತ ಲೋಕಕಂಟಕನಾಗಿರಲು ; ಇಂದ್ರಾದಿ ಸಕಲ ದೇವತೆಗಳೂ ಅವನ ಬಾಧೆಯನ್ನು ತಡೆಯಲಾರದೆ ಸತ್ಯಲೋಕಕ್ಕೆ ಹೋಗಿ ಚತುರ್ಮುಖಬ್ರಹ್ಮನೊಡನೆ ಲೋಕಗಳಿಗೂ ತಮಗೂ ರಾವಣನಿಂದುಂಟಾಗುತ್ತಿರುವ ಮಹಾಹಿಂಸೆಯನ್ನು ಹೇಳಿಕೊಂಡು ಪ್ರಲಾಪಿಸಲು ; ಆಗ ಬ್ರಹ್ಮನು ದಯೆಯಿಂದ ಕೂಡಿದವನಾಗಿ ಆ ದೇವತೆಗಳನ್ನು ಕರೆದುಕೊಂಡು ಹೊರಟು ಇಂಗಡಲೆಡೆಗೈತಂದು ವಿಷ್ಣುವಿನೊಡನೆ ಕ್ರೂರನಾದ ರಾವಣನ ಉಪದ್ರವವನ್ನೂ ದೌಷ್ಟ್ಯವನ್ನೂ ಹೇಳಿಕೊಳ್ಳಲು ; ಆಗ ವಿಷ್ಣುವು—ಎಲೈ ಕಮಲಸಂಭವನೇ, ನಾನು ಇನ್ನು ಕೆಲದಿನಗಳಿಗೆ ಭೂಲೋಕದಲ್ಲಿ ಅವತರಿಸಿ ಜನಹಿಂಸಕರಾದ ರಾವಣಾದಿ ರಾಕ್ಷಸರನ್ನು ಸಂಹರಿಸುವೆನು. ಆ ವರೆಗೂ ನೀವೆಲ್ಲರೂ ಬಾಧೆಯನ್ನು ಸಹಿಸಿಕೊಂಡಿರಬೇಕೆಂದು ಅಭಯವಚನವನ್ನು ಹೇಳಲು ; ಆಗ ಅವರೆಲ್ಲರೂ ಸಂತುಷ್ಟರಾಗಿ ತಮ್ಮ ತಮ್ಮ ವಾಸಸ್ಥಾನಗಳಿಗೆ ಬಂದು ರಾವಣವಿನಾಶಕಾಲವನ್ನೇ ಸಂಕಲ್ಪಿಸುತ್ತಿದ್ದರು.

ಇತ್ತ ಭೂಲೋಕದಲ್ಲಿ ಅಯೋಧ್ಯಾನಗರಾಧಿಪತಿಯಾದ ದಶರಥರಾಜನು ಬಹಳ ದಿವಸಗಳ ವರೆಗೂ ತನಗೆ ಪುತ್ರಸಂತಾನವಿಲ್ಲದೆ ಹೋದುದರಿಂದ ಬಹಳ ವ್ಯಸನಾಕ್ರಾಂತನಾಗಿದ್ದು ಕಡೆಗೆ ಋಷಿಗಳ ಉಪದೇಶದಿಂದ ಪುತ್ರಕಾಮೇಷ್ಟಿಯಾಗವನ್ನು ಮಾಡಿ ಅದರ ಪರಿಶುದ್ಧವಾದ ಪ್ರಸಾದವನ್ನು ತನ್ನ ಮೂರು ಜನ ಪತ್ನಿಯರಿಗೂ ಕೊಡಲು; ಆಗ ಮೊದಲೇ ದುಷ್ಟಶಿಕ್ಷಾರ್ಥವಾಗಿ ಭೂಲೋಕದಲ್ಲಿ ಅವತರಿಸಬೇಕೆಂದಿದ್ದ ವಿಷ್ಣುವು ದಶರಥನ ಮೊದಲನೆಯ ಹೆಂಡತಿಯಾದ ಕೌಸಲ್ಯೆಯ ಗರ್ಭದಲ್ಲಿ ಅರ್ಧಾಂಶದಿಂದ ರಾಮನೆಂದೂ ಎರಡನೆಯ ಹೆಂಡತಿಯಾದ ಸುಮಿತ್ರೆಯ ಗರ್ಭದಲ್ಲಿ ಪಾದಾಂಶದಿಂದ ಅವಳಿಮಕ್ಕಳಾಗಿ ಲಕ್ಷ್ಮಣ ಶತ್ರುಘ್ನರೆಂದೂ ಕಿರಿಯ ಹೆಂಡತಿಯಾದ ಕೈಕೇಯಿಯ ಗರ್ಭದಲ್ಲಿ ಪಾದಾಂಶದಿಂದ ಭರತನೆಂದೂ ಅವತರಿಸಲು ; ಆಗ ದಿಕ್ಕುಗಳೆಲ್ಲವೂ ಶೋಭಿಸಿದುವು. ಕೆರೆ ತೊರೆ ಮೊದಲಾದುವುಗಳ ಜಲಗಳು ತಿಳಿಯಾದುವು. ಮಂದಮಾರುತವು ತೀಡಿತು. ಇತ್ಯಾದಿಶುಭಶಕುನಗಳು ಭೂಲೋಕದಲ್ಲಿ ಉಂಟಾದುವು. ಅನಂತರದಲ್ಲಿ ದಶರಥಮಹಾರಾಜನು ಪುತ್ರಸಂಪತ್ತನ್ನು ಹೊಂದಿ ಅಮಂದಾನಂದಸಂದೋಹಭರಿತನಾಗಿ ಮಕ್ಕಳಿಗೆ ಜಾತಕರ್ಮಾದಿಗಳನ್ನು ಮಾಡಿಸಿ ಕ್ರಮೇಣ ವೃದ್ಧಿ ಹೊಂದುತ್ತಿರುವ ಮಕ್ಕಳಿಗೆ ಚೌಲೋಪನಯನಗಳನ್ನು ಮಾಡಿಸಿ ವಿವಿಧವಿದ್ಯಾಭ್ಯಾಸಗಳನ್ನು ಮಾಡಿಸುತ್ತಿದ್ದನು. ಆ ಮೇಲೆ ಕೆಲದಿನಗಳೊಳಗೆ ನಾಲ್ಕು ಜನ ಕುಮಾರರೂ ಎಲ್ಲಾ ವಿದ್ಯೆಗಳಲ್ಲಿಯೂ ಪೂರ್ಣಪಾಂಡಿತ್ಯವನ್ನು ಹೊಂದಿ ಶೋಭಿಸುತ್ತಿರಲು ; ವಿಶ್ವಾಮಿತ್ರ ಮಹಾಮುನಿಯು ಯಜ್ಞವನ್ನು ಮಾಡುವುದಕ್ಕೆ ಮನಸ್ಸುಳ್ಳವನಾಗಿದ್ದರೂ ವಿಘ್ನಕಾರಿಗಳಾದ ರಾಕ್ಷಸರ ಭಯಶಂಕಿತನಾಗಿ ದಶರಥನ ಬಳಿಗೆ ಬಂದು ಸತ್ಕೃತನಾಗಿ ತಾನು ಮಾಡುವ ಯಜ್ಞವನ್ನೂ ಅದಕ್ಕಿರುವ ರಾಕ್ಷಸರ ವಿಘ್ನವನ್ನೂ ನಿಶಾಚರಭಯನಿವಾರಣಾರ್ಥವಾಗಿ ಶ್ರೀರಾಮನನ್ನು ಕಳುಹಿಸಿಕೊಡಬೇಕೆಂದು ಹೇಳಿದನು. ಆಗ ದಶರಥನು ಪುತ್ರನನ್ನು ಅಗಲಿರಲಾರದುದರಿಂದಲೂ ಇನ್ನೂ ಬಾಲಕನಾದುದರಿಂದ ಕ್ರೂರರಾದ ರಾಕ್ಷಸರೊಡನೆ ಯುದ್ಧಮಾಡಲಾರನೆಂಬ ಯೋಚನೆಯಿಂದಲೂ ಕಳುಹಿಸುವುದಕ್ಕೆ ಭಯಪಟ್ಟು ಒಪ್ಪದಿರಲು ; ಆಗ ತನ್ನ ಮಂತ್ರಿಯೇ ಮೊದಲಾದವರಿಂದ ಹೇಳಲ್ಪಟ್ಟವನಾಗಿ ರಾಮನನ್ನೂ ಲಕ್ಷ್ಮಣನನ್ನೂ ವಿಶ್ವಾಮಿತ್ರರ್ಷಿಯ ಸಂಗಡ ಕಳುಹಿಸಿಕೊಟ್ಟನು.

ಈಗ ಪರಮಸಂತೋಷಭರಿತನಾದ ವಿಶ್ವಾಮಿತ್ರಮುನಿಯು ರಾಮನನ್ನೂ ಲಕ್ಷ್ಮಣನನ್ನೂ ಜತೆಯಲ್ಲಿ ಕರೆದುಕೊಂಡು ಬರುತ್ತ ಮಾರ್ಗದಲ್ಲಿ ವಿವಿಧ ದೇಶಗಳನ್ನೂ ವನಗಳನ್ನೂ ತೋರಿಸಿ ಅವುಗಳ ಚರಿತ್ರೆಗಳನ್ನು ಹೇಳುತ್ತ ಮಾರ್ಗಾಯಾಸವಿಲ್ಲದಂತೆ ಬರುತ್ತಿದ್ದನು. ಮತ್ತು ಶ್ರೀ ರಾಮನು ಮಾರ್ಗದಲ್ಲಿ ಬರುವ ರಾಕ್ಷಸರನ್ನು ಕೊಲ್ಲುತ್ತ ಕಡೆಗೆ ಮುನಿಯ ಅಪ್ಪಣೆಯಿಂದ ತಾಟಕೆ ಎಂಬ ನಿಶಾಚರಿಯನ್ನು ಕೊಂದು ಲೋಕೋಪಕಾರವನ್ನು ಮಾಡಿದನು. ಅನಂತರದಲ್ಲಿ ವಿಶ್ವಾಮಿತ್ರಮುನಿಯು ಕ್ಷತ್ರಿಯಬಾಲಕರೊಡನೆ ತನ್ನ ಆಶ್ರಮಕ್ಕೆ ಬಂದು ಅವರನ್ನು ಉಪಚರಿಸಿ ಕೂಡಲೆ ಯಜ್ಞಾರಂಭವನ್ನು ಮಾಡಲು ; ಅದನ್ನು ಕೆಡಿಸುವುದಕ್ಕಾಗಿ ರಾಕ್ಷಸರು ಬರಲು

ರಾಮಲಕ್ಷ್ಮಣರು ಮುನಿಯ ಅಪ್ಪಣೆಯನ್ನು ಹೊಂದಿ ಬಾಣಪ್ರಯೋಗದಿಂದ ಕೆಲರನ್ನು ಕೊಂದು ಕೆಲರನ್ನು ಹೆದರಿಸಿ ಕೆಲರನ್ನು ಓಡಿಸಿದರು. ಆಗ ವಿಶ್ವಾಮಿತ್ರನ ಯಜ್ಞಕರ್ಮಗಳೆಲ್ಲವೂ ಸಂಪೂರ್ಣವಾಗಿ ನೆರವೇರಿದುವು. ಇದರಿಂದ ಸಂತುಷ್ಟನಾದ ಮುನಿಪತಿಯು ರಾಮಲಕ್ಷ್ಮಣರಿಗೆ ಮಂತ್ರಾಸ್ತ್ರಗಳನ್ನು ಉಪದೇಶಿಸಿದನು. ಆ ಮೇಲೆ ಹೀಗೇ ಕೆಲದಿನಗಳ ವರೆಗೂ ರಾಮಲಕ್ಷ್ಮಣರನ್ನು ಸತ್ಕರಿಸುತ್ತ ತನ್ನ ಆಶ್ರಮದಲ್ಲಿರಿಸಿಕೊಂಡು ಇವರಿಗೆ ಲಗ್ನಮಾಡಬೇಕೆಂದು ನೆನಸಿದವನಾಗಿ ಯೋಗ್ಯರಾದ ಕನ್ಯಕೆಯರೆಲ್ಲಿರುವರೆಂದು ಯೋಚಿಸುತ್ತಿದ್ದನು.

ಇತ್ತ ಮಿಥಿಲಾನಗರಾಧಿಪತಿಯಾದ ಜನಕರಾಜನು ತಾನು ಮಾಡುವ ಯಜ್ಞಕ್ಕೋಸ್ಕರ ಭೂಮಿಯನ್ನು ಉಳಿಸುತ್ತಿರಲು ; ಆಗ ಲಾಂಗಲಪದ್ಧತಿಯಲ್ಲಿ ಸಿಕ್ಕಿದುದರಿಂದ ಅನ್ವರ್ಥವಾಗಿ ಸೀತೆ ಎಂಬ ನಾಮಧೇಯವನ್ನು ಹೊಂದಿದ್ದ ಕನ್ಯಾರತ್ನಕ್ಕೆ ಸ್ವಯಂವರವನ್ನು ನಿಶ್ಚಯಿಸಿ ಆ ಸ್ವಯಂವರಮಂಟಪದಲ್ಲಿ ಈಶ್ವರನಿಂದ ಕೊಡಲ್ಪಟ್ಟಿದ್ದ ಬಿಲ್ಲನ್ನಿಟ್ಟು ಈ ಧನುಸ್ಸಿಗೆ ಹೆದೆಯನ್ನು ಏರಿಸಿದಂಥ ಶೂರಾಗ್ರೇಸರನಿಗೆ ಸೀತಾದೇವಿಯನ್ನು ಕೊಡುವುದಾಗಿ ಪಣಬಂಧವನ್ನು ಮಾಡಿ ಈ ವಿಷಯವನ್ನು ಎಲ್ಲಾ ದೇಶಗಳಲ್ಲಿಯೂ ಪ್ರಸಿದ್ಧಪಡಿಸಿದನು. ಆಗ ವಿಶ್ವಾಮಿತ್ರಯೋಗಿಯೂ ಸಂತುಷ್ಟಾಂತರಂಗನಾಗಿ ರಾಮಲಕ್ಷ್ಮಣರನ್ನು ಕರೆದುಕೊಂಡು ಮಿಥಿಲಾನಗರಕ್ಕೆ ಬಂದು ಜನಕನಿಂದ ಸತ್ಕೃತನಾಗಿ ವಿಸ್ತಾರವಾಗಿಯೂ ಶೋಭಾಯಮಾನವಾಗಿಯೂ ಅನೇಕದೇಶಗಳ ರಾಜಕುಮಾರರಿಂದ ಕೂಡಿದುದಾಗಿಯೂ ಇರುವ ಸ್ವಯಂವರಮಂಟಪಕ್ಕೆ ಬಂದನು. ಅನಂತರದಲ್ಲಿ ನಿಯಮಿತಕಾಲದಲ್ಲಿ ರಾಜಕುಮಾರರೆಲ್ಲರೂ ಕ್ರಮವಾಗಿ ಬಂದು ಕೋದಂಡವನ್ನೆತ್ತಿ ಅದಕ್ಕೆ ಶಿಂಜಿನಿಯನ್ನು ಸೇರಿಸಲಾರದೆ ಹೋಗಲು ; ಶ್ರೀ ರಾಮನು ಮುನ್ಯನುಜ್ಞೆಯನ್ನು ಹೊಂದಿ ಧನುಸ್ಸನ್ನು ಎತ್ತಿ ಮೌರ್ವಿಯನ್ನು ಕಟ್ಟಿದುದಲ್ಲದೆ ಅದನ್ನು ಮುರಿದುಬಿಟ್ಟನು. ಆಗ ಅವನ ಶೌರ್ಯಾತಿಶಯವನ್ನು ಸರ್ವರೂ ಹೊಗಳಿದರು. ಕೂಡಲೆ ಕೋಮಲಾಂಗಿಯಾದ ಸೀತೆಯು ಪುಷ್ಪಮಾಲಿಕೆಯನ್ನು ತಂದು ಶ್ರೀ ರಾಮನ ಕಂಠದಲ್ಲಿ ಹಾಕಿದಳು. ಆಗ ದೇವತೆಗಳು ಪೂಮಳೆಗರೆದರು. ಸುರದುಂದುಭಿಗಳು ಮೊಳಗಿದುವು. ಅನಂತರದಲ್ಲಿ ಜನಕನು ಅಯೋಧ್ಯೆಯಿಂದ ದಶರಥಾದಿಗಳನ್ನು ಕರಿಸಿಕೊಂಡು ಅತ್ಯಂತ ವೈಭವದೊಡನೆ ಸೀತೆಯನ್ನು ರಾಮನಿಗೂ ಜನಕನ ಪುತ್ರಿಯಾದ ಊರ್ಮಿಳೆಯನ್ನು ಲಕ್ಷ್ಮಣನಿಗೂ ಜನಕನ ತಮ್ಮನಾದ ಕುಶಧ್ವಜನಕುಮಾರಿಯರಾದ ಮಾಂಡವಿ ಶ್ರುತಕೀರ್ತಿ ಎಂಬವರನ್ನು ಭರತ ಶತ್ರುಘ್ನರಿಗೂ ಕೊಟ್ಟು ಶಾಸ್ತ್ರೋಕ್ತವಿಧಾನದಿಂದ ಮದುವೆಮಾಡಿದನು. ಸರ್ವರೂ ಸನ್ಮಾನಿತರಾಗಿ ತಮ್ಮ ತಮ್ಮ ಪತ್ನಿಯರೊಡನೆ ಪರಿವಾರಸಮೇತರಾಗಿ ಹೊರಟು ಅಯೋಧ್ಯಾನಗರವನ್ನು ಸೇರಿ ಸಕಲ ಸುಖವನ್ನೂ ಅನುಭವಿಸುತ್ತ ಇರುವಾಗ ಭರತನ ಸೋದರಮಾವನಾದ ಯುಧಾಜಿತ್ತೆಂಬ ಕೇಕಯ ದೇಶದ ಯುವರಾಜನು ಅಯೋಧ್ಯೆಗೆ ಬಂದು ದಶರಥರಾಜನ ಒಪ್ಪಿಗೆಯಿಂದ ತನ್ನ ಸೋದರಳಿಯನಾದ ಭರತನನ್ನು ಕರೆದುಕೊಂಡು ಕೇಕಯಪಟ್ಟಣಕ್ಕೆ ಹೋದನು. ಆಗ ಸುಮಿತ್ರೆಯ ಕುಮಾರನಾದ ಶತ್ರುಘ್ನನೂ ಭರತನೊಡನೆಯೇ ಹೋದನು.

ಇತ್ತ ಅಯೋಧ್ಯಾನಗರದಲ್ಲಿ ರಾಮಲಕ್ಷ್ಮಣರು ತಾಯಿತಂದೆಗಳ ಸೇವೆಯನ್ನು ಮಾಡುತ್ತ ದೇಶದ ಜನಗಳಿಗೂ ಪಟ್ಟಣದ ಜನಗಳಿಗೂ ಮಂತ್ರಿಸೇನಾಪತಿಗಳೇ ಮೊದಲಾದ ಪರಿವಾರದ ಜನಗಳಿಗೂ ತಮ್ಮ ಸದ್ಗುಣಗಳಿಂದ ಹಿತವನ್ನುಂಟುಮಾಡುವವರಾಗಿ ಮೆರೆಯುತ್ತಿದ್ದರು. ಹೀಗಿರಲು ದಶರಥರಾಜನು ತನ್ನ ಜ್ಯೇಷ್ಠಕುಮಾರನಾದ ರಾಮನ ದಯಾಧರ್ಮಾದಿ ಮಹಾ ಗುಣಗಳಿಗಾಗಿ ಬಹು ಸಂತೋಷಪಟ್ಟು ನನ್ನ ಸಿಂಹಾಸನವನ್ನೇರುವುದಕ್ಕೂ ಈ ಕೋಸಲರಾಜ್ಯವನ್ನು ನೀತಿಯಿಂದ ಪರಿಪಾಲಿಸುವುದಕ್ಕೂ ಪೂರ್ಣಚಂದ್ರನು ಸಮುದ್ರವನ್ನು ಹೆಚ್ಚಿಸುವಂತೆ ರಘುವಂಶವನ್ನು ವೃದ್ಧಿಪಡಿಸುವುದಕ್ಕೂ ಈತನೇ ಅರ್ಹನೆಂದು ನಿಶ್ಚಯಿಸಿ ಒಂದು ದಿನ ಮಂತ್ರಿ ಸೇನಾಪತಿ ಪುರಜನ ವಯೋವೃದ್ಧರು ಜ್ಞಾನವೃದ್ಧರು ಪುರೋಹಿತವಶಿಷ್ಠ ಇವರೇ ಮೊದಲಾದವರನ್ನೆಲ್ಲಾ ಕರಿಸಿಕೊಂಡು ಯಥೋಚಿತವಾಗಿ ಸಭಾಮಂದಿರದಲ್ಲಿ ಕುಳ್ಳಿರಿಸಿ ಆದರಿಸಿ ಅವರೆಲ್ಲರನ್ನೂ ಕುರಿತು–ಅಯ್ಯಾ ಪರಿಷಜ್ಜನರೇ, ಈ ವರೆಗೂ ನಿಮ್ಮೆಲ್ಲರ ಪ್ರೀತಿಗೂ ಪಾತ್ರನಾಗಿ ರಾಜ್ಯಭಾರವನ್ನು ವಹಿಸಿಕೊಂಡಿದ್ದ ನಾನು ಈಗ ಮುದುಕನಾದೆನು. ಇನ್ನು ಮೇಲೆ ನಾನು ದೇವೇಂದ್ರನ ಓಲಗದ ಚಾವಡಿಯನ್ನು ಏರತಕ್ಕವನು. ಅದುಕಾರಣ ನನ್ನ ನಾಲ್ಕು ಮಂದಿ ಮಕ್ಕಳಲ್ಲಿ ಶೂರನಾಗಿಯೂ ಸುಗುಣಗಳುಳ್ಳವನಾಗಿಯೂ ಇರುವ ಹಿರಿಯವನಾದ ರಾಮನೇ ನನ್ನ ಈ ಸಾಮ್ರಾಜ್ಯಕ್ಕೆ ಒಡೆಯನಾಗತಕ್ಕವನು. ಈ ಭಾಗದಲ್ಲಿ ಗುಣದೋಷವಿಚಾರಶೀಲರಾದ ನೀವೆಲ್ಲರೂ ಒಪ್ಪಿದರೆ ಶುಭಲಗ್ನದಲ್ಲಿ ಈ ರಾಮನಿಗೆ ಪಟ್ಟಾಭಿಷೇಕವನ್ನು ಮಾಡುವುದು ಉತ್ತಮವು ಎಂದು ಹೇಳಿದನು. ಆಗ ಈ ಮಾತುಗಳನ್ನು ಕೇಳಿದ ಅವರೆಲ್ಲರೂ ಬಹಳವಾಗಿ ಸಂತೋಷಪಟ್ಟು ದಶರಥರಾಜನನ್ನು ಕುರಿತು—ಎಲೈ ಮಹಾರಾಜನೇ, ನೀನು ಹೇಳಿದ ಮಾತು ಬಹು ಶ್ರೇಷ್ಠವಾದುದು. ಈ ರಾಮಚಂದ್ರನ ಬೆಳ್ಗೊಡೆಯ ನೆಳಲು ಈ ದೇಶದ ಪ್ರಜೆಗಳಾದ ನಮ್ಮೆಲ್ಲರಿಗೂ ಶೀತಲವಾದ ಕಲ್ಪವೃಕ್ಷದ ನೆರಳಾಗಿ ಪರಿಣಮಿಸಲಿ. ಮನು ದಿಲೀಪ ಮಾಂಧಾತ ಪುರೂರವಸ್ಸು ಕಾರ್ತವೀರ್ಯಾರ್ಜುನ ಸಗರ ಭಗೀರಥ ನಳ ನಹುಷ ಇವರೇ ಮೊದಲಾದ ಚಕ್ರವರ್ತಿಗಳ ನೆನಹನ್ನು ಈ ರಾಮಚಂದ್ರನು ತನ್ನ ಧರ್ಮಪ್ರವರ್ತಕವಾದ ನಡತೆಗಳಿಂದ ಮರೆಯಿಸುವನು. ಈ ಭೂವನಿತೆಯು ಈ ರಾಮನನ್ನು ನಿಜಪತಿಯನ್ನಾಗಿ ವರಿಸುವಳು. ಭಗವತ್ಕೃಪೆಯಿಂದ ಈತನು ಅರಸಾದರೆ ನಾವೆಲ್ಲರೂ ನಿಶ್ಚಿಂತರಾಗಿ ಸುಖದಿಂದಿರುವೆವೆಂದು ಹೇಳಿದರು. ಆ ಮಾತನ್ನು ಕೇಳಿ ದಶರಥಮಹಾರಾಜನು ಕೂಡಲೆ ಜೋಯಿಸರನ್ನು ಕರಿಸಿ ವೈಶಾಖ ಶುದ್ಧ ಪಂಚಮಿಯ ದಿವಸದಲ್ಲಿ ಪ್ರಶಸ್ತವಾದ ಅಭಿಜಿನ್ಮುಹೂರ್ತದಲ್ಲಿ ರಾಮನಿಗೆ ಪಟ್ಟಾಭಿಷೇಕೋಚಿತವಾದ ಲಗ್ನವನ್ನು ನಿರ್ಣಯಿಸಿ ಆ ಪಟ್ಟಣವನ್ನೆಲ್ಲಾ ಶೃಂಗರಿಸುವಂತೆಯೂ ದೇವಸ್ಥಾನಗಳಲ್ಲಿ ಉತ್ಸವಾರಾಧನೆಗಳು ನಡೆಯುವಂತೆಯೂ ವಶಿಷ್ಠಮಹರ್ಷಿಗಳು ಹೇಳಿದಂತೆ ಪಟ್ಟಾಭಿಷೇಕದ ಸಾಮಾನುಗಳನ್ನು ಸಿದ್ಧಪಡಿಸುವಂತೆಯೂ ಮಂತ್ರಿಗಳಿಗೆ ಅಪ್ಪಣೆಯನ್ನಿತ್ತು ಆ ಮೇಲೆ ರಾಮನನ್ನು ಕರೆಯಕಳುಹಿಸಿ—ನಾಳಿನ ಮಧ್ಯಾಹ್ನದಲ್ಲಿ ಸಂಪ್ರಾಪ್ತವಾಗುವ ಸುಲಗ್ನದಲ್ಲಿ ಈ ಕೋಸಲರಾಜ್ಯಾಧಿಪತ್ಯಾರ್ಥ

ವಾಗಿ ನಿನಗೆ ಪಟ್ಟಾಭಿಷೇಕವನ್ನು ಮಾಡುವೆನೆಂದು ಹೇಳಿ ಮನೆಗೆ ಹೋಗುವುದಕ್ಕೆ ಅಪ್ಪಣೆಯನ್ನೀಯಲು; ರಾಮನು ತಂದೆಗೆ ನಮಸ್ಕಾರವನ್ನು ಮಾಡಿ ಅಲ್ಲಿಂದ ಹೊರಟು ತನ್ನ ತಾಯಿಯಾದ ಕೌಸಲ್ಯಾದೇವಿಯ ಮನೆಗೆ ಬಂದು ಆಕೆಗೆ ಅಭಿವಂದಿಸಿ ತಂದೆಯು ಹೇಳಿದ ಮಾತುಗಳನ್ನು ಹೇಳಿ ಲಕ್ಷ್ಮಣಾದಿಗಳಿಗೂ ತಿಳಿಸಿ ತನ್ನರಮನೆಗೈ ತಂದನು. ಆ ಮೇಲೆ ದಶರಥನು ಪುರೋಹಿತರಾದ ವಶಿಷ್ಠರನ್ನು ಕರಿಸಿ—ಸ್ವಾಮಿಾ ಪುರೋಹಿತರೇ, ನೀವು ಹೋಗಿ ನಾಳೆ ನಡೆಯುವ ಪಟ್ಟಾಭಿಷೇಕಮಹೋತ್ಸವಾಂಗ ಭೂತವಾಗಿ ವಿಧ್ಯುಕ್ತದಂತೆ ರಾಮನಿಗೂ ಸೀತೆಗೂ ಕಂಕಣಧಾರಣೆಯನ್ನು ಮಾಡಿ ಈ ರಾತ್ರಿ ಉಪವಾಸವ್ರತವನ್ನು ನಡಿಸುವಂತೆ ನೇಮಿಸಿ ಬರಬೇಕೆಂದು ಹೇಳಲು; ವಶಿಷ್ಠರು ಹೋಗಿ ಅದೇ ರೀತಿಯಾಗಿ ಮಾಡಿಸಿದರು. ಮಂತ್ರಿಗಳು ರಾಜಾಜ್ಞೆಯಂತೆ ಆ ದಿವಸವೇ ನಗರಾಲಂಕಾರಾದಿ ಸರ್ವಸಂವಿಧಾನಗಳನ್ನೂ ಮಾಡಿ ಅಭಿಷೇಕಕಾರ್ಯಕ್ಕೆ ಬೇಕಾದ ಸೋಪಸ್ಕರಗಳನ್ನು ಸಿದ್ಧಮಾಡಿದರು.

ಆಗ ಕುಬ್ಜೆಯೂ ದುರ್ವೃತ್ತೆಯೂ ಆಗಿ ಕೈಕೇಯಿಯ ಸೈರೇಂಧ್ರಿಯಾದ ಮಂಥರೆ ಎಂಬವಳು ರಾಮಪಟ್ಟಾಭಿಷೇಕದ ವರ್ತಮಾನವನ್ನೂ ಪ್ರಯತ್ನವನ್ನೂ ತಿಳಿದು ಅಸೂಯೆಯಿಂದ ಕೂಡಿದವಳಾಗಿ ತನ್ನ ಒಡತಿಯಾದ ಕೈಕೇಯಿಯ ಬಳಿಗೆ ಹೋಗಿ ರಾಮಪಟ್ಟಾಭಿಷೇಕಕ್ಕೆ ವಿಘ್ನಕಾರಿಗಳಾದ ಅನೇಕ ದುರ್ಬೋಧನೆಗಳನ್ನು ಬೋಧಿಸಿ ಆಕೆಯ ಮನಸ್ಸನ್ನು ಕೆಡಿಸಿ—ನಿನ್ನ ಗಂಡನಾದ ದಶರಥರಾಜನು ಮೊದಲು ದೇವಾಸುರಯುದ್ಧಕಾಲದಲ್ಲಿ ನಿನಗೆ ಎರಡು ವರಗಳನ್ನು ಕೊಟ್ಟಿರುವನಷ್ಟೆ. ನೀನು ಅವುಗಳನ್ನು ಸಮಯ ಬಂದಾಗ ಕೇಳುವೆನೆಂದು ಆಗಲೇ ಹೇಳಿದ್ದೀಯೆ. ನಾನು ಈ ವರ್ತಮಾನವನ್ನು ನಿನ್ನಿಂದಲೇ ಕೇಳಿದ್ದೇನೆ. ಈಗ ಆ ಎರಡು ವರಗಳಲ್ಲಿ ಒಂದಕ್ಕೆ ಫಲರೂಪವಾಗಿ ರಾಮನು ಜಟಾಧಾರಿಯಾಗಿ ನಾರ್ಮಡಿಯನ್ನುಟ್ಟು ಪಟ್ಟಣವನ್ನು ಬಿಟ್ಟು ಹದಿನಾಲ್ಕು ಸಂವತ್ಸರಗಳ ವರೆಗೂ ವನವಾಸಮಾಡುವುದನ್ನೂ ಮತ್ತೊಂದು ವರಕ್ಕೆ ಭರತನಿಗೆ ಈ ಕೋಸಲರಾಜ್ಯಾಭಿಷೇಕ ಮಾಡುವುದನ್ನೂ ಕೇಳಿಕೊಳ್ಳುವವಳಾಗು. ಸತ್ಯವಚನವುಳ್ಳವನಾದ ಅರಸು ತಪ್ಪದೆ ಈ ರೀತಿಯಾಗಿಯೇ ನಡಿಸುವನು. ಹೀಗಾಗುವುದರಿಂದ ನಿನ್ನ ಮಗನಾದ ಭರತನು ಆರೂಢಮೂಲನಾಗಿ ಈ ಕೋಸಲ ರಾಜ್ಯವನ್ನು ಆಳುವನು. ನೀನೂ ನಿನ್ನನ್ನು ನಂಬಿದ ನಾವೂ ಸುಖವಾಗಿರಬಹುದು ಎಂದು ಹೇಳಲು; ಆಕೆಯು ಆ ಮಾತಿಗೆ ಒಡಂಬಟ್ಟು ತನ್ನ ತಲೆಯ ಕೂದಲುಗಳನ್ನು ಕೆದರಿಕೊಂಡು ಆಭರಣಗಳನ್ನೂ ಅಮೂಲ್ಯಾಂಬರಗಳನ್ನೂ ತೆಗೆದು ಬಿಸುಟು ಬಿಳಿಯ ಸೀರೆಯನ್ನುಟ್ಟು ಬಿಚ್ಚೋಲೆಗಳನ್ನಿಟ್ಟುಕೊಂಡು ಭೋಜನೋಪಚಾರಗಳನ್ನು ತ್ಯಜಿಸಿ ದುಸ್ಸಂಕಲ್ಪಮಯವಾದ ಚಿತ್ತವುಳ್ಳವಳಾಗಿ ನೆಲದ ಮೇಲೆ ಬಿದ್ದುಕೊಂಡಿದ್ದಳು. ಆಗ ದಶರಥರಾಜನು ರಾಮನಿಗೆ ಪಟ್ಟಾಭಿಷೇಕೋತ್ಸವವಾಗುವ ಸಂತೋಷ ವಾರ್ತೆಯನ್ನು ತನ್ನ ಪ್ರಿಯಪತ್ನಿಯಾದ ಕೈಕೇಯಿಗೆ ತಿಳಿಸಬೇಕೆಂದು ಹರ್ಷದಿಂದ ಆಕೆಯ ಮನೆಗೆ ಬಂದು ಅವಳ ದುಸ್ಸ್ಥಿತಿಯನ್ನು ನೋಡಿ ಪರಿತಪಿತನಾಗಿ ಆಕೆಯನ್ನು ಕುರಿತು—ಇದೇನು ಆಶ್ಚರ್ಯ? ಹೀಗಿರುವುದಕ್ಕೆ ಕಾರಣವನ್ನು ತಿಳಿಸು ಎಂದು

ಕೇಳಿದುದಕ್ಕೆ ನೀನು ಮೊದಲು ನನಗೆ ಕೊಟ್ಟ ಎರಡು ವರಗಳನ್ನು ಈಗ ನಡಿಸಿಕೊಡ ಬೇಕು. ಈ ಭಾಗದಲ್ಲಿ ತಪ್ಪುವುದಿಲ್ಲವೆಂದು ಪ್ರಮಾಣಮಾಡಿದರೆ ನನ್ನ ಇಷ್ಟಾರ್ಥ ವನ್ನು ಕೇಳಿಕೊಳ್ಳುವೆನು ಎನಲು; ದಶರಥನು ಹೆಂಡತಿಯ ಮೇಲಣ ಮೋಹದಿಂದ ಸತ್ಯವಾಗಿಯೂ ನಡಿಸಿಕೊಡುವೆನೆಂದು ರಾಮನ ಮೇಲೆ ಆಣೆಯಿಟ್ಟು ಹೇಳಿದನು.

ಆ ಮೇಲೆ ಕೈಕೇಯಿಾದೇವಿಯು ದಶರಥನನ್ನು ಕುರಿತು—ನೀನು ಮೊದಲು ಕೊಟ್ಟಿದ್ದ ಎರಡು ವರಗಳಲ್ಲಿ ಒಂದು ವರಕ್ಕೆ ರಾಮನು ಜಟಾಚೀರಧಾರಿಯಾಗಿ ಹದಿನಾಲ್ಕು ಸಂವತ್ಸರಗಳ ವರೆಗೂ ಕಾಡಿನಲ್ಲಿರುವ ಹಾಗೆ ಕಟ್ಟುಮಾಡಿ ಕಳುಹಿಸ ಬೇಕು. ಎರಡನೆಯ ವರಕ್ಕೆ ಭರತನಿಗೆ ಈ ರಾಜ್ಯದ ಪಟ್ಟಾಭಿಷೇಕವನ್ನು ಮಾಡಿಸ ಬೇಕು ಎಂದು ಹೇಳಲು ; ಆಗ ದಶರಥರಾಜನು ಪ್ರಚಂಡವಾದ ವಾಯುವಿನಿಂದ ನಡುಗುವ ವೃಕ್ಷದಂತೆ ಗಡಗಡನೆ ನಡುಗುತ್ತ ಕ್ರೂರವಾದ ಆಕೆಯ ಮಾತುಗಳು ಶ್ರುತಿಪಥವನ್ನೈದಿದ ಕೂಡಲೆ ಕೆಂಪಗೆ ಕಾದ ಉಕ್ಕಿನ ಶಲಾಕೆಯಿಂದ ಕಿವಿಯಲ್ಲಿ ಇರಿಯಲ್ಪಟ್ಟವನಂತೆ ನೆಲದಲ್ಲಿ ಬಿದ್ದು ಮೂರ್ಛೆಹೊಂದಿದನು. ಅನಂತರದಲ್ಲಿ ಬಲು ಹೊತ್ತಿನ ಮೇಲೆ ಸ್ವಲ್ಪ ಚೇತರಿಸಿಕೊಂಡು—ಇದೇನು ? ಕನಸೋ ? ಮನೋವಿಭ್ರ ಮಣೆಯೋ ? ಅಥವಾ ಎದೆಯ ಉಪದ್ರವವೋ ? ನನ್ನ ಶರೀರದಲ್ಲಿ ಇಂಥ ಭಯಂ ಕರವಾದ ತೀವ್ರವೇದನೆಯು ಏತಕುಂಟಾಯಿತು ? ಎಂದು ಆಲೋಚಿಸುತ್ತ ಸ್ವಲ್ಪ ವಿಶ್ರಾಂತಿಯನ್ನು ಹೊಂದಿದವನಾಗಿ ನೆಲದ ಮೇಲೆ ಬಿದ್ದುಕೊಂಡು ಬಹು ದೀರ್ಘ ವಾದ ನಿಟ್ಟುಸಿರುಗಳನ್ನು ಬಿಡುತ್ತ ಅಹಿತುಂಡಿಕನ ಮಂತ್ರದಿಂದ ತಡೆಯಲ್ಪಟ್ಟ ಮಹಾ ವಿಷವುಳ್ಳ ನಾಗರಹಾವಿನೋಪಾದಿಯಲ್ಲಿ ಭೋರ್ಗರೆಯುತ್ತ—ಹಾ ರಾಮ ! ರಾಮಚಂದ್ರನೇ ! ನನ್ನ ಮೋಹದ ಕಂದನೇ ! ಎಂದು ಹಂಬಲಿಸುತ್ತ ದುಃಖಾಗ್ನಿ ಯಿಂದ ಸುಟ್ಟು ಕರಿಮುರಿಯಾದ ಮೈಯುಳ್ಳವನಾಗಿ ಪುನಃ ಮೂರ್ಛೆಯನ್ನು ಹೊಂದಿ ಬಲುಹೊತ್ತಿಗೆ ಎಚ್ಚತ್ತು ಬಹು ದುಃಖಿತನಾಗಿ ಕೋಪದಿಂದ ಕೂಡಿ ಕೆಂಪಾದ ಕಣ್ಣಳಿಂದ ಸುಡುವವನೋಪಾದಿಯಲ್ಲಿ ಕೈಕೇಯಿಯನ್ನು ದುರದುರನೆ ನೋಡಿ—ಎಲೇ ಘಾತುಕಳೇ, ದುಸ್ಸ್ವಭಾವವುಳ್ಳವಳೇ, ಕುಲವಿನಾಶಿನಿಯೇ, ಪಾಪಿ ಷ್ಠಳೇ, ರಾಮನು ನಿನಗೇನು ಅಪರಾಧವನ್ನು ಮಾಡಿದನು ? ರಾಮನು ನಿನ್ನಲ್ಲಿ ನಿಜಮಾತೃವಿಗಿಂತಲೂ ಅಧಿಕವಾದ ಗೌರವವನ್ನಿಟ್ಟಿರುವನಲ್ಲಾ! ಅಂಥ ರಾಮನ ಅನರ್ಥಕ್ಕೋಸ್ಕರ ನೀನು ಈ ರೀತಿಯಾಗಿ ಉದ್ಯುಕ್ತಳಾಗಬಹುದೇ ? ಅತಿಕ್ರೂರವಾದ ವಿಷವುಳ್ಳ ಮಹೋರಗಿಯೆಂದರಿಯದೆ ರಾಜಕುಮಾರಿ ಎಂದು ನಾನು ನಿನ್ನನ್ನು ಮದುವೆಯಾಗಿ ನನ್ನ ಮನೆಗೆ ಕರೆದುತಂದು ನನಗೆ ಅಂತ್ಯಕಾಲವನ್ನು ತಂದುಕೊಂಡೆ ನಲ್ಲಾ! ಜೀವಲೋಕವೆಲ್ಲವೂ ಏಕಪ್ರಕಾರವಾಗಿ ರಾಮನ ಗುಣಸ್ತೋತ್ರವನ್ನು ಮಾಡುತ್ತಿರುವುದು. ಪ್ರಿಯ ಕುಮಾರನಾದ ರಾಮನಲ್ಲಿ ಯಾವ ತಪ್ಪನ್ನು ಕಂಡು ಕಾಡಿಗಟ್ಟುವೆನು ? ಕೌಸಲ್ಯೆಯನ್ನಾದರೂ ಸುಮಿತ್ರೆಯನ್ನಾದರೂ ಮತ್ತು ಐಶ್ವರ್ಯ ಲಕ್ಷ್ಮಿಯನ್ನಾದರೂ ಕಡೆಗೆ ಪ್ರಾಣಗಳನ್ನಾದರೂ ಬಿಡಬಲ್ಲೆನು. ಸುಗುಣಾರಾಮ ನಾಗಿ ಪಿತೃವತ್ಸಲನಾದ ರಾಮನನ್ನು ಬಿಡಲಾರೆನು. ಹಿರಿಯ ಮಗನಾದ ರಾಮನನ್ನು

ನೋಡುವುದರಿಂದ ನನ್ನ ಸಂತೋಷವು ಚಂದ್ರನನ್ನು ನೋಡಿದ ಸಮುದ್ರದಂತೆ ಹೆಚ್ಚುತ್ತಿರುವುದು. ರಾಮನನ್ನು ನೋಡದೆ ಒಂದು ನಿಮೇಷಮಾತ್ರವಿದ್ದರೆ ನನ್ನ ಚೇತನವು ಹಾರಿಹೋಗುವುದು. ಸೂರ್ಯನಿಲ್ಲದೆ ಲೋಕವೂ ನೀರಿಲ್ಲದೆ ಸಸ್ಯವೂ ನಿಂತರೂ ನಿಲ್ಲಬಹುದು. ರಾಮನಿಲ್ಲದಿದ್ದರೆ ನನ್ನ ಜೀವವು ನಿಲ್ಲಲಾರದು. ಎಲೇ ಪಾಪಕಾರಿಣಿಯೇ, ಸಾಕು; ಈ ಮೌರ್ಖ್ಯವನ್ನು ಬಿಡು. ನಿನ್ನ ಕಾಲೆಡೆಗೆ ನನ್ನ ತಲೆಯನ್ನು ಚಾಚುವೆನು. ನನಗೆ ಪ್ರಸನ್ನಳಾಗು, ಅಯ್ಯೋ! ಮಹಾದಾರುಣವಾದ ಇಂಥ ದುಷ್ಕಾರ್ಯವನ್ನು ಏಕೆ ಚಿಂತಿಸಿದೆ? ಕೇಕಯವಂಶದಲ್ಲಿ ಹುಟ್ಟಿ ಇಕ್ಷ್ವಾಕುಕುಲವನ್ನು ಹೊಕ್ಕಂಥ ನಿನಗೆ ಇಂಥ ದುರ್ಬುದ್ಧಿಯು ಹುಟ್ಟಬಹುದೇ? ನೀತಿಸಂಪನ್ನೆಯಾದ ನೀನು ನನಗೆ ಇಂಥ ಅಪ್ರಿಯವಾದ ಮಾತುಗಳನ್ನು ಒಂದು ದಿವಸವಾದರೂ ಹೇಳಿದವಳಲ್ಲವಲ್ಲಾ! ಈಗ ನಿನಗೆ ಪಿಶಾಚಿಯೇನಾದರೂ ಹಿಡಿದಿದೆಯೋ? ಅದರಿಂದ ನಿನಗೆ ಇಂಥ ಬುದ್ಧಿವಿಕೃತಿಯುಂಟಾಗಿರಬಹುದೇ? ನೀನು ನನ್ನೊಡನೆ ಏಕಾಂತದಲ್ಲಿರುವಾಗ್ಗೆ ಅನೇಕಾವೃತ್ತಿ ಲೋಕಾಭಿರಾಮನಾದ ರಾಮನು ನನಗೆ ಭರತನಗಿಂತಲೂ ಹೆಚ್ಚೆಂದು ಹೇಳುತ್ತಿದ್ದೆಯಲ್ಲಾ! ಇಂಥ ನೀನು ಧರ್ಮಿಷ್ಠನಾಗಿಯೂ ಕೀರ್ತಿವಂತನಾಗಿಯೂ ಇರುವ ರಾಮನಿಗೆ ಚತುರ್ದಶ ಸಂವತ್ಸರಗಳ ವರೆಗೂ ವನವಾಸವನ್ನು ಕೋರಿದೆಯಲ್ಲಾ! ಹೆತ್ತ ತಾಯಿಗಿಂತಲೂ ನೀನೇ ಹೆಚ್ಚೆಂದು ತಿಳಿದು ಯಾವಾಗಲೂ ನಿನ್ನ ಶುಶ್ರೂಷೆಯನ್ನು ಮಾಡುತ್ತಿರುವ ರಾಮನ ವಿಷಯದಲ್ಲಿ ಸ್ವಪ್ನದಲ್ಲಿಯಾದರೂ ಇಂಥ ಕ್ರೂರಕಾರ್ಯವನ್ನು ಎಣಿಸಬಹುದೇ? ನನಗೆ ಬಹು ಪತ್ನಿಯರಿರುವರು. ಅವರಲ್ಲಿ ಒಬ್ಬಳಾದರೂ ಒಂದು ದಿವಸವಾದರೂ ರಾಮನ ವಿಷಯದಲ್ಲಿ ಸ್ವಲ್ಪಾಪವಾದವನ್ನೂ ಹೇಳಲಿಲ್ಲ. ಸತ್ಯದಿಂದ ಲೋಕಗಳನ್ನೂ ದಾನದಿಂದ ದೀನರನ್ನೂ ಶುಶ್ರೂಷೆಯಿಂದ ವೃದ್ಧರನ್ನೂ ತೃಪ್ತಿಪಡಿಸುತ್ತ ಬಿಲ್ಲಿನಿಂದ ಹಗೆಗಳನ್ನು ಜಯಿಸುವ ಸಕಲ ಗುಣಸಂಪನ್ನನಾದ ರಾಮನನ್ನು ನಿನ್ನ ನಿಮಿತ್ತವಾಗಿ ಹೇಗೆ ಕಾಡಿಗಟ್ಟಲಿ? ಯಾವ ರಾಮನಲ್ಲಿ ಸಹನಗುಣವೂ ಇಂದ್ರಿಯನಿಗ್ರಹವೂ ಸತ್ಯವೂ ಧರ್ಮವೂ ಕೃತಜ್ಞತೆಯೂ ಅಹಿಂಸಾಗುಣವೂ ಇರುವುವೋ ಅಂಥ ರಾಮನನ್ನು ಬಿಟ್ಟರೆ ನನಗೆ ಗತಿಯಾರು? ದೀನನಾಗಿ ಬೇಡಿಕೊಳ್ಳುವ ಮುದುಕನೂ ಪತಿಯೂ ಆದ ನನ್ನಲ್ಲಿ ನೀನು ಕನಿಕರವನ್ನು ಮಾಡು. ನಿನಗೆ ಕೋಪವೂ ಬೇಡ. ಸಮುದ್ರಗಳಿಂದ ಸುತ್ತಲ್ಪಟ್ಟಿರುವ ಈ ಭೂಮಂಡಲದಲ್ಲಿ ನೀನು ಅಪೇಕ್ಷಿಸಿದ ಪದಾರ್ಥವನ್ನು ಆ ಕ್ಷಣದಲ್ಲಿಯೇ ತಂದು ಕೊಡುವೆನು. ಎಲೈ ಪ್ರಿಯೆಯೇ, ನಿನಗೆ ಕೈಮುಗಿಯುವೆನು. ನಿನ್ನ ಕಾಲುಗಳಿಗೆ ನಮಸ್ಕರಿಸುವೆನು. ನನಗೂ ರಾಮನಿಗೂ ರಕ್ಷಕಳಾಗೆಂದು ಬಹುವಿಧವಾಗಿ ಪ್ರಲಾಪಿಸುತ್ತ ದುಃಖಿಸುತ್ತ ಬಿಸುಸುಯ್ಯುತ್ತ ಕಣ್ಣೀರುಗಳನ್ನು ಸುರಿಸುತ್ತ ಬಾರಿಬಾರಿಗೂ ಬೇಡಿಕೊಳ್ಳುತ್ತಿರುವ ದಶರಥನನ್ನು ನೋಡಿ ಕ್ರೂರಳಾದ ಕೈಕೇಯಿಯು—

ಎಲೈ ಅರಸೇ, ಮೊದಲು ಪ್ರತಿಜ್ಞೆಯನ್ನು ಮಾಡಿ ಎರಡು ವರಗಳನ್ನು ಕೊಟ್ಟು ಈಗ ಮಗನ ಮೇಲಣ ಮೋಹದಿಂದ ಹೀಗೆ ಸಂಕಟಪಟ್ಟರೆ ಈ ಲೋಕದಲ್ಲಿ ನಿನ್ನನ್ನು ಭಾಷಾಪ್ರತಿಪಾಲಕನೆಂದು ಹೇಳುವರೇ? ಈ ನಮ್ಮ ಇಕ್ಷ್ವಾಕುವಂಶದಲ್ಲಿ ಹುಟ್ಟಿದ

ಅರಸುಗಳಲ್ಲಿ ಇಂದಿನ ವರೆಗೂ ಒಬ್ಬರಾದರೂ ಕೊಟ್ಟಮಾತಿಗೆ ತಪ್ಪಿದವರಿಲ್ಲ. ನೀನು ಇಂಥ ಪ್ರಸಿದ್ಧವಂಶದಲ್ಲಿ ಹುಟ್ಟಿ ಹೀಗೆ ಮಾತಿಗೆ ತಪ್ಪಬಹುದೇ? ಪೂರ್ವದಲ್ಲಿ ಸಿಬಿಚಕ್ರವರ್ತಿಯು ಪಾರಿವಾಳದ ಹಕ್ಕಿಗೆ ಕೊಟ್ಟ ಮಾತಿಗಾಗಿ ಗಿಡಗನಿಗೆ ತನ್ನ ಮಾಂಸವನ್ನು ಕೊಯ್ದು ಕೊಡುವುದರಿಂದಲೂ ಅಲರ್ಕನು ತನ್ನ ಕಣ್ಣುಗಳನ್ನು ಕಿತ್ತುಕೊಡುವುದರಿಂದಲೂ ಉತ್ತಮವಾದ ಗತಿಯನ್ನು ಹೊಂದಲಿಲ್ಲವೇ? ಒಳ್ಳೆಯದಾಯಿತು. ಧರ್ಮವನ್ನು ಪರಿತ್ಯಜಿಸಿ ನಿನ್ನ ಮೋಹದ ಮಗನಾದ ರಾಮನನ್ನು ರಾಜ್ಯದಲ್ಲಿ ಅಭಿಷೇಕಿಸಿ ಕೌಸಲ್ಯೆಯೊಡನೆ ಸುಖವಾಗಿರು. ನಾನು ಈಗಲೇ ನಿನ್ನ ಮುಂದೆಯೇ ವಿಷಪಾನವನ್ನು ಮಾಡಿ ಪ್ರಾಣವನ್ನು ಬಿಡುವೆನು. ಪಟ್ಟಾಭಿಷಿಕ್ತನಾದ ರಾಮನನ್ನೂ ಆತನ ತಾಯಿಯಾದ ಕೌಸಲ್ಯೆಯನ್ನೂ ನೋಡಿ ಒಂದು ಕ್ಷಣಕಾಲವಾದರೂ ಸಹಿಸಲಾರೆನು. ವಿಶೇಷವೇಕೆ? ರಾಮನ ವನವಾಸ ಹೊರತಾಗಿ ಇನ್ನು ಯಾವುದರಿಂದಲೂ ನನಗೆ ಸಂತೋಷವೂ ಬದುಕುವಿಕೆಯೂ ಇಲ್ಲವೆಂದು ಬಿರುನುಡಿಗಳಿಂದ ಹೇಳಿಬಿಟ್ಟಳು.

ಆಗ ದಶರಥನು ಸಿಡಿಲಿನಂತೆ ಭಯಂಕರವಾದ ಕೈಕೇಯಿಯ ಮಾತುಗಳನ್ನು ಕೇಳಿ ಆಕೆಯ ಅನಿವಾರ್ಯವಾದ ಮನೋನಿಷ್ಕರ್ಷೆಯನ್ನು ನೆನೆನೆನೆದು ಬುಡವನ್ನು ಕಡಿದುರುಳಿಸಲ್ಪಟ್ಟ ಮರದಂತೆ ಭೂಮಿಯಲ್ಲಿ ಬಿದ್ದು ಹುಚ್ಚನಂತೆಯೂ ಸನ್ನಿಪಾತಜ್ವರಪೀಡಿತನಂತೆಯೂ ಗಾರುಡದಿಂದ ತಡೆಗಟ್ಟಿದ ಕ್ರೂರವಿಷಸರ್ಪದಂತೆಯೂ ಇರುವವನಾಗಿ—ಹಾ ರಾಮಾ! ಎಂದು ಪುನಃ ಚೇತರಿಸಿಕೊಂಡು ದುಷ್ಟಳಾದ ಕೈಕೇಯಿಯನ್ನು ಕುರಿತು—ಎಲೇ ಪಾಪೋತ್ಪಾದಿನಿಯೇ, ಅನಾದಿಸಂಸಿದ್ಧವಾದ ನಮ್ಮ ಸೂರ್ಯವಂಶದಲ್ಲಿ ಹುಟ್ಟಿದವರಾದ ಹಿಂದಿನವರೆಲ್ಲಾ ಜ್ಯೇಷ್ಠಪುತ್ರನಿಗೇ ರಾಜ್ಯಾಭಿಷೇಕವನ್ನು ಮಾಡಿದರೇ ಹೊರತು ಈ ವರೆಗೂ ಯಾರೂ ಕಿರಿಯ ಮಕ್ಕಳಿಗೆ ರಾಜ್ಯಾಭಿಷೇಕವನ್ನು ಮಾಡಲಿಲ್ಲ. ಈಗ ನೀನು ಯೋಚಿಸಿರುವ ಇಂಥ ಕ್ರೂರಕಾರ್ಯವು ನಿನ್ನ ಮಗನಾದ ಭರತನಿಗೆ ಎಷ್ಟುಮಾತ್ರವೂ ಪ್ರಿಯವಾಗಲಾರದು. ಮತ್ತು ಕಿರಿಯ ಹೆಂಡತಿಯ ಮಾತುಗಳನ್ನು ಕೇಳಿಕೊಂಡು ಗುಣದೋಷವಿಚಾರಶೂನ್ಯನಾಗಿ ಗುಣಶಾಲಿಯೂ ರಾಜ್ಯಾರ್ಹನೂ ಜ್ಯೇಷ್ಠಕುಮಾರನೂ ಆದ ರಾಮನನ್ನು ಅನ್ಯಾಯವಾಗಿ ಅರಣ್ಯಕ್ಕೆ ಅಟ್ಟಿದನೆಂದು ಲೋಕದಲ್ಲಿ ಜನರೆಲ್ಲರೂ ನನ್ನನ್ನು ಹೀಯಾಳಿಸುವರು. ಅಲ್ಲದೆ ಧರ್ಮಮಾರ್ಗವನ್ನು ಅತಿಕ್ರಮಿಸಿ ಪತಿಯ ಪ್ರೇಮಕ್ಕೆ ಪಾತ್ರನಾದ ಮಗನನ್ನು ಕಾಡಿಗಟ್ಟಿ ಪತಿಯನ್ನು ಕೊಂದುಹಾಕಿದ ಮಹಾ ಘಾತುಕಳೆಂಬ ಅಪಕೀರ್ತಿಯು ಸೂರ್ಯಚಂದ್ರರಿರುವ ವರೆಗೂ ನಿನಗೆ ತಪ್ಪುವುದಿಲ್ಲವು. ಮಹಾನುಭಾವನೂ ಕೇಕಯರಾಜನೂ ಆದ ನಿನ್ನ ತಂದೆಯೂ ನೀತಿವಂತನೂ ನಿನ್ನ ತಮ್ಮನೂ ಆದ ಯುಧಾಜಿತ್ತೂ ಈ ವಿಧವಾದ ನಿನ್ನ ದುಸ್ಸಂಕಲ್ಪಸ್ಥಿತಿಯನ್ನು ಕೇಳಿದ ಕ್ಷಣದಲ್ಲಿಯೇ ಉತ್ತಮವಾದ ನಮ್ಮ ಕುಲದಲ್ಲಿ ಹುಟ್ಟಿ ಅಪಕೀರ್ತಿಯನ್ನು ತರತಕ್ಕವಳೆಂದು ತಿಳಿದು ನಿನ್ನನ್ನು ಪರಿತ್ಯಜಿಸುವರು. ಆದುಕಾರಣ ತಂದೆತಮ್ಮಂದಿರಿಗೂ ನಿಜಪತಿಗೂ ಬಂಧುಮಿತ್ರರಿಗೂ ಅಸಹ್ಯಕರವಾದ ಭರತಪಟ್ಟಾಭಿಷೇಕದಲ್ಲಿಯೂ ರಾಮನ ವನವಾಸದಲ್ಲಿಯೂ ಉಂಟಾಗಿರುವ ನಿನ್ನ ಪಾಪಸಂಕಲ್ಪವನ್ನು ಬಿಟ್ಟುಬಿಡು. ಬಾಲ್ಯದಲ್ಲಿ ವಿವಿಧ

ವಿದ್ಯಾಭ್ಯಾಸವನ್ನು ಮಾಡಿ ಯೌವನದಲ್ಲಿ ಧರ್ಮದಿಂದ ರಾಜ್ಯವನ್ನು ಪರಿಪಾಲಿಸಿ ಮುದಿತನದಲ್ಲಿ ಶೂರರಾದ ಮಕ್ಕಳಿಗೆ ರಾಜ್ಯಾಭಿಷೇಕವನ್ನು ಮಾಡಿ ಆ ಮೇಲೆ ನಮ್ಮ ಹಿರಿಯರೆಲ್ಲರೂ ಮಾಡಿದ ವನವಾಸಕ್ಕಾಗಿ ತರುಣನಾದ ರಾಮನನ್ನು ಮುದುಕನಾದ ನಾನು ಹೇಗೆ ಕಳುಹಿಸಬಹುದು? ನನಗೆ ಹೊರಗಣ ಪ್ರಾಣವೇ ರಾಮನು. ಆತನು ವನವಾಸಕ್ಕೆ ಹೋದ ಕ್ಷಣದಲ್ಲೇ ನಾನು ಸತ್ತುಹೋಗುವೆನು. ಹೀಗೆ ರಾಮನನ್ನು ಕಾಡಿಗಟ್ಟಿ ನನ್ನನ್ನು ಕೊಂದು ನೀನು ವಿಧವೆಯಾಗಿ ಭರತನೊಡನೆ ಸುಖವಾಗಿ ಬಾಳುವೆನೆಂದು ಯೋಚಿಸಿರುತ್ತೀಯೆ. ಇದೋ, ಈಗ ನಿಜವಾಗಿ ಹೇಳುವೆನು, ಕೇಳು. ನೀನು ನನಗೆ ಹೆಂಡತಿಯೂ ಅಲ್ಲ. ನಾನು ನಿನಗೆ ಗಂಡನೂ ಅಲ್ಲ. ಈ ನಿನ್ನ ದಾರುಣವಾದ ನಿಷ್ಕರ್ಷೆಯು ಭರತನಿಗೆ ಸಮ್ಮತವಾಗಿದ್ದರೆ ಅವನು ನನಗೆ ಪುತ್ರನೂ ಅಲ್ಲ. ನಾನು ಅವನಿಗೆ ಪಿತೃವೂ ಅಲ್ಲ. ನೀನು ನನ್ನನ್ನು ಕೊಲ್ಲುವ ಮೃತ್ಯುವೆಂದರಿಯದೆ ಅಜ್ಞಾನ ದಿಂದ ಹೆಂಡತಿಯೆಂದು ತಿಳಿದು ಈ ವರೆಗೂ ನಿನ್ನೊಡನೆ ಕೂಡಿದ್ದೆನು. ಯೌವನ ವಂತನೂ ಪಿತೃವತ್ಸಲನೂ ಗುಣಶಾಲಿಯೂ ನಿರಪರಾಧಿಯೂ ಆದ ಮಗನನ್ನು ನಿಷ್ಕಾ ರಣವಾಗಿ ಅಡವಿಗಟ್ಟುವ ನನ್ನಂಥ ಪಾಪಿಯಾದ ತಂದೆಯು ಯಾವ ಮಕ್ಕಳಿಗೂ ಉಂಟಾಗಬಾರದು. ಶ್ರೇಷ್ಠವಾದ ಕರಿತುರಗರಥಾದಿ ವಾಹನಗಳ ಮೇಲೇರಿ ಸಂಚರಿ ಸುತ್ತಿದ್ದ ಸುಕುಮಾರಾಂಗನಾದ ನನ್ನ ಕುಮಾರನು ಸಿಂಹ ಶಾರ್ದೂಲ ಭಲ್ಲೂಕ ಸೂಕರಾದಿ ಕ್ರೂರಜಂತುಗಳಿಂದ ಕೂಡಿದ ಮಹಾರಣ್ಯಮಧ್ಯದಲ್ಲಿ ಕಲ್ಲು ಮುಳ್ಳು ಹಳ್ಳ ತಿಟ್ಟುಗಳಿಂದ ಅಪಾಯಕರವಾದ ಕದಧ್ವದಲ್ಲಿ ಬರಿಗಾಲುಗಳಿಂದ ಹೇಗೆ ಸಂಚ ರಿಸುವನು? ದಿವ್ಯವಾದ ಭಕ್ಷ್ಯಭೋಜ್ಯಾದಿಗಳನ್ನು ಉಂಡು ಸುಖಿಸುತ್ತಿದ್ದ ನನ್ನ ಕಂದನು ಕಂದಮೂಲಾದಿಗಳನ್ನು ತಿಂದು ಹೇಗೆ ಜೀವಿಸುವನು? ಅಮೂಲ್ಯವಾದ ಪೀತಾಂಬರವನ್ನುಡುತ್ತಿದ್ದ ನನ್ನ ಕುಮಾರನು ಹೇಗೆ ನಾರಸೀರೆಯನ್ನುಡುವನೋ! ಅನರ್ಘ್ಯವಾದ ನವರತ್ನಾಭರಣಗಳನ್ನು ಧರಿಸಿಕೊಳ್ಳುತ್ತಿದ್ದ ಕೋಮಲಾಂಗನಾದ ಬಾಲನು ಆಲದಂಟಿನಿಂದ ಒರಟಾಗಿ ಮಲಿನವಾದ ಜಡೆಗಳನ್ನು ಧರಿಸುವುದು ಹೇಗೆ? ರತ್ನಮಯವಾದ ಮಂಚದ ಮೇಲೆ ಮೃದುವಾದ ಹಂಸತೂಲಿಕಾತಲ್ಪದಲ್ಲಿ ಸುಖವಾಗಿ ನಿದ್ರಿಸುತ್ತಿದ್ದ ನನ್ನ ಮುದ್ದುಮಗನು ಕಾಡಿನಲ್ಲಿ ಕಲ್ಲುಗಳ ಮೇಲೂ ವ್ಯತ್ಯಸ್ತವಾದ ಭೂಮಿಯ ಮೇಲೂ ತರಗೆಲೆಗಳ ಹಾಸಿಗೆಯ ಮೇಲೂ ಹೇಗೆ ಮಲಗುವನು? ಇಂಥ ಭಯಂಕರವಾದ ಮಾತುಗಳನ್ನಾಡುತ್ತಿರುವ ನಿನ್ನ ನಾಲಿಗೆಯೂ ಕೇಳುತ್ತಿರುವ ನನ್ನ ಕಿವಿಗಳೂ ಸೀಳಿಹೋಗುವುದಿಲ್ಲವಲ್ಲಾ! ಎಂದು ಅನಾಥನಂತೆ ರೋದಿಸುತ್ತ ಹಾ ರಾಮ! ಎಂದು ಹಂಬಲಿಸಿ ಕೈಕೇಯಿಯ ಕಾಲುಗಳ ಮೇಲೆ ಬಿದ್ದು ತಿರಿಗಿ ಮೂರ್ಛೆ ಹೊಂದಿದನು. ಅಷ್ಟರಲ್ಲಿಯೇ ಬೆಳಗಾಗಲು ಪುರೋಹಿತನಾದ ವಶಿಷ್ಠಮು ನಿಯು ವಾಮದೇವಾದಿಮಹಾಮುನಿಜನಗಳೊಡನೆಯೂ ಶಿಷ್ಯಸಮೂಹದೊಡನೆಯೂ ಕೂಡಿದವನಾಗಿ ಪಟ್ಟಾಭಿಷೇಕದ ಸಾಮಗ್ರಿಗಳನ್ನು ತೆಗೆಯಿಸಿಕೊಂಡು ರಾಜನ ಅಂತಃಪುರದ ಬಾಗಿಲೆಡೆಗೈತಂದು ನಿಂತು ಅಲ್ಲಿ ರಾಜಪ್ರೀತಿಪಾತ್ರನಾದ ಸುಮಂತ್ರ ನೆಂಬ ಮಂತ್ರಿವರ್ಯನನ್ನು ನೋಡಿ—ಎಲೈ ಮಂತ್ರಿಶ್ರೇಷ್ಠನಾದ ಸುಮಂತ್ರನೇ,

ನೀನು ದಶರಥಭೂಪಾಲನ ಬಳಿಗೆ ಹೋಗಿ—ಪವಿತ್ರವಾದ ಗಂಗಾದಿಸಕಲನದೀಜಲಗಳಿಂದಲೂ ಚತುಸ್ಸಮುದ್ರೋದಕಗಳಿಂದಲೂ ತುಂಬಲ್ಪಟ್ಟಿರುವ ಸುವರ್ಣಕಲಶಗಳೂ ಅತ್ತಿಯ ಮರದಿಂದ ಮಾಡಲ್ಪಟ್ಟಿರುವ ಭದ್ರಪೀಠವೂ ಸಕಲ ವಿಧಧಾನ್ಯಗಳೂ ನವರತ್ನಗಳೂ ನಾನಾ ವಿಧವಾದ ಔಷಧೀರಸಗಳೂ ಕ್ಷೀರ ದಧಿ ಘೃತ ಮಧು ಲಾಜಾ ದರ್ಭಾದಿಗಳೂ ಸೌಂದರ್ಯವತಿಯರಾದ ಎಂಟು ಮಂದಿ ಕನ್ನಿಕೆಯರೂ ಮದದಾನೆಯೂ ನಾಲ್ಕು ಕುದುರೆಗಳಿಂದ ಕೂಡಿ ಸಿದ್ಧವಾಗಿರುವ ದಿವ್ಯರಥವೂ ಹೊಸದಾಗಿ ಸಾಣೆಮಾಡಿದ ಖಡ್ಗವೂ ಧನುರ್ಬಾಣಗಳೂ ಪೂರ್ಣಿಮಾಚಂದ್ರನನ್ನು ಹೋಲುವ ಬೆಳುಗೊಡೆಯೂ ಸುವರ್ಣದ ಗಿಂಡಿಗಳೂ ಚಿನ್ನದ ಸರಪಣಿಯಿಂದ ಕಟ್ಟಲ್ಪಟ್ಟುದೂ ತೋರವಾದ ಹಿಳಿಲಿನಿಂದ ಒಪ್ಪುತ್ತಿರುವುದೂ ಆದ ಬಿಳಿಯ ಗೂಳಿಯೂ ನಾಲ್ಕು ಕೋರೆದಾಡೆಗಳುಳ್ಳ ಸಿಂಹವೂ ಮಂಗಳಕರವಾದ ಸಿಂಹಾಸನವೂ ಸಂಪೂರ್ಣವಾದ ಶಾರ್ದೂಲಚರ್ಮವೂ ಮುತ್ತುಗದ ಸಮಿತ್ತುಗಳೂ ಬನ್ನಿಯ ಮರವನ್ನು ಕಡಿದು ಉಂಟುಮಾಡಿದ ಬೆಂಕಿಯೂ ಭೇರೀಮೃದಂಗಾದಿ ವಿವಿಧ ವಾದ್ಯಗಳೂ ಕಮನೀಯ ವಸ್ತ್ರಾಭರಣಾಲಂಕೃತರಾದ ವೇಶ್ಯಾಸ್ತ್ರೀಯರೂ ಪೂಜ್ಯರಾದ ಗುರುಗಳೂ ಕ್ಷೇಮದಾಯಕವಾದ ಆಕಳುಗಳೂ ಶ್ರೇಷ್ಠವಾದ ಮೃಗಪಕ್ಷಿಗಳೂ ಇವೇ ಮೊದಲಾದುವುಗಳನ್ನೆಲ್ಲಾ ಸಿದ್ಧಮಾಡಿಕೊಂಡು ನಾವು ಬಂದಿರುವುದಾಗಿಯೂ ದೋಷರಹಿತವಾದ ತಿಥಿ ವಾರ ನಕ್ಷತ್ರ ಯೋಗ ಕರಣಗಳಿಂದ ಕೂಡಿದ ಶುಭಲಗ್ನದಲ್ಲಿ ಲೋಕಾಭಿರಾಮನಾದ ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡುವುದಕ್ಕಾಗಿ ತ್ವರೆಪಡಿಸೆಂದು ಹೇಳಿದರೆಂಬುದಾಗಿಯೂ ತಿಳಿಸೆಂದನು.

ಸುಮಂತ್ರನು ಆ ಮಾತುಗಳನ್ನು ಕೇಳಿ, ಅಂತಃಪುರವನ್ನು ಪ್ರವೇಶಿಸಿ ರಾಜನ ಶಯ್ಯಾಗೃಹದ ಬಾಗಿಲಲ್ಲಿ ಕೈಮುಗಿದು ನಿಂತು—ಎಲೈ ಮಹಾರಾಜನೇ, ಸಕಲ ಲೋಕಗಳನ್ನೂ ಆಹ್ಲಾದಪಡಿಸುತ್ತ ಸೂರ್ಯನು ಹೇಗೆ ಉದಯಿಸುತ್ತಿರುವನೋ ಹಾಗೆಯೇ ನೀನು ಶಯ್ಯಾತಲದಿಂದೆದ್ದು ನಮ್ಮೆಲ್ಲರನ್ನೂ ಸಂತೋಷಪಡಿಸು. ಮಾತಲಿಯೆಂಬ ಸಾರಥಿಯು ದೇವೇಂದ್ರನನ್ನು ಎಬ್ಬಿಸುವಂತೆಯೂ ಉದಯಾದಿತ್ಯನು ಸಮಸ್ತ ಪ್ರಾಣಿಗಳನ್ನೂ ಎಬ್ಬಿಸುವಂತೆಯೂ ಅಪರರಾತ್ರಿಯಲ್ಲಿ ಶಿಷ್ಯರ ವೇದಾಧ್ಯಯನಘೋಷವು ಗುರುಗಳನ್ನು ಎಬ್ಬಿಸುವಂತೆಯೂ ಈ ವೇಳೆಯಲ್ಲಿ ನಾನು ನಿನ್ನನ್ನು ಎಬ್ಬಿಸುತ್ತಿರುವೆನು. ಎಲೈ ಮಹಾರಾಜನೇ, ನಮ್ಮೆಲ್ಲರ ಭಾಗ್ಯದೇವತೆಯು ಉದಯಿಸುವಂತೆ ಹಾಸಿಗೆಯ ದೆಸೆಯಿಂದ ಶೀಘ್ರವಾಗಿ ಏಳುವವನಾಗು. ಚಂದ್ರಸೂರ್ಯರೂ ವರುಣ ವೈಶ್ರವಣರೂ ಇಂದ್ರಾಗ್ನಿಗಳೂ ನಿನಗೆ ಮಂಗಳವನ್ನುಂಟುಮಾಡಲಿ. ರಾತ್ರಿಯು ಕಳೆದುಹೋಯಿತು. ಮಂಗಳಕರವಾದ ಪ್ರಾತಃಕಾಲವುಂಟಾಯಿತು. ರಾಮನ ಪಟ್ಟಾಭಿಷೇಕಕ್ಕೆ ಬೇಕಾದ ಸಕಲಸಾಮಗ್ರಿಗಳನ್ನೂ ಸಿದ್ಧಮಾಡಿಕೊಂಡು ಪುರೋಹಿತರಾದ ವಶಿಷ್ಠರು ಬಂದು ಕಾದಿದ್ದಾರೆ. ನೀನು ಶೀಘ್ರವಾಗಿ ಬಂದು ರಾಮನ ಪಟ್ಟಾಭಿಷೇಕಕಾರ್ಯವನ್ನು ನೆರವೇರಿಸುವವನಾಗು. ಸೇನಾಪತಿಗಳಿಂದೊಡಗೂಡಿದ ಸೇನೆಯಂತೆಯೂ ಚಂದ್ರನಿಂದೊಡಗೂಡಿದ ರಾತ್ರಿಯಂತೆಯೂ ಪ್ರಭುಸಹಿತವಾದ

ರಾಷ್ಟ್ರವು ಪರಿಶೋಭಿಸುವುದು ಎಂದು ಹೇಳುತ್ತಿರಲು; ಆಗ ಸ್ವಲ್ಪ ಚೇತರಿಸಿಕೊಂಡಿದ್ದ ದಶರಥನಿಗೆ ಈ ಮಾತುಗಳೆಲ್ಲಾ ಕೇಳಿಸಿದ ಕೂಡಲೆ ಕರ್ಣಕಠೋರವಾಗಿ ದೊಡ್ಡ ಗಾಯಗಳಲ್ಲಿ ಹೊಸ ಸುಣ್ಣವನ್ನು ಹಾಕಿ ನೀರನ್ನು ಹೊಯ್ದಂತಾಗಿ ಸಂಕಟಪಡಿಸಲು; ಆಗ ರಾಜನು ನಿದ್ರಾಭಾವದಿಂದ ಕೆಂಪಾಗಿರುವ ಕಣ್ಣುಗಳಿಂದ ಸುಮಂತ್ರನನ್ನು ನೋಡಿ—ಎಲೈ ಸುಮಂತ್ರನೇ, ನೀನು ಈ ವಿಧವಾದ ದುಸ್ಸಹವಾಕ್ಯಗಳೆಂಬ ಕತ್ತಿಗಳಿಂದ ಬಾರಿಬಾರಿಗೂ ನನ್ನ ಮರ್ಮಸ್ಥಳಗಳನ್ನು ಏಕೆ ಕತ್ತರಿಸುತ್ತಿರುವೆ? ಎಂದು ಇಷ್ಟುಮಾತ್ರ ಹೇಳಿ ಮತ್ತೆ ಮೂರ್ಛಾಗತನಾದನು.

ಆಗ ಕೈಕೇಯಿಯು—ಎಲೈ ಸುಮಂತ್ರನೇ, ಅರಸನು ರಾಮನ ಪಟ್ಟಾಭಿಷೇಕೋತ್ಸವದ ಸಂಭ್ರಮದಿಂದ ರಾತ್ರಿಯೆಲ್ಲಾ ಎಚ್ಚತ್ತಿದ್ದನು. ಅದುಕಾರಣ ಈಗತಾನೆ ಸ್ವಲ್ಪ ನಿದ್ರಿಸುತ್ತಿರುವನು. ನೀನು ಈಗಲೇ ಶೀಘ್ರವಾಗಿ ಹೋಗಿ ಸರ್ವರ ಸಂತೋಷಕ್ಕೂ ಪಾತ್ರನಾದ ರಾಮನನ್ನು ಕರೆದುಕೊಂಡು ಬಾ. ನೀನು ಈ ಭಾಗದಲ್ಲಿ ಸ್ವಲ್ಪವೂ ಯೋಚಿಸಬೇಡ. ಹೋಗು ಎಂದು ಹೇಳಲು; ಆಗ ಸುಮಂತ್ರನು—ರಾಮನ ಪಟ್ಟಾಭಿಷೇಕಕ್ಕೋಸ್ಕರ ಕೈಕೇಯಿದೇವಿಯು ನಿಶ್ಚಯವಾಗಿ ತ್ವರೆಪಡಿಸುತ್ತಿರುವಳೆಂದು ಭಾವಿಸಿ ಸಂತೋಷಪಟ್ಟುಕೊಂಡು ಅಲ್ಲಿಂದ ಹೊರಟು ಶೀಘ್ರವಾಗಿ ರಾಮನ ಬಳಿಗೆ ಬಂದು ಅವನಿಗೆ ಈ ಮಾತುಗಳನ್ನು ತಿಳಿಸಲು; ರಾಮನು ಶೀಘ್ರವಾಗಿ ಅಲ್ಲಿಂದ ಹೊರಟುಬರುತ್ತ ತನ್ನ ಹಿಂದೈತರುತ್ತಿರುವ ಸೀತೆಯನ್ನು ನೋಡಿ ನನ್ನ ತಂದೆಯೂ ನನ್ನ ಕಿರಿಯ ತಾಯಿಯಾದ ಕೈಕೇಯಿದೇವಿಯೂ ನನಗೆ ಪಟ್ಟಾಭಿಷೇಕವನ್ನು ಮಾಡುವುದಕ್ಕೋಸ್ಕರ ನನ್ನನ್ನು ಕರಿಸಿರುವರು. ಅದುಕಾರಣ ನಾನು ಹೋಗುವೆನು. ನೀನು ನಿನ್ನ ಪರಿವಾರದೊಡನೆ ಕೂಡಿ ಇಲ್ಲಿ ಸುಖವಾಗಿರೆಂದು ಹೇಳಿ ದಿವ್ಯವಾದ ರಥವನ್ನೇರಿ ಹೊರಡಲು; ಕೂಡಲೆ ಲಕ್ಷ್ಮಣನು ಧನುರ್ಬಾಣಗಳನ್ನು ತೆಗೆದುಕೊಂಡು ಅಣ್ಣನ ಮೈಗಾವಲಿಗಾಗಿ ಹಿಂದೆಯೇ ಬಂದನು. ಮತ್ತು ಖಡ್ಗಖೇಟ್ಯ ಕುಂತಾದ್ಯಾಯುಧಗಳನ್ನು ಧರಿಸಿದವರಾಗಿ ಅಶ್ವಾರೂಢರಾದ ಅಸಂಖ್ಯಾತವೀರರು ಹಿಂಪೆ ಬಂದರು. ಆಗ ಕೆಲರು ದಿವ್ಯವಾದ ಶ್ವೇತಛತ್ರವನ್ನು ಹಿಡಿದರು. ಕೆಲರು ಬಿಳಿಯ ಚೌರಿಗಳನ್ನು ಬೀಸಿದರು. ಸ್ತುತಿಪಾಠಕರು ಮುಂಗಡೆಯಲ್ಲಿ ಹೊರಳುತ್ತ ಬಂದರು. ಅಪರಿಮಿತರಾದ ಕಟ್ಟಿಗೆಯವರು ಮುಂದೆ ನೆರೆದಿರುವ ಜನಗಳ ಗುಂಪುಗಳನ್ನು ಚದರಿಸಿ ರಾಮನ ರಥವು ಬರುವುದಕ್ಕೆ ಅನುಕೂಲವಾಗಿ ಮಾರ್ಗವನ್ನು ಇಂಬುಗೊಳಿಸುತ್ತ ಬಂದರು. ಇಷ್ಟು ಸಂಭ್ರಮದಿಂದ ರಾಮನು ರಾಜವೀಧಿಯಲ್ಲಿ ಬರುತ್ತ—ಚಂದ್ರನು ರೋಹಿಣೀದೇವಿಯೊಡನೆ ಕೂಡುವಂತೆ ರಾಮನು ರಾಜ್ಯಲಕ್ಷ್ಮಿಯೊಡನೆ ಕೂಡಿ ಇನ್ನು ಮೇಲೆ ತನ್ನ ಮಕ್ಕಳನ್ನೋಪಾದಿಯಲ್ಲಿ ನಮ್ಮೆಲ್ಲರನ್ನೂ ಸುಖದಿಂದ ಸಲಹುವನೆಂದು ಗುಂಪುಗುಂಪಾಗಿ ಕೂಡಿ ಮಾತಾಡಿಕೊಳ್ಳುತ್ತಿರುವ ಜನರ ಮಾತುಗಳನ್ನು ಕೇಳುವವನಾಗಿ ದಶರಥರಾಜನ ಅರಮನೆಯ ಬಾಗಿಲಬಳಿಗೈತಂದು ರಥದಿಂದಿಳಿದು ಸಕಲವಿಧಪರಿವಾರದವರನ್ನೂ ಅಲ್ಲೇ ನಿಲ್ಲಿಸಿ ತಾನೊಬ್ಬನೇ ಒಳಹೊಕ್ಕು ರಕ್ತಿಮೆಯುಳ್ಳ ಕಣ್ಣುಗಳೂ ವಿವರ್ಣವಾದ ಮುಖವೂ ಒಣಗಿದ

ತುಟಿಗಳೂ ಉಳ್ಳವನಾಗಿ ದುಃಖಿಸುತ್ತಿರುವ ತನ್ನ ತಂದೆಯನ್ನು ನೋಡಿ ಮೊದಲು ಆತನ ಕಾಲುಗಳಿಗೆ ನಮಸ್ಕರಿಸಿ ಆ ಮೇಲೆ ಕೈಕೇಯಿಗೆ ವಂದಿಸಿ ಜಡೀಭೂತನಾಗಿ ನಿಂತುಕೊಂಡನು. ಆಗ ರಾಮನನ್ನು ನೋಡಿ ಧಾರಾಸಂಪಾತರೂಪವಾಗಿ ಕಣ್ಣೀರುಗಳನ್ನು ಸುರಿಸುತ್ತ ದಶರಥನು—ಹಾ! ರಾಮಾ! ಎಂದು ಗಟ್ಟಿಯಾಗಿ ಕೂಗಿ ಕೆಳಗೆ ಬಿದ್ದು ಮೂರ್ಛೆಹೊಂದಿದನು. ಆಗ ರಾಮನು ರಾಹುಗ್ರಸ್ತನಾದ ಚಂದ್ರನಂತೆಯೂ ಮೇಘಮಾಲೆಯಿಂದ ಆಚ್ಛಾದಿಸಲ್ಪಟ್ಟ ಸೂರ್ಯನಂತೆಯೂ ಸುಳ್ಳುಹೇಳಿದ ಋಷಿಯಂತೆಯೂ ತೇಜೋಹೀನನಾಗಿರುವ ತಂದೆಯನ್ನು ನೋಡಿ ಭಯಭ್ರಾಂತನಾಗಿ ತಿರಿಗಿ ಕೈಕೇಯಿಗೆ ವಂದಿಸಿ—ಎಲೈ ತಾಯೇ, ನನ್ನ ತಂದೆಯು ಮೊದಲಿನಂತೆ ನನ್ನನ್ನು ಏಕೆ ಸಂತೋಷಪಡಿಸುವುದಿಲ್ಲ? ಪೂರ್ವದಲ್ಲಿ ನನ್ನ ತಂದೆಯು ಯಾವ ಕಾರಣದಿಂದಾದರೂ ಕೋಪವುಳ್ಳವನಾಗಿದ್ದರೆ ನನ್ನನ್ನು ನೋಡಿದ ಮಾತ್ರದಿಂದಲೇ ಪ್ರಸನ್ನವದನನಾಗುತ್ತಿದ್ದನು. ಅಂಥವನು ಈಗ ನನ್ನನ್ನು ನೋಡಿ ಏತಕ್ಕಾಗಿ ಇಷ್ಟು ದುಃಖವನ್ನೂ ಸಂಕಟವನ್ನೂ ಅನುಭವಿಸುತ್ತಿರುವನು? ಎಳೆಯದಾದ ಮಾವಿನ ಚಿಗುರು ಬೇಸಿಗೆಯ ಉರಿಬಿಸಿಲಿನಿಂದ ಕಂದಿರುವಂತೆ ಈತನ ಕೋಮಲವಾದ ಮುಖವು ಕಂದಿರುವುದಕ್ಕೆ ಕಾರಣವೇನು? ನಾನೇನಾದರೂ ಅರಿಯದೆ ಅಪರಾಧ ಮಾಡಿದುದರಿಂದ ಇಷ್ಟು ಕೋಪಿಷ್ಠನಾಗಿರಬಹುದೋ? ಹಾಗೇನಾದರೂ ಇದ್ದರೆ ನೀನು ನನ್ನಲ್ಲಿ ಕನಿಕರವನ್ನಿಟ್ಟು ನನಗೋಸ್ಕರ ಪ್ರಸನ್ನನಾಗುವಂತೆ ಮಾಡಬೇಕೆಂದು ಕೈಮುಗಿದು ಬೇಡಿಕೊಳ್ಳುತ್ತಿರುವ ರಾಮನನ್ನು ನೋಡಿ—ಕ್ರೂರಾತ್ಮಳಾದ ಕೈಕೇಯಿಯು ಲಜ್ಜೆಯನ್ನು ತೊರೆದು ತನ್ನ ಆಲೋಚನೆಗೆ ಅನುಕೂಲವಾದ ಮಾತುಗಳನ್ನು ಹೇಳಲುದ್ಯುಕ್ತಳಾಗಿ—

ಎಲೈ ರಾಮನೇ, ನಿನ್ನ ಮೇಲೆ ಅರಸಿಗೆ ಸ್ವಲ್ಪವಾದರೂ ಕೋಪವಿಲ್ಲ. ಆತನ ಮನೋಗತವೊಂದುಂಟು. ಅದು ಅತಿಕ್ರಮಿಸುವುದಕ್ಕೆ ಅಸಾಧ್ಯವಾದುದು. ನೀನು ಏನು ಹೇಳುವಿಯೋ ಎಂಬ ಭಯದಿಂದ ಆತನು ಅದನ್ನು ಹೇಳಲಾರದೆ ಮನೋವ್ಯಥೆಯನ್ನನುಭವಿಸುತ್ತ ಇದ್ದಾನೆ. ಪ್ರಿಯನಾದ ನಿನಗೆ ಅಪ್ರಿಯವಾದ ಮಾತನ್ನು ಹೇಗೆ ಹೇಳಿಯಾನು? ಪೂರ್ವದಲ್ಲಿ ಪ್ರತಿಜ್ಞಾಪೂರ್ವಕವಾಗಿ ನನಗೆ ಎರಡು ವರಗಳನ್ನು ಕೊಟ್ಟು ಈಗ ಅವುಗಳನ್ನು ನಡಿಸಿಕೊಡುವ ವಿಷಯದಲ್ಲಿ ಸಾಧಾರಣ ಜನರಂತೆ ಈ ರೀತಿಯಾಗಿ ಸಂಕಟಪಟ್ಟು ಪೇಚಾಡುತ್ತಿರುವನು. ಸತ್ಯಸಂಧನಾದ ಈತನು ನನಗೆ ಕೊಟ್ಟ ಭಾಷೆಯನ್ನು ನೀನಾದರೂ ನಡಿಸಿ ಆತನನ್ನು ಸತ್ಯವಂತನನ್ನಾಗಿ ಮಾಡು. ಆ ಕೆಲಸವು ನಿನಗೆ ಪ್ರಿಯವಾಗಿದ್ದರೂ ಅಪ್ರಿಯವಾಗಿದ್ದರೂ ನೀನು ಅದನ್ನು ನಡಿಸಿಕೊಡುವುದಾದರೆ ಆ ಸಂಗತಿಯನ್ನು ವಿವರವಾಗಿ ಹೇಳುವೆನು ಎನಲು; ರಾಮನು ಆ ಮಾತನ್ನು ಕೇಳಿ ತಂದೆಯ ಸನ್ನಿಧಾನದಲ್ಲಿ ಕೈಕೇಯಿಯನ್ನು ಕುರಿತು—ಎಲೈ ತಾಯೇ, ನೀನು ನನಗೆ ಈ ವಿಧವಾದ ಮಾತುಗಳನ್ನು ಹೇಳಬಹುದೇ? ಪೂಜ್ಯನಾದ ನನ್ನ ತಂದೆಯ ಅಪ್ಪಣೆಯಾದರೆ ಉರಿಯುವ ಬೆಂಕಿಯಲ್ಲಾದರೂ ಬೀಳುವೆನು. ಪ್ರಾಣಾಪಹಾರಕವಾದ ವಿಷವನ್ನಾದರೂ ಪಾನಮಾಡುವೆನು. ಅಗಾಧವಾದ ಕಡಲಿ

ನಲ್ಲಿಯಾದರೂ ಮುಳುಗುವೆನು. ಅಲ್ಲದೆ ನಾನು ಆ ವಿಷಯದಲ್ಲಿ ಬದಲುಮಾತಾಡು ವವನಲ್ಲ. ಬೇಗ ನನ್ನ ತಂದೆಯ ಮನೋಭಿಪ್ರಾಯವನ್ನು ತಿಳಿಸು. ಸತ್ಯವಾಗಿ ನೆರವೇರಿಸುವೆನೆನಲು; ಆಗ ದಯಾಶೂನ್ಯಳಾದ ಕೈಕೇಯಿಯು ರಾಮನನ್ನು ಕುರಿತು—ಮೊದಲು ಪ್ರಾಪ್ತವಾಗಿದ್ದ ದೇವಾಸುರಯುದ್ಧದಲ್ಲಿ ನಿಮ್ಮ ತಂದೆಗೆ ಸಂಭವಿಸಿದ್ದ ಕಷ್ಟವನ್ನು ನಾನು ಪರಿಹರಿಸಿದುದರಿಂದ ಆಗ ನನಗೆ ಎರಡು ವರಗಳನ್ನು ಕೊಟ್ಟಿದ್ದನು. ಈಗ ನಾನು ಆ ವರಗಳಿಗೆ ಫಲರೂಪವಾಗಿ ಭರತನಿಗೆ ಪಟ್ಟಾಭಿಷೇಕವನ್ನೂ ನೀನು ಜಡೆಯನ್ನೂ ನಾರ್ಮಡಿಯನ್ನೂ ಧರಿಸಿದವನಾಗಿ ಹದಿನಾಲ್ಕು ಸಂವತ್ಸರಗಳ ವರೆಗೂ ದಂಡಕಾರಣ್ಯದಲ್ಲಿ ವಾಸಮಾಡುವುದನ್ನೂ ಕೇಳಿಕೊಂಡೆನು. ಅದುಕಾರಣ ಆತನು ನಿನಗೋಸ್ಕರ ಭಯಪಟ್ಟು ಹೀಗೆ ಪರಿತಪಿಸುತ್ತಿರುವನು. ನೀನು ತಂದೆಯನ್ನು ಸತ್ಯಪ್ರತಿಜ್ಞನನ್ನಾಗಿ ಮಾಡುವಂಥ ಸತ್ಪುತ್ರನಾಗಿದ್ದರೆ ಶಪಥಪೂರ್ವಕವಾದ ಆತನ ವಾಗ್ದಾನವನ್ನು ನಡಿಸಿಕೊಡೆಂದು ಹೇಳಿದಳು. ಆಗ ರಾಮನು ಅಂಥ ಕ್ರೂರವಾದ ಮಾತುಗಳನ್ನು ಕೇಳಿದವನಾದಾಗ್ಯೂ ಮನಸ್ಸಿನಲ್ಲಿ ಸ್ವಲ್ಪವಾದರೂ ಚಿಂತಿಸಿ ಭಯ ಪಡದೆ ಕೈಕೇಯಿಯನ್ನು ಕುರಿತು—ತಂದೆಯ ಪ್ರತಿಜ್ಞೆಯನ್ನು ನೆರವೇರಿಸುವುದಕ್ಕಾಗಿ ನಾನು ಜಟಾಜಿನಗಳನ್ನು ಧರಿಸಿ ಈಗಲೇ ಅರಣ್ಯಕ್ಕೆ ಹೋಗುವೆನು ಗುರುವಾಗಿಯೂ ಹಿತನಾಗಿಯೂ ತಂದೆಯಾಗಿಯೂ ಅರಸಾಗಿಯೂ ಇರುವವನ ಮಾತುಗಳನ್ನು ಲೋಕದಲ್ಲಿ ಯಾವ ಮಗನಾದರೂ ಕೇಳದೆ ಇರುವನೇ? ನಾನು ನನ್ನ ತಮ್ಮನಾದ ಭರತನಿಗೋಸ್ಕರ ನನ್ನ ರಾಜ್ಯವನ್ನಾದರೂ ಧನವನ್ನಾದರೂ ಕಡೆಗೆ ಪ್ರಾಣಗಳನ್ನಾದರೂ ಸಂತೋಷದಿಂದ ಕೊಡುವುದಕ್ಕೆ ಸಿದ್ಧನಾಗಿರುವಲ್ಲಿ ಮಹಾತ್ಮರಾದ ತಾಯಿ ತಂದೆಗಳ ಪ್ರೇರಣೆಯುಂಟಾದರೆ ಕೊಡುವುದೊಂದತಿಶಯವೇನು? ದೂತರು ಈಗಲೇ ಶೀಘ್ರವಾಗಿ ಕೇಕಯನಗರಕ್ಕೆ ಹೋಗಿ ಭರತನನ್ನು ಕರತರಲಿ. ಸಂತೋಷದಿಂದ ಕೂಡಿ ನನ್ನ ಕೈಯಿಂದಲೇ ಅವನಿಗೆ ಪಟ್ಟಾಭಿಷೇಕವನ್ನು ಮಾಡಿ ಆ ಮೇಲೆ ನಾನು ಉಲ್ಲಾಸದಿಂದ ದಂಡಕಾರಣ್ಯವನ್ನು ಕುರಿತು ಹೋಗುವೆನು ಎನಲು; ಆಗ ಕೈಕೇಯಿಯು ಸಂತುಷ್ಟಾಂತರಂಗಳಾಗಿ—ನಾವು ಭರತನನ್ನು ಕರತರಿಸಿಕೊಂಡು ಆತನಿಗೆ ಪಟ್ಟಾಭಿಷೇಕವನ್ನು ಮಾಡುವೆವು. ಅದರ ಚಿಂತೆಯು ನಿನಗೆ ಬೇಡ. ಈಗ ನೀನು ವಿಳಂಬಮಾಡದೆ ಹೊರಟು ವನಕ್ಕೆ ಹೋದ ಹೊರತು ದೊರೆಯು ಸ್ವಸ್ಥಚಿತ್ತನಾಗುವುದಿಲ್ಲ ಎನ್ನಲು; ಆಗ ಈ ಮಾತುಗಳನ್ನು ಕೇಳಿದ ದಶರಥನು ಸಿಡಿಲಪ್ಪಳಿಸಿದ ಕದಳೀ ತರುವಿನಂತೆ ಭೂಮಿಗುರುಳಿ ಮೂರ್ಛೆಹೊಂದಿದನು. ಆಗ ರಾಮನು ತತ್ಕಾಲೋಚಿತ ವಾದ ಉಪಚಾರಗಳಿಂದ ಉಪಚರಿಸಿ ತಂದೆಯನ್ನು ಲಬ್ಧಸಂಜ್ಞನನ್ನಾಗಿ ಮಾಡಿ ಆ ಮೇಲೆ ಕೈಕೇಯಿಯ ಮಾತುಗಳಿಂದ ಪ್ರೇರಿಸಲ್ಪಟ್ಟು ಚಾವಟಿಯಿಂದ ಹೊಡೆಯಲ್ಪಟ್ಟ ಕುದುರೆಯಂತೆ ತ್ವರಿತಗತಿಯಿಂದ ಕೂಡಿದವನಾಗಿ ಕೈಕೇಯಿಯನ್ನು ಕುರಿತು —ಎಲೈ ತಾಯೇ, ನಾನು ಕೇವಲ ಧನಲೋಭವುಳ್ಳವನೆಂದು ಯೋಚಿಸಬೇಡ. ನನ್ನನ್ನು ಋಷಿಗಳಿಗೆ ಸಮಾನನಾದ ಧರ್ಮಿಷ್ಠನೆಂದು ತಿಳಿಯುವವಳಾಗು ಎಂದು ತಾಯಿತಂದೆಗಳನ್ನು ಬಲಗೊಂಡು ಭಕ್ತಿಯಿಂದ ವಂದಿಸಿ ಹೊರಗೆ ಬಂದು ಓಲಗದ

ಚಾವಡಿಯಲ್ಲಿ ಸಿದ್ಧಪಡಿಸಿಟ್ಟಿದ್ದ ಅಭಿಷೇಕಸಾಮಗ್ರಿಗಳನ್ನು ಪ್ರದಕ್ಷಿಣಮಾಡಿ ಕೈ ಮುಗಿದು ಛತ್ರಚಾಮರಧಾರಿಗಳೇ ಮೊದಲಾದ ಸಕಲವಿಧ ಪರಿಜನರನ್ನೂ ಬಿಟ್ಟು ತಾನೊಬ್ಬನೇ ಹೊರಟು ನಿಜಮಾತೃವಾದ ಕೌಸಲ್ಯಾದೇವಿಯ ಮನೆಗೆ ಬರುತ್ತಿರಲು; ಆಗ ಲಕ್ಷ್ಮಣನು ಮಾತ್ರ ಧನುರ್ಬಾಣಗಳನ್ನು ತೆಗೆದುಕೊಂಡು ರಾಮನ ಹಿಂದೆಯೇ ಹೋದನು.

ಅನಂತರದಲ್ಲಿ ಶ್ರೀರಾಮನು ತನ್ನ ತಾಯಿಯ ಅಂತಃಪುರವನ್ನು ಪ್ರವೇಶಿಸಿ ಆಕೆಯ ಸನ್ನಿಧಾನಕ್ಕೆ ಹೋಗಿ ನಮಸ್ಕರಿಸಲು; ಆಕೆಯು ಪರಮಸಾತ್ವಿಕನಾದ ರಾಮನನ್ನು ಬಾಚಿ ತಬ್ಬಿಕೊಂಡು ಮುಂಗುರುಳುಗಳನ್ನು ತಿದ್ದಿ ಶಿರಸ್ಸನ್ನು ಆಘ್ರಾಣಿಸಿ ಮುದ್ದಾಡಿ ಅಪಾರವಾದ ಪುತ್ರವಾತ್ಸಲ್ಯದಿಂದ ಕೂಡಿದವಳಾಗಿ ರಾಮನನ್ನು ಕುರಿತು—ಮಹಾರಾಜನಾದ ನಿನ್ನ ತಂದೆಯು ಈಗ ನಿನ್ನನ್ನು ರಾಜ್ಯಾಭಿಷಿಕ್ತನನ್ನಾಗಿ ಮಾಡುವನು. ಇನ್ನು ಮೇಲೆ ನೀನು ಭಯಭಕ್ತಿಯಿಂದ ಪಿತೃಶುಶ್ರೂಷೆಯನ್ನು ಮಾಡುತ್ತ ನನಗಿಂತಲೂ ಚಿಕ್ಕವರಾಗಿದ್ದು ನಿನ್ನ ತಂದೆಯ ಪತ್ನಿಯರಾದ ನಿನ್ನ ಬಲತಾಯಂದಿರೆಲ್ಲರನ್ನೂ ನನ್ನನ್ನು ಕಂಡಂತೆಯೇ ಕಾಣುತ್ತ ಅವರೆಲ್ಲರಿಗೂ ಪ್ರಿಯವಾಗುವಂತೆ ನಡೆಯುತ್ತ ಪ್ರಜಾಪರಿವಾರಗಳನ್ನು ನಿನ್ನ ಮಕ್ಕಳಿಗಿಂತಲೂ ಹೆಚ್ಚಾಗಿ ಕಾಪಾಡುತ್ತ ಗುರೂತ್ತಮರಾದ ವಶಿಷ್ಠಾದಿಗಳನ್ನು ಭಕ್ತಿಭಾವದಿಂದ ಕೂಡಿ ಪೂಜಿಸುತ್ತ ಅವರ ಆಜ್ಞೆಗಳನ್ನು ಸ್ವಲ್ಪವಾದರೂ ಮೀರದೆ ರಾಜನೀತಿಯನ್ನು ತಪ್ಪದೆ ಆಚಂದ್ರಾರ್ಕಸ್ಥಾಯಿಯಾಗಿ ಸಾಮ್ರಾಜ್ಯವನ್ನು ಅನುಭವಿಸುತ್ತಿರೆಂದು ಹೇಳಿ ಆಶೀರ್ವದಿಸಲು; ಆಗ ರಾಮನು ಲಜ್ಜಾನ್ವಿತನಾಗಿ—ಎಲೈ ಪೂಜ್ಯಳಾದ ತಾಯಿಯೇ, ಈಗ ನಿನಗೆ ಒದಗಿರುವ ಮಹಾಭಯವನ್ನರಿಯದೆ ಹೀಗೆ ಹೇಳುತ್ತಿರುವೆಯಲ್ಲಾ! ಪಾಪಿಷ್ಠನಾದ ನಾನು ನಿನಗೂ ಸೀತೆಗೂ ಲಕ್ಷ್ಮಣನಿಗೂ ಮಹಾದುಃಖವನ್ನುಂಟುಮಾಡುವುದಕ್ಕಾಗಿಯೇ ಹುಟ್ಟಿದೆನು. ನಾನು ಈಗ ದಂಡಕಾರಣ್ಯವನ್ನು ಕುರಿತು ಹೋಗುವೆನು. ನಾನು ಮಾಂಸಾದಿ ಶ್ರೇಷ್ಠಭೋಜನಗಳನ್ನು ಬಿಟ್ಟು ಇನ್ನು ಮೇಲೆ ಮುನಿಜನಗಳಂತೆ ಗಡ್ಡೆಗೆಣಸುಗಳನ್ನು ತಿಂದು ಜೀವಿಸುತ್ತ ಹದಿನಾಲ್ಕು ಸಂವತ್ಸರಗಳವರೆಗೂ ದಂಡಕವನದಲ್ಲಿ ವಾಸಮಾಡಬೇಕಾಗಿ ಬಂದಿದೆ. ಮಹಾರಾಜನು ಭರತನಿಗೆ ಪಟ್ಟಾಭಿಷೇಕವನ್ನು ಮಾಡುವನು. ವನವಾಸಕ್ಕಾಗಿ ನನಗೆ ಅಪ್ಪಣೆಯನ್ನಿತ್ತನು ಎಂದು ಹೇಳಲು; ಆಗ ಕೌಸಲ್ಯಾದೇವಿಯು ಆ ಮಾತುಗಳನ್ನು ಕೇಳಿ ಕೆಂಪಗೆ ಕಾಯಿಸಿದ ಉಕ್ಕಿನ ಶಲಾಕೆಗಳಿಂದ ಕಿವಿಯಲ್ಲಿ ತಿವಿಯಲ್ಪಟ್ಟಂತಾಗಿ ಕರಿಯು ತನ್ನ ಕರದಿಂ ಬಿಸುಟ ಪುಷ್ಪಮಾಲಿಕೆಯಂತೆಯೂ ಸ್ವರ್ಗದಿಂದ ಭೂಮಿಗೆ ಬಿದ್ದ ದೇವತೆಯಂತೆಯೂ ಪ್ರಚಂಡಮಾರುತದಿಂದ ಮುರಿದುರುಳಿದ ಬಾಳೆಗಂಬದಂತೆಯೂ ನೆಲದ ಮೇಲೆ ಬಿದ್ದು ಮೂರ್ಛಿತಳಾಗಲು; ರಾಮನು ಶೈತ್ಯೋಪಚಾರಗಳನ್ನು ಮಾಡಿ ಚೇತನಗೊಳಿಸಿ ಎಬ್ಬಿಸಿದನು.

ಅನಂತರದಲ್ಲಿ ಆಕೆಯು ರಾಮನನ್ನು ನೋಡಿ—ನಾನು ವ್ರತೋಪವಾಸಗಳನ್ನು ಆಚರಿಸಿ ಅನೇಕ ದೇವತಾಪ್ರಾರ್ಥನೆಗಳನ್ನು ಮಾಡಿ ಬಹುಕಾಲಕ್ಕೆ ನಿನ್ನನ್ನು

ಪಡೆದು ಇಂಥ ದುರಂತದುಃಖಕ್ಕೆ ಗುರಿಯಾದೆನು. ಲೋಕದಲ್ಲಿ ಮಕ್ಕಳನ್ನು ಹೆತ್ತು ಹೀಗೆ ವ್ಯಥೆಯನ್ನೂ ಮಹಾದುಃಖವನ್ನೂ ಅನುಭವಿಸುವುದಕ್ಕಿಂತ ಹೆಂಗಸರು ಬಂಜೆಯರಾಗಿರುವುದೇ ಉತ್ತಮವು. ಇದರಿಂದ ಮಕ್ಕಳಿಲ್ಲವೆಂಬ ವಾರ್ತೆಯೊಂದೇ ಹೊರತು ಅನ್ಯಥಾ ಯಾವ ದುಃಖವೂ ಇರುವುದಿಲ್ಲ. ನನ್ನ ಸವತಿಯಾದ ಕೈಕೇಯಿಯು ತಾನು ಪತಿಯ ಪ್ರೀತಿಗೆ ಪಾತ್ರಳಾಗಿದ್ದೇನೆಂಬ ಗರ್ವದಿಂದ ಆಗಾಗ್ಗೆ ಕೆಟ್ಟಮಾತುಗಳನ್ನಾಡಿ ನನ್ನನ್ನು ಬಹುವಾಗಿ ನಿಂದಿಸುತ್ತಿರುವಳು. ಈ ವರೆಗೂ ನಿನ್ನನ್ನು ನೋಡುತ್ತಿದ್ದುದರಿಂದ ಆ ಮಹಾ ವ್ಯಸನವನ್ನು ಸಹಿಸಿಕೊಂಡಿದ್ದೆನು. ಇನ್ನು ಮೇಲೆ ನೀನು ಕಾಡಿಗೆ ಹೋಗಿ ಆಕೆಯ ಮಗನಿಗೆ ರಾಜ್ಯಾಭಿಷೇಕವಾಗುವುದರಿಂದ ನಾನು ಅವಳ ಕೈಕೆಳಗೆ ಬಿದ್ದಿರಬೇಕಾಗಿ ಬಂದಿತು. ನನಗೆ ಇದಕ್ಕಿಂತಲೂ ಹೆಚ್ಚಾದ ಮತ್ತೊಂದು ದುಃಖವಿರುವುದೇ? ಎಲೈ ತಂದೆಯೇ, ರಾಮನೇ, ನೀನು ಅರಣ್ಯವಾಸಕ್ಕೆ ಹೋದ ಕೂಡಲೆ ನನಗೆ ಮರಣವು ಸಿದ್ಧವಾಗಿರುವುದು. ಹದಿನಾಲ್ಕು ಸಂವತ್ಸರಗಳ ಪರ್ಯಂತರವೂ ನಿನ್ನನ್ನಗಲಿ ನಾನೆಂತು ಬದುಕಲಿ? ಚಂದ್ರಮಂಡಲಕ್ಕೆ ಸಮಾನವಾದ ನಿನ್ನ ಮುಖವನ್ನು ನೋಡದೆ ನಾನು ಜೀವಿಸುವುದು ಹೇಗೆ? ಪತಿಯ ಪ್ರೀತಿಯೂ ಇಲ್ಲದೆ ನಿನ್ನನ್ನೂ ತೊರೆದು ಕೃಪಣಳಾಗಿ ನಾನು ಬಾಳುವುದುಂಟೇ? ನೀನು ಚೆನ್ನಾಗಿ ಬದುಕಬೇಕೆಂಬ ಉದ್ದೇಶದಿಂದ ನಾನು ಮಾಡಿದ ದೇವತಾ ಪ್ರಾರ್ಥನೆಗಳೂ ವ್ರತೋಪವಾಸಗಳೂ ದಾನಧರ್ಮಗಳೂ ಇವೆಲ್ಲವೂ ಬೂದಿಯಲ್ಲಿ ಮಾಡಿದ ಹೋಮದಂತೆ ನಿಷ್ಫಲವಾದುವು. ನಿನ್ನ ಅರಣ್ಯವಾಸದ ಸುದ್ದಿಯನ್ನು ಕೇಳಿದರೂ ನನ್ನ ಎದೆಯು ಸೀಳಿಹೋಗದೆ ಇರುವುದರಿಂದ ಪಾಪಿಯಾದ ವಿಧಿಯು ನನ್ನ ಹೃದಯವನ್ನು ವಜ್ರದಿಂದ ಮಾಡಿರಬಹುದೆಂದು ನೆನೆಸುತ್ತೇನೆ. ಅರಣ್ಯದಲ್ಲಿ ಸಿಂಹವು ಹೆಣ್ಣುಹುಲ್ಲೆಯನ್ನು ಎಳೆದೊಯ್ವಂತೆ ಯಮನು ನನ್ನನ್ನು ತನ್ನ ಪಟ್ಟಣಕ್ಕೆ ಏತಕ್ಕಾಗಿ ಎಳೆದೊಯ್ಯುವುದಿಲ್ಲವೋ! ದುಃಖಕಾಲದಲ್ಲಿ ಮರಣವುಂಟಾಗುವುದಿಲ್ಲವೆಂದು ಹಿರಿಯರು ಹೇಳುವ ಮಾತು ಈಗ ನನ್ನಲ್ಲೇ ನಿದರ್ಶನಕ್ಕೆ ಬಂದಿತು. ಮುದ್ದಾದ ಕರುವನ್ನು ಕಾಣದ ಎಳೆಗಂದಿಯೋಪಾದಿಯಲ್ಲಿ ಸಂಕಟವನ್ನನುಭವಿಸುತ್ತ ಪಾಪಿಯಾದ ನಾನು ಬದುಕಿರುವುದಕ್ಕಿಂತ ಸಾಯುವುದೇ ಒಳ್ಳೆಯದು. ಅಥವಾ ನಾನೂ ನಿನ್ನೊಡನೆ ವನಕ್ಕೆ ಬರುವೆನು. ಕರೆದುಕೊಂಡು ಹೋಗೆಂದು ಮೊರೆಯಿಟ್ಟು ಹಂಬಲಿಸಿ ಕಣ್ಣೀರುಗಳನ್ನು ಸುರಿಸುತ್ತ ಅನಾಥೆಯಂತೆ ಪ್ರಲಾಪಿಸುತ್ತಿರಲು;

ಆಗ ಲಕ್ಷ್ಮಣನು ಕೌಸಲ್ಯೆಯನ್ನು ಕುರಿತು—ಹೆಂಗಸಿಗೆ ಅಧೀನನೂ ಮುದುಕನೂ ಬುದ್ಧಿಯಿಲ್ಲದವನೂ ಆದ ತಂದೆಯ ಮಾತನ್ನು ಕೇಳಿ ಈ ರಾಮನು ರಾಜ್ಯಶ್ರೀಯನ್ನು ಬಿಟ್ಟು ವನವಾಸಕ್ಕೆ ಹೋಗುವುದು ಯಾವ ಧರ್ಮವು? ರಾಜ್ಯಾಭಿಷೇಕಕ್ಕೆ ಯೋಗ್ಯನಾದ ಜ್ಯೇಷ್ಠಕುಮಾರನನ್ನು ವನವಾಸಕ್ಕೆ ಕಳುಹಿಸುವುದಾದರೆ ಈತನಲ್ಲಿ ಯಾವ ದೋಷವನ್ನೂ ಅಪರಾಧವನ್ನೂ ಕಂಡಿದ್ದಾನೆ? ತೋರಿಸಿಕೊಡಲಿ. ಇಲ್ಲದಿದ್ದರೆ ಅವನ ಮಾತನ್ನು ನಂಬುವುದು ಹೇಗೆ? ಲೋಕದಲ್ಲಿ ಬುದ್ಧಿಶೂನ್ಯರಾದ ವೃದ್ಧರೂ ಸ್ತ್ರೀಪರವಶರೂ ಎಷ್ಟು ವಿಧವಾದ ಅನಾಹುತಗಳನ್ನು ಮಾಡಲೊಲ್ಲರು?

ಇಂಥವರು ಪರಾಧೀನದಲ್ಲಿರುವುದಕ್ಕೆ ಅರ್ಹರೇ ಹೊರತು ಸ್ವಾತಂತ್ರ್ಯಕ್ಕೆ ಯೋಗ್ಯರಲ್ಲವು. ಅದುಕಾರಣ ಬುದ್ಧಿಶೂನ್ಯನಾದ ದಶರಥನು ಇನ್ನೂ ವಿಪರೀತವಾಗಿ ಹರಟುವುದಾದರೆ ಅವನನ್ನು ಸಂಹರಿಸದೆ ಬಿಡುವುದಿಲ್ಲವು. ನನ್ನೊಡನೆ ಕೂಡಿ ರಾಜ್ಯಭಾರವನ್ನು ಮಾಡುವಂಥ ಈ ರಾಮನಿಗೆ ಅಪ್ರಿಯವನ್ನು ಆಚರಿಸುವುದಕ್ಕೆ ಸಮರ್ಥನು ಯಾವನು ? ಒಂದುವೇಳೆ ಕೈಕೇಯಿಯ ದುರ್ಬೋಧನೆಗೆ ಒಳಗಾಗಿ ಭರತನೇನಾದರೂ ನನಗೆ ಅಹಿತವನ್ನು ಮಾಡಿದರೆ ನಿಮಿಷಮಾತ್ರದಲ್ಲಿ ಅವನನ್ನೂ ಕೊಂದುಬಿಡುವೆನು. ಗರ್ವದಿಂದ ಕಾರ್ಯಾಕಾರ್ಯವಿವೇಕಹೀನನಾಗಿ ದುರ್ಮಾರ್ಗಪ್ರವರ್ತಕನಾದ ಗುರುವನ್ನಾದರೂ ಶಿಕ್ಷಿಸಬೇಕೆಂದು ಶಾಸ್ತ್ರವಚನವಿರುವುದು. ಲೋಕದಲ್ಲಿ ಯಾವ ಮನುಷ್ಯನು ಮೃದುಸ್ವಭಾವಿಯಾಗಿರುವನೋ ಅವನು ಜನರಿಂದ ಹೆಚ್ಚಾಗಿ ಬಾಧಿಸಲ್ಪಡುವನೆಂದಿರುವಲ್ಲಿ ಇಂಥವನು ಮೂಢಾತ್ಮರಾದವರಲ್ಲಿದ್ದರೆ ಹೇಳತಕ್ಕುದೇನು ? ಎಂದು ಕೋಪೋದ್ರೇಕದಿಂದ ಕಠಿಣವಾಗಿ ಮಾತಾಡುತ್ತಿರುವ ಲಕ್ಷ್ಮಣನನ್ನು ನೋಡಿ ರಾಮನು---ಎಲೈ ತಮ್ಮನೇ, ಅವಿಚಾರದಿಂದ ನೀನು ಇಂಥ ಮಾತುಗಳನ್ನು ಆಡಬಹುದೇ ? ಒಳ್ಳೆಯದು, ನೀನು ಹೀಗೆ ಆಡಿದುದು ನಿನ್ನ ಸ್ವಭಾವದಿಂದಲ್ಲ. ನಿನಗಿರುವ ನನ್ನ ಮೇಲಣ ವ್ಯಾಮೋಹವೆಂಬ ಹುಚ್ಚಿನಿಂದ ಕೂಡಿ ಆಡಿದವನಾಗಿದ್ದೀಯೆ. ಆದರೂ ನೀನಾಡಿದ ಮಾತು ಯುಕ್ತವಾದುದೇ ಸರಿ. ನಿನ್ನೊಡನೆಯೂ ನನ್ನೊಡನೆಯೂ ಹಗೆತನವನ್ನು ಸಂಪಾದಿಸಿಕೊಂಡು ಭರತನಿಗೆ ರಾಜ್ಯವನ್ನು ಕೊಡುವವರು ಯಾರುಂಟು ? ಆದರೆ ನಾನು ನನ್ನ ತಮ್ಮನಾದ ಭರತನಲ್ಲಿ ಬಹು ಪ್ರೀತಿಯುಳ್ಳವನಾಗಿದ್ದೇನೆ. ಆದುದರಿಂದ ಭರತನು ಕೋಸಲರಾಜ್ಯವನ್ನಾಳುವುದು ನನಗೆ ಬಹುಸಂತೋಷಕರವಾದುದೇ. ಯಾಕೆಂದರೆ ಆತನು ಬೇರೆಯಲ್ಲ, ನಾವು ಬೇರೆ ಅಲ್ಲ. ನಮ್ಮೆಲ್ಲರ ದೇಹಗಳು ಯಾರಿಂದುಂಟಾದುವು ? ತಂದೆಯಾದ ದಶರಥರಾಜನಿಂದಲ್ಲವೇ ? ಆತನು ತನ್ನ ಸೊತ್ತುಗಳಾದ ಈ ನಮ್ಮ ದೇಹಗಳನ್ನು ಏನು ಮಾಡಿದರೂ ಮಾಡಬಹುದು. ಆ ಭಾಗದಲ್ಲಿ ಸ್ವಲ್ಪವಾದರೂ ಅಡ್ಡಿಮಾಡುವವರು ಯಾರುಂಟು ? ಲೋಕದಲ್ಲಿ ಸರ್ವರಿಗೂ ತಂದೆಯೇ ಪರದೇವತೆಯು. ಆದುದರಿಂದ ಆತನ ವಿಷಯದಲ್ಲಿ ನೀನು ಇಂಥ ಮಾತುಗಳನ್ನಾಡುವುದು ಪಾಪಕರವೆಂದು ಹೇಳಿ ಲಕ್ಷ್ಮಣನನ್ನು ಸಮಾಧಾನಪಡಿಸುತ್ತಿರಲು ;

ಆಗ ಕೌಸಲ್ಯಾದೇವಿಯು—ಎಲೈ ನನ್ನ ಮುದ್ದುಮಗನಾದ ರಾಮನೇ, ನಿನ್ನನ್ನು ಅಗಲಿದ ಮೇಲೆ ಸುಖದಿಂದಲೂ ಪ್ರಾಣಗಳಿಂದಲೂ ನನಗೆ ಪ್ರಯೋಜನವಿಲ್ಲವು. ಅದುಕಾರಣ ನಾನು ನಿನ್ನೊಡನೆ ಇದ್ದುಕೊಂಡು ಗಡ್ಡೆಗೆಣಸುಗಳನ್ನು ತಿನ್ನುತ್ತ ಹುಲ್ಲಿನ ಹಾಸಿಗೆಯ ಮೇಲೆ ಮಲಗುತ್ತ ಕಾಲಕಳೆಯುವುದೇ ನನಗೆ ಪರಮ ಸುಖದಾಯಕವಾಗಿರುವುದು. ಅದುಕಾರಣ ನಾನು ಕಷ್ಟಕ್ಕೂ ದುಃಖಕ್ಕೂ ಒಳಗಾಗದೆ ಸುಖದಿಂದಿರಲೆಂಬ ಕೃಪೆಯಿಂದಲಾದರೂ ನನ್ನನ್ನೂ ವನಕ್ಕೆ ಕರೆದುಕೊಂಡು ಹೋಗು. ಹಾಗೆ ಮಾಡದಿದ್ದರೆ ನಿನ್ನ ತಂದೆಯಾದ ದಶರಥನು ತನ್ನ ಮೋಹದ ಪತ್ನಿಯಾದ ಕೈಕೇಯಿಯ ಮಗನಿಗೆ ರಾಜ್ಯವನ್ನು ಸಂತೋಷದಿಂದ ಕೊಟ್ಟುಕೊಳ್ಳಲಿ.

ನೀನು ವನಕ್ಕೆ ಹೋಗದೆ ಇಲ್ಲಿಯೇ ಇದ್ದುಕೊಂಡು ಶೋಕಸಂತಪ್ತಳಾದ ನನ್ನನ್ನು ಉಪಚರಿಸುವವನಾಗು. ನೀನು ಈ ಕೆಲಸವನ್ನಾದರೂ ಮಾಡದೆ ನನ್ನ ಸವತಿಯ ಸಹಿಸಲಶಕ್ಯವಾದ ಕ್ರೂರವಚನಗಳನ್ನು ಕೇಳುವವಳಾಗಿ ದಾರುಣವಾದ ವ್ಯಥೆಯಿಂದ ಬಾಧಿಸಲ್ಪಡುತ್ತಿರುವ ನನ್ನನ್ನು ಇಲ್ಲಿ ಬಿಟ್ಟುಹೋಗುವುದು ನಿನಗೆ ನಿಜವಾಗಿಯೂ ಧರ್ಮವಲ್ಲವು. ಲೋಕದಲ್ಲಿ ಪುತ್ರರಾದವರಿಗೆ ತಂದೆತಾಯಿಗಳಿಬ್ಬರೂ ಸಮಾನರಲ್ಲವೇ? ಹೌದು, ಹೀಗಿರುವಲ್ಲಿ ನೀನು ತಂದೆಯ ಮಾತನ್ನು ಮಾತ್ರ ಕೇಳಿ ತಾಯಿಯ ಮಾತನ್ನು ಅತಿಕ್ರಮಿಸುವುದು ಯುಕ್ತವಲ್ಲ. ಇದರ ಮೇಲೂ ನೀನು ನನ್ನ ಮಾತನ್ನು ಮೀರಿ ನನ್ನನ್ನು ಇಲ್ಲೇ ಬಿಟ್ಟು ವನಕ್ಕೆ ಹೋದರೆ ನಾನು ಪ್ರಾಣಗಳನ್ನು ಬಿಡುವುದೇ ನಿಜವು ಎಂದು ಮೊರೆಯಿಟ್ಟು ದುಃಖಿಸುತ್ತಿರುವ ತಾಯಿಯನ್ನು ನೋಡಿ ರಾಮನು— ಎಲೈ ಪೂಜ್ಯಳಾದ ತಾಯಿಯೇ, ತಂದೆಯ ಮಾತನ್ನು ಮೀರಿ ನಡೆಯುವುದಕ್ಕೆ ನನಗೆ ಎಷ್ಟುಮಾತ್ರವೂ ಶಕ್ತಿಸಾಲದು. ನಾನು ಭಯಭಕ್ತಿಯಿಂದ ನಮಸ್ಕರಿಸಿ ನಿನ್ನನ್ನು ಬೇಡಿಕೊಳ್ಳುವೆನು. ನಾನು ವನಕ್ಕೆ ಹೋಗುವುದಕ್ಕಾಗಿ ಅಪೇಕ್ಷಿಸುತ್ತೇನೆ. ನಿನ್ನನ್ನು ದುಃಖಪಡಿಸುವುದರಿಂದ ಪಾಪಿಯಾದ ನನ್ನಲ್ಲಿ ದಯೆಯಿಟ್ಟು ಅಪ್ಪಣೆಯನ್ನು ದಯಪಾಲಿಸು. ಪೂರ್ವದಲ್ಲಿ ನಮ್ಮ ವಂಶೀಯನಾದ ಸಗರಚಕ್ರವರ್ತಿಯ ಮಕ್ಕಳಾದ ಅರವತ್ತು ಸಾವಿರ ಜನರು ತಂದೆಯ ಆಜ್ಞೆಯಿಂದ ಭೂಮಿಯನ್ನು ಅಗೆದು ಮೃತರಾಗಲಿಲ್ಲವೇ? ಮತ್ತು ಪರಶುರಾಮನು ತಂದೆಯಾದ ಜಮದಗ್ನಿಯ ಅಪ್ಪಣೆಯಿಂದ ತನ್ನ ತಾಯಿಯಾದ ರೇಣುಕೆಯನ್ನು ಕೊಡಲಿಯಿಂದ ಕಡಿಯಲಿಲ್ಲವೇ? ಇಂಥವರೆಲ್ಲಾ ತಮ್ಮ ತಮ್ಮ ಪಿತೃಗಳ ಆಜ್ಞೆಯನ್ನು ದಯಪಾಲಿಸುವುದಕ್ಕಾಗಿ ಎಷ್ಟೋ ಅಸಾಧ್ಯಕಾರ್ಯಗಳನ್ನು ಮಾಡಿದ್ದಾರೆಂಬುದನ್ನು ನೀನೇ ತಿಳಿದಿರುವೆಯಲ್ಲವೇ? ನಾನು ಮಾತ್ರ ನನ್ನ ತಂದೆಯ ಸಾಮಾನ್ಯವಾದ ಇಂಥ ಆಜ್ಞೆಯನ್ನು ನೆರವೇರಿಸುವುದು ಯುಕ್ತವಲ್ಲವೆಂದು ಹೇಳುವುದು ಯಾವ ಧರ್ಮವು? ಪಿತೃಗಳ ಆಜ್ಞೆಯನ್ನು ಪರಿಪಾಲಿಸುವುದು ಪುತ್ರರಿಗೆ ಶ್ರೇಯಸ್ಕರವೆಂದು ಧರ್ಮಶಾಸ್ತ್ರವಚನವಿರುವುದು. ಅದುಕಾರಣ ನಾನು ಈ ಕಾರ್ಯವನ್ನು ನೆರವೇರಿಸುವುದು ನಮ್ಮ ವಂಶಕ್ಕೇ ಭೂಷಣಪ್ರಾಯವಾಗಿರುವುದು. ಹೀಗಿರುವಲ್ಲಿ ತಂದೆಯು ಕ್ಷೇಮವಂತನಾಗಿ ಮಹೋನ್ನತ ಪದವಿಯಲ್ಲಿರುವಾಗ ನಾನು ನಿನ್ನನ್ನು ವನಕ್ಕೆ ಕರೆದುಕೊಂಡು ಹೋಗುವುದೂ ನೀನು ನನ್ನ ಜತೆಯಲ್ಲಿ ಬರುವುದೂ ಕೂಡ ಬಹಳ ಅಯುಕ್ತವು. ಲೋಕದಲ್ಲಿ ಸ್ತ್ರೀಯರಿಗೆ ಪತಿಗಿಂತ ಪ್ರಿಯರಾದವರು ಯಾರೂ ಇಲ್ಲವು. ಮತ್ತು ಮಾನಿನಿಯರಿಗೆ ತಾಯಿತಂದೆ ಅಣ್ಣತಮ್ಮ ನೆಂಟರು ಇಷ್ಟರು ಮುಂತಾದವರೆಲ್ಲರಿಗಿಂತಲೂ ಪತಿಯೇ ಪರಮಪ್ರಿಯನೂ ಸೇವ್ಯನೂ ಆಗಿದ್ದಾನೆ. ಇದೂ ಅಲ್ಲದೆ ಈಗ ನನ್ನ ತಂದೆಯು ಕೈಕೇಯಿಯ ಮಾತುಗಳೆಂಬ ಸಂಕೋಲೆಯಲ್ಲಿ ಸಿಕ್ಕಿಬಿದ್ದವನಾಗಿ ಸತ್ಯವನ್ನು ಮೀರುವುದಕ್ಕೂ ನನ್ನನ್ನು ವನಕ್ಕೆ ಕಳುಹಿಸಿಬಿಡುವುದಕ್ಕೂ ಅಶಕ್ತನಾದುದರಿಂದ ಇತಿಕರ್ತವ್ಯತಾಮೂಢನಾಗಿ ಶೋಕಸಾಗರದಲ್ಲಿ ಮುಳುಗಿ ದಡವನ್ನು ಕಾಣದೆ ಪ್ರಾಣಗಳನ್ನೇ ಬಿಡುವುದಕ್ಕೆ ಯೋಗ್ಯವಾದ ದುರವಸ್ಥೆಯಲ್ಲಿದ್ದಾನೆ. ನಿನ್ನ ಪತಿಗೆ ಒದಗಿರುವ ಇಂಥ

ವಿಪತ್ಕಾಲದಲ್ಲಿ ಹಿರಿಯ ಹೆಂಡತಿಯಾಗಿಯೂ ಹಿತಚಿಂತಕಳಾಗಿಯೂ ಸಕಲ ಧರ್ಮಗಳನ್ನೂ ತಿಳಿದವಳಾಗಿಯೂ ಇರುವ ನೀನು ಪುಣ್ಯಪ್ರದವಾದ ಪತಿಯ ಶುಶ್ರೂಷೆಯನ್ನು ಇಂಥ ಕಾಲದಲ್ಲಿ ಬಿಟ್ಟು ಅವಿಚಾರದಿಂದ ನನ್ನೊಡನೆ ಬಂದರೆ ಈ ಲೋಕದಲ್ಲಿ ಅಪಕೀರ್ತಿಯೂ ಪರಲೋಕದಲ್ಲಿ ಸದ್ಗತಿಹಾನಿಯೂ ನಮ್ಮಿಬ್ಬರಿಗೂ ಸಂಭವಿಸುವುವೆಂಬುದನ್ನು ಪುತ್ರನಾದ ನಾನು ನಿನಗೆ ಹೇಳಬೇಕಾದುದಿಲ್ಲವಷ್ಟೆ? ಆದುಕಾರಣ ನನ್ನ ಅರಣ್ಯಪ್ರಯಾಣಕ್ಕಾಗಿ ಅಪ್ಪಣೆಯನ್ನು ಕೊಡುವವಳಾಗು. ಇನ್ನು ಮೇಲೆ ನಾನು ಹೊರಡುವೆನು. ನನ್ನ ಪ್ರಾಣಸಾಕ್ಷಿಯಾಗಿ ನನ್ನ ಪ್ರಯಾಣಕ್ಕೆ ವಿಘ್ನಕರವಾದ ಮಾತುಗಳನ್ನಾಡಬೇಡ. ನಾನು ಹದಿನಾಲ್ಕು ಸಂವತ್ಸರಗಳ ವರೆಗೂ ವನದಲ್ಲಿದ್ದು ನನ್ನ ತಂದೆಯ ಆಜ್ಞೆಯನ್ನು ನೆರವೇರಿಸಿ ಆ ಮೇಲೆ ಬಂದು ನಿನ್ನ ಸನ್ನಿಧಾನವನ್ನು ಸೇರುವೆನು. ನಿನಗೂ ನನಗೂ ಸೀತೆಗೂ ಲಕ್ಷ್ಮಣನಿಗೂ ಸುಮಿತ್ರೆಗೂ ವೃದ್ಧನಾದ ದಶರಥನ ಅಪ್ಪಣೆಯ ಮೇರೆಗೆ ನಡೆಯತಕ್ಕುದೇ ಮುಖ್ಯವಾದ ಧರ್ಮವಾಗಿರುವುದು. ಆದುದರಿಂದ ವಿಚಾರಪರಳಾದ ನೀನು ಶೋಕವನ್ನು ಸಹಿಸಿಕೊಂಡು ಆಶೀರ್ವಾದವನ್ನು ಮಾಡಿ ಅಪ್ಪಣೆಕೊಟ್ಟು ನನ್ನನ್ನು ವನಕ್ಕೆ ಕಳುಹಿಸಿಕೊಡು ಎಂದು ಬೇಡಿಕೊಂಡನು.

ಆಗ ಕೌಸಲ್ಯೆಯು ಆ ಮಾತುಗಳನ್ನು ಕೇಳಿ ತನಗೆ ಪ್ರಾಪ್ತವಾಗುವ ಪುತ್ರವಿಯೋಗ ದುಃಖವನ್ನು ಸಹಿಸಲಾರೆನೆಂಬ ಮಹಾವ್ಯಥೆಯಿಂದ ಬಾಧಿತಳಾಗಿ ಭೂಮಿಯಲ್ಲಿ ಬಿದ್ದು ಮೂರ್ಛಿತಳಾದಳು. ಆಗ ಲಕ್ಷ್ಮಣನೂ ರಾಮನ ಕಾಲುಗಳ ಮೇಲೆ ಬಿದ್ದು ಮೂರ್ಛೆಹೊಂದಿದನು. ಕೂಡಲೆ ಸುಮಿತ್ರೆಯೇ ಮೊದಲಾದ ದಶರಥನ ಅಂತಃಪುರದ ಸ್ತ್ರೀಯರೆಲ್ಲರೂ ಗುಂಪಾಗಿ ಬಂದು—ಹಾ! ರಾಮಾ, ರಾಮಾ ಎಂದು ಮೊರೆಯಿಟ್ಟು ದೀನಧ್ವನಿಯನ್ನು ಮಾಡುತ್ತ—ನಮ್ಮೆಲ್ಲರಿಗೂ ಪ್ರಾಣಭೂತನಾಗಿದ್ದ ನೀನು ನಮ್ಮೆಲ್ಲರನ್ನೂ ಬಿಟ್ಟು ವನಕ್ಕೆ ಹೋಗುವೆಯಾ? ನಿನ್ನ ತಾಯಿಯಾದ ಕೌಸಲ್ಯೆಯಲ್ಲಿಟ್ಟಿರುವಂತೆ ನಮ್ಮೆಲ್ಲರಲ್ಲೂ ಮಾತೃಭಕ್ತಿಯನ್ನಿಟ್ಟು ನಡೆದುಕೊಳ್ಳುತ್ತಿದ್ದೆಯಲ್ಲಾ! ನೀನು ಒಂದು ದಿನವಾದರೂ ನಮ್ಮಲ್ಲಿ ಅಪ್ರಿಯವನ್ನು ಮಾಡಿದವನಲ್ಲವಲ್ಲಾ! ಎಂದಾದರೂ ನೀನಾಡಿದ ಕ್ರೂರವಚನವನ್ನು ನಮ್ಮ ಕಿವಿಗಳಿಂದ ಕೇಳಿದುದಿಲ್ಲವಲ್ಲಾ! ಏನಾದರೂ ಒಂದು ಕಾರಣದಿಂದ ನಾವು ಚಿಂತೆಪಡುತ್ತಿದ್ದರೆ ಶೀಘ್ರವಾಗಿ ನಮ್ಮ ಸಮೀಪಕ್ಕೆ ಬಂದು ನಿನ್ನ ಮೃದುವಚನಗಳಿಂದ ನಮ್ಮನ್ನು ಸಮಾಧಾನಮಾಡುತ್ತಿದ್ದೆಯಲ್ಲಾ! ಇಂಥ ವಿನೀತನಾದ ನೀನು ನಮ್ಮೆಲ್ಲರನ್ನೂ ಬಿಟ್ಟು ಕಾಡಿಗೆ ಹೋದರೆ ನಮಗೇನುಗತಿ? ವೃದ್ಧರಿಗೆ ಬುದ್ಧಿಮಾಂದ್ಯವೆಂಬ ಲೋಕದ ಗಾದೆಗನುಸಾರವಾಗಿ ಮುದುಕನಾದ ಈ ದಶರಥನು ವಿವೇಕವಿಲ್ಲದೆ ಸರ್ವಲೋಕಪ್ರಿಯನಾದ ನಿನ್ನನ್ನು ಅನ್ಯಾಯವಾಗಿ ವನಕ್ಕೆ ಕಳುಹಿಸುವನು ಎಂದು ರೋದನಧ್ವನಿಗಳನ್ನು ಮಾಡುತ್ತ ಅನಾಥೆಯರಂತೆ ರಾಮನ ಮುಂದೆ ಬಿದ್ದು ಮೂರ್ಛೆಹೊಂದಲು; ಆಗ ರಾಮನು ಅವರನ್ನು ನೋಡಿ ಮಹಾದುಃಖದಿಂದ ಕೂಡಿದವನಾದಾಗ್ಯೂ ಧೈರ್ಯಯುಕ್ತನಾಗಿ ತನ್ನ ದುಃಖವನ್ನು ಹೊರಗೆ ತೋರ್ಪಡಿಸದೆ ಹೃದಯದಲ್ಲೇ ಅಡಗಿಸಿಕೊಂಡು ತಾನು ಮಾಡಿದ ಶೈತ್ಯೋಪಚಾರದಿಂದ ಎಲ್ಲರನ್ನೂ ಚೇತರಿಸಿಕೊಳ್ಳುವಂತೆ ಮಾಡಿ ಎಲ್ಲ

ರಿಗೂ ಕೈಮುಗಿದು ನಿಂತುಕೊಂಡು—ನೀವು ನನ್ನ ಮುಂದೆ ಪೂಜ್ಯನಾದ ನನ್ನ ತಂದೆಯನ್ನು ನಿಂದಿಸುವುದರಿಂದ ನನಗೂ ಮಹಾದುಃಖವುಂಟಾಗುವುದು. ಗುರುವೂ ತಂದೆಯೂ ಒಡೆಯನೂ ಮುದುಕನೂ ಆಗಿರುವ ದಶರಥರಾಜನು ಕೋಪದಿಂದಾದರೂ ಸಂತೋಷದಿಂದಲೇ ಆದರೂ ಅಥವಾ ಕಾಮದಿಂದಲೇ ಆದರೂ ಎಂಥ ಕೆಟ್ಟಕೆಲಸವನ್ನು ಆಜ್ಞಾಪಿಸಿದಾಗ್ಯೂ ನಾವೆಲ್ಲರೂ ಒಳ್ಳೆಯದು ಕೆಟ್ಟುದೆಂದು ಬದಲಾಡದೆ ಅದನ್ನು ಅವಶ್ಯಕವಾಗಿ ಮಾಡಲೇಬೇಕು. ನಮಗೆ ಇದಕ್ಕಿಂತಲೂ ಹೆಚ್ಚಾದ ಧರ್ಮಕಾರ್ಯವು ಬೇರೆ ಯಾವುದೂ ಇಲ್ಲವು. ಅದುಕಾರಣ ನೀವೆಲ್ಲರೂ ನನ್ನಲ್ಲಿ ದಯೆಯಿಟ್ಟು ಆಶೀರ್ವದಿಸಿ ನನ್ನ ಅರಣ್ಯಗಮನಕ್ಕೆ ಅನುಮತಿಸುವವರಾಗಬೇಕು. ನಾನು ಬಲುಬೇಗ ಬಂದು ನಿಮ್ಮ ಬಳಿಯನ್ನು ಸೇರುವೆನು. ಹದಿನಾಲ್ಕು ವರುಷಗಳು ಹದಿನಾಲ್ಕು ದಿನಗಳಂತೆ ಸುಲಭವಾಗಿ ಕಳೆದುಹೋಗುವುವು. ನೀವೆಲ್ಲರೂ ನನ್ನ ವಿಯೋಗಪ್ರಾಪ್ತಿಗಾಗಿ ದುರಂತ ದುಃಖಸಮುದ್ರದಲ್ಲಿ ಬಿದ್ದಿರುವ ದಶರಥರಾಜನ ಕಿವಿಗಳಿಗೆ ಕ್ರೂರವಾದ ಮಾತುಗಳನ್ನಾಡದೆ ವಿಹಿತವಾದ ಮಾತುಗಳನ್ನೇ ಆಡುತ್ತ ಆತನಿಗೆ ಸಂತೋಷವಾಗುವಂತೆ ಶುಶ್ರೂಷೆಯನ್ನು ಮಾಡಿಕೊಂಡಿರಬೇಕೆಂದು ಬೇಡಿಕೊಳ್ಳುತ್ತೇನೆ. ಪಾಪಿಯಾದ ನನ್ನಲ್ಲಿ ಕೃಪೆಯಿಟ್ಟು ದುಃಖವನ್ನು ಸಹಿಸಿಕೊಳ್ಳಿರೆಂದು ಹೇಳಿಕೊಳ್ಳುತ್ತಿರುವ ರಾಮನ ಮೃದುವಚನಗಳನ್ನು ಕೇಳಿ ಎಲ್ಲರಿಗೂ ಮತ್ತೂ ಮಹಾದುಃಖವುಂಟಾಗಿ ಕೈಕೇಯಿಯನ್ನು ಬೈಯ್ದು ಶಪಿಸುತ್ತಿದ್ದರು.

ಆಗ ಕೌಸಲ್ಯೆಯು ತಂದೆಯ ಪ್ರತಿಜ್ಞೆಯನ್ನು ಕಾಪಾಡುವುದರಲ್ಲಿ ಬದ್ಧಾದರನಾದ ರಾಮನನ್ನು ನೋಡಿ—ಅಯ್ಯೋ, ದುರ್ವಿಧಿಯೇ, ಹುಟ್ಟಿದಂದಿನಿಂದ ದುಃಖವನ್ನರಿಯದೆ ಧರ್ಮಾತ್ಮನೂ ಸರ್ವಪ್ರಾಣಿಪ್ರಿಯನೂ ದಶರಥನಿಂದ ನನ್ನಲ್ಲಿ ಜನಿಸಿದವನೂ ಆಗಿರುವ ರಾಮನಿಗೆ ಇಂಥ ಕಷ್ಟವನ್ನು ಕೊಡಬಹುದೇ? ಯಾವ ಸುಕುಮಾರಶರೀರಧಾರಿಯಾದ ರಾಮನ ದಾಸಭೃತ್ಯರೂ ಕೂಡ ಮೃಷ್ಟಾನ್ನವನ್ನುಂಡು ದಣಿದು ಅಮೂಲ್ಯವಾದ ಉಡಿಗೆತೊಡಿಗೆಗಳನ್ನುಟ್ಟು ತೊಟ್ಟು ನಿರಂತರವೂ ಸುಖದಲ್ಲಿರುತ್ತಿದ್ದರೋ ಅಂಥ ಮಹಾತ್ಮನಾದ ರಾಮನಿಗೆ ಜಡೆಯನ್ನು ಧರಿಸಿ ನಾರಸೀರೆಯನ್ನುಟ್ಟು ಜಿಂಕೆಯ ಚರ್ಮವನ್ನು ಹೊದೆದು ಭಯಂಕರವಾದ ಮಹಾರಣ್ಯಮಧ್ಯದಲ್ಲಿ ಕಲ್ಮುಳ್ಳುಗಳಿಂದ ಕೂಡಿ ದುರ್ಗಮವಾದ ದಾರಿಗಳಲ್ಲಿ ಬರಿಗಾಲುಗಳಿಂದ ನಡೆಯುತ್ತ ತನ್ನ ಕೈಗುದ್ದಲಿಯಿಂದಗೆದು ಗಡ್ಡೆಗೆಣಸುಗಳನ್ನು ತಂದು ತಿಂದು ಬದುಕುವ ದುರವಸ್ಥೆಯನ್ನು ಕೊಡಬಹುದೇ? ಕಷ್ಟವೆಂಬುದನ್ನು ಸ್ವಪ್ನದಲ್ಲಿಯಾದರೂ ಕಂಡರಿಯದವನಾದ ನನ್ನ ಪ್ರಿಯಕುಮಾರನಿಗೆ ಇಂಥ ಭಯಂಕರವಾದ ವಿಪತ್ತನ್ನು ತಂದೊದಗಿಸುವ ನಿನಗೆ ಲೇಶವಾದರೂ ಕರುಣವಿಲ್ಲವಲ್ಲಾ! ಅಯ್ಯೋ ಪಾಪಿಯಾದ ವಿಧಿಯೇ! ನಿರಪರಾಧಿಯಾದ ರಾಮನಿಗೆ ಇಂಥ ದುರವಸ್ಥೆಯನ್ನೀವುದಕ್ಕೆ ನಿನಗೆ ಮನಸ್ಸು ಹೇಗೆ ಬಂದಿತು? ಆದರೂ ಚಿಂತೆಯಿಲ್ಲ. ನಿನ್ನನ್ನು ಕುರಿತು ಇದೊಂದು ಮಾತನ್ನು ಬೇಡಿಕೊಳ್ಳುವೆನು. ನೀನು ದೀನಳಾದ ನನ್ನಲ್ಲಿ ಕನಿಕರವಿಟ್ಟು, ಈ ರಾಮನು ವನಕ್ಕೆ ಹೋಗುವುದಕ್ಕಿಂತಲೂ ಮೊದಲೇ ನನ್ನನ್ನು ಯಮನ ಪಟ್ಟಣಕ್ಕೆ ಕಳುಹಿಸು ಎನ್ನುತ್ತ

ನಾನಾ ವಿಧವಾಗಿ ಹಂಬಲಿಸಿ ಮೊರೆಯಿಡುತ್ತಿರುವ ತಾಯಿಯಾದ ಕೌಸಲ್ಯೆಯನ್ನು ನೋಡಿ ರಾಮನು ಆಕೆಯ ಕಾಲುಗಳನ್ನು ತನ್ನ ಕೈಗಳಿಂದ ಹಿಡಿದುಕೊಂಡು— ಅಮ್ಮಾ ತಾಯೇ, ನೀನು ಈ ರೀತಿಯಾಗಿ ದುಃಖಿಸುತ್ತಿರುವುದನ್ನು ನೋಡುತ್ತಿರುವ ನನಗೂ ಬಹುದುಃಖವುಂಟಾಗುವುದು. ಮತ್ತು ನೋಡುತ್ತಿರುವವರಾದ ಈ ಜನರೆಲ್ಲರೂ ಬಹುದುಃಖವೆಂಬ ಕಡಲಿನಲ್ಲಿ ಮುಳುಗುವರು. ಕೋಸಲದೇಶಾಧೀಶ್ವರನಿಗೆ ಪುತ್ರಿಯೂ ದಶರಥಮಹಾರಾಜನ ಪತ್ನಿಯೂ ಸಕಲನ್ಯಾಯಮಾರ್ಗಗಳನ್ನೂ ತಿಳಿದ ವೃದ್ಧಳೂ ಆಗಿರುವ ನೀನು ಆಪತ್ತು ಬಂದಾಗ ಧೈರ್ಯವನ್ನು ಅವಲಂಬಿಸಬೇಕೆಂದು ದೊಡ್ಡವರು ಹೇಳುವ ಮಾತನ್ನು ಮೀರಿ ಉತ್ತಮವಾದ ನಿನ್ನ ಬುದ್ಧಿವಿವೇಕಗಳನ್ನು ಶೋಕಕ್ಕೆ ಮಾರಿಬಿಡಬಹುದೇ? ಈ ಸಂಸಾರ ಮಾರ್ಗದಲ್ಲಿ ಸರ್ವರಿಗೂ ಸುಖದುಃಖಗಳು ದ್ವಂದ್ವವಾಗಿರುವುವು. ಇದೋ, ನೋಡು! ನಾವು ಅಪೇಕ್ಷಿಸದಿದ್ದರೂ ದುಃಖವು ಹೇಗೆ ಬಂದೊದಗಿತೋ ಹಾಗೆಯೇ ಸುಖವೂ ಕೂಡ ಅನಪೇಕ್ಷಿತವಾಗಿ ಬಂದೊದಗುವುದು. ಹಿಂದೆ ನಮ್ಮ ವಂಶದಲ್ಲಿ ಮಹಾರಾಜನೂ ಸತ್ಯಸಂಧನೂ ಆಗಿದ್ದ ಹರಿಶ್ಚಂದ್ರನ ಪಟ್ಟಮಹಿಷಿಯೂ ಮಹಾ ಪತಿವ್ರತೆಯೂ ಆಗಿದ್ದ ಚಂದ್ರಮತಿದೇವಿಯು ಪತಿಯ ಆಜ್ಞಾನುಸಾರವಾಗಿದ್ದು ಮಹಾಕಷ್ಟವನ್ನೂ ಕೂಡ ಅನುಭವಿಸಿದುದನ್ನೂ ಪುನಃ ಪತಿಯೊಡನೆ ಸುಖಸಾಮ್ರಾಜ್ಯಗಳನ್ನನುಭವಿಸುತ್ತ ಲೋಕದಲ್ಲಿ ಅಪಾರವಾದ ಯಶಸ್ಸನ್ನು ಪಡೆದುದನ್ನೂ ನೀನು ಕೇಳಿಲ್ಲವೇ? ಈಗ ದಶರಥ ಭೂಪಾಲನು ನನ್ನ ವಿಯೋಗವಾಗುವುದೆಂಬ ದುಃಖದಿಂದ ಪ್ರಾಣಗಳನ್ನು ಬಿಡುವವನಾಗಿದ್ದಾನೆ. ಪ್ರಾಜ್ಞಳಾದ ನೀನು ಇಂಥ ವೇಳೆಯಲ್ಲಿ ಹೆಚ್ಚಾದ ಕಷ್ಟವ್ಯಥಾದುಃಖಗಳಲ್ಲಿ ತಗುಲಿ ವಿಚಾರಗೆಟ್ಟಿರುವ ಆತನಿಗೆ ಹಿತಚಿಂತಕಳಾಗಿ ಧೈರ್ಯವನ್ನೂ ವಿವೇಕವನ್ನೂ ಹೇಳುತ್ತಿರುವವಳಾಗಿ ದುಃಖಸಮಾಧಾನವನ್ನು ಮಾಡುತ್ತ ಇಲ್ಲಿದ್ದರೆ ನಾನು ಕಾಡಿನಲ್ಲಿ ಹದಿನಾಲ್ಕು ಸಂವತ್ಸರಗಳನ್ನು ಹದಿನಾಲ್ಕು ದಿನಗಳನ್ನೋ ಎಂಬಂತೆ ಕಳೆದು ತಿರಿಗಿ ಶೀಘ್ರವಾಗಿ ನಿಮ್ಮ ಸನ್ನಿಧಾನಕ್ಕೆ ಬಂದು ನಿಮ್ಮನ್ನು ವಿಶೇಷವಾಗಿ ಸಂತೋಷಪಡಿಸುವೆನು. ಸ್ತ್ರೀಯರಿಗೆ ಪತಿಯೇ ಪರದೇವತೆಯೂ ಪ್ರಭುವೂ ಆಗಿದ್ದಾನೆ. ಇಂಥ ಆತನು ಜೀವಿತನಾಗಿರುವಲ್ಲಿ ನಿನಗೇನು ಕಡಮೆ? ಮತ್ತು ಭರತನು ಧರ್ಮಿಷ್ಠನೂ ಸರ್ವಭೂತಪ್ರಿಯನೂ ಭ್ರಾತೃವತ್ಸಲನೂ ಆಗಿದ್ದಾನೆ. ಆತನು ನಿನ್ನ ವಿಷಯದಲ್ಲಿ ಬಹಳ ಭಕ್ತಿಯಿಂದಲೂ ಗೌರವದಿಂದಲೂ ನಡೆದುಕೊಳ್ಳುವನು. ಎಲೈ ತಾಯಿಯೇ, ವಿಶೇಷವಾದ ಮಾತುಗಳಿಂದ ಪ್ರಯೋಜನವೇನು? ನಾನು ವನದಲ್ಲಿ ಹದಿನಾಲ್ಕು ಸಂವತ್ಸರಗಳ ವರೆಗೂ ಸುಖವಾಗಿದ್ದು ತಿರಿಗಿ ನಿನ್ನ ಸನ್ನಿಧಾನಕ್ಕೆ ಬರುವ ಹಾಗೆ ನೀನು ಪುಣ್ಯದಾಯಕವಾದ ಪತಿಶುಶ್ರೂಷೆಯನ್ನೂ ವ್ರತಹೋಮಾದಿಗಳನ್ನೂ ದಾನಧರ್ಮಗಳನ್ನೂ ದೇವತಾರ್ಚನೆಗಳನ್ನೂ ಮಾಡುತ್ತ ನನ್ನ ಬರುವಿಕೆಯನ್ನೇ ನಿರೀಕ್ಷಿಸಿಕೊಂಡು ಕಾಲವನ್ನು ಕಳೆಯುತ್ತಿದ್ದರೆ ಅನಂತರದಲ್ಲಿ ಸಕಲ ವಿಧ ಸುಖಸಂತೋಷಗಳನ್ನು ಅನುಭವಿಸುತ್ತ ನಿಶ್ಚಿಂತೆಯಿಂದಿರುವೆ. ಮತ್ತು ಮಹಾರಾಜನಾಗುವ ಭರತನಲ್ಲಿ ಯಾವಾಗಲೂ ಅಪ್ರಿಯವಾದ ಮಾತುಗಳನ್ನಾಡದೆ ನನ್ನಲ್ಲಿ ಪುತ್ರವಾತ್ಸಲ್ಯವನ್ನಿ

ಟ್ಟಿರುವಂತೆ ಆತನಲ್ಲೂ ಇಟ್ಟುಕೊಂಡಿರುವವಳಾಗು. ಬುದ್ಧಿಶಾಲಿಗಳು ತಮ್ಮ ವಿಪತ್ಕಾಲದಲ್ಲಿ ಯಾರಿಂದ ಏನುಂಟಾದಾಗ್ಯೂ ಅದನ್ನೆಲ್ಲಾ ಸಹಿಸಿಕೊಳ್ಳುತ್ತ ತಾಳ್ಮೆಯಿಂದಿರತಕ್ಕದು ಸ್ವಾಭಾವಿಕವಲ್ಲವೇ? ಎಂದು ಬಹುವಿಧವಾಗಿ ಹೇಳಿದನು.

ಈ ಪ್ರಕಾರವಾಗಿ ನಯನೀತಿಭರಿತವಾದ ಮಗನ ಮಾತುಗಳನ್ನು ಕೇಳಿ ಒಡಂಬಟ್ಟರೂ ಶೋಕಾರ್ತಳಾದ ಕೌಸಲ್ಯೆಯು ರಾಮನನ್ನು ನೋಡಿ—ಎಲೈ ಕಂದಾ, ನಿನ್ನ ತಂದೆಯ ಆಜ್ಞೆಯಿಂದ ವನವಾಸದಲ್ಲಿ ನಿಶ್ಚಿತಬುದ್ಧಿಯುಳ್ಳವನಾಗಿರುವ ನಿನ್ನನ್ನು ತಡೆಯುವುದಕ್ಕೆ ನನಗೆ ಶಕ್ತಿಸಾಲದು. ಇದೆಲ್ಲವೂ ಅಘಟನ ಘಟನ ಸಮರ್ಥನಾದ ಭಗವಂತನ ಸಂಕಲ್ಪವು. ಇದನ್ನು ಮೀರಿ ನಡೆಯುವುದಕ್ಕೆ ಯಾರಿಗೆ ತಾನೆ ಸಾಧ್ಯವಾಗುವುದು ? ಇಲ್ಲವು. ಅದುಕಾರಣ ಹೋಗು. ಮಗನೇ, ನಿನಗೆ ಮಂಗಳವಾಗಲಿ. ವನವಾಸದಲ್ಲಿ ನಿಯುಕ್ತವಾದ ದಿನಗಳನ್ನೆಲ್ಲಾ ಕಳೆದು ತಂದೆಯ ಆಜ್ಞೆಯನ್ನೆಲ್ಲಾ ನೆರವೇರಿಸುವುದರಿಂದ ಕೃತಾರ್ಥನಾಗಿ ಬಂದ ನಿನ್ನನ್ನು ನೋಡುವುದರಿಂದ ಪರಮಸಂತೋಷವನ್ನು ಹೊಂದುವೆನು ಎಂದು ಹೇಳಿ ಮಗನಿಗೆ ಮಂಗಳಾಶಾಸನವನ್ನು ಮಾಡುವುದಕ್ಕಾಗಿ ಶುದ್ಧಜಲದಿಂದ ಸ್ನಾನಮಾಡಿ ಧೌತವಸ್ತ್ರಗಳನ್ನುಟ್ಟುಕೊಂಡು ಶುದ್ಧಾಚಮನವನ್ನು ಮಾಡಿ ಪೂರ್ವದಿಙ್ಮುಖಿಯಾಗಿ ಕುಳಿತು ತ್ರಿಜಗತ್ಸೇವ್ಯನಾದ ಭಗವಂತನನ್ನು ಭಯಭರಿತ ಭಕ್ತಿಭಾವದಿಂದ ಧ್ಯಾನಿಸಿ ಸ್ತೋತ್ರಗಳನ್ನು ಸಮರ್ಪಿಸಿ—ಎಲೈ ದೀರ್ಘಾಯುಷ್ಮಂತನಾದ ಪುತ್ರನೇ, ನೀನು ಧೈರ್ಯದಿಂದಲೂ ನಿಯಮದಿಂದಲೂ ಯಾವ ಧರ್ಮವನ್ನು ಕಾಪಾಡುವೆಯೋ ಆ ಧರ್ಮವು ವನದಲ್ಲಿ ನಿನ್ನನ್ನು ಸುಖವಾಗಿ ರಕ್ಷಿಸಲಿ. ನೀನು ಪ್ರತಿನಿತ್ಯವೂ ಚೈತ್ಯದಲ್ಲಿಯೂ ದೇವಾಲಯಗಳಲ್ಲಿಯೂ ಮಹಾತ್ಮರಾದ ಯಾವ ದೇವತೆಗಳಿಗೆ ಭಕ್ತಿಯಿಂದ ನಮಸ್ಕರಿಸುತ್ತಿದ್ದೆಯೋ ಅವರೆಲ್ಲರೂ ನಿನ್ನನ್ನು ಕಾಡಿನಲ್ಲಿ ಕಾಪಾಡಲಿ. ಮತ್ತು ನೀನು ಮಹನೀಯರಾದ ಯಾವ ಯಾವ ಋಷಿಗಳನ್ನು ಪೂಜಿಸಿರುವೆಯೋ ಅವರೆಲ್ಲರ ಆಶೀರ್ವಾದವು ಅಡವಿಯಲ್ಲಿ ನಿನ್ನನ್ನು ಕಾಯಲಿ. ಪಾರ್ವತೀಸಮೇತನಾದ ಪರಮೇಶ್ವರನೂ ಷಣ್ಮುಖನೂ ಬೃಹಸ್ಪತಿಯೂ ಚಂದ್ರನೂ ಶುಕ್ರನೂ ಇಂದ್ರಾದಿ ಸಕಲ ದೇವತೆಗಳೂ ಆದಿಶೇಷನೇ ಮೊದಲಾದ ಉರಗೇಂದ್ರರೂ ಬ್ರಹ್ಮನೂ ವಿಷ್ಣುವೂ ಇವರೆಲ್ಲರೂ ಮಹಾರಣ್ಯದಲ್ಲಿ ನಿನ್ನನ್ನು ರಕ್ಷಿಸಲಿ. ವೃತ್ರಾಸುರಸಂಹಾರೋದ್ಯುಕ್ತನಾದಂಥ ತನ್ನ ಮಗನಾದ ಇಂದ್ರನಿಗೆ ಅದಿತಿಯು ಸಫಲವಾದ ಯಾವ ಮಂಗಳವನ್ನು ಮಾಡಿದಳೋ ಆ ಮಂಗಳವು ಅರಣ್ಯದಲ್ಲಿ ನಿನಗೆ ಕ್ಷೇಮದಾಯಕವಾಗಲಿ. ಅಮೃತವನ್ನು ತರುವುದಕ್ಕಾಗಿ ಸನ್ನದ್ಧನಾದ ಗರುಡನೆಂಬ ತನ್ನ ಮಗನಿಗೆ ವಿನತೆಯು ಯಾವ ಮಹಾ ಮಂಗಳವನ್ನು ಮಾಡಿದಳೋ ಆ ಮಂಗಳವು ಅರಣ್ಯದಲ್ಲಿ ನಿನಗೆ ಕಾರ್ಯಜಯವನ್ನುಂಟುಮಾಡಲಿ ಎಂದು ರಾಮನಿಗೆ ಮಂಗಳಾಶಾಸನವನ್ನು ಮಾಡಿ ಅವನನ್ನು ಆಲಿಂಗಿಸಿಕೊಂಡು ನೀನು ಅರಣ್ಯದಲ್ಲಿ ಆರೋಗದೃಢಕಾಯನಾಗಿದ್ದು ಶೀಘ್ರವಾಗಿ ಇಲ್ಲಿಗೆ ಬರುವವನಾಗು. ಸೂರ್ಯವಂಶೀಯ ಮಹಾರಾಜ ಪರಂಪರಾಕ್ರಮಾರೋಹಿತವಾದ ಅಯೋಧ್ಯಾ ಸಿಂಹಾಸನದಲ್ಲಿ ಕುಳಿತು ಸೀತಾಸಮೇತನಾಗಿ ಪಟ್ಟಾಭಿಷಿಕ್ತನಾದಂಥ

ನಿನ್ನನ್ನು ಪರಮಾನಂದದಿಂದ ನೋಡುವೆನು. ಈಗ ಸಂತೋಷದಿಂದ ಹೋಗಿ ಬರುವವನಾಗು ಎಂದು ಅಪ್ಪಣೆಯನ್ನು ಕೊಟ್ಟಳು.

ಆಗ ರಾಮನು ಕಣ್ಣೀರುಗಳನ್ನು ಸುರಿಸುತ್ತ ತಾಯಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಹಿಂದೆ ಬರುತ್ತಿರುವ ಲಕ್ಷ್ಮಣನೊಡನೆ ಅಲ್ಲಿಂದ ಹೊರಟು ತನ್ನ ಮನೆಗೆ ಬಂದು ಈ ವರ್ತಮಾನಗಳೊಂದನ್ನೂ ತಿಳಿಯದೆ ನಿಜಪತಿಗೆ ಪಟ್ಟಾಭಿಷೇಕವಾಗುವುದೆಂಬ ಸಂತೋಷಾತಿಶಯದಿಂದ ದೇವತಾ ಪೂಜೆಗಳನ್ನು ಮಾಡುತ್ತ ಮುತ್ತೈದೆಯರಿಗೆ ಬಾಗಿನಗಳನ್ನು ಕೊಡುತ್ತ ವೃದ್ಧದಂಪತಿಗಳನ್ನು ಪೂಜಿಸುತ್ತ ಬಡವರಿಗೆ ಬೇಕಾದ ವಸ್ತುಗಳನ್ನು ಉಚಿತವಾಗಿ ಕೊಡುತ್ತ ಕುರುಡ ಕುಂಟ ಗೂನ ಮೊದಲಾದ ಅಂಗಹೀನರಿಗೆ ದಾನಗಳನ್ನು ಮಾಡುತ್ತ ಅತ್ಯುಲ್ಲಾಸದಿಂದ ಕೂಡಿರುವ ಸೀತೆಯು ಮುಂದೆ ಬಹುಲಜ್ಜಾವ್ಯಥೆಗಳಿಂದ ತಲೆಯನ್ನು ಬೊಗ್ಗಿಸಿಕೊಂಡು ಶೋಕವನ್ನು ಸಹಿಸಲಾರದೆ ದುಃಖಕ್ಕೆ ವಶನಾಗಿ ಕಣ್ಣೀರುಗಳನ್ನು ಸುರಿಸುತ್ತ ಜಡೀಭೂತನಾಗಿ ನಿಂತಿರಲು; ಆಗ ಸೀತೆಯು ಅಪಾರ ವ್ಯಸನಾಕ್ರಾಂತನಾಗಿರುವ ನಿಜಕಾಂತನಾದ ರಾಮನನ್ನು ನಿರೀಕ್ಷಿಸಿ ಅವನನ್ನು ಕುರಿತು—ಇದೇನೈ ಜೀವಿತೇಶನೇ, ಇಂಥ ಸಂತೋಷದಾಯಕವಾದ ಪಟ್ಟಾಭಿಷೇಕಮಹೋತ್ಸವಕಾಲದಲ್ಲೂ ನೀನು ಈ ರೀತಿಯಾಗಿ ದುಃಖಿಸುತ್ತಿರುವುದಕ್ಕೆ ಕಾರಣವೇನು ? ಇದರಿಂದ ನನಗೆ ಆಶ್ಚರ್ಯವೂ ಭಯವೂ ಸಂದೇಹವೂ ಉಂಟಾಗಿರುವುವಲ್ಲಾ. ನನ್ನಲ್ಲಿ ಕೃಪೆಮಾಡಿ ಇದಕ್ಕೆ ಕಾರಣವನ್ನು ಬೇಗ ತಿಳಿಸುವವನಾಗು ಎಂದು ವಿನಯದಿಂದ ಕೇಳಿಕೊಳ್ಳಲು; ರಾಮನು ಎಲೈ ಪ್ರಾಣವಲ್ಲಭೆಯೇ, ಈಗ ನನಗೆ ಒದಗಿರುವ ವಿಪತ್ತನ್ನು ಏನೆಂದು ಹೇಳಲಿ. ಸತ್ಯಪ್ರತಿಜ್ಞನಾದ ನನ್ನ ತಂದೆಯು ತನ್ನ ಕಿರಿಯ ಹೆಂಡತಿಯಾದ ಕೈಕೇಯಿಯ ಮಾತಿಗೆ ಕಟ್ಟುಬಿದ್ದವನಾಗಿ ಆಕೆಯ ಮಗನಾದ ಭರತನಿಗೆ ಪಟ್ಟಾಭಿಷೇಕವನ್ನು ಮಾಡುತ್ತಾನೆ. ನನಗಾದರೋ ಜಟಾಚೀರಧರನಾಗಿ ಹದಿನಾಲ್ಕು ಸಂವತ್ಸರಗಳ ವರೆಗೂ ಮುನಿಗಳಂತೆ ಗಡ್ಡೆಗೆಣಸುಗಳನ್ನು ತಿಂದುಕೊಂಡು ದಂಡಕಾರಣ್ಯದಲ್ಲಿ ವಾಸಮಾಡುವಂತೆ ಅಪ್ಪಣೆಯನ್ನಿತ್ತನು. ಅದುಕಾರಣ ಈಗ ನಾನು ತಂದೆಯ ಆಜ್ಞಾನುಸಾರವಾಗಿ ವನಪ್ರಯಾಣಕ್ಕೆ ಸನ್ನದ್ಧನಾಗಿ ಹೊರಟು ಪ್ರಿಯಳಾದ ನಿನಗೆ ಹೇಳಿಹೋಗಬೇಕೆಂದು ಇಲ್ಲಿಗೆ ಬಂದೆನು. ನೀನು ನನ್ನ ವಿಯೋಗದಿಂದ ದುಃಖಪಡುತ್ತಿರುವ ನನ್ನ ತಂದೆತಾಯಿಗಳಾದ ದಶರಥಮಹಾರಾಜನನ್ನೂ ಕೌಸಲ್ಯಾದೇವಿಯನ್ನೂ ಶುಶ್ರೂಷಿಸುತ್ತಿರುವವಳಾಗಿ ಶುಚಿವ್ರತವನ್ನವಲಂಬಿಸಿ ನಾನು ಬರುವ ವರೆಗೂ ಇಲ್ಲಿರು. ನನ್ನ ತಮ್ಮಂದಿರನ್ನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗಿಂತಲೂ ಹೆಚ್ಚೆಂದು ಭಾವಿಸಿಕೊಂಡಿರು. ನನಗೆ ತಾಯಿಯೂ ನಿನಗೆ ಅತ್ತೆಯೂ ಆಗಿರುವ ಕೈಕೇಯೀದೇವಿಯ ವಿಷಯದಲ್ಲಿ ಮರೆತಾದರೂ ಬಿರುನುಡಿಗಳನ್ನಾಡೀಯೆ ಜೋಕೆ ! ದಶರಥ ಭೂಪಾಲನ ಅಂತಃಪುರಜನರೆಲ್ಲರೊಡನೆಯೂ ಮೃದುಮಧುರವಾದ ಮಾತುಗಳನ್ನಾಡುತ್ತ ವಿಹಿತದಿಂದಿರುವವಳಾಗು ಎಂದು ಹೇಳಲು;

ಆಗ ಸೀತೆಯು ರಾಮನನ್ನು ನೋಡಿ ಪ್ರೀತ್ಯತಿಶಯದಿಂದ ಕೋಪಿಷ್ಠಳಾಗಿ—ಎಲೈ ಸಕಲಧರ್ಮಜ್ಞನಾದ ಪ್ರಿಯನೇ, ಇಂಥ ಮರ್ಮಭೇದಕವಾದ ಮಾತುಗಳ

ನ್ಯಾಡುತ್ತಿರುವೆಯಲ್ಲ ? ನಿನ್ನ ನೆಳಲಿನಂತಿರುವ ನನ್ನನ್ನು ಇಲ್ಲೇ ಬಿಟ್ಟು ನೀನು ಮಾತ್ರ ವನಕ್ಕೆ ಹೋಗುವೆಯೋ ? ಬಲುಚೆನ್ನಾಯಿತು. ನಿನ್ನ ಸಕಲಧರ್ಮಜ್ಞತೆಯೂ ತಿಳಿದಂತಾಯಿತು. ಎಲೈ ಆರ್ಯನೇ, ಲೋಕದಲ್ಲಿ ತಂದೆಯೂ ತಾಯಿಯೂ ಮಕ್ಕಳೂ ಅಣ್ಣತಮ್ಮಂದಿರೂ ಅತ್ತೆಮಾವಂದಿರೂ ಬಂಧುಮಿತ್ರರೂ ಸೊಸೆಯರೂ ಇವರೆಲ್ಲರೂ ತಮ್ಮತಮ್ಮ ಕರ್ಮಾನುಗುಣವಾಗಿ ಭಾಗ್ಯವನ್ನು ಅನುಭವಿಸುತ್ತಿರುವರು. ಹೆಂಡತಿಯೊಬ್ಬಳು ಮಾತ್ರ ಗಂಡನ ಐಶ್ವರ್ಯದಾರಿದ್ರ್ಯಗಳಲ್ಲೂ ಸುಖದುಃಖಗಳಲ್ಲೂ ಸರಿಪಾಲುಗಾತಿಯಾಗಿ ಅನುಭವಿಸುವಳು ಎಂದು ಸಕಲಶಾಸ್ತ್ರಪುರಾಣಗಳೂ ಒರಲುತ್ತಿರುವುವು. ನೀನು ವನಕ್ಕೆ ಹೊರಡುವುದಾದರೆ ನಾನು ನಿನಗಿಂತಲೂ ಮುಂಚಿತವಾಗಿ ಹೊರಟು ಕಲ್ಲುಮುಳ್ಳುಗಳನ್ನು ತುಳಿಯುತ್ತ ನಿನ್ನೊಡನೆಯೇ ಬರುವೆನೆಂದು ಕಂಬನಿಗಳನ್ನು ಸುರಿಸುತ್ತ ಹೇಳಲು ; ಆಗ ರಾಮನು ಸೀತೆಯನ್ನು ಕುರಿತು—ಎಲೈ ಪ್ರಾಣನಾಯಕಿಯೇ, ನೀನು ಹೇಳಿದುದೆಲ್ಲವೂ ಯುಕ್ತವಾದುದೇ ಸರಿ. ಆದರೂ ಮಹಾರಾಜನ ಮಗಳೂ ಮಹಾರಾಜನ ಸೊಸೆಯೂ ಅತಿಸುಕುಮಾರಾಂಗಿಯೂ ಆಗಿ ಸೂರ್ಯಾತಪಸ್ಪರ್ಶವನ್ನರಿಯದ ನಿನ್ನನ್ನು ಸಿಂಹಶಾರ್ದೂಲಭಲ್ಲೂಕಾದಿ ಕ್ರೂರಮೃಗಗಳಿಂದಲೂ ಬಹುದುಷ್ಟರಾದ ರಾಕ್ಷಸರಿಂದಲೂ ಕೂಡಿ ದುರ್ಗಮವಾದ ಮಹಾರಣ್ಯಕ್ಕೆ ಕರಕೊಂಡುಹೋಗಿ ಹೇಗೆ ಕಾಪಾಡಲಿ ? ವ್ಯತ್ಯಸ್ತವಾದ ಕಾಡುದಾರಿಯಲ್ಲಿ ನಡೆಯುವ ನಿನ್ನ ಕೋಮಲವಾದ ಕಾಲುಗಳಿಗೆ ಕಲ್ಮುಳ್ಳುಗಳು ತಗುಲಿ ರಕ್ತವು ಚಿಲ್ಲೆಂದು ಹೊರಡುವುದನ್ನು ನೋಡಿ ನಾನು ಹೇಗೆ ಸಹಿಸಲಿ ? ಬೆಂಕಿಯಲ್ಲಿ ಸುಟ್ಟ ಎಳೆಬಾಳೆಯಂತೆ ಅತ್ಯುಷ್ಣವಾದ ಸೂರ್ಯನ ಬಿಸಿಲಿಂದ ಕಂದಿದ ನಿನ್ನ ಸುಕುಮಾರಾಂಗವನ್ನು ನೋಡಿ ಸಹಿಸಿಕೊಂಡು ನಾನು ಬದುಕುವುದು ಹೇಗೆ ? ಅದುಕಾರಣ ನೀನು ಇಲ್ಲೇ ಇರಬೇಕೆನ್ನಲು ;

ಆಗ ಸೀತೆಯು—ಎಲೈ ಪ್ರಿಯನೇ, ಹೆಂಡತಿಯನ್ನು ಕಾಪಾಡಲಾರೆನಲ್ಲಾ ಎಂದು ಸಾಧಾರಣ ಜನರಂತೆ ವ್ಯಸನಪಡುತ್ತಿರುವುದರಿಂದ ನನ್ನ ತಂದೆಯಾದ ಜನಕನು ನಿನ್ನನ್ನು ಮಹಾವೀರನೆಂದು ತಿಳಿದು ಅನ್ಯಾಯವಾಗಿ ನಿನಗೆ ನನ್ನನ್ನು ಮದುವೆಮಾಡಿಕೊಟ್ಟವನಾಗಿರಬಹುದೇ ? ಅಥವಾ ನಾನು ಮೂಢಳೆಂದು ತಿಳಿದು ನಿನ್ನ ಮನೋಗತಾಭಿಪ್ರಾಯವನ್ನು ಹೊರಪಡಿಸದೆ ಬಾಯಿಯಲ್ಲಿ ಮಾತ್ರ ಹೀಗೆ ಮಾತಾಡುತ್ತಿರುವೆಯೋ ? ಒಳ್ಳೆಯದು, ಇದನ್ನೆಲ್ಲಾ ನಾನು ಬಲ್ಲೆನು. ನಿನ್ನ ಶಕ್ತಿಪರಾಕ್ರಮಗಳು ಲೋಕೋತ್ತರವಾದುವುಗಳೆಂಬುದನ್ನು ತಿಳಿಯದವರೊಡನೆ ನೀನು ಇಂಥ ಕಪಟವಚನಗಳನ್ನಾಡಬೇಕೇ ಹೊರತು ಸರ್ವಪ್ರಕಾರದಿಂದಲೂ ನಂಬಿದವಳಾದ ನನ್ನೊಡನೆ ಈ ರೀತಿಯಾಗಿ ಮಾತಾಡುವುದು ಉಚಿತವಲ್ಲವು. ಮಹಾತ್ಮನಾದ ನಿನ್ನೊಡನೆ ಇರುವ ನನಗೆ ದುಷ್ಟಮೃಗ ರಾಕ್ಷಸರ ಭೀತಿಯುಂದರೇನು ? ಇಹಪರಗತಿದಾಯಕನಾದ ನಿನ್ನೊಡನೆ ಕಾಡಿನಲ್ಲಿದ್ದುಕೊಂಡು ಗಡ್ಡೆಗೆಣಸುಗಳನ್ನು ತಿಂದು ಜೀವಿಸುತ್ತಿರುವುದೇ ನನಗೆ ಸ್ವರ್ಗಸೌಖ್ಯವು; ನಿನ್ನನ್ನು ಬಿಟ್ಟಿರುವುದಾದರೆ ಅದು ಸ್ವರ್ಗವಾದರೂ ನನಗೆ ಮಸಣವು. ನಾನು ನಿನ್ನೊಡನೆ ಇರುವುದಾದರೆ ಯಾವ ರಾಜಭೋಗಗಳನ್ನೂ ನೆನ

ಸೆನು. ಇಷ್ಟರ ಮೇಲೂ ನೀನು ನನ್ನನ್ನು ಬಿಟ್ಟು ವನಕ್ಕೆ ಹೋದರೆ ನಾನು ಈ ಕ್ಷಣದ ಲ್ಲಿಯೇ ನಿನ್ನ ಮುಂದೆಯೇ ವಿಷವನ್ನು ಕುಡಿದು ಪ್ರಾಣಬಿಡುವೆನು ಎಂದು ಹೇಳಿ ರಾಮನನ್ನು ತಬ್ಬಿಕೊಂಡು ಧಾರಾರೂಪವಾಗಿ ಕಣ್ಣೀರನ್ನು ಸುರಿಸುತ್ತಿರಲು ; ರಾಮನು ಆಕೆಯ ದುಃಖವನ್ನು ನೋಡಿ ಸಮ್ಮತಿಸಿದವನಾಗಿ—ನಿನ್ನ ವಸ್ತ್ರಾಭರಣಗ ಳನ್ನೆಲ್ಲಾ ಮುತ್ತೈದೆಯರಿಗೆ ದಾನಮಾಡಿ ಶೀಘ್ರವಾಗಿ ಹೊರಡುವುದಕ್ಕೆ ಸಿದ್ಧಳಾ ಗೆಂದು ಹೇಳಿದನು.

ಆಗ ಲಕ್ಷ್ಮಣನು ಅಣ್ಣನಾದ ರಾಮನ ಕಾಲುಗಳ ಮೇಲೆ ಬಿದ್ದು ದುಃಖಿ ಸುತ್ತ—ಎಲೈ ಅಣ್ಣನೇ, ನಾನು ನಿನಗೆ ಹೊರಗಣ ಪ್ರಾಣವು. ಆದುಕಾರಣ ನೀನು ನನ್ನನ್ನೂ ಸಂಗಡವೇ ಕರೆದುಕೊಂಡು ಹೋಗು. ನೀನೂ ನನ್ನ ಅತ್ತಿಗೆಯೂ ಕಾಡಿ ನಲ್ಲಿ ಸ್ವಲ್ಪವಾದರೂ ಕಷ್ಟಪಡದಂತೆ ಶುಶ್ರೂಷೆಯನ್ನು ಮಾಡುತ್ತ ಮಧುರವಾದ ಕಂದಮೂಲಫಲಾದಿಗಳನ್ನೂ ನಿರ್ಮಲವಾದ ಶೀತಲೋದಕವನ್ನೂ ತಂದುಕೊಡುತ್ತ ನಿಮಗೆ ಕ್ಷುತ್ತೃಷೆಗಳ ಬಾಧೆಯುಂಟಾಗದಂತೆ ಮಾಡುವೆನು. ಮತ್ತು ರಾತ್ರಿವೇಳೆ ಯಲ್ಲಿ ಬಹುಮೃದುವಾದ ಚಿಗುರುಗಳಿಂದ ಹಾಸಿಗೆಯನ್ನು ಮಾಡಿಕೊಟ್ಟು, ನಿದ್ರಿಸು ತ್ತಿರುವವರಾದ ನಿಮಗೆ ಕ್ರೂರ ಮೃಗಗಳಿಂದಲೂ ದುಷ್ಟರಾಕ್ಷಸರಿಂದಲೂ ಹಿಂಸೆ ಯುಂಟಾಗದ ಹಾಗೆ ಧನುರ್ಬಾಣಗಳನ್ನು ಧರಿಸಿಕೊಂಡು ಕಾದಿರುವೆನು ಎಂದು ಬಹು ಪ್ರಕಾರವಾಗಿ ಹೇಳಿಕೊಳ್ಳುತ್ತಿರುವ ತಮ್ಮನನ್ನು ಬರಬೇಡವೆಂದು ಎಷ್ಟು ವಿಧ ವಾಗಿ ಒಡಂಬಡಿಸಿದಾಗ್ಯೂ ಒಪ್ಪದಿರಲು ; ಆಗ ರಾಮನು ಲಕ್ಷ್ಮಣನನ್ನೂ ಸೀತೆ ಯನ್ನೂ ತನ್ನ ಸಂಗಡವೇ ಅರಣ್ಯಕ್ಕೆ ಕರೆದುಕೊಂಡು ಹೋಗುವುದಕ್ಕಾಗಿ ಒಪ್ಪಿ ಸ್ವಕೀಯವಾದ ಸಕಲಪದಾರ್ಥಗಳನ್ನೂ ದುರ್ಗತರಿಗೆ ದಾನಮಾಡಿ ಧನುರ್ಬಾಣಗ ಳನ್ನು ಧರಿಸಿ ಸೀತಾಲಕ್ಷ್ಮಣರೊಡನೆ ಕೂಡಿ, ತಿರಿಗಿ ಪಿತೃದರ್ಶನವನ್ನು ಮಾಡಿ ಹೋಗಬೇಕೆಂಬ ಉದ್ದೇಶದಿಂದ ಬೀದಿಯಲ್ಲಿ ಬರುತ್ತಿರಲು ; ಪುರಜನರೆಲ್ಲರೂ ಗುಂಪು ಗುಂಪಾಗಿ ನಿಂತು ಅವರನ್ನು ನೋಡುತ್ತ ರೋದಿಸುತ್ತ—ಅಕಟಕಟಾ ! ಭೂಲೋಕದಲ್ಲಿ ಇಂಥ ಭಯಂಕರವಾದ ಅನ್ಯಾಯವೂ ಉಂಟೇ ? ಮೊದಲು ಈ ರಾಮನು ಉತ್ತಮಾಶ್ವ ಗಳನ್ನು ಕಟ್ಟಿ ಶೋಭಿಸುತ್ತಿರುವ ದೇವಯೋಗ್ಯವಾದ ರಥದ ಮೇಲೆ ಕುಳಿತು ಉಭಯ ಪಾರ್ಶ್ವಗಳಲ್ಲೂ ಸೇವಿಸುತ್ತಿರುವ ಛತ್ರಚಾಮರಾದಿಗಳನ್ನು ಧರಿಸಿದವರಿಂದಲೂ ಅನನ್ಯ ಸಾಧಾರಣವಾದ ಬಿರುದುಗಳನ್ನು ಧರಿಸಿ ಇಕ್ಕೆಲದಲ್ಲೂ ಬರುತ್ತಿರುವವರಿಂದಲೂ ಇನ್ನೂ ವಿವಿಧವಾದ ಪರಿವಾರದವರಿಂದಲೂ ಹಿಂದೆಯೂ ಮುಂದೆಯೂ ಒಪ್ಪುತ್ತಿರುವ ಚತುರಂಗಬಲದಿಂದಲೂ ಕೂಡಿ ರಾಜವೀಧಿಯಲ್ಲಿ ಬಲುಸೊಬಗಿಂದ ಬರುತ್ತಿದ್ದುದನ್ನು ಸಂತೋಷದಿಂದ ನೋಡುತ್ತಿದ್ದ ಈ ನಮ್ಮ ನೇತ್ರಗಳು ಈಗ ತನ್ನಂತೆ ಪಾದಚಾರಿಗಳಾ ಗಿರುವ ಸೀತಾಲಕ್ಷ್ಮಣರೊಡನೆ ಬರುತ್ತಿರುವುದನ್ನು ನೋಡುತ್ತಿವೆಯಲ್ಲಾ ! ಆಹಾ ! ಇಂಥ ಕಣ್ಣುಗಳು ಒಡೆದುಹೋಗಬಾರದೇ ? ಅಯ್ಯೋ ! ಸರ್ವಾಂಗ ಸುಂದರಿಯೂ ಸುಕುಮಾರಿಯೂ ಮಹಾಪತಿವ್ರತೆಯೂ ಆದ ಈ ಸೀತೆಯು ನಿರಂತರವೂ ಅಂತಃಪುರ ದಲ್ಲೇ ಇದ್ದುಕೊಂಡು ಅಪರಿಮಿತರಾದ ಸೇವಕರಿಂದ ರಾಜೋಪಚಾರವನ್ನು ಹೊಂದು

ತ್ತಿದ್ದಳು. ಈಗ ಸೂರ್ಯನ ಬಲುಬಿಸಿಲ ಹೊಯ್ಲಿಂದ ಬಾಡಿದ ಮುಖವುಳ್ಳವಳಾಗಿ ರಾಜವೀಧಿಯಲ್ಲಿ ಬರಿಗಾಲಿಂದಲೇ ನಡೆದು ಬರುತ್ತಿರುವಳಲ್ಲಾ! ಮಹಾತ್ಮಳಾದ ಈಕೆಗೆ ಒದಗಿದ ಇಂಥ ದುರ್ಗತಿಯನ್ನು ನೋಡುತ್ತಿರುವವರಾದ ನಾವೇ ಪಾಪಿಗಳಲ್ಲವೇ! ಲೋಕದಲ್ಲಿ ತಂದೆಯಾದವನು ತನ್ನ ಮಗನು ಗುಣಹೀನನಾಗಿ ಎಂಥ ಕೆಟ್ಟವನಾದರೂ ಅವನನ್ನು ಅರಣ್ಯಕ್ಕೆ ಅಟ್ಟುವನೇ? ಈ ರಾಮನಾದರೋ ಶೌರ್ಯ ಧೈರ್ಯ ಪರಾಕ್ರಮಗಳಲ್ಲಿ ಅದ್ವಿತೀಯನೂ ಸರ್ವಲೋಕಮಾನ್ಯನೂ ಸುಗುಣಾಭರಣಭೂಷಿತನೂ ಆಗಿರುವನು. ಇಂಥವನನ್ನು ಅಡವಿಗಟ್ಟುವ ಮೂಢನಾದ ದಶರಥನ ಬಾಳನ್ನು ಸುಡಬೇಕು. ನಾವು ಮಹಾಪುರುಷನಾದ ಇಂಥ ರಾಮನನ್ನು ಬಿಟ್ಟು ಈ ಪಟ್ಟಣದಲ್ಲಿರುವುದರಿಂದ ನಮಗೂ ಭಯಂಕರವಾದ ಕಷ್ಟವು ಪ್ರಾಪ್ತವಾದೀತು. ಅದುಕಾರಣ ನಾವೆಲ್ಲರೂ ನಮ್ಮನಮ್ಮ ಸಂಸಾರಗಳೊಡನೆ ಕೂಡಿ ಈತನೊಡನೆಯೇ ಹೋದರೆ ಶೂರರಾದ ಈ ರಾಮ ಲಕ್ಷ್ಮಣರೂ ಸರ್ವಗುಣಸಂಪನ್ನೆಯಾದ ಈ ಸೀತೆಯೂ ನಮ್ಮೆಲ್ಲರನ್ನೂ ಕಾಪಾಡುವರು. ಕ್ರೂರಳಾದ ಕೈಕೇಯಿಯ ಅಧೀನನಾಗಿ ಯುಕ್ತಾಯುಕ್ತ ವಿಚಾರಶೂನ್ಯನಾದ ಈ ದಶರಥನ ರಾಜ್ಯದಲ್ಲಿ ನಾವಿರಬಾರದು. ಅದುಕಾರಣ ನಾವೆಲ್ಲರೂ ಅರಣ್ಯಕ್ಕೆ ಹೊರಡುವಣ. ದಶರಥನೂ ಕೈಕೇಯಿಯೂ ರಾಜಾಧಿರಾಜನಾಗುವ ಭರತನನ್ನು ನೋಡಿ ಸಂತೋಷಿಸುತ್ತ ಇರಲಿ ಎಂದು ನಾನಾವಿಧವಾಗಿ ಹೇಳಿಕೊಂಡು ದುಃಖಿಸುತ್ತಿದ್ದರು.

ರಾಮನು ಪುರಜನರ ಈ ವಿಧವಾದ ಮಾತುಗಳನ್ನು ಕೇಳುತ್ತ ಮನಸ್ಸಿನಲ್ಲಿ ದುಸ್ಸಹ ದುಃಖಾನುಭವಿಯಾಗಿ ದಶರಥನ ಅರಮನೆಯ ಬಾಗಿಲ ಬಳಿಗೆ ಬಂದು ಅಲ್ಲಿದ್ದ ಸುಮಂತ್ರನನ್ನು ಕುರಿತು—ಎಲೈ ಸಾರಥಿಯೇ, ನಾನು ಬಂದಿರುವುದನ್ನು ಅರಸಿಗೆ ತಿಳಿಸೆನ್ನಲು; ಸುಮಂತ್ರನು ಒಳಗೆ ಹೋಗಿ--ಹಾ, ರಾಮಾ! ಲೋಕಾಭಿರಾಮಾ! ಎಂದು ಭೂಮಿಯಲ್ಲಿ ಬಿದ್ದು ಹೊರಳಾಡುತ್ತ ಅಪರಿಮಿತವಾಗಿ ಅಶ್ರುಧಾರೆಯನ್ನು ಹರಿಸುತ್ತ ಕೈಕೇಯಿಯನ್ನೂ ತನ್ನನ್ನೂ ಬಾರಿಬಾರಿಗೂ ನಿಂದಿಸಿಕೊಳ್ಳುತ್ತ ಗಳಿಗೆಗಳಿಗೆಗೆ ಮೂರ್ಛೆಹೊಂದಿ ಚೇತರಿಸಿಕೊಳ್ಳುತ್ತ—ಏನು ಮಾಡಲಿ! ಎಲ್ಲಿಗೆ ಹೋಗಲಿ? ವಿಷವನ್ನಾದರೂ ಕುಡಿಯಲೇ? ಪರ್ವತಾಗ್ರದಿಂದ ಕೆಳಗೆ ಬೀಳಲೇ? ಕಾಯ್ದುಕ್ಕಿನ ಮುಳ್ಗಂಬಗಳನ್ನು ಹಾಯ್ದುಡಗಲೇ? ಅಯ್ಯೋ! ನಯನಾಭಿರಾಮನಾದ ರಾಮನನ್ನು ಬಿಟ್ಟು ಬದುಕುವುದು ಹೇಗೆ? ಎಂದು ಪ್ರಲಾಪಿಸುತ್ತ ಒಣಗಿದ ತುಟಿಬಾಯ್ಗಳುಳ್ಳವನಾಗಿ ಗ್ರಹಗ್ರಸ್ತನಂತೆ ತಿರುತಿರುಗಿ ಭೂಮಿಯಲ್ಲಿ ಬಿದ್ದು ಹೊರಳಾಡುತ್ತ ಧೂಳಿಯಿಂದ ಲೇಪಿತವಾದ ಸರ್ವಾಂಗವುಳ್ಳವನಾಗಿ ನಿಟ್ಟುಸಿರುಗಳನ್ನು ಬಿಡುತ್ತಿರುವ ನಿಜಸ್ವಾಮಿಯಾದ ದಶರಥನನ್ನು ನೋಡಿ ಮಾತಾಡಿಸುವುದಕ್ಕೆ ಭಯಪಟ್ಟವನಾಗಿ ಮೆಲ್ಲಮೆಲ್ಲನೆ ಸಮೀಪಕ್ಕೆ ಹೋಗಿ—ಎಲೈ ಮಹಾರಾಜನೇ, ಶ್ರೀರಾಮನು ದೀನಾನಾಥವಿಪನ್ನರಿಗೆ ತನ್ನ ಸರ್ವವಸ್ತುಗಳನ್ನೂ ದಾನಮಾಡಿ ಅರಣ್ಯಗಮನಕ್ಕೆ ಸಿದ್ಧನಾಗಿ ಹೊರಟು ನಿನ್ನ ದರ್ಶನಕ್ಕೋಸ್ಕರವಾಗಿ ಬಂದು ಬಾಗಿಲಲ್ಲಿ ಕಾದಿದ್ದಾನೆ. ಸರ್ವಗುಣಸಂಪನ್ನನೂ ಲೋಕಮಾನ್ಯನೂ ನಿನ್ನ ಕುಮಾರನೂ ಆದ ರಾಮನನ್ನು ಒಳಗೆ ಕರಿಸಿ ಅಪ್ಪಣೆಯನ್ನು

ಕೊಟ್ಟು ಕಳುಹಿಸುವವನಾಗು ಎಂದು ಹೇಳಲು; ಆಗ ದಶರಥನು—ಎಲೈ ಸಾರಥಿಯೇ, ನಾನು ನನ್ನ ಎಲ್ಲಾ ಪತ್ನಿಯರೊಡನೆ ಕೂಡಿ ವನಪ್ರಯಾಣಕ್ಕೆ ಸಿದ್ಧನಾಗಿರುವ ರಾಮನನ್ನು ನೋಡಲಪೇಕ್ಷಿಸುತ್ತೇನೆ ಎನ್ನಲು; ಆಗ ಸುಮಂತ್ರನು ಶೀಘ್ರವಾಗಿ ಅಂತಃಪುರಕ್ಕೆ ಹೋಗಿ ದಶರಥನ ಅಪೇಕ್ಷೆಯನ್ನು ತಿಳಿಸಲು; ಕೂಡಲೆ ಪಟ್ಟಮಹಿಷಿಯರಾದ ಕೌಸಲ್ಯಾಸುಮಿತ್ರೆಯರೂ ಮತ್ತು ದಶರಥನ ಮುನ್ನೂರೈವತ್ತು ಜನ ಪ್ರೇಮಪತ್ನಿಯರೂ ಬಂದು ಸೇರಲು; ಆಗ ದಶರಥನು ಸುಮಂತ್ರನನ್ನು ಕಳುಹಿಸಿ ರಾಮನನ್ನು ಒಳಗೆ ಕರಿಸಿಕೊಂಡನು. ರಾಮನು ಬಂದ ಕೂಡಲೆ ಸೀತಾಲಕ್ಷ್ಮಣರೊಡನೆ ಕೂಡಿ ದೂರದಲ್ಲಿಯೇ ತಂದೆಗೆ ನಮಸ್ಕರಿಸಿ ಕೈಮುಗಿದು ನಿಂತುಕೊಂಡಿರಲು ; ದಶರಥನು ಪರಮ ಸಾತ್ವಿಕನಾದ ಮಗನನ್ನು ನೋಡಿ—ಹಾ, ರಾಮಾ ! ಎಂದು ನೆಲದ ಮೇಲೆ ಬಿದ್ದು ಮೂರ್ಛೆಹೊಂದಿದನು. ಕೂಡಲೆ ಕೌಸಲ್ಯೆಯೂ ಸುಮಿತ್ರೆಯೂ ಉಳಿದ ಗಾಂಧರ್ವ ವಿವಾಹಿತೆಯರಾದ ಪತ್ನಿಯರೂ ರೋದಿಸುತ್ತ ಬಿದ್ದು ಮೈಮರೆತರು.

ಆಗ ರಾಮನು ಲಕ್ಷ್ಮಣಸಮೇತನಾಗಿ ಹೋಗಿ ದಶರಥರಾಜನಿಗೆ ಶೈತ್ಯೋಪಚಾರಗಳನ್ನು ಮಾಡಿ ಆತನನ್ನು ಎತ್ತಿಕೊಂಡು ಮಂಚದ ಮೇಲೆ ಮಲಗಿಸಿ ಕೈಗಳನ್ನು ಮುಗಿದು ನಿಂತುಕೊಂಡು—ಎಲೈ ಮಹಾರಾಜನೇ, ನೀನು ಸರ್ವರಿಗೂ ಒಡೆಯನು. ಆದುದರಿಂದ ಈಗ ನಾನು ನಿನ್ನ ಅಪ್ಪಣೆಯನ್ನು ಕೇಳಿಕೊಳ್ಳುತ್ತೇನೆ. ದಂಡಕಾರಣ್ಯವನ್ನು ಕುರಿತು ಹೊರಟಿರುವ ನನ್ನನ್ನು ಕೃಪಾದೃಷ್ಟಿಯಿಂದ ಈಕ್ಷಿಸು. ನಾನು ಎಷ್ಟು ವಿಧವಾಗಿ ತಿಳಿಯಹೇಳಿದಾಗ್ಯೂ ಕೇಳದೆ ಸೀತೆಯೂ ಲಕ್ಷ್ಮಣನೂ ನನ್ನೊಡನೆಯೇ ಬರುವುದಕ್ಕೆ ಸಿದ್ಧರಾಗಿದ್ದಾರೆ. ಅವರಿಗೂ ಅಪ್ಪಣೆಯನ್ನು ದಯಪಾಲಿಸಬೇಕೆಂದು ಕೇಳಲು; ಆಗ ದಶರಥನು—ಎಲೈ ರಾಮನೇ, ನಾನು ಈ ಕೈಕೇಯಿಯೆಂಬ ಮಹಾಮೃತ್ಯುವಿಗೆ ವರದ್ವಯವನ್ನು ಕೊಟ್ಟು ಹುಚ್ಚನಾದೆನು. ಅದುಕಾರಣ ನೀನೇ ನನ್ನನ್ನು ನಿಗ್ರಹಿಸಿ ಅರಸುತನವನ್ನು ಮಾಡುತ್ತ ಅಯೋಧ್ಯೆಯಲ್ಲಿ ಸುಖದಲ್ಲಿರು ಎಂದು ಹೇಳಲು ; ಅದಕ್ಕೆ ರಾಮನು—ಎಲೈ ತಂದೆಯೇ, ನೀನೇ ಸಾವಿರಾರು ಸಂವತ್ಸರಗಳ ವರೆಗೂ ಭೂಮಿಗೆ ಒಡೆಯನಾಗಿರು. ನಾನು ಅರಣ್ಯದಲ್ಲೇ ವಾಸಿಸುವೆನು. ನಿನ್ನನ್ನು ಅಸತ್ಯವಂತನನ್ನಾಗಿ ಮಾಡಿ, ನಾನು ಈ ರಾಜ್ಯವನ್ನು ಅನುಭವಿಸುವುದು ಲಜ್ಜೆಗೂ ಅಪಮಾನಕ್ಕೂ ಕಾರಣವಾಗಿರುವುದು. ಆದುದರಿಂದ ಹದಿನಾಲ್ಕು ಸಂವತ್ಸರಗಳ ವರೆಗೂ ವನವಾಸವನ್ನು ಮಾಡಿ ನಿನ್ನ ಪ್ರತಿಜ್ಞೆಯನ್ನು ನೆರವೇರಿಸಿ ತಿರಿಗಿ ನಿನ್ನ ಪಾದಸನ್ನಿಧಿಗೆ ಬರುವೆನು ಎಂದು ಹೇಳಿ ಒಡಂಬಡಿಸಿ ಆತನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಹೊರಡುವುದಕ್ಕೆ ಉದ್ಯುಕ್ತನಾಗಲು; ಆಗ ದಶರಥರಾಜನು ಸುಮಂತ್ರನನ್ನು ನೋಡಿ—ನನ್ನ ಸೇನಾಪತಿಗಳೂ ಪರಿವಾರದವರೂ ರಾಮನ ಸಂಗಡವೇ ಹೋಗಲಿ. ಮತ್ತು ಅಡಿಗೆಯವರೂ ದಾಸಭೃತ್ಯರೂ ದಾಸೀಜನಗಳೂ ಗಾಡಿಗಳೂ ರಾಮನೊಡನೆಯೇ ಹೋಗಲಿ. ಭೋಜನಸಾಮಗ್ರಿಗಳಲ್ಲೂ ವಸ್ತ್ರಾಭರಣಗಳಲ್ಲೂ ಚತುರ್ದಶ ಸಂವತ್ಸರಗಳ ವರೆಗೂ ಸ್ವಲ್ಪವೂ ನ್ಯೂನತೆಯಿಲ್ಲದಂತೆ ಎಲ್ಲವನ್ನೂ ತೆಗೆಯಿಸಿಕೊಂಡು ನೀನೂ ರಾಮನ ಸಂಗ

ಡವೇ ಹೊರಟು ಹೋಗೆನಲು ; ಆಗ ರಾಮನು ತಪಸ್ವಿಯಂತೆ ವನಕ್ಕೆ ಹೋಗುವ ನನಗೆ ರಾಜಭೋಗ್ಯವಾದ ಈ ವಸ್ತುಗಳಿಂದ ಸ್ವಲ್ಪಮಾತ್ರವಾದರೂ ಪ್ರಯೋಜನವಿಲ್ಲವು. ಆರಣ್ಯದಲ್ಲಿ ಕಂದಮೂಲಾದಿಗಳು ಯಥೇಚ್ಛವಾಗಿರುವುವು. ನನಗೆ ನಾರು ಮಡಿಗಳನ್ನು ಮಾತ್ರ ಕೊಡಿಸಬೇಕೆಂದು ಕೇಳಿಕೊಳ್ಳಲು ; ಆಗ ಕೈಕೇಯಿಯು ಅತಿ ಸಂತೋಷದಿಂದ ಎದ್ದು ಒಳಕ್ಕೆ ಹೋಗಿ ಎರಡು ನಾರ್ಮಡಿಗಳನ್ನು ತಂದು ರಾಮನ ಕೈಗೆ ಕೊಟ್ಟಳು. ಆಗ ಲಕ್ಷ್ಮಣನು ಅವುಗಳನ್ನು ತೆಗೆದುಕೊಂಡು ತಾನುಟ್ಟಿದ್ದ ಪೀತಾಂಬರವನ್ನು ತೆಗೆದಿಟ್ಟು ಆ ಮಡಿಗಳನ್ನು ಧರಿಸಿಕೊಂಡನು. ಆ ಮೇಲೆ ಕೈಕೇಯಿಯು ಮತ್ತೆರಡು ನಾರ್ಮಡಿಗಳನ್ನು ತಂದು ಕೊಡಲು ; ಸೀತೆಯು ಅವುಗಳನ್ನು ರಾಮನ ಕೈಗಳಿಂದ ತೆಗೆದುಕೊಂಡು ಉಟ್ಟುಕೊಳ್ಳುವುದಕ್ಕೆ ಬಾರದೆ ಕೈಯಲ್ಲೇ ಹಿಡಿದುಕೊಂಡು ಕಣ್ಣೀರನ್ನು ಸುರಿಸುತ್ತ ರಾಮನ ಮುಖವನ್ನು ನೋಡಿ ಮುನಿಪತ್ನಿಯರು ನಾರು ಸೀರೆಯನ್ನು ಉಡುವುದು ಹೇಗೆ ? ಎಂದು ಕೇಳಲು ; ರಾಮನು ಬಂದು ಆಕೆಯು ಮೊದಲುಟ್ಟಿದ್ದ ಪೀತಾಂಬರದ ಮೇಲೆಯೇ ಆ ನಾರುಮಡಿಗಳನ್ನು ಸುತ್ತಿ ಕಟ್ಟಿದನು. ಆ ಕೂಡಲೆ ಕೈಕೇಯಿಯು ಬಹು ಸಂತೋಷದಿಂದ ಪುನಃ ಎರಡು ನಾರ್ಮಡಿಗಳನ್ನು ತಂದು ರಾಮನ ಹಸ್ತಗಳಿಗೆ ಕೊಟ್ಟುದರಿಂದ ರಾಮನು ಅವುಗಗನ್ನು ಉಟ್ಟುಕೊಂಡನು. ಅಲ್ಲಿ ಕೂಡಿದ್ದ ಸಮಸ್ತ ಪ್ರಜಾಸಮೂಹವೂ ಅದನ್ನೆಲ್ಲಾ ನೋಡಿ ಹೋ ! ಎಂದು ಕೂಗಿ ದುಃಖಿಸುತ್ತಿರಲು ; ಆಗ ವಶಿಷ್ಠಮಹಾಮುನಿಯು ಕೈಕೇಯಿಯ ಮೇಲೆ ಕೋಪಿಸಿಕೊಂಡು—ನೀನು ರಾಮನೊಬ್ಬನು ಮಾತ್ರ ವನವಾಸಕ್ಕೆ ಹೋಗಬೇಕೆಂದು ಕೇಳಿಕೊಂಡೆಯಷ್ಟೆ ? ಸೀತೆಯು ಪತಿಭಕ್ತಿಯಿಂದ ಆತನ ಸಂಗಡವೇ ಹೋಗುವವಳಾಗಿದ್ದಾಳೆ. ಆಕೆಯು ನಾರುಮಡಿಗಳನ್ನು ಉಡುವುದಕ್ಕೆ ಏನೂ ಕಾರಣವಿಲ್ಲವೆಂದು ಹೇಳಿ ಆಕೆಗೆ ಹದಿನಾಲ್ಕು ವರ್ಷಗಳ ವರೆಗೂ ಸಾಕಾಗುವಷ್ಟು ವಸ್ತ್ರಾಭರಣಗಳನ್ನು ಕೊಡಿಸಿದನು.

ಆ ಬಳಿಕ ದಶರಥನು ಸುಮಂತ್ರನನ್ನು ನೋಡಿ—ಎಲೈ ಸಾರಥಿಯೇ, ನನ್ನ ರಥದಲ್ಲಿ ರಾಮನನ್ನು ಕುಳ್ಳಿರಿಸಿ ವನಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಬಿಟ್ಟು ಆತನು ಕಳುಹಿಸಿದರೆ ಹಿಂದಿರುಗಿ ಬರುವವನಾಗೆಂದು ಅಪ್ಪಣೆಯನ್ನೀಯಲು ; ಕೂಡಲೆ ಸುಮಂತ್ರನು ನಾಲ್ಕು ಉತ್ತಮಾಶ್ವಗಳಿಂದ ಕೂಡಿ ಶೋಭಾಯಮಾನವಾಗಿರುವ ದಿವ್ಯರಥವನ್ನು ತೆಗೆದುಕೊಂಡು ಬಂದನು. ಆಗ ಸೀತೆಯು ಮೊದಲು ರಥವನ್ನು ಹತ್ತಿದಳು. ಆ ಮೇಲೆ ಲಕ್ಷ್ಮಣನೂ ಆ ಹಿಂದೆ ರಾಮನೂ ರಥಾರೋಹಣವನ್ನು ಮಾಡಿ ಹೊರಟರು. ಆಗ ದಶರಥನು ಅಂತಃಪುರ ಸ್ತ್ರೀಜನಸಮೇತನಾಗಿ ಹಿಂದೆಯೇ ಬಂದನು. ಮತ್ತು ಮಂತ್ರಿಗಳೂ ಸೇನಾಪತಿಗಳೂ ಪರಿವಾರಜನರೂ ಪಟ್ಟಣದ ಜನರೂ ಮುಂತಾದವರೆಲ್ಲಾ ರೋದಿಸುತ್ತ ಹಿಂದೆಯೇ ಬರುತ್ತಿದ್ದರು. ಆಗ ರಾಮನು ಆ ಜನರ ದುಃಖಾತಿಶಯವನ್ನು ನೋಡಿ ಸುಮಂತ್ರನಿಗೆ ಸಂಜ್ಞೆಯನ್ನು ಮಾಡಿ ತ್ವರಿತವಾಗಿ ರಥವನ್ನು ನಡಿಸುತ್ತ ಬಂದು ತಮಸಾನದಿಯನ್ನು ದಾಟಿ ಗಂಗಾತೀರದಲ್ಲಿ ವಾಸಮಾಡುತ್ತಿರುವ ಕಿರಾತನಾಯಕನೂ ತನ್ನ ಸ್ನೇಹಿತನೂ ಆದ ಗುಹನೆಂಬವನನ್ನು ಕಂಡು ಆತನು ಮಾಡಿದ ಆತಿಥ್ಯವನ್ನು ಸ್ವೀಕರಿಸಿ ಆತನಿಂದ ಆಲದ ಹಾಲನ್ನು ತರಿಸಿ

ತಾನೂ ಲಕ್ಷ್ಮಣನೂ ಜಡೆಯನ್ನು ಧರಿಸಿಕೊಂಡು ರಥದೊಡನೆ ಸುಮಂತ್ರನನ್ನು ಅಯೋಧ್ಯೆಗೆ ಸಾಗಕಳುಹಿಸಿ ಆ ಮೇಲೆ ಗುಹನ ಸಹಾಯದಿಂದ ಓಡೆಯ ಮೇಲೆ ಗಂಗಾನದಿಯನ್ನು ದಾಟಿ ಸೀತಾಲಕ್ಷ್ಮಣರೊಡನೆ ಹೊರಟು ಕಾಲ್ನಡಿಗೆಯಿಂದಲೇ ಪ್ರಯಾಗವೆಂಬ ಸ್ಥಳಕ್ಕೆ ಬಂದು ಅಲ್ಲಿರುವ ಭರದ್ವಾಜಮಹರ್ಷಿಯನ್ನು ಕಂಡು ವಂದಿಸಿ ಆತನು ಮಾಡಿದ ಆತಿಥ್ಯವನ್ನು ಸ್ವೀಕರಿಸಿ ಅನಂತರದಲ್ಲಿ ಆತನ ಅಪ್ಪಣೆಯನ್ನು ಹೊಂದಿ ಚಿತ್ರಕೂಟಪರ್ವತಕ್ಕೆ ಬಂದು ಅಲ್ಲಿ ಲಕ್ಷ್ಮಣನಿಂದ ನಿರ್ಮಿತವಾದ ಪರ್ಣಶಾಲೆಯಲ್ಲಿ ವಾಸಮಾಡಿಕೊಂಡಿದ್ದನು.

---

## 3. RAVANA SEIZES AND CARRIES OFF SITE TO LANKA.

### ೩. ಸೀತಾಪಹಾರದ ಕಥೆ.

ರಾಮನು ಸೀತಾಲಕ್ಷ್ಮಣರೊಡನೆ ಕೂಡಿದವನಾಗಿ ಅರಣ್ಯಪ್ರವೇಶವನ್ನು ಮಾಡಿದುದರಿಂದ ಅಯೋಧ್ಯೆಯಲ್ಲಿ ದಶರಥನು ಪುತ್ರವಿಯೋಗದಿಂದುಂಟಾದ ಅಪಾರ ದುಃಖವನ್ನು ತಾಳಲಾರದೆ ರಾಮಾ, ರಾಮಾ ಎಂದು ಹಂಬಲಿಸುತ್ತ ವ್ಯಥಿತನಾಗಿ ಮೃತನಾದನು. ಆಗ ಸುಮಂತ್ರನೇ ಮೊದಲಾದ ಮಂತ್ರಿಗಳೂ ಪುರೋಹಿತನಾದ ವಶಿಷ್ಠಮಹರ್ಷಿಯೂ ಕೇಕಯರಾಜನ ಪಟ್ಟಣದಿಂದ ಭರತಶತ್ರುಘ್ನರನ್ನು ಕರಿಸಿಕೊಂಡು ಅವರಿಂದ ದಶರಥನ ಪ್ರೇತಕೃತ್ಯಗಳನ್ನು ಮಾಡಿಸಿ ಅನಂತರದಲ್ಲಿ ಭರತನನ್ನು ಕುರಿತು—ನೀನು ರಾಜ್ಯಾಭಿಷಿಕ್ತನಾಗೆಂದು ಹೇಳಿದರು. ಆಗ ಭರತನು ಅವರನ್ನು ನೋಡಿ—ದುರ್ಮಾರ್ಗಪ್ರವರ್ತಕಳೂ ನನ್ನ ತಾಯಿಯೂ ಆದ ಕೈಕೇಯಿಯು ತಂದೆಗಿಂತಲೂ ಹೆಚ್ಚಾಗಿ ಕಾಪಾಡುತ್ತಿದ್ದ ನನ್ನ ಅಣ್ಣನನ್ನು ಕಾಡಿಗಟ್ಟಿ ಮಹಾತ್ಮನಾದ ನನ್ನ ತಂದೆಯನ್ನು ಕೊಂದು ನನಗೆ ಕೊನೆನೊದಲಿಲ್ಲದ ದುಃಖಸಂತಾಪಗಳನ್ನುಂಟುಮಾಡಿದಳು ಪಿತೃಸದೃಶನಾದ ಹಿರಿಯಣ್ಣನಿರುವಲ್ಲಿ ಅಶಾಶ್ವತವಾದ ಐಹಿಕಭೋಗಕ್ಕೆಳಸಿ ನಾನು ರಾಜ್ಯಾಭಿಷಿಕ್ತನಾಗಿ ಇವಳ ದುರಾಶೆಯನ್ನು ಎಂದಿಗೂ ನೆರವೇರಿಸಲಾರೆನು. ನಾನು ಈಗಲೇ ನಮ್ಮಣ್ಣನಿರುವ ಮಹಾರಣ್ಯವನ್ನು ಪ್ರವೇಶಿಸಿ ಆತನ ಕಾಲ್ಗಳನ್ನು ಹಿಡಿದು ದೈನ್ಯದಿಂದ ಪ್ರಾರ್ಥಿಸಿ ಸಮ್ಮತಿಪಡಿಸಿ ತಿರಿಗಿ ಅಯೋಧ್ಯೆಗೆ ಕರೆದುಕೊಂಡು ಬರುವೆನು. ಆತನೇ ರಾಜ್ಯಾಭಿಷೇಕಕ್ಕೆ ಯೋಗ್ಯನು. ನಾನು ಆತನ ದಾಸನು ಎಂದು ಹೇಳಿ ಸಕಲಪರಿವಾರಸಮೇತನಾಗಿ ಹೊರಟು ರಾಮನಿರುವ ಚಿತ್ರಕೂಟಾಚಲಕ್ಕೆ ಬಂದು ದುಃಖಿಸುತ್ತ ಆತನಿಗೆ ನಮಸ್ಕರಿಸಿ ತಂದೆಯು ಪರಲೋಕವಾಸಿಯಾದುದನ್ನು ತಿಳಿಸಿ ಆತನೊಡನೆಯೂ ಮಹಾದುಃಖವನ್ನನುಭವಿಸಿ ಆತನನ್ನು ಕುರಿತು—ನೀನು ಈಗಲೇ ಅಯೋಧ್ಯಾಪಟ್ಟಣಕ್ಕೆ ಬಂದು ಪಟ್ಟಾಭಿಷಿಕ್ತನಾಗಬೇಕೆಂದು ನಾನಾವಿಧವಾಗಿ ಪ್ರಾರ್ಥಿಸಿಕೊಂಡನು.

ಅನಂತರದಲ್ಲಿ ರಾಮನು ಭರತನ ದೈನ್ಯೋಕ್ತಿಗಳಿಂದ ಕೂಡಿದ ಪ್ರಾರ್ಥನೆಗೆ ಒಪ್ಪದೆ—ನಾನು ನನ್ನ ತಂದೆಯ ಆಜ್ಞೆಯನ್ನು ಎಂದಿಗೂ ಮೀರುವುದಿಲ್ಲ. ಆತನ

ಅಪ್ಪಣೆಯ ಮೇರೆಗೆ ಹದಿನಾಲ್ಕು ವರುಷಗಳ ವರೆಗೂ ವನದಲ್ಲೇ ವಾಸಮಾಡಿಕೊಂಡಿದ್ದು ಆ ಮೇಲೆ ಅಯೋಧ್ಯೆಗೆ ಬಂದು ನಿನ್ನ ಮಾತಿನಂತೆ ಪಟ್ಟಾಭಿಷಿಕ್ತನಾಗುವೆನಲ್ಲದೆ ಈಗ ಬಂದು ಪಟ್ಟಾಭಿಷಿಕ್ತನಾಗುವುದು ಧರ್ಮವಿಹಿತವಲ್ಲವು ಎಂದು ಭರತನನ್ನು ಸಮ್ಮತಿಪಡಿಸಲು ; ಆಗ ಭರತನು—ಹಾಗಾದರೆ ನಾನು ರಾಜ್ಯಾಭಿಷಿಕ್ತನಾಗುವುದೂ ಅಯುಕ್ತವಾದುದರಿಂದ ಈಗ ನಿನ್ನ ಪಾದುಕೆಗಳನ್ನು ನನಗೆ ಕೊಟ್ಟರೆ ಅವುಗಳನ್ನು ಸಿಂಹಾಸನದ ಮೇಲಿಟ್ಟು ನಾನು ಅವುಗಳ ಸೇವಕನಾಗಿ ನೀನು ಬರುವ ವರೆಗೂ ರಾಜ್ಯಭಾರದ ಕೆಲಸಗಳನ್ನು ಮಾಡುತ್ತಿರುವೆನು ಎನ್ನಲು ; ರಾಮನು ಆ ಮಾತಿಗೆ ಸಮ್ಮತಿಪಟ್ಟು ತನ್ನ ಎರಡು ಅವುಗೆಗಳನ್ನೂ ಕೊಟ್ಟು ಅವನನ್ನು ಅಯೋಧ್ಯಾಪಟ್ಟಣಕ್ಕೆ ಕಳುಹಿಸಿ— ಈ ಚಿತ್ರಕೂಟಪರ್ವತವು ಅಯೋಧ್ಯೆಗೆ ಹತ್ತಿರವಾಗಿರುವುದರಿಂದ ಪುರಜನರು ಆಗಾಗ್ಗೆ ಇಲ್ಲಿಗೆ ಬಂದು ನನಗೆ ತೊಂದರೆಯನ್ನು ಕೊಡುತ್ತಿರುವರು. ಅದುಕಾರಣ ಇನ್ನು ಇಲ್ಲಿರಕೂಡದು ಎಂದು ಮನಸ್ಸಿನಲ್ಲಿ ನಿಶ್ಚಯಿಸಿ ಸೀತಾಲಕ್ಷ್ಮಣರೊಡನೆ ಚಿತ್ರಕೂಟಸ್ಥಲದಿಂದ ಹೊರಟು ದಂಡಕಾರಣ್ಯವನ್ನು ಹೊಕ್ಕು ಲಂಕಾನಗರದ ಉಕ್ಕಡವಾದ ಜನಸ್ಥಾನವೆಂಬ ಪ್ರದೇಶಕ್ಕೆ ಸಮೀಪವಾಗಿ ಗೋದಾವರೀ ನದಿಯ ದಡದಲ್ಲಿರುವ ಪಂಚವಟಿಯೆಂಬ ಸ್ಥಳದಲ್ಲಿ ಪರ್ಣಶಾಲೆಯನ್ನು ಮಾಡಿಸಿಕೊಂಡು ಅಲ್ಲಿ ಸೀತಾಲಕ್ಷ್ಮಣರೊಡನೆಯೂ ತನ್ನ ತಂದೆಯ ಮಿತ್ರನಾದ ಜಟಾಯುವೆಂಬ ಗೃಧ್ರರಾಜನೊಡನೆಯೂ ಕೂಡಿ ಸುಖವಾಗಿ ವಾಸಮಾಡಿಕೊಂಡಿದ್ದನು.

ಹೀಗಿರಲು ಭೂಲೋಕದಲ್ಲಿ ಹಿಮಂತರ್ತುವು ತಲೆದೋರಿತು. ಆಗ ಲಕ್ಷ್ಮಣನು ರಾಮನನ್ನು ಕುರಿತು—ಎಲೈ ಅಣ್ಣನೇ, ಈ ಹಿಮಕಾಲವು ಬಹಳ ವಿಚಿತ್ರವಾಗಿರುವುದು. ದಿಕ್ಕುಗಳೆಂಬ ಸ್ತ್ರೀಯರು ಹಿಮವೆಂಬ ಶುಭ್ರಾಂಬರದಿಂದ ಅಲಂಕರಿಸಿಕೊಂಡಿರುವಂತೆ ಕಾಣುತ್ತದೆ. ಈ ಕಾಲದಲ್ಲಿ ಜನರು ಪಚ್ಚಕರ್ಪೂರದಿಂದ ಮಿಶ್ರವಾದ ಗಂಧವನ್ನು ಮೈಗೆ ಲೇಪಿಸಿಕೊಳ್ಳುವುದರಲ್ಲಿಯೂ ತಾವರೆ ಕನ್ನೈದಿಲೆ ಆವಲ ಮುಂತಾದ ಹೂವುಗಳಿಂದ ಕೂಡಿ ರಮಣೀಯವಾದ ಕೊಳಗಳ ಮೆಟ್ಟಿಲುಗಳಲ್ಲಿ ಕುಳಿತು ಶೈತ್ಯಸೌರಭ್ಯಮಾಂದ್ಯವಿಶಿಷ್ಟವಾದ ವಾಯುವಿನ ಸ್ಪರ್ಶಸುಖವನ್ನು ಅನುಭವಿಸುವುದರಲ್ಲಿಯೂ ಉಪ್ಪರಿಗೆಗಳ ಕಿಟಕಿಗಳಲ್ಲಿದ್ದು ಮೊಗಗಳನ್ನು ಹೊರಗೆ ಚಾಚುವುದರಲ್ಲಿಯೂ ತಣ್ಣೀರುಗಳ ಮಜ್ಜನದಲ್ಲಿಯೂ ವಿಮುಖರಾಗಿ ಶಶೋದರದಂತೆ ನಯವಾಗಿರುವ ಕಂಬಳಿಗಳನ್ನು ಹೊದೆದುಕೊಳ್ಳುವುದರಲ್ಲಿಯೂ ಅರಳೆಗಳನ್ನು ಹಾಕಿ ಹೊಲಿದಿರುವ ದಪ್ಪಂಗಿಗಳನ್ನು ತೊಟ್ಟುಕೊಳ್ಳುವುದರಲ್ಲಿಯೂ ಮಧುರಾಹಾರಗಳನ್ನು ಭುಂಜಿಸುವುದರಲ್ಲಿಯೂ ಕಸ್ತೂರೀಘನಸಾರಮಿಶ್ರವಾದ ತಾಂಬೂಲವನ್ನು ತಿನ್ನುವುದರಲ್ಲಿಯೂ ಹೊಗೆಯಿಲ್ಲದೆ ಬರಿಗೆಂಡಗಳಿಂದ ತುಂಬಲ್ಪಟ್ಟಿರುವ ಅಗ್ಗಿಷ್ಟಿಗೆಯಲ್ಲಿ ಕಾಸಿಕೊಳ್ಳುವುದರಲ್ಲಿಯೂ ಇಟ್ಟಿಗೆಗಳಿಂದ ಕಟ್ಟಲ್ಪಟ್ಟ ಗೃಹಗಳ ಮಧ್ಯದಲ್ಲಿ ವಾಸಿಸುವುದರಲ್ಲಿಯೂ ಆಲದ ಮರದ ನೆಳಲಿನಲ್ಲಿ ಕೂತುಕೊಳ್ಳುವುದರಲ್ಲಿಯೂ ಸೇದುವ ಬಾವಿಯ ನೀರಿನಿಂದ ಮೀಯುವುದರಲ್ಲಿಯೂ ಅಗಿಲು ಗಂಧ ಇವುಗಳನ್ನು ತೊಡೆದುಕೊಳ್ಳುವುದರಲ್ಲಿಯೂ ಅತ್ಯಾಶೆಯುಳ್ಳವರಾಗಿರುವರು.

ಮತ್ತು ಈ ಕಾಲದಲ್ಲಿ ಪಕ್ಷಿಗಳು ತಮ್ಮ ತಮ್ಮ ಗೂಡುಗಳನ್ನು ಬಿಟ್ಟು ಹೊರಗೆ ಹೊರಡದೆ ಮರಿಗಳನ್ನು ರಕ್ಕೆಗಳಲ್ಲಿ ಹುದುಗಿಸಿಕೊಂಡು ಇರುತ್ತಿರುವುವು. ಗದ್ದೆಗಳಲ್ಲಿ ಒತ್ತದ ಪೈರುಗಳು ಹೊಂಬಣ್ಣವಾದ ತೆನೆಗಳನ್ನು ಜೋಲಾಡಿಸುತ್ತ ಚೆಲುವಾಗಿರುವುವು. ದಾರಿದಾರಿಗಳಲ್ಲೆಲ್ಲಾ ಅರವಟಿಗೆಯ ಮನೆಗಳೂ ಪಾಳುಬಿದ್ದಿರುವುವು. ಪ್ರಾತಃಕಾಲದಲ್ಲೆದ್ದು ಹೊಳೆಗಳ ಶೀತಲೋದಕದಲ್ಲಿ ಸ್ನಾನಮಾಡುವುದರಿಂದುಂಟಾದ ದ್ವಿಗುಣಿತವಾದ ಚಳಿಯಿಂದ ಗಡಗಡನೆ ನಡುಗುತ್ತಿರುವ ಮುನಿಜನಗಳ ತುಟಿಗಳು— ಸರ್ವಲೋಕವನ್ನೂ ಹಿಡಿದು ಬಾಧಿಸುತ್ತಿರುವ ಶೀತವೆಂಬ ಪಿಶಾಚಿಯನ್ನು ನಿವಾರಿಸುವುದಕ್ಕೋಸ್ಕರ ಉಚ್ಚಾಟನ ಮಂತ್ರಜಪವನ್ನು ಮಾಡುತ್ತಿರುವ ಒಂದು ಬಗೆಯೋ ಎಂಬಂತೆ ಕಾಣುತ್ತಿರುವುವು. ಈ ಕಾಲದಲ್ಲಿ ಎಲೆಗಳೆಲ್ಲಾ ಉದುರಿಹೋಗಿ ಬೆತ್ತಲೆಯಿರುವ ವೃಕ್ಷಗಳನ್ನು ನೋಡಿದರೆ ಇವು ಶೀತವೆಂಬ ಜಾಡ್ಯದಿಂದ ಅಂಗಲೋಪವನ್ನು ಹೊಂದಿದುವೋ ಎಂಬಂತೆ ಇರುತ್ತಿರುವುವು. ದನಗಳು ಯಥೇಷ್ಟವಾಗಿ ಬೆಳೆದಿರುವ ಹುಲ್ಲನ್ನು ಮೇಯ್ದು ಕೊಬ್ಬಿಯುಬ್ಬಿ ಹಿಮರಾಕ್ಷಸನ ದಂಡಿನಂತಿರುವುವು. ಕಮಲಗಳೆಲ್ಲಾ ಉದುರಿಹೋಗಿರುವುದರಿಂದ ಹಿಮವೆಂಬ ಅಪಮಾನಕಾರಿಯ ಕಾಟದಿಂದ ಪದ್ಮಿನಿಯರೆಂಬ ನಾರಿಯರು ತಮ್ಮ ಮುಖವನ್ನು ಹೊರಗೆ ತೋರಿಸದೆ ಮರೆಯಾಗಿರುವರೋ ಎಂಬಂತೆ ಕೊಳಗಳಲ್ಲಿ ತಾವರೆದಂಟುಮಾತ್ರ ಇರುವುದು. ಕೋಗಿಲೆಗಳೆಲ್ಲಾ—ಪೀಡಾಕಾರಿಯಾದ ಈ ಹಿಮಕಾಲವು ಬೇಗಹೋಗಿ ಸಂತೋಷದಾಯಕವಾದ ವಸಂತಕಾಲವು ಒಂದು ವನಗಳೆಲ್ಲಾ ಪಲ್ಲವ ಪುಷ್ಪಭರಿತವಾಗಿ ವಿರಾಜಿಸಲೆಂಬ ಉದ್ದೇಶದಿಂದ ನಿಯಮವನ್ನು ಕೈಕೊಂಡು ಮೌನವ್ರತವನ್ನು ಧರಿಸಿರುವುವೋ ಎಂಬಂತೆ ನಿಶ್ಶಬ್ದವಾಗಿರುವುವು. ಕಾಗೆಗಳೆಲ್ಲಾ ಗೂಡುಗಳಲ್ಲಿರುವ ತಮ್ಮ ಮೊಟ್ಟೆಗಳೊಡನೆ ಸೇರಿದ ಕೋಗಿಲೆಗಳ ಮೊಟ್ಟೆಗಳನ್ನೂ ತಮ್ಮ ಮೊಟ್ಟೆಗಳೇ ಎಂದು ಭಾವಿಸಿ ಕಾವಿಗೋಸ್ಕರ ಅವುಗಳ ಮೇಲೆ ಕುಳಿತು ಪ್ರೀತಿಯಿಂದ ಮರಿಮಾಡುತ್ತಿರುವುವು. ಬಡವರ ಮನೆಗಳ ಗೋಡೆಗಳಲ್ಲಿರುವ ತಿಗಣೆಗಳು ತಾವು ಮೊದಲು ಮನುಷ್ಯರ ಮೈಗಳನ್ನು ಕಚ್ಚಿ ರಕ್ತವನ್ನು ಹೀರುತ್ತಿದ್ದಂಥ ದುಸ್ಸ್ವಭಾವವನ್ನು ಬಿಟ್ಟು ಪರಹಿಂಸೆಯನ್ನು ಮಾಡದೆ ಮೊದಲ್ಮಾಡಿದ ಪಾಪಪರಿಹಾರಾರ್ಥವಾಗಿ ಸಜ್ಜನರಂತೆ ಉಪವಾಸವ್ರತವನ್ನು ಮಾಡುತ್ತಿರುವುವೋ ಎಂಬಂತೆ ಕೃಶವಾಗಿ ಗೋಡೆಗಳಲ್ಲಿ ಹತ್ತಿಕೊಂಡಿರುವುವು. ಸೂರ್ಯನು ಚಂದ್ರನಂತಿರುವನು. ಬಿಸಿಲು ಬೆಳದಿಂಗಳಂತಾಯಿತು. ಮಧ್ಯಾಹ್ನಕಾಲವು ಸಂಚಾರ ಮಾಡುವವರಿಗೆ ಹರ್ಷಕರವಾಗಿರುವುದು. ರಾತ್ರಿಯಲ್ಲಿ ಚಂದ್ರನು ಹಿಮದಿಂದ ಆಚ್ಛಾದಿಸಲ್ಪಟ್ಟವನಾಗಿ ಪ್ರಕಾಶರಹಿತನಾಗಿರುವನು. ಪಡುವಣದಿಕ್ಕಿನಿಂದ ನುಗ್ಗಿಬರುವ ಶೀತವಾತವು ಹಿಮದೈತ್ಯನ ವಾಹನದಂತಿರುವುದು. ಭೂಮಿಯು ಎಲ್ಲಿ ನೋಡಿದರೂ ಯವೆ ಗೋಧಿ ಮೊದಲಾದ ಧಾನ್ಯಗಳ ಸಸ್ಯಗಳಿಂದ ಕೂಡಿ ಪ್ರಕಾಶಿಸುತ್ತಿರುವುದು. ಚಾಡಿಮಾತನ್ನು ಕೇಳುವ ದೊರೆಯ ಐಶ್ವರ್ಯದಂತೆಯೂ ಸತ್ಪುರುಷರ ಬಡತನದಂತೆಯೂ ಹಿಮಂತರ್ತುವಿನ ಹಗಲುಗಳು ಬೇಗ ಮುಗಿದುಹೋಗುತ್ತಿರುವುವು. ಅರಸುಗಳು ಹಗೆಗಳನ್ನು ಜಯಿಸುವುದಕ್ಕಾಗಿ ದಂಡೆತ್ತಿ ಪರಮಂಡಲಗಳಿಗೆ ಹೋಗು

ತ್ತಿರುವರು. ಕಾಡುಗಳಲ್ಲಿ ಆನೆಗಳು ಹಿಮದಿಂದ ಬಲು ತಣ್ಣಾದ ನೀರುಗಳನ್ನು ಕುಡಿಯಲಂಜಿ ತಮ್ಮ ತಮ್ಮ ಸೊಂಡಿಲುಗಳನ್ನು ಬಾಯಿಯಲ್ಲಿಟ್ಟುಕೊಂಡು ಬಾಯಾರಿಕೆಯಿಂದ ಕಂಗೆಡುತ್ತಿರುವುವು. ಚಿಗುರು ಹೂವುಗಳಿಲ್ಲದಿರುವುದರಿಂದ ವನಪಂಗ್ತಿಗಳೆಲ್ಲಾ ಮಲಗಿ ಕಣ್ಮುಚ್ಚಿ ನಿದ್ದೆ ಹೋಗುತ್ತಿವೆಯೋ ಎಂಬ ಹಾಗೆ ಕಾಣುತ್ತಿರುವುವು ಎಂದು ಹೇಳಿದನು. ಆಗ ಶ್ರೀರಾಮನು ತಮ್ಮನ ಮಾತುಗಳನ್ನು ಕೇಳಿ ನಿಶ್ಚಯವೆಂದು ಸಂತೋಷಿಸಿ ತಾನು ಅಂಥ ಹಿಮಕಾಲದಲ್ಲೂ ಗೋದಾವರಿಯಲ್ಲಿ ಮಿಂದು ಮಡಿಯುಟ್ಟು ನಿತ್ಯಕರ್ಮಗಳನ್ನು ನೆರವೇರಿಸುತ್ತ ಮುನಿಗಳಂತೆ ಕೃಷ್ಣಾಜಿನಗಳನ್ನು ಹಾಸಿ ಹೊದೆದುಕೊಂಡು ಕಂದ ಮೂಲಾದಿಗಳನ್ನು ತಿಂದು ಜೀವಿಸಿಕೊಂಡು ಕಷ್ಟಪಡುತ್ತಿದ್ದನು.

ಹೀಗಿರುವಲ್ಲಿ ಮೊದಲು ಲಂಕಾಪಟ್ಟಣದಿಂದ ಬಂದು ಆ ಪಂಚವಟಿಯ ಸಮೀಪದಲ್ಲಿರುವ ಜನಸ್ಥಾನದಲ್ಲಿ ತನ್ನ ಅಣ್ಣನಾದ ಖರನೊಡನೆ ವಾಸಮಾಡಿಕೊಂಡಿದ್ದ ರಾವಣನ ತಂಗಿಯಾದ ಶೂರ್ಪನಖಿಯು ಆಹಾರಾರ್ಥವಾಗಿ ಕಾಡಿನಲ್ಲಿ ಸಂಚರಿಸುತ್ತ ಒಂದಾನೊಂದು ದಿನ ಪಂಚವಟಿಗೆ ಬಂದು ಸುಂದರಾಂಗನಾದ ರಾಮನನ್ನು ನೋಡಿ ಮೋಹಿತಳಾಗಿ ಕಾಮರೂಪಿಣಿಯಾದುದರಿಂದ ಕೂಡಲೆ ಚೆಲುವೆಯಾದ ಹೆಣ್ಣಿನ ಆಕಾರದಂತಿರುವ ಆಕಾರವನ್ನು ಧರಿಸಿ ಕಡೆಗಣ್ಣಿನ ನೋಟದಿಂದ ದಿಕ್ಕುಗಳನ್ನು ಬೆಳಗಿಸುತ್ತ ಮದಗಜದಂತೆ ಮಂದಗತಿಯಿಂದ ನಡೆಯುತ್ತ ರಾಮನಿರುವ ಪರ್ಣಶಾಲೆಯ ಬಾಗಿಲೆಡೆಗೆ ಬಂದು ನಿಂತು ಮುಗುಳ್ನಗೆಯಿಂದ ಕೂಡಿದವಳಾಗಿ—ಎಲೈ ಸುಂದರಪುರುಷನೇ, ನೀನು ಯಾರು? ನಿನ್ನ ಬಳಿಯಲ್ಲಿರುವ ಈ ಹೆಂಗಸು ಯಾರು? ನಿಮ್ಮ ಹೆಸರುಗಳು ಯಾವುವು? ಎಂದು ಕೇಳಲು; ರಾಮನು—ನಾನು ಲೋಕಪ್ರಸಿದ್ಧವಾದ ಸೂರ್ಯವಂಶದಲ್ಲಿ ಹುಟ್ಟಿದವನೂ ಸತ್ಯಪ್ರತಿಜ್ಞನೂ ಆದ ದಶರಥಭೂಪಾಲನ ಕುಮಾರನು. ನನ್ನನ್ನು ರಾಮನೆಂದು ಕರೆಯುವರು. ತಂದೆಯ ಅಜ್ಞಾನುಸಾರವಾಗಿ ಈ ದಂಡಕವನದಲ್ಲಿ ವಾಸಮಾಡುತ್ತಿರುವೆನು. ಈಕೆಯು ಮಹಾತ್ಮನಾದ ಜನಕರಾಜನ ಪುತ್ರಿಯು. ಈಕೆಗೆ ಸೀತೆಯೆಂದು ನಾಮವು. ಈಕೆಯೇ ನನ್ನ ಪತ್ನಿಯು ಎಂದು ಹೇಳಲು; ಅದಕ್ಕೆ ಶೂರ್ಪನಖಿಯು—ಎಲೈ ರಾಮನೇ, ಕೇಳು; ನಾನು ನಿನ್ನ ಅಂದವಾದ ರೂಪನ್ನು ನೋಡಿ ನಿನ್ನನ್ನು ಮೋಹಿಸಿದವಳಾಗಿದ್ದೇನೆ. ಸಾಮಾನ್ಯಳಾದ ಈ ಮನುಷ್ಯಸ್ತ್ರೀಯನ್ನು ಪರಿತ್ಯಜಿಸಿ ನನ್ನನ್ನು ಮದುವೆಯಾಗು. ನಿನ್ನ ಸಕಲಾಭೀಷ್ಟವೂ ಸಿದ್ಧಿಸುವುದು. ನಾನು ಕಾಮರೂಪಿಣಿಯು. ಮತ್ತು ಲೋಕದಲ್ಲಿ ಮಹಾವೀರನೆನಿಸಿದ ರಾವಣನ ತಂಗಿಯಾದ ಶೂರ್ಪನಖಿಯೆಂಬವಳು ನಾನೇ ಎಂದು ಹೇಳಿದಳು.

ರಾಮನು ಆ ಮಾತುಗಳನ್ನು ಕೇಳಿ ಸೀತೆಯ ಮೊಗವನ್ನು ನೋಡಿ ನಸುನಕ್ಕು ಶೂರ್ಪನಖಿಯನ್ನು ಕುರಿತು—ಎಲೈ ಶೋಭನಾಂಗಿಯೇ, ಯಾವಾಗಲೂ ನಾನು ಏಕಪತ್ನೀವ್ರತಸ್ಥನು. ಅದುಕಾರಣ ನನಗೆ ಈಕೆಯೊಬ್ಬಳೇ ಪತ್ನಿಯಾಗಿರುವಳು. ನಾನು ಇವಳ ಮೇಲೆ ಇನ್ನೊಬ್ಬಳನ್ನು ಮದುವೆಯಾಗಕೂಡದು. ಇದೋ, ಆ ಕಡೆಯಲ್ಲಿ ನನಗಿಂತಲೂ ಚೆಲುವನೂ ನನ್ನ ತಮ್ಮನೂ ಆದ ಲಕ್ಷ್ಮಣನು ಹೆಂಡತಿಯಿಲ್ಲದೆ ಒಬ್ಬನೇ

ಇರುವನು. ನೀನು ಹೋಗಿ ಅವನನ್ನು ವರಿಸಿ ಮದುವೆಯಾದರೆ ನಿನಗೆ ಬಹಳ ಸುಖ ವುಂಟಾಗುವುದು ಎನ್ನಲು ; ಆಗ ಶೂರ್ಪನಖಿಯು ಲಕ್ಷ್ಮಣನ ಬಳಿಗೆ ಹೋಗಿ ಆತನ ಸೌಂದರ್ಯವನ್ನು ನೋಡಿ ಈತನು ಆತನಿಗಿಂತಲೂ ಚೆಲುವನಾಗಿರುವನಲ್ಲಾ. ಆತನು ಹೇಳಿದ ಮಾತು ನಿಜವೇ ಸರಿ. ನಾನು ಇವನನ್ನು ಗಂಡನನ್ನಾಗಿ ಮಾಡಿಕೊಳ್ಳ ಬಹುದು ಎಂದು ಯೋಚಿಸಿ ಲಕ್ಷ್ಮಣನ ಬಳಿಗೆ ಹೋಗಿ ಅವನನ್ನು ಕುರಿತು— ಎಲೈ ಮೋಹನಾಂಗನೇ, ನಿಮ್ಮಣ್ಣನಾದ ರಾಮನು ನನ್ನನ್ನು ನಿನ್ನ ಬಳಿಗೆ ಕಳುಹಿಸಿದನು. ನೀನು ಬೇಗ ನನ್ನನ್ನು ಮದುವೆಯಾಗು ಅಂದಳು ಆಗ ಲಕ್ಷ್ಮಣನು ಅವಳ ಇಂಗಿತ ದಿಂದಲೂ ಚೇಷ್ಟೆಗಳಿಂದಲೂ ಇವಳು ರಾಕ್ಷಸಿಯೆಂದು ತಿಳಿದು ಅವಳನ್ನು ಕುರಿತು— ಎಲೈ ಸ್ತ್ರೀಯೇ. ನಾನು ರಾಮನ ದಾಸನು. ನಿರಂತರದಲ್ಲೂ ಆತನ ಸೇವೆ ಯನ್ನೇ ಮಾಡಿಕೊಂಡು ಜೀವಿಸುತ್ತಿರುವೆನು. ಇಂಥ ಸ್ಫುರದ್ರೂಪಿಣಿಯಾದ ನೀನು ದಾಸನಾದ ನನ್ನನ್ನು ಮದುವೆಯಾದರೆ ದಾಸಿಯಾಗಿ ಅವರ ಸೇವೆಯನ್ನು ಮಾಡಿ ಕೊಂಡಿರಬೇಕಾಗುತ್ತದೆ. ನೀನು ಒಡೆಯನಾದ ರಾಮನನ್ನು ಮದುವೆಯಾದರೆ ನನಗೆ ಒಡತಿಯಾಗಿರುವೆಯಲ್ಲಾ. ನಿನ್ನಂಥ ಕುಲಸ್ತ್ರೀಯು ದಾಸನನ್ನು ಮದುವೆಯಾಗು ವುದು ಧರ್ಮವೇ ? ಅಂದನು.

ಆ ಮಾತುಗಳನ್ನು ಕೇಳಿ ಶೂರ್ಪನಖಿಯು—ಇವರು ನನ್ನನ್ನು ಅಪಹಾಸ್ಯಕ್ಕೆ ಈಡುಮಾಡಿ ಹೀಗೆ ತಿರುಗಿಸುತ್ತಿರುವರು. ಇದರಿಂದ ನನ್ನ ಕೋರಿಕೆಯು ನೆರ ವೇರುವಂತೆ ಕಾಣುವುದಿಲ್ಲ. ಅದುಕಾರಣ ರಾಮನ ಹೆಂಡತಿಯಾದ ಈ ಮನುಜ ಸ್ತ್ರೀಯನ್ನು ನಾನು ಕೊಂದು ತಿಂದುಬಿಟ್ಟರೆ ಆ ಮೇಲೆ ಇವನಿಗೆ ಪತ್ನ್ಯಭಾವವುಂಟಾಗಿ ನನ್ನನ್ನೇ ಮದುವೆಯಾಗುವನು ಎಂದು ಯೋಚಿಸಿಕೊಂಡು ಹೊರಟು ಸೀತೆಯನ್ನು ನುಂಗುವುದಕ್ಕೆ ಮಹಾ ಮೃತ್ಯುದೇವತೆಯಂತೆ ಬರುತ್ತಿರಲು ; ಆಗ ರಾಮನ ಅಪ್ಪ ಣೆಯ ಪ್ರಕಾರ ಲಕ್ಷ್ಮಣನು ಅವಳನ್ನು ಹಿಡಿದು ತನ್ನ ಕತ್ತಿಯಿಂದ ಅವಳ ಕಿವಿ ಮೂಗುಗಳನ್ನು ಕೊಯ್ದನು. ಆಗ ಅವಳು ಹರಕು ಮೂಗುಳ್ಳವಳೂ ಮೂಳಿಯೂ ಆಗಿ ಧಾರಾರೂಪವಾಗಿ ಸುರಿಯುತ್ತಿರುವ ರಕ್ತವುಳ್ಳವಳಾಗಿ ತನ್ನಣ್ಣನಾದ ಖರನ ಬಳಿಗೆ ಬಂದು ಅವನೊಡನೆ ರಾಮಲಕ್ಷ್ಮಣರ ಮೇಲೆ ದೂರು ಹೇಳಿಕೊಳ್ಳಲು; ತತ್ ಕ್ಷಣದಲ್ಲೇ ಖರನು ರಾಕ್ಷಸ ಸೇನಾಯುಕ್ತನಾಗಿ ಹೊರಟು ರಾಮನೊಡನೆ ಯುದ್ಧಕ್ಕೆ ಬಂದನು. ರಾಮನೂ ಲಕ್ಷ್ಮಣ ಸಮೇತನಾಗಿ ಯುದ್ಧಕ್ಕೆ ತೊಡಗಿ ಕಡೆಗೆ ಜನಸ್ಥಾನದಲ್ಲಿ ಒಬ್ಬ ರಾಕ್ಷಸನಾದರೂ ಉಳಿಯದಂತೆ ಎಲ್ಲರನ್ನೂ ಕೊಂದು ಆ ಪ್ರದೇ ಶದಲ್ಲಿ ರಾಕ್ಷಸರಿಂದುಂಟಾಗುತ್ತಿದ್ದ ತೊಂದರೆಯನ್ನು ನಿರ್ನಾಮಮಾಡಿದನು. ಆ ಮೇಲೆ ಶೂರ್ಪನಖಿಯು ಹತಾಶಳಾಗಿ ಲಂಕಾಪಟ್ಟಣಕ್ಕೆ ಬಂದು ತನ್ನಣ್ಣನಾದ ರಾವಣನ ಬಳಿಯಲ್ಲಿ ದುಃಖಿಸುತ್ತ ನಿಂತು ನಿದರ್ಶನಪೂರ್ವಕವಾಗಿ ವಿದ್ಯಮಾನವನ್ನೆಲ್ಲಾ ತಿಳಿಸಲು ; ಅವನು ಕೋಪ ಸಂತಾಪ ಪ್ರೇರಿತನಾಗಿ ರಾಮಲಕ್ಷ್ಮಣರೊಡನೆ ಯುದ್ಧಕ್ಕೆ ಹೊರಡುವ ಸಮಯದಲ್ಲಿ ಶೂರ್ಪನಖಿಯು ಅವನನ್ನು ಕುರಿತು—ಎಲೈ ಅಣ್ಣನೇ, ರಾಮಲಕ್ಷ್ಮಣರನ್ನು ಜಗಳದಲ್ಲಿ ಜಯಿಸುವುದು ಪಿನಾಕಹಸ್ತನಾದ ಶಿವನಿಗೂ ಸಾಧ್ಯ

ವಲ್ಲವು. ಆದುಕಾರಣ ನೀನು ಈ ರೀತಿಯಾಗಿ ಯುದ್ಧಕ್ಕೆ ಹೋಗುವುದರಿಂದ ಏನೂ ಪ್ರಯೋಜನವಿಲ್ಲವು. ಆದುದರಿಂದ ರಾಮಲಕ್ಷ್ಮಣರಿಬ್ಬರೂ ತಮ್ಮಿಂದ ತಾವೇ ಸಾಯುವಂತೆ ಒಂದು ಯುಕ್ತಿಯನ್ನು ಹೇಳುವೆನು ಕೇಳು. ಆ ರಾಮನಿಗೆ ಸರ್ವಲೋಕ ಸುಂದರಿಯಾಗಿ ಸೀತೆಯೆಂಬಭಿಧಾನದಿಂದ ಒಬ್ಬಳು ಹೆಂಡತಿಯಿರುವಳು. ನಿನ್ನ ಅಂತಃಪುರದಲ್ಲಿರುವ ದೇವದಾನವ ಯಕ್ಷರಾಕ್ಷಸಾದಿ ಕನ್ಯಕೆಯರಲ್ಲಿ ಒಬ್ಬಳಾದರೂ ಆಕೆಗೆ ಸಮಾನಳಾದ ಲಾವಣ್ಯವತಿಯಿಲ್ಲವು. ನೀನು ನಮ್ಮ ಸೋದರಮಾವನಾದ ಮಾರೀಚನನ್ನು ಸಹಾಯಕ್ಕೆ ಕರೆದುಕೊಂಡು ಈಗಲೇ ಪಂಚವಟಿಗೆ ಹೋಗಿ ರಾಮಲಕ್ಷ್ಮಣರನ್ನು ಸೀತೆಯ ಬಳಿಯಿಂದ ಅಗಲಿಸಿ ಆ ವೇಳೆಯಲ್ಲಿ ನೀನು ಬಲಾತ್ಕಾರದಿಂದ ಸೀತೆಯನ್ನು ಎತ್ತಿಕೊಂಡು ಲಂಕೆಗೆ ಬಂದು ಆಕೆಯನ್ನು ನಿನ್ನ ಪತ್ನಿಯನ್ನಾಗಿ ಮಾಡಿಕೊಂಡರೆ ಮೂರು ಲೋಕದಲ್ಲಿಯೂ ನಿನ್ನ ಭಾಗ್ಯಕ್ಕೆ ಎಣೆಯಾದ ಭಾಗ್ಯವೇ ಇಲ್ಲವು. ಆ ಮೇಲೆ ರಾಮನು ಪ್ರಿಯಳಾದ ಹೆಂಡತಿಯ ವಿಯೋಗವನ್ನು ತಾಳಲಾರದೆ ಸಾಯುವನು. ಅಣ್ಣ ಅತ್ತಿಗೆ ಇವರ ವಿಯೋಗದುಃಖತಾಪಗಳಿಂದ ಲಕ್ಷ್ಮಣನೂ ವಿನಾಶವಾಗಿ ಹೋಗುವನು ಎಂದು ಹೇಳಿದನು.

ರಾವಣನು ಈ ಮಾತುಗಳನ್ನು ಕೇಳಿ—ಇದು ಒಳ್ಳೆಯ ಸೂಚನೆಯೇ ಸರಿ. ಹೀಗೆಯೇ ಮಾಡಬೇಕೆಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ ಕೂಡಲೆ ರಥಾರೂಢನಾಗಿ ಹೊರಟು ನಡುಗಡಲಲ್ಲಿರುವ ಮಾರೀಚನ ಆಶ್ರಮಕ್ಕೆ ಬಂದು ಅವನೊಡನೆ—ದಶರಥನ ಮಗನಾದ ರಾಮನು ಶೂರ್ಪನಖಿಯ ಕಿವಿ ಮೂಗುಗಳನ್ನು ಕೊಯ್ದು ಸಮರದಲ್ಲಿ ಖರದೂಷಣಾದಿಗಳನ್ನು ಕೊಂದುಹಾಕಿದ ಸುದ್ದಿಯನ್ನೂ ತಾನು ರಾಮನ ಹೆಂಡತಿಯನ್ನು ಅಪಹರಿಸಿಕೊಂಡು ಬರಬೇಕೆಂಬ ಉದ್ದೇಶದಿಂದ ಬಂದಿರುವುದನ್ನೂ ಹೇಳಿ ಒಡಂಬಡಿಸಿ ಪಂಚವಟಿಯಲ್ಲಿ ಮಾಡಬೇಕಾದ ಉಪಾಯಗಳನ್ನು ಅವನಿಗೆ ಹೇಳಿಕೊಟ್ಟು ಆತನೊಡನೆ ಹೊರಟು ಪಂಚವಟಿಗೆ ಬಂದು ತಾನೊಂದೆಡೆಯಲ್ಲಿ ಗೋಪ್ಯವಾಗಿದ್ದುಕೊಂಡು ಮಾರೀಚನನ್ನು ಮುಂಚಿತವಾಗಿ ರಾಮಾಶ್ರಮಕ್ಕೆ ಕಳುಹಿಸಿದನು. ಆಗ ಮಾಯಾವಿಯಾದ ಮಾರೀಚನು ಪಂಚರತ್ನಪ್ರಕಾಶಮಯವಾದ ಜಿಂಕೆಯ ಆಕಾರವನ್ನು ಧರಿಸಿ ರಾಮಾಶ್ರಮದ ಬಳಿಗೈತಂದು ಸೀತಾರಾಮರ ಮುಂದೆ ಸುಳಿದಾಡುತ್ತಿರಲು ; ಸೀತೆಯು ಆ ಮಾಯಾಮೃಗದ ರಮ್ಯಾಕಾರವನ್ನು ನೋಡಿ ಮೋಹಿತಳಾಗಿ ರಾಮನನ್ನು ಕುರಿತು—ಎಲೈ ಪ್ರಾಣೇಶನೇ, ನಾನು ಇಂಥ ಚೆಲುವಾದ ಹುಲ್ಲೆಯನ್ನು ಮೊದಲೆಂದೂ ನೋಡಿದುದಿಲ್ಲ. ಯಾವ ಪ್ರಯತ್ನದಿಂದಾದರೂ ಇದನ್ನು ಹಿಡಿದು ತಂದರೆ ನಾವು ಈ ವನವಾಸದಲ್ಲಿರುವ ವರೆಗೂ ಇದರ ಸಂಗಡ ಆಡುತ್ತ ಸುಖವಾಗಿ ಕಾಲವನ್ನು ಕಳೆಯಬಹುದು. ಆ ಮೇಲೆ ಅಯೋಧ್ಯೆಗೆ ತೆಗೆದುಕೊಂಡು ಹೋಗಿ ನಮ್ಮ ಅಂತಃಪುರದಲ್ಲಿ ಇಟ್ಟುಕೊಳ್ಳಬಹುದು ಎಂದು ದೈನ್ಯದಿಂದ ಬಹುವಿಧವಾಗಿ ಹೇಳಿಕೊಂಡಳು. ಆಗ ರಾಮನು ಸೀತಾರಕ್ಷಣಾರ್ಥವಾಗಿ ಲಕ್ಷ್ಮಣನನ್ನು ಅಲ್ಲೇ ಬಿಟ್ಟು ಧನುರ್ಬಾಣಗಳನ್ನು ತೆಗೆದುಕೊಂಡು ಆ ಮೃಗದ ಹಿಂದೆಯೇ ಹೋದನು. ಆ ಮಾಯಾಮೃಗವು ದೂರದಲ್ಲಿ ಮಿಂಚಿನಂತೆ ಕಂಡು ಮರೆಯಾಗುತ್ತ

ಆ ಮೇಲೆ ದಾರಿ ತಪ್ಪಿದುದರಂತೆ ಹಿಂದಿರುಗಿ ರಾಮನ ಬಳಿಗೆ ಬರುತ್ತ ಕೈಗೆ ಸಿಕ್ಕಿತೆಂಬಷ್ಟರಲ್ಲಿ ಚಕ್ಕನೆ ಹಾರಿ ಸ್ವಲ್ಪದೂರದಲ್ಲಿ ನಿಲ್ಲುತ್ತ ತನ್ನ ನಡತೆಯಿಂದ ರಾಮನಿಗೆ ಆಶೆಯನ್ನು ಹೆಚ್ಚಿಸುವುದಾಗಿ ಹೋಗುತ್ತ ಇದೇ ಮೇರೆಗೆ ಆಶ್ರಮಕ್ಕೆ ಬಹುದೂರವಾಗಿ ಕಾಡಿನಲ್ಲಿ ಅವನನ್ನು ಸೆಳೆದುಕೊಂಡು ಹೋಯಿತು.

ರಾಮನು ನಡುವಗಲ ಮಾರ್ತಾಂಡನ ಬಲು ಬಿಸಿಲಿನಲ್ಲಿ ತಿರುತಿರುಗಿ ಬಾಯಾರಿ ಬೆಂಡಾಗಿ ಬೇಸತ್ತು ಬಸವಳಿದು ಕಡೆಗೆ—ಈ ಮೃಗವಂತು ನನ್ನ ಕೈಗೆ ಸಿಕ್ಕುವುದಿಲ್ಲ. ಇದನ್ನು ಕೊಂದು ಇದರ ತೊಗಲನ್ನಾದರೂ ತೆಗೆದುಕೊಂಡು ಹೋಗಿ ಜಾನಕಿಗೆ ಕೊಡುವೆನೆಂದು ತನ್ನ ಮನಸ್ಸಿನಲ್ಲಿ ನಿರ್ಧರಿಸಿದವನಾಗಿ ಬಿಲ್ಲಿಗೆ ನಾರಿಯನ್ನೇರಿಸಿ ಅಲಗನ್ನು ಹೂಡಿ ಗುರಿಗಟ್ಟಿ ಮೃಗವನ್ನು ಹೊಡೆಯಲು ; ಆಗ ಮಾರೀಚನು ಮೊದಲಿದ್ದ ಜಿಂಕೆಯ ರೂಪನ್ನು ಬಿಟ್ಟು ಕೂಗಿಕೊಳ್ಳುವ ರಾಮನ ಧ್ವನಿಯಂತೆ—ಹಾ ಸೀತೇ! ಹಾ ಲಕ್ಷ್ಮಣಾ! ಎಂದು ಗಟ್ಟಿಯಾಗಿ ಆರ್ತಧ್ವನಿ ಮಾಡುತ್ತ ಪ್ರಾಣಗಳನ್ನು ಬಿಟ್ಟನು. ಇತ್ತ ಎಲೆವನೆಯಲ್ಲಿದ್ದ ಜನಕಜೆಯು ಆ ಧ್ವನಿಯನ್ನು ಕೇಳಿ ಕೂಡಲೆ ಬಹು ದುಃಖಿತಳಾಗಿ ಮಹಾವ್ಯಥೆಯಿಂದ ಲಕ್ಷ್ಮಣನನ್ನು ಕುರಿತು—ಎಲೈ ಮೈದುನನೇ, ನಿನಗೆ ಪ್ರಿಯನಾದ ಅಣ್ಣನ ದುಃಖಧ್ವನಿಯನ್ನು ಕೇಳಿದೆಯಾ ? ಆ ಮೃಗವು ಮಾಯಾವಿಯಾದ ರಾಕ್ಷಸನೋ ? ಏನೋ ? ನಾನು ತಿಳಿಯದೆ ದುರಾಶಾವಶಳಾಗಿ ನನ್ನ ಪ್ರಿಯನನ್ನು ಅಟ್ಟಿ ಕೆಟ್ಟೆನು. ನನ್ನ ಮನೋವಲ್ಲಭನು ಏನಾಗಿರುವನೋ? ನಡೆ! ಬೇಗ ಹೋಗು! ನಿಮ್ಮಣ್ಣನಿಗೆ ಸಹಾಯವನ್ನು ಮಾಡಿ ಆತನನ್ನು ಬೇಗ ಇಲ್ಲಿಗೆ ಕರೆದುಕೊಂಡು ಬಂದರೆ ಸರಿ. ಇಲ್ಲದಿದ್ದರೆ ಈ ಕ್ಷಣವೇ ಪ್ರಾಣವನ್ನು ಬಿಡುವೆನೆಂದು ಹೇಳಿ ಲಕ್ಷ್ಮಣನನ್ನು ಕಳುಹಿಸಲು ; ಆತನು ಕಾಡಿನಲ್ಲಿ ರಾಮನನ್ನು ಹುಡುಕುತ್ತ ಹೋಗುತ್ತಿದ್ದನು.

ಇತ್ತಲಾ ದುಷ್ಟನಾದ ರಾವಣನು ಸನ್ಯಾಸಿವೇಷವನ್ನು ತಾಳಿಕೊಂಡು ಬಂದು ರಾಮನ ಎಲೆವನೆಯನ್ನು ಹೊಕ್ಕು ಸೀತೆಯನ್ನು ಬಲಾತ್ಕಾರದಿಂದ ಹಿಡಿದೆತ್ತಿ ರಥದ ಮೇಲೆ ಕೂರಿಸಿಕೊಂಡು ಆಕಾಶಮಾರ್ಗದಲ್ಲಿ ಬರುತ್ತಿರುವಾಗ ಸೀತೆಯು—ಹಾ ರಾಮಾ! ಹಾ ಲಕ್ಷ್ಮಣಾ! ನೀವಿಲ್ಲದ ವೇಳೆಯಲ್ಲಿ ದುರಾತ್ಮನಾದ ಈ ರಕ್ಕಸನು ಮಂದಭಾಗ್ಯಳಾದ ನನ್ನನ್ನು ಹಿಡಿದೆತ್ತಿಕೊಂಡು ಹೋಗುತ್ತಿರುವನು. ದಿಕ್ಕಿಲ್ಲವಲ್ಲಾ! ಅಯ್ಯೋ! ಎಂದು ಮೊರೆಯಿಟ್ಟು ರೋದಿಸುತ್ತಿರುವ ಶಬ್ದವನ್ನು ಜಟಾಯುವೆಂಬ ಗೃಧ್ರರಾಜನು ಕೇಳಿ ಅತಿಕೋಪದಿಂದ—ಎಲೈ ನೀಚನಾದ ರಾವಣನೇ, ಜಗದಭಿರಾಮನಾದ ರಾಮನ ರಮಣಿಯಾದ ಸೀತೆಯನ್ನು ಅಪಹರಿಸಿಕೊಂಡು ಎಲ್ಲಿಗೆ ಹೋಗುತ್ತಿರುವೆ? ನಿಲ್ಲು! ನಿಲ್ಲು! ಲೋಕಮಾತೃವಾದ ಜನಕಜೆಯನ್ನು ಬೇಗ ಬಿಟ್ಟರೆ ಸರಿ. ಇಲ್ಲವಾದರೆ ನಿನ್ನನ್ನು ಹಿಂಡಿ ಪ್ರಾಣಗಳನ್ನು ತೆಗೆಯುವೆನೆಂದು ಆಕಾಶಕ್ಕೆ ಹಾರಿ ತನ್ನ ಮಹಾಪಕ್ಷಗಳಿಂದ ರಾವಣನ ರಥ ರಥಾಶ್ವಕೇತು ದಂಡಗಳನ್ನು ಮುರಿಬಡಿದು ನೆಲಕ್ಕೆ ಕೆಡಹಿ ಕೊಕ್ಕುಗಳಿಂದ ರಾವಣನ ಮೈಯನ್ನು ಕಚ್ಚಿ ಮಾಂಸಖಂಡಗಳನ್ನು ಕಿತ್ತು ರಕ್ತದ ಕೋಡಿಯನ್ನು ಹರಿಸಲು ; ಆಗ ರಾವಣನು ಮಾಯೆಯನ್ನವಲಂಬಿಸಿ

ಆ ಜಟಾಯುವನ್ನು ಹೊಡೆದು ಮೂರ್ಛೆಗೊಳಿಸಿ ಭೂಮಿಗುರುಳಿಸಿ ಮೊದಲು ತುಂಡು ತುಂಡಾಗಿ ಬಿದ್ದಿದ್ದ ರಥವನ್ನೇ ಸರಿಯಾಗಿ ಜೋಡಿಸಿ ತಿರಿಗಿ ಅದರ ಮೇಲೆ ಸೀತೆಯನ್ನು ಕುಳ್ಳಿರಿಸಿಕೊಂಡು ಗಗನಮಾರ್ಗದಲ್ಲಿ ಹೋಗುತ್ತಿರಲು ; ಆಗ ಸೀತೆಯು—ಲೋಕೈಕ ವೀರರಾದ ರಾಮಲಕ್ಷ್ಮಣರೇ ! ಎಂದು ಬಾರಿಬಾರಿಗೂ ಹಂಬಲಿಸುತ್ತ ಎಲ್ಲಾ ದಿಕ್ಕುಗಳನ್ನು ನೋಡಿ ಬಾಯ್ಬಿಡುತ್ತ ಕಡೆಗೆ ಋಷ್ಯಮೂಕವೆಂಬ ಪರ್ವತಶಿಖರದಲ್ಲಿ ನಳ ನೀಲ ಹನುಮಂತರೇ ಮೊದಲಾದ ಕಪಿನಾಯಕರೊಡನೆ ಕುಳಿತಿದ್ದ ಸುಗ್ರೀವನೆಂಬ ಕಪಿರಾಜನನ್ನು ನೋಡಿ, ತಾನು ಉಟ್ಟಿದ್ದ ಸೀರೆಯ ಸೆರಗನ್ನು ಸ್ವಲ್ಪಮಾತ್ರ ಹರಿದು ತಾನು ತೊಟ್ಟಿದ್ದ ತೊಡವುಗಳನ್ನು ತೆಗೆದು ಅದರಲ್ಲಿಟ್ಟು ಗಂಟುಕಟ್ಟಿ ರಾಮನು ತನ್ನನ್ನು ಹುಡುಕುತ್ತ ಬಂದರೆ ಇವರು ಆತನಿಗೆ ಇವುಗಳನ್ನು ಕೊಡುವರೆಂಬ ಯೋಚನೆಯಿಂದ ರಾವಣನು ಕಾಣದ ಹಾಗೆ ಅವರ ಬಳಿಗೆಸೆದಳು.

ರಾವಣನು—ಯಾವಾಗ ರಾಮನು ಹಿಂದೆ ಬರುವನೋ ಎಂಬ ಭಯದಿಂದ ಕೂಡಿದವನಾಗಿ ಪ್ರತಿಕ್ಷಣದಲ್ಲಿಯೂ ಹಿಂದಿರುಗಿ ನೋಡುತ್ತ ತೇರನ್ನು ಬೇಗ ಬೇಗ ನಡಿಸುತ್ತ ಕಡಲನ್ನು ದಾಟಿ ಲಂಕಾನಗರವನ್ನು ಸೇರಿ ತನ್ನ ಅಂತಃಪುರನಾರೀಜನವಿಹಾರೋಚಿತವಾದ ಅಶೋಕೋದ್ಯಾನದಲ್ಲಿ ಶಿಂಶುಪವೆಂಬ ವೃಕ್ಷದ ಕೆಳಗೆ ಸೀತೆಯನ್ನಿರಿಸಿ ಅಲ್ಲಿ ತ್ರಿಜಟೆ ಸರಮೆ ಎಂಬವರೇ ಮೊದಲಾದ ರಾಕ್ಷಸಸ್ತ್ರೀಯರನ್ನು ಕಾವಲಿಟ್ಟು ತನ್ನ ಕುಲಗೋತ್ರಗಳನ್ನೆಲ್ಲಾ ನಿರ್ಮೂಲಮಾಡುವುದರಲ್ಲಿ ಮೃತ್ಯುಪ್ರಾಯಳಾಗಿರುವವಳನ್ನು ತಂದು ತನ್ನ ಮನೆಯಲ್ಲಿ ಇಟ್ಟುಕೊಂಡೆನೆಂದು ತಿಳಿಯದೆ ಉದ್ಭ್ರಮೆಯಿಂದ ಕೂಡಿದವನಾಗಿ ತನ್ನ ತಂಗಿಯಾದ ಶೂರ್ಪನಖಿಯನ್ನು ಕರತರಿಸಿ ಆಕೆಗೆ ಸೀತೆಯನ್ನು ತೋರಿಸಿ—ಇದೋ, ನೋಡು. ನಿನ್ನ ಕಿವಿಮೂಗುಗಳನ್ನು ಕೊಯ್ದು ಮಾನಭಂಗಪಡಿಸಿದ ರಾಮನಿಗೆ ಪ್ರತಿಫಲವಾಗಿ ಆತನ ಹೆಂಡತಿಯಾದ ಈ ಸೀತೆಯನ್ನು ತಂದು ಸೆರೆಯಲ್ಲಿಟ್ಟಿದ್ದೇನೆಂದು ಹೇಳಿ ಅಂತಃಪುರಕ್ಕೆ ಹೋಗಿ—ನಾನು ಕೃತಕೃತ್ಯನಾದೆನೆಂದು ತಿಳಿದು ಸಂತೋಷಸಮುದ್ರದಲ್ಲಿ ಮುಳುಗೇಳುತ್ತಿದ್ದನು.

ಇತ್ತಲಾ ರಾಮನು ಮಾಯಾಮೃಗರೂಪಿಯಾದ ಮಾರೀಚನೆಂಬ ದುಷ್ಟ ರಾಕ್ಷಸನು ಮೋಸದಿಂದ ತನ್ನ ಧ್ವನಿಯಂತೆ ಹಾ ಸೀತೆ ! ಹಾ ಲಕ್ಷ್ಮಣಾ ! ಎಂದು ಕೂಗಿದ ಧ್ವನಿಯನ್ನು ಕೇಳಿದುದರಿಂದ ಸೀತೆಯು ಗಾಬರಿಯಾಗಿ ನನ್ನನ್ನು ನೋಡುವುದಕ್ಕೋಸ್ಕರ ಲಕ್ಷ್ಮಣನನ್ನು ಎಲ್ಲಿ ಕಳುಹಿಸಿಬಿಡುವಳೋ ! ಆ ವೇಳೆಯಲ್ಲಿ ರಾಕ್ಷಸರು ಬಂದು ಸೀತೆಯನ್ನು ಏನು ಮಾಡುವರೋ ! ಎಂದು ಯೋಚಿಸಿ ಕಳವಳಗೊಂಡು ತನ್ನ ಆಶ್ರಮವನ್ನು ಕುರಿತು ಬೇಗ ಬೇಗ ಬರುತ್ತ ದಾರಿಯಲ್ಲಿ ಬರುತ್ತಿರುವ ಲಕ್ಷ್ಮಣನನ್ನು ಕಂಡು—ಆಹಾ ! ನಾನು ಮೊದಲು ಯೋಚಿಸಿದಂತೆಯೇ ಆಯಿತು. ಸೀತೆಯು ಏನಾಗಿರುವಳೋ ! ಎಂದು ಬಹು ಚಿಂತಾಕ್ರಾಂತನಾಗಿ ಲಕ್ಷ್ಮಣನೊಡನೆ ಕೂಡಿ ತನ್ನ ಪರ್ಣಶಾಲೆಗೆ ಬಂದು ನೋಡಿ ತನ್ನ ಜೀವರತ್ನವನ್ನು ಕಾಣದೆ ಕಾಡಾನೆಯಿಂದ ಮುರಿದಿಡಲ್ಪಟ್ಟ ಸಾಲವೃಕ್ಷದ ಕೊಂಬಿನಂತೆ ಭೂಮಿಯಲ್ಲಿ ಬಿದ್ದು ಮೂರ್ಛಿತನಾಗಿ ಲಕ್ಷ್ಮಣನು ಮಾಡಿದ ಶೈತ್ಯೋಪಚಾರದಿಂದ ಎಚ್ಚತ್ತು—ಹಾ ! ಪ್ರಿಯೇ ! ಜಾನಕೀ!

ಎಲ್ಲಿ ಹೋದೆ ? ಏಕೆ ನನ್ನೊಡನೆ ಮಾತಾಡುವುದಿಲ್ಲ? ಎಂದು ಪ್ರಲಾಪಿಸುತ್ತ, ಎಲೈ ಲಕ್ಷ್ಮಣನೇ, ನಾವು ರಾಕ್ಷಸರಲ್ಲಿ ಹಗೆತನವುಳ್ಳವರಾದುದರಿಂದ ಅವರು ಈ ರೀತಿಯಾಗಿ ನಮ್ಮನ್ನು ಮೋಸಗೊಳಿಸಿ ಸೀತೆಯನ್ನು ತಿಂದುಬಿಟ್ಟರೋ? ಅಥವಾ ಎತ್ತಿಕೊಂಡುಹೋಗಿ ತಮ್ಮ ಮನೆಗಳಲ್ಲಿಟ್ಟುಕೊಂಡಿದ್ದಾರೋ ತಿಳಿಯದಲ್ಲಾ? ಹಾಗೇನಾದರೂ ಒಂದುಪಕ್ಷದಲ್ಲಿ ಇಟ್ಟುಕೊಂಡಿದ್ದರೆ ಆ ಕ್ರೂರಾತ್ಮರಾದ ರಾಕ್ಷಸರ ಮಧ್ಯದಲ್ಲಿ ಸಿಕ್ಕಿದ ನನ್ನ ಪ್ರಾಣವಲ್ಲಭೆಯು ಹುಲಿಗಳ ಮಧ್ಯದಲ್ಲಿ ಸಿಕ್ಕಿದ ಹೆಣ್ಣು ಹುಲ್ಲೆಯ ಹಾಗೆ ವ್ಯಥಿತಳಾಗಿ ಪ್ರಾಣಗಳನ್ನು ಬಿಡುವಳು. ನಾನು ಪ್ರಿಯೆಯಾದ ಸೀತೆಯನ್ನು ನೋಡದೆ ಒಂದು ನಿಮೇಷಕಾಲವಾದರೂ ಬದುಕಲಾರೆನು. ಎಲೈ ಲಕ್ಷ್ಮಣನೇ, ಗೋದಾವರೀನದಿಗೆ ಸ್ನಾನಕ್ಕಾಗಿ ಹೋಗಿರುವಳೋ ? ಹಾ ! ಇರಬಹುದು, ನೋಡುವಣ, ಬಾ, ಎಂದು ಅಲ್ಲಿಗೆ ಹೋಗಿ ಚೆನ್ನಾಗಿ ನೋಡಿ, ಎಲ್ಲೂ ಕಾಣದೆ ಕಡೆಗೆ ಹುಚ್ಚನಂತೆ—ಆ ನದಿಯಲ್ಲಿರುವ ತಾವರೆಯನ್ನು ನೋಡಿ—ಎಲೈ ತಾವರೆಯೇ, ನಿನ್ನಂತೆ ಮುಖವುಳ್ಳ ನನ್ನ ಪ್ರಿಯೆಯಾದ ಸೀತೆಯನ್ನು ಕಾಣೆಯಾ ? ಎಲೈ ಬಿಳಿದಾವರೆಯೇ, ನಿನ್ನ ಬಣ್ಣದಂತಿರುವ ಮುಗುಳ್ನಗೆಯುಳ್ಳ ನನ್ನ ಪ್ರಾಣಕಾಂತೆಯು ಎಲ್ಲಿರುವಳು ? ಎಲೈ ಹೊಂದಾವರೆಯೇ, ನಿನ್ನ ಕಾಂತಿಯಂತೆ ಮೈಸಿರಿಯುಳ್ಳ ನನ್ನ ಮಡದಿಯನ್ನು ನೀನೆಲ್ಲಾದರೂ ಕಂಡಿದ್ದರೆ ಹೇಳಬಾರದೇ ? ಎಲೈ ಕನ್ನೈದಿಲೆಯೇ, ನಿನ್ನೆಸಳಿನಂತೆ ಕಣ್ಣುಳ್ಳ ನನ್ನ ಪ್ರಾಣಕಾಂತೆಯನ್ನು ಕಂಡಿರುವೆಯಾ ? ಓ ಭೃಂಗವೇ, ನಿನ್ನಂತೆ ಶೋಭಿಸುತ್ತಿರುವ ಮುಂಗುರುಳುಳ್ಳ ನನ್ನ ಮಾನಿನೀಮಣಿಯು ಎಲ್ಲಿ ಮರೆಯಾಗಿರುವಳು ? ತೋರಿಸುವೆಯಾ ? ಎಲೈ ಮತ್ಸ್ಯವೇ, ನನ್ನ ನಾರಿಯು ನಿನ್ನಂತೆ ನೀರಿನಲ್ಲೇನಾದರೂ ಮುಳುಗಿರುವಳೋ ? ಓ ಚಕ್ರವಾಕಪಕ್ಷಿಯೇ, ನೀನು ರಾತ್ರಿಯಲ್ಲಿ ನಿನ್ನ ಹೆಂಡತಿಯನ್ನು ಕಾಣದೆ ದುಃಖಪಡುವಂತೆಯೇ ನಾನೂ ದುಃಖಪಡುತ್ತಿರುವೆನು. ಆದುದರಿಂದ ನೀನು ನನ್ನ ಮೇಲೆ ಕನಿಕರವಿಟ್ಟು ನನ್ನ ಮನೋರಮೆಯನ್ನು ತೋರಿಸಿಕೊಡುವೆಯಾ ? ಎಂದು ಪ್ರಲಾಪಿಸುತ್ತ ಅಲ್ಲಿಂದ ಹೊರಟು ಕಾಡಿನಲ್ಲಿ ಹುಡುಕಿಕೊಂಡು ತಿರುಗುತ್ತ ಕಂಡ ಕಂಡ ಮರಗಳ ಬಳಿಗೂ ಮೃಗಪಕ್ಷಿಗಳ ಬಳಿಗೂ ಓಡಿಯೋಡಿ ಹೋಗಿ—ಸುಂದರಿಯಾದ ನನ್ನ ಪತ್ನಿಯನ್ನು ಕಾಣಿರಾ ? ಎಂದು ದೀನಭಾವದಿಂದ ಕೇಳುತ್ತ ಮತ್ತು ಎಲೈ ಸಿಂಹವೇ, ನಿನ್ನ ನಡುವಿನಂತೆ ನಡುವುಳ್ಳವಳಾದ ನನ್ನ ಸುದತೀರತ್ನವನ್ನು ನಿನ್ನ ಗುಹಾಮಧ್ಯದಲ್ಲಿಟ್ಟುಕೊಂಡಿರುವೆಯಾ ? ಎಲೈ ಜಿಂಕೆಗಳಿರಾ, ನಿಮ್ಮ ಕಣ್ಣುಗಳಂತೆ ಕಪ್ಪಾದ ಕಣ್ಣುಗಳುಳ್ಳ ನನ್ನ ಕಾಮಿನಿಯು ನಿಮ್ಮ ನಿವಾಸಸ್ಥಳದಲ್ಲಿರುವಳೋ, ಎಲೈ ಮದಕರಿಯೇ, ನಿನ್ನ ಸೊಂಡಲಿನಂತಿರುವ ತೊಡೆಗಳುಳ್ಳ ನನ್ನ ತರುಣಿಯು ಎಲ್ಲಿರುವಳು ? ಎಲೈ ಅರಸಂಚೆಯೇ, ನಿನ್ನ ನಡೆಯಂತೆ ಮನೋಹರವಾದ ನಡೆಯುಳ್ಳ ನನ್ನ ಮೋಹದ ಶೋಭನಾಂಗಿಯನ್ನು ತೋರಿಸಬಾರದೇ ? ಎಲೈ ಕೋಗಿಲೆಯೇ, ನಿನ್ನ ಧ್ವನಿಯಂತೆ ಮಧುರಧ್ವನಿಯುಳ್ಳವಳಾದ ನನ್ನ ಪ್ರಿಯಕಾಂತೆಯನ್ನು ಕಾಣೆಯಾ ? ಎಲೈ ಅರಗಿಣಿಯೇ, ನಿನ್ನಂತೆ ಮುದ್ದು ಮಾತುಳ್ಳ ನನ್ನ ಚೆನ್ನರಸಿಯು ಎಲ್ಲಿ ಹೋದಳು ? ಎಲೈ ಪ್ರಿಯೆಯೇ, ನೀನು ನನ್ನಲ್ಲಿ

ಠವೆಯುವ್ವಾದರೂ ಕರುಣವುಳ್ಳವಳಾಗಿಲ್ಲವಲ್ಲಾ ! ಹಗಲಿರುಳುಗಳಲ್ಲೆಲ್ಲಾ ಎಡೆಬಿಡದೆ ನನ್ನೊಡನೆಯೇ ಆಡಿಕೊಂಡಿದ್ದ ನನ್ನ ಮುದ್ದು ಮರಿಪಾರಿವಾಳವೇ, ದಾಸನಾದ ನನ್ನನ್ನು ಅನಾಥನನ್ನಾಗಿ ಮಾಡಿ ಎಲ್ಲಿಗೆ ಹೋದೆ ? ದನಿದೋರು ! ಚಕ್ಕನೆ ಬಂದು ನನ್ನನ್ನು ಆಲಿಂಗಿಸು ! ನನ್ನನ್ನು ಬದುಕಿಸು ! ಎಂದು ವಿಧವಿಧವಾಗಿ ಪ್ರಲಾಪಿಸುತ್ತ ಅನ್ನೋದಕಗಳನ್ನು ತೊರೆದು, ಬಳ್ಳಿಗಳ ಪೊದರುಗಳಲ್ಲಿಯೂ ಮರಗಳ ಪೊಟರೆಗಳ ಲ್ಲಿಯೂ ಗಿರಿಗಳ ಗುಹೆಗಳಲ್ಲಿಯೂ ಸರಸ್ತೀರಗಳಲ್ಲಿಯೂ ಹೊಳೆಗಳ ದಡಗಳಲ್ಲಿಯೂ ಹುಡುಕುತ್ತ ಹಸಿವಿನಿಂದಲೂ ಬಾಯಾರಿಕೆಯಿಂದಲೂ ಕಂಗೆಟ್ಟು ಕಳವಳಗೊಂಡು ಬರುತ್ತ ಲಕ್ಷ್ಮಣನನ್ನು ನೋಡಿ—ಎಲೈ ಲಕ್ಷ್ಮಣನೇ, ಬೇಗ ಧನುರ್ಬಾಣಗಳನ್ನು ಕೊಡು. ಇದೋ, ಇಲ್ಲಿ ಬಿದ್ದಿರುವ ರಾಕ್ಷಸನು ನನ್ನ ಪತ್ನಿಯಾದ ಸೀತೆಯನ್ನು ತಿಂದಿರುವನೆಂದು ಹೇಳುತ್ತಿರುವ ರಾಮನ ಮಾತುಗಳನ್ನು ಕೇಳಿ ಕಿಂಚಚ್ಛೈತನ್ಯದಿಂದ ಕೂಡಿದ್ದ ಜಟಾಯುಪಕ್ಷಿಯು ರಾಮನನ್ನು ಕುರಿತು—ಎಲೈ ರಾಮನೇ, ನಾನು ನಿನ್ನ ಮಡದಿಯನ್ನು ತಿಂದ ರಾಕ್ಷಸನಲ್ಲ. ಲವಣಸಮುದ್ರದಲ್ಲಿ ತ್ರಿಕೂಟವೆಂಬ ಪರ್ವ ತವಿರುವುದು. ಅದರ ಶಿಖರದಲ್ಲಿರುವ ಲಂಕೆಯೆಂಬ ನಗರಕ್ಕೆ ದೊರೆಯಾದ ದಶಕಂ ಠನೆಂಬ ರಾಕ್ಷಸಾಧಮನು ನನ್ನ ಪ್ರಾಣಗಳಿಗೆ ಅಂತ್ಯಾವಸ್ಥೆಯನ್ನು ತಂದು ನಿನ್ನ ಪ್ರಾಣವಲ್ಲಭೆಯನ್ನು ತೆಗೆದುಕೊಂಡು ಹೋದನೆಂದು ಹೇಳಿ ಕೂಡಲೆ ಮೃತ ವಾಯಿತು.

ಆಗ ರಾಮನು—ತನ್ನ ತಂದೆಯ ಮಿತ್ರನಾದ ಈ ಜಟಾಯುವು ಸೀತೆಯ ನ್ನು ಬಿಡಿಸಿಕೊಂಡು ಬರುವುದಕ್ಕಾಗಿ ರಾವಣನೊಡನೆ ಘೋರವಾದ ಯುದ್ಧಮಾಡಿ ಕಡೆಗೆ ಅವನಿಂದ ಗಾಯವಡೆದು ಸತ್ತುಹೋದನೆಂದು ತಿಳಿದು—ಹಾ ! ಅಯ್ಯೋ ! ಎಂದು ಆ ಪಕ್ಷಿಶವದ ಮೇಲೆ ಬಿದ್ದು ಹೊರಳುತ್ತ—ಎಲೈ, ತಮ್ಮನಾದ ಲಕ್ಷ್ಮಣನೇ, ನನಗೆ ಆಪತ್ತಿನ ಮೇಲೆ ಆಪತ್ತು ಬಂದೊದಗುತ್ತಿರುವುದನ್ನು ನೋಡಿದೆಯಾ ? ಮೊದ ಲು ರಾಜ್ಯವನ್ನೂ ರಾಜಭೋಗವನ್ನೂ ಬಿಟ್ಟು ತಾಯಿತಮ್ಮಂದಿರನ್ನು ತೊರೆದು ಅರ ಣ್ಯವಾಸಿಯಾಗಿ ತಂದೆಯನ್ನು ಕಳೆದುಕೊಂಡು ಪ್ರಾಣಭೂತಳಾದ ನಾರಿಯನ್ನು ನೀಗಿ ಕಡೆಗೆ ಪಿತೃಪ್ರಾಯನಾದ ಜಟಾಯುವನ್ನೂ ತೀರಿಸಿಕೊಂಡು ನಿರ್ಭಾಗ್ಯನಾದ ನನ್ನ ಮಹಾ ವ್ಯಥಾಸಂಕಲಿತವಾದ ದುಃಖಾಗ್ನಿಯು ಪ್ರಸಿದ್ಧಾಗ್ನಿಯನ್ನೂ ಕೂಡ ದಹಿಸಬಲ್ಲುದಲ್ಲಾ ! ಅನಾಥನಾದ ನಾನು ಏನು ಮಾಡಲಿ ? ಎಲ್ಲಿಗೆ ಹೋಗಲಿ ? ಯಾರನ್ನು ಮರೆಹೊಗಲಿ ? ಈ ಮಹಾದುರ್ದಶೆಯನ್ನು ಯಾರಿಗುಸುರಲಿ ? ನಿರಾ ಶ್ರಯನಾದ ನನಗೆ ಗತಿ ಯಾರು ? ನಾನು ಈ ಪಕ್ಷಿರಾಜನ ಸಂಗಡವೇ ಪ್ರಾಣವನ್ನು ಬಿಟ್ಟು ಯಮಲೋಕವನ್ನು ಸೇರುವೆನು. ನೀನು ಹಿಂದಿರುಗಿ ಅಯೋಧ್ಯೆಗೆ ಹೋಗಿ ಈ ನನ್ನ ದುಸ್ಸ್ಥಿತಿಯನ್ನು ಕೌಸಲ್ಯಾ ಭರತಾದಿಗಳಿಗೆ ತಿಳಿಸುವವನಾಗೆಂದು ಹೇಳುತ್ತ ದುಃಖವೆಂಬ ಕಡಲಿನಲ್ಲಿ ಮುಳುಗಿ ಕಡೆಗಾಣದೆ ಪುನಃ ಲಕ್ಷ್ಮಣನನ್ನು ಕುರಿತು— ದುಷ್ಟನಾದ ರಾವಣನು ನನ್ನ ಪತ್ನಿಯನ್ನೂ ಅಪಹರಿಸಿ ಆಕೆಯನ್ನು ಬಿಡಿಸಿ ನನಗೆ ಸಹಾಯಮಾಡುವುದಕ್ಕಾಗಿ ಹೋದ ಪಕ್ಷಿರಾಜನನ್ನೂ ಕೊಂದು ಓಡಿಹೋಗಿ

ಎಲ್ಲೋ ಅಡಗಿಕೊಂಡಿರುವನಲ್ಲಾ! ಒಳ್ಳೆಯದು! ಇರಲಿ! ಬೇಗ ನನ್ನ ಬಿಲ್ಲುರಳ್ಗ ಳನ್ನು ಕೊಡೆಂದು ತೆಗೆದುಕೊಂಡು—ಈ ಕ್ಷಣದಲ್ಲೇ ಹದಿನಾಲ್ಕು ಲೋಕಗಳನ್ನೂ ಸುಟ್ಟು ಊದಿಮಾಡಿಬಿಡುವೆನು ಎಂದು ಸಿಂಹನಾದವನ್ನು ಮಾಡಿ ಪ್ರಳಯಕಾಲದ ರುದ್ರನ ಬೀಕರಾಕಾರವನ್ನು ಧರಿಸಿ ನಿಲ್ಲಲು; ಆಗ ಲಕ್ಷ್ಮಣನು ನೋಡಿ ಕೈಮುಗಿದು ಕೊಂಡು—ಸ್ವಾಮಿಾ, ರಾಮಚಂದ್ರನೇ, ನೀನು ಈ ವರೆಗೂ ಸಕಲ ಪ್ರಾಣಿಗಳಿಗೂ ಹಿತನಾಗಿದ್ದು ಈಗ ಅಪರಾಧಿಯಾದ ಒಬ್ಬ ಹುಲುರಕ್ಕಸನಿಗಾಗಿ ಸಕಲ ಲೋಕಗ ಳನ್ನೂ ದಹಿಸುವುದು ಸರ್ವಜ್ಞನಾದ ನಿನಗೆ ವಿಹಿತವಲ್ಲ. ಆದುಕಾರಣ ಸಮಾಧಾನ ಚಿತ್ತನಾಗಬೇಕು. ಅಪರಾಧಿಯಾದ ರಾವಣನು ಅವನ ತಾಯ್ಬುಸುರಿನಲ್ಲಡಗಿಕೊಂ ಡಿದ್ದಾಗ್ಯೂ ಅವನನ್ನು ಬಿಡದೆ ಹಿಡಿದು ಕೊಂದುಹಾಕೋಣ ಎಂದು ಬಹುತರವಾಗಿ ಹೇಳಿ ಸಮಾಧಾನಪಡಿಸಲು; ಆಗ ರಾಮನು ತಾಳ್ಮೆಯನ್ನು ಹೊಂದಿ ಆ ಜಟಾಯು ಪಕ್ಷಿಯ ದೇಹಕ್ಕೆ ದಹನಾದಿಕೃತ್ಯಗಳನ್ನು ಮಾಡಿ ಆ ಪಕ್ಷಿಗೆ ಬ್ರಹ್ಮಲೋಕದಲ್ಲಿರು ವಂತೆ ವರವನ್ನಿತ್ತು ಅಲ್ಲಿಂದ ಹೊರಟು ಸೀತೆಯನ್ನು ಹುಡುಕುತ್ತ ಕ್ರೌಂಚಾರಣ್ಯ ವನ್ನು ಪ್ರವೇಶಿಸಿ ಬರುತ್ತಿರಲು; ಅಲ್ಲಿ ಮೊದಲ್ಗೋಡಿದವರಿಗೆ ಪಗಲೊಡೆಯನಿಗಂಜಿ ಸಂಕೋಚಸ್ಥಿತಿಯನ್ನು ಹೊಂದಿ ಘನೀಭೂತವಾದ ಕಾರ್ಗತ್ತಲೆಯೋ ಎಂಬ ಭ್ರಾಂತಿ ಯನ್ನು ಹುಟ್ಟಿಸುತ್ತ ಘೋರವಾದ ಮುಖವೂ ಜೋಲುತ್ತಿರುವ ಹೊಟ್ಟೆಯೂ ಕ್ರೂರವಾದ ಕೋರೆದಾಡೆಗಳೂ ಉಳ್ಳವಳಾದ ಅಯೋಮುಖಿಯೆಂಬ ನಿಶಾಚರಿಯು ಲಕ್ಷ್ಮಣನನ್ನು ಹಿಡಿದು ನುಂಗುವುದಕ್ಕೆ ಬರುತ್ತಿರಲು; ಲಕ್ಷ್ಮಣನು ಆಕೆಯನ್ನು ಹಿಡಿದು ಶೂರ್ಪನಖಿಗೆ ಎರಡನೆಯವಳನ್ನಾಗಿ ಮಾಡಿಬಿಟ್ಟನು.

ಅನಂತರದಲ್ಲಿ ರಾಮಲಕ್ಷ್ಮಣರಿಬ್ಬರೂ ಅಲ್ಲಿಂದ ಹೊರಟು ಬರುತ್ತ ದಾರಿ ಯಲ್ಲಿ ಯೋಜನಬಾಹುವಾದ ಕದಂಭನೆಂಬ ರಾಕ್ಷಸನ ಬಾಹುಗಳೊಳಗೆ ಸಿಕ್ಕಿ ತಮ್ಮ ಕರಖಡ್ಗಗಳಿಂದ ಆತನ ನಿಡುದೋಳ್ಗಳನ್ನು ಕತ್ತರಿಸಿ ಆತನನ್ನು ಕೊಂದುದರಿಂದ ಮೊದಲು ಆತನಿಗೆ ಸ್ಥೂಲಶಿರಸ್ಕನೆಂಬ ಮುನಿಯಿಂದ ಬಂದಿದ್ದ ಶಾಪವು ವಿಮೋಚನ ವಾಗಿ ತನ್ನ ಪೂರ್ವದ ಗಂಧರ್ವರೂಪವನ್ನು ಧರಿಸಿ ದಿವ್ಯವಾದ ವಿಮಾನವನ್ನು ಹತ್ತಿ ಕುಳಿತುಕೊಂಡು ರಾಮನನ್ನು ಕುರಿತು—ಎಲೈ ರಾಮಚಂದ್ರನೇ, ನಾನು ಧನು ವೆಂಬ ಗಂಧರ್ವನು. ಸ್ಥೂಲಶಿರಸ್ಕನೆಂಬ ಋಷಿಯ ಶಾಪದಿಂದ ನನಗೆ ಈ ರಾಕ್ಷಸ ಜನ್ಮವುಂಟಾಯಿತು. ಮಹಾತ್ಮನಾದ ನಿನ್ನ ದಯೆಯಿಂದ ಅದು ಈಗ ಪರಿಹಾರವಾ ಯಿತು. ಇನ್ನು ಮೇಲೆ ನಾನು ನನ್ನ ಲೋಕಕ್ಕೆ ಹೋಗುವೆನು. ಇಲ್ಲಿಗೆ ಸ್ವಲ್ಪ ದೂರದಲ್ಲಿರುವ ಹಂಪೆಯೆಂಬ ದಿವ್ಯ ಸರಸ್ಸಿನ ಬಳಿಯಲ್ಲಿ ಋಷ್ಯಮೂಕವೆಂಬ ಗಿರಿ ಯಿರುವುದು. ಅಲ್ಲಿ ಸೂರ್ಯನ ಮಗನಾದ ಸುಗ್ರೀವನೆಂಬ ಕಪಿವೀರನು ವಾಸಿಸುತ್ತಿ ರುವನು. ನೀನು ಅಲ್ಲಿಗೆ ಹೋಗಿ ಆತನ ಸಖ್ಯವನ್ನು ಮಾಡಿಕೊಂಡರೆ ರಾವಣ ಸಂಹಾ ರದಲ್ಲೂ ಸೀತಾಪ್ರಾಪ್ತಿಯಲ್ಲೂ ನಿನಗೆ ಸಹಾಯಮಾಡುವನೆಂದು ಹೇಳಿ ಸ್ವರ್ಗಕ್ಕೆ ಸಾಗಿಹೋದನು. ತರುವಾಯ ಲಕ್ಷ್ಮಣಸಮೇತನಾದ ರಾಮನು ವಿಯೋಗಜ್ವರದಿಂದ ಸಂಜಾತವಾದ ಕಂಪವುಳ್ಳವನಾಗಿ ಪಂಪಾಮಾರ್ಗವನ್ನು ಹಿಡಿದನು.

ಆ ಮೇಲೆ ರಾಮನು ಪಂಪಾವನದಲ್ಲಿ ಒರುತ್ತ ಅಲ್ಲಿರುವ ಶಬರಿಯೆಂಬ ಕಿರಾತ ಸ್ತ್ರೀಯ ಆಶ್ರಮವನ್ನು ಹೊಕ್ಕು ಆಕೆ ಮಾಡಿದ ಭಕ್ತಿಪೂರ್ವಕವಾದ ಆತಿಥ್ಯವನ್ನು ಕೈಕೊಂಡು ಪಂಪಾತೀರಕ್ಕೆ ಬಂದನು. ಆಗ ರಾಮನು ಲಕ್ಷ್ಮಣನನ್ನು ನೋಡಿ— ಎಲೈ ತಮ್ಮನೇ, ನೋಡು, ಇದು ಮತಂಗಮುನಿಯ ಆಶ್ರಮವು. ಆ ಯತಿಯ ಮಹಿಮಾತಿಶಯದಿಂದ ಇಲ್ಲಿರುವ ಮೃಗಪಕ್ಷಿಗಳು ಸ್ವಭಾವವಾದ ಜಾತಿವೈರವನ್ನು ಬಿಟ್ಟು ಪರಸ್ಪರೋಪಕಾರಿಗಳಾಗಿರುವುವು. ಹೆಣ್ಣು ನವಿಲುಗಳು ಹಾವಿನ ಮರಿಗಳಿಗೆ ಕುಟುಕುಗಳನ್ನು ಕೊಟ್ಟು ಪೋಷಿಸುತ್ತಿರುವುವು. ಸಿಂಹಗಳು ಸಲ್ಲಕೀಶಾಖೆಗಳನ್ನು ತಂದು ಆನೆ ಮರಿಗಳಿಗೆ ತಿನ್ನಿಸುತ್ತಿರುವುವು. ಹುಲಿಮರಿಗಳು ಹಸುಗಳ ಮೊಲೆಗಳನ್ನು ಪ್ರೀತಿಯಿಂದ ಉಣ್ಣುತ್ತಿರುವುವು. ಸಿವಂಗಿಗಳು ಹುಲ್ಲೇಮರಿಗಳೊಡನೆ ಸರಸವಾಡುತ್ತಿರುವುವು. ಇದೋ, ಇದೇ ಋಷ್ಯಮೂಕಮಹೀಧರವು. ಇಲ್ಲಿ ನಮಗೆ ಸಹಾಯ ಮಾಡುವವನಾದ ಸುಗ್ರೀವನೆಂಬ ಕಪಿವೀರನಿರುವನು. ಇಲ್ಲಿ ನೋಡು, ಇದೇ ಪಂಪಾ ಸರಸ್ಸು. ಇದರ ರಮಣೀಯತೆಯನ್ನು ಬಣ್ಣಿಸುವವರಾರು ? ಈ ಸರಸ್ಸೆಂಬ ನಾರಿಯು ಶೈವಾಲವೆಂಬ ಕೇಶಪಾಶದಿಂದಲೂ ತಾವರೆಯೆಂಬ ಮುಖದಿಂದಲೂ ಮೀನುಗಳೆಂಬ ಕಣ್ಣುಗಳಿಂದಲೂ ಚಂಪಕಕುಸುಮವೆಂಬ ನಾಸಿಕದಿಂದಲೂ ಕುಮುದಪುಷ್ಪಗಳೆಂಬ ಮಂದಹಾಸದಿಂದಲೂ ಚಕ್ರವಾಕಗಳೆಂಬ ಕುಚಗಳಿಂದಲೂ ಕಿರು ದೆರೆಗಳೆಂಬ ತ್ರಿವಳಿಗಳಿಂದಲೂ ದಡದಲ್ಲಿರುವ ಮಾಮರಗಳ ಚಿಗುರುಗಳೆಂಬ ವಸ್ತ್ರದಿಂದಲೂ ನಿರ್ಮಲೋದಕವೆಂಬ ಲಾವಣ್ಯದಿಂದಲೂ ಕೂಡಿ ಸೊಗಸಾಗಿರುವಳು ಎಂದು ಹೇಳುತ್ತ ಹಾ ಸೀತೆಯೇ ! ಕೋಮಲಾಂಗಿಯೇ ! ಎಂದು ಬಾರಿಬಾರಿಗೂ ಹಂಬಲಿಸುತ್ತಿದ್ದನು. ಒಂದು ರಾತ್ರಿಯಲ್ಲಿ ಉದಯವನ್ನು ಹೊಂದಿದ ಚಂದ್ರನನ್ನು ನೋಡಿ ಭಯಪಟ್ಟು ಲಕ್ಷ್ಮಣನನ್ನು ಕುರಿತು—ಎಲೈ ತಮ್ಮನೇ, ಬೇಗೇಳು ಒಂದು ಮರದ ನೆಳಲನ್ನು ಸೇರಿಕೊಳ್ಳೋಣ. ಸೂರ್ಯನು ತನ್ನ ತೀಕ್ಷ್ಣತೆಯುಳ್ಳ ಕಿರಣಗಳಿಂದ ಸುಡುತ್ತಿರುವನು ಎನ್ನಲು ; ಆಗ ಲಕ್ಷ್ಮಣನು—ಎಲೈ ಅಣ್ಣನೇ, ಸಮರಾತ್ರಿಯಲ್ಲಿ ಸೂರ್ಯನೆಲ್ಲಿರುವನು ? ಈಗ ಚಂದ್ರನುದಿಸಿರುವನು ಎನ್ನಲು, ರಾಮನು—ಇವನು ಚಂದ್ರನೆಂಬುದು ನಿನಗೆ ಹೇಗೆ ತಿಳಿಯಿತು? ಎಂದು ಕೇಳಿದುದಕ್ಕೆ ಲಕ್ಷ್ಮಣನು—ಅದೋ, ಬಿಂಬಮಧ್ಯದಲ್ಲಿ ಕಳಂಕವಿರುವುದು, ನೋಡು ಎಂದನು. ರಾಮನು ಕಳಂಕವೆಂಬ ಮಾತನ್ನು ಕೇಳಿ—ಅಯ್ಯೋ, ಇದು ಚಂದ್ರಬಿಂಬವೇ ? ಎಲೈ ಚಂದ್ರಮುಖಿಯೇ, ಎಲ್ಲಿರುವೆ ? ಎಂದು ಸೀತೆಯನ್ನು ನೆನಸಿಕೊಂಡು ಮೂರ್ಛೆಹೊಂದಿದನು.

ಆಗ ಲಕ್ಷ್ಮಣನು ಶೈತ್ಯೋಪಚಾರಮಾಡಿ ರಾಮನನ್ನು ಎಬ್ಬಿಸಿ ಹಿಡಿದು ತನ್ನ ದೆಗೊರಗಿಸಿಕೊಂಡು—ಎಲೈ ಅಗ್ರಜನೇ, ನೀನು ಯುಕ್ತಾಯುಕ್ತವಿಚಾರತತ್ಪರನು. ಮತ್ತು ಮಹಾ ಧೈರ್ಯಸಂಪನ್ನನು. ಇಂಥಾ ನೀನು ಧೈರ್ಯಹೀನನಾಗಿ ದುಃಖಪಡುವುದುಚಿತವೇ ? ಮನುಷ್ಯರಿಗೆ ದುಃಖಕ್ಕಿಂತಲೂ ಬೇರೆ ಹಗೆಯುಂಟೇ ? ದುಃಖವು ಉತ್ಸಾಹವನ್ನು ತಗ್ಗಿಸುವುದು. ಧೈರ್ಯವನ್ನು ಹಾಳ್ಮಾಡಿ ಬುದ್ಧಿಯನ್ನು ಮಣ್ಣು ಕೂಡಿಸುವುದು. ಬಲವನ್ನುಕುಂದಿಸುವುದು. ತೇಜಸ್ಸನ್ನು ನಂದಿಸುವುದು. ಆದುಕಾ

ರಣ ಅಪಾಯಕಾರಿಯಾದ ಶೋಕವನ್ನು ಬಿಟ್ಟು ಸುಗ್ರೀವನ ಸಹಾಯವನ್ನು ಹೊಂದಿ ರಾವಣ ಸಂಹಾರಕ್ಕೆ ಪ್ರಯತ್ನಿಸುವವನಾಗೆಂದು ಲಕ್ಷ್ಮಣನು ಹೇಳಿದ ಮಾತುಗಳನ್ನು ಕೇಳಿ ಧೈರ್ಯವನ್ನು ತಾಳಿ ರಾಮನು ಪಂಪಾತೀರದಲ್ಲಿ ಲಕ್ಷ್ಮಣ ನಿರ್ಮಿತವಾದ ಪರ್ಣಶಾಲೆಯೊಳಗೆ ವಾಸಿಸುತ್ತಿದ್ದನು.

---

## 4. RAMA FORMS AN ALLIANCE WITH SUGRIVA, THE MONKEY KING.

## ೪. ಸುಗ್ರೀವಸಖ್ಯದ ಕಥೆ.

ಸುಗ್ರೀವನ ಸ್ನೇಹಾಪೇಕ್ಷೆಯಿಂದ ಪಂಪಾತೀರದಲ್ಲಿ ವಾಸಮಾಡುತ್ತಿದ್ದ ರಾಮನು ಒಂದು ದಿನ ಲಕ್ಷ್ಮಣನನ್ನು ಕುರಿತು—ಎಲೈ, ತಮ್ಮನೇ, ಇತ್ತನೋಡು. ಈ ಉದ್ಯಾನವನಲಕ್ಷ್ಮಿಯು ವಸಂತರ್ತುವೆಂಬ ನಿಜಪತಿಯನ್ನು ಆಲಿಂಗಿಸಿಕೊಂಡಿರುವಳು. ಜಗದಾಹ್ಲಾದಕರನಾದ ಈ ವಸಂತನೆಂಬ ರಾಜನು ಸತ್ಪುರುಷರ ಶೀತೋದಕಸ್ನಾನಗಳಿಗೆ ತೊಂದರೆಯನ್ನುಂಟುಮಾಡುತ್ತ ಲಕ್ಷ್ಮೀದೇವಿಗೆ ಮನೆಯಾದ ತಾವರೆಗಳ ಅಂದವನ್ನು ಕೆಡಿಸುತ್ತ ಲೋಕೋಪಕಾರಿಯಾದ ಸೂರ್ಯನ ತೇಜೋಬಲವನ್ನು ಕುಂದಿಸಿ ಲೋಕದಲ್ಲಿ ಬಡತನದಿಂದ ಹಾಸಿಕೆ ಹೊದಿಕೆಗಳಿಲ್ಲದ ಜನರನ್ನು ಶೈತ್ಯದಿಂದ ಕ್ಲೇಶಪಡಿಸುತ್ತ ಸಾಂದ್ರವಾದ ತಮ್ಮ ನೆಳಲುಗಳಿಂದ ಮಾರ್ಗಸ್ಥರ ಶ್ರಮಗಳನ್ನು ಪರಿಹರಿಸುತ್ತಿದ್ದ ವೃಕ್ಷಗಳ ಎಲೆಗಳನ್ನೆಲ್ಲಾ ಉದುರಿಸಿ ಅವುಗಳನ್ನೂ ಪೂರ್ಣಶೂನ್ಯಗಳನ್ನಾಗಿ ಮಾಡುತ್ತ ಲೋಕಕಂಟಕನಾಗಿದ್ದ ಹಿಮಂತರ್ತುವೆಂಬ ಅರಸನ್ನು ಜಯಿಸಿ ಓಡಿಸಿ ಈ ವನರಾಜ್ಯದಲ್ಲಿ ಪಟ್ಟಾಭಿಷಿಕ್ತನಾದನೋ ಎಂಬ ಹಾಗೆ ಈ ಕಾಲವು ಕಲ್ಯಾಣದಾಯಕವಾಗಿರುವುದು. ಇದೋ, ಇಲ್ಲಿ ನೋಡು! ಮಲ್ಲಿಕಾಕುಸುಮಗಳಲ್ಲಿ ಮಕರಂದಪಾನವನ್ನು ಮಾಡಿ ಮದಿಸಿದ ಭೃಂಗಗಳು ಮಾಡುತ್ತಿರುವ ಝೇಂಕಾರಧ್ವನಿಯು ಲೋಕತ್ರಯಜಯೋದ್ಯತನಾದ ಮಾರಮಹಾವೀರನ ಜೈತ್ರಯಾತ್ರಾಸೂಚಕವಾದ ಮಹಾಶಂಖಧ್ವಾನದಂತಿರುವುದು. ತಮಗೆ ರಕ್ಕೆ ಪುಕ್ಕಗಳು ಬೆಳೆದು ಹಾರುವ ಶಕ್ತಿಯುಂಟಾಗುವ ಪರ್ಯಂತರವೂ ಕಾಗೆಗಳೊಡನೆ ಸದ್ದುಮಾಡದೆ ಇದ್ದು ಈಗ ಉಲ್ಲಾಸದಿಂದ ಪಂಚಮಸ್ವರವನ್ನು ಮಾಡುತ್ತಿರುವ ಕೋಗಿಲೆಗಳು ಸಮಯ ಬರುವ ವರೆಗೂ ಗುಟ್ಟಾಗಿದ್ದು ಆ ಮೇಲೆ ತಮ್ಮನ್ನು ತೋರ್ಪಡಿಸಿಕೊಳ್ಳುವ ಕಾರ್ಯಸಾಧಕರಾದ ನಿಯೋಗಿಪುರುಷರನ್ನು ಹೋಲುತ್ತಿರುವುವು. ಮಾವಿನ ಮರಗಳೆಂಬ ಮೇಘಗಳು ಎಳೆದಳಿರೆಂಬ ಮಿಂಚುಗಳಿಂದಲೂ ಪಿಕಧ್ವನಿಯೆಂಬ ಗುಡುಗಿನಿಂದಲೂ ಕೂಡಿ ಹೂವುಗಳೆಂಬ ಆನೆಕಲ್ಲುಗಳನ್ನು ಸುರಿಸುತ್ತ ಮಕರಂದರಸವೆಂಬ ವೃಷ್ಟಿಯನ್ನು ಕರೆಯುತ್ತಿರುವುವು. ಎಡೆಯಿಲ್ಲದಂತೆ ತುಂಬಿರುವ ಪುಷ್ಪಗಳಿಂದ ಕೂಡಿದ ಅಶೋಕವೃಕ್ಷಗಳು ಮನ್ಮಥನ ವಿಜಯಪ್ರಯಾಣದಲ್ಲಿ ಹೊಡೆದ ಕೆಂಪುಬಟ್ಟೆಯ ಗೂಡಾರಗಳೋ ಎಂಬ ಹಾಗೆ ಪ್ರಕಾಶಿಸುತ್ತಿವೆ. ಪರಿಪಕ್ವವಾದ ಫಲ

ಗಳಿಂದ ಒಪ್ಪುತ್ತಿರುವ ನೇರಿಲು ಮರಗಳಲ್ಲಿ ಬಂದು ಕೂತಿರುವ ಗಿಣಿಗಳ ಕೊಕ್ಕುಗಳನ್ನು ಮುತ್ತುಗದ ಹೂವುಗಳೆಂದು ಭ್ರಮಿಸಿ ಆರಡಿಗಳು ಬಂದು ಅವುಗಳ ಮೇಲೆ ಬೀಳುತ್ತಿರಲು ; ಗಿಣಿಗಳು ನೇರಿಲುಹಣ್ಣುಗಳೆಂದು ಭ್ರಾಂತಿಪಟ್ಟು ತಮ್ಮ ಕೊಕ್ಕುಗಳಿಂದ ಅವುಗಳನ್ನು ಕುಟುಕುತ್ತಿರುವುವು. ಬಾಯಿಂದ ಹೇಳದೆ ಕಾರ್ಯದಲ್ಲಿ ಉಪಕಾರವನ್ನು ಮಾಡಿ ತೋರಿಸುವ ಸತ್ಪುರುಷರಂತೆ ವಿಶೇಷವಾಗಿ ಹೂವುಗಳನ್ನು ತೋರ್ಪಡಿಸದೆ ಮಾಗಿ ಬಿರಿದು ಸುಗಂಧವನ್ನು ಬೀರುತ್ತಿರುವ ಬೃಹತ್ಫಲಗಳನ್ನು ಬುಡದಿಂದ ತುದಿಯ ವರೆಗೂ ಧರಿಸಿಕೊಂಡಿರುವ ಹಲಸಿನ ಮರಗಳು ವಿರಾಜಿಸುತ್ತಿರುವುವು. ಹೊಂಬಾಳೆಗಳಿಂದಲೂ ಹರಳುಗಳಿಂದಲೂ ಕುರುಬೆಗಳಿಂದಲೂ ಎಳನೀರುಗಳಿಂದಲೂ ಮೋತೆಗಾಯಿಗಳಿಂದಲೂ ತಳಲುಗಳಿಂದಲೂ ಕೂಡಿ ಮನೋಹರವಾಗಿರುವ ಕೆಂದೆಂಗಿನ ಮರಗಳು ಸ್ವರ್ಗಲೋಕದ ನಂದನೋದ್ಯಾನದಲ್ಲಿರುವ ಕಲ್ಪವೃಕ್ಷಗಳಿಗೆ ತಮ್ಮ ಲೋಕೋತ್ತರವಾದ ಫಲರೂಪ ಸೌಭಾಗ್ಯವನ್ನು ತೋರಿಸಿ ಅವುಗಳನ್ನು ನಾಚಿಸಬೇಕೆಂದು ಹೊರಟಿರುವುವೋ ಎಂಬಂತೆ ಅತ್ಯುನ್ನತವಾಗಿ ಬೆಳೆದಿರುವುವು. ಸರಸ್ಸುಗಳು ತಾವರೆ. ಕನ್ನೈದಿಲೆ ಕಲ್ಹಾರ ಈ ಮೊದಲಾದ ಹೂವುಗಳ ಮಕರಂದರಸಗಳಿಂದ ಬೆರೆದುದರಿಂದ ಸುಗಂಧ ಜಲಗಳಿಂದ ಕೂಡಿದುವುಗಳಾಗಿ ವಸಂತರಾಜನು ತನ್ನ ಅಂತಃಪುರಸ್ತ್ರೀಯರೊಡನೆ ಜಲಕ್ರೀಡೆಯಾಡುವ ಸ್ಥಳಗಳೋ ಎಂಬಂತಿರುವುವು ಮಾನಸ ಸರಸ್ಸನ್ನು ಬಿಟ್ಟು ಕಮಲಸಮೃದ್ಧಿಯಿಂದ ಮೆರೆಯುತ್ತಿರುವ ಇಲ್ಲಿನ ಪದ್ಮಾಕರಗಳಿಗೆ ಬಂದು ಆನಂದಿಸುತ್ತಿರುವ ಹಂಸಪಕ್ಷಿಗಳು ಬಡವರಾದ ಅರಸುಗಳನ್ನು ಬಿಟ್ಟು ಐಶ್ವರ್ಯವಂತರಾದವರನ್ನು ಸೇರುವ ಸೇವಕರನ್ನು ಅನುಕರಿಸುತ್ತಿರುವುವು. ತೆಂಕಣ ಗಾಳಿಯೆಂಬ ಗುಡ್ಡಸು ವನಸರಸ್ಸುಗಳಲ್ಲಿ ಮಿಂದು ಪುಷ್ಪಧೂಳಿಯೆಂಬ ಭಸ್ಮವನ್ನು ಧರಿಸಿ ಅನುಸರಿಸಿ ಬರುತ್ತಿರುವ ಭೃಂಗಗಳ ಝೇಂಕಾರವೆಂಬ ಬೊಬ್ಬೆಯಿಂದ ಕೂಡಿ ಸಂಪಿಗೆ ಹೂವುಗಳೆಂಬ ಕೆಂಡಗಳನ್ನು ತುಳಿಯುತ್ತ ವನದೇವತೆಯ ಮುಂದೆ ತೂಳಗ ಬಂದವನಂತೆ ಮೆರೆಯುತ್ತಿರುವನು ಇಂಥ ವಿನೋದಕರವಾದ ವಸಂತಕಾಲದಲ್ಲಿ ನನ್ನನ್ನಗಲಿ ಸೀತೆಯೂ ಸೀತೆಯನ್ನಗಲಿ ನಾನೂ ದುಃಖಪಡುತ್ತಿರುವೆವು. ಕಾಲಗತಿಯನ್ನು ಮೀರಬಲ್ಲವರಾರು ? ಎಂದು ಬಸುಸುಯ್ಯುತ್ತಿರಲು ;

ಅಷ್ಟರೊಳಗೆ ಈ ವನರಾಜಿಯಲ್ಲಿ ಸಂಚರಿಸುತ್ತಿರುವ ಮನುಷ್ಯರಾರೆಂಬುದನ್ನು ತಿಳಿದು ಬಂದು ಹೇಳುವಂತೆ ಸುಗ್ರೀವನಿಂದ ಮೊದಲೇ ನೇಮಿಸಲ್ಪಟ್ಟಿದ್ದ ಆಂಜನೇಯನು ಸನ್ಯಾಸಿವೇಷಧಾರಿಯಾಗಿ ಬಂದು ರಾಮಲಕ್ಷ್ಮಣರನ್ನು ಕಂಡು ವಂದಿಸಿ ನೀವು ಯಾರು ? ಮನುಷ್ಯಾಕಾರಗಳನ್ನು ಧರಿಸಿದ ಮನ್ಮಥವಸಂತರೋ ? ಜಯಂತ ನಳಕೂಬರರೋ ? ಅಶ್ವಿನೀ ದೇವತೆಗಳೋ ? ಮುನಿಪುತ್ರರೋ ? ಅಥವಾ ರಾಜಕುಮಾರರೋ ? ನಿಮ್ಮನ್ನು ನೋಡುವುದರಿಂದ ಇವರಿಂಥವರೇ ಎಂದು ನಿರ್ಧರಿಸಿ ತಿಳಿಯುವುದಕ್ಕಾಗುವುದಿಲ್ಲ. ಏಕೆಂದರೆ, ನಿಮ್ಮ ಸೊಂಟಗಳಲ್ಲಿ ಪರೆಯನ್ನು ಬಿಟ್ಟ ಸರ್ಪಗಳಂತೆ ಒರೆಯಿಂದ ತೆಗೆದ ಕತ್ತಿಗಳು ಪ್ರಕಾಶಿಸುತ್ತಿರುವುವು. ನಿಮ್ಮ ಕೈಗಳಲ್ಲಿ ಇಂದ್ರಧನುಸ್ಸುಗಳಂತೆ ಹೊಳೆಯುತ್ತಿರುವ ಸಿಂಗಾಡಿಗಳು ಒಪ್ಪುತ್ತಿರುವುವು. ಹಾವು

ಗಳಿಂದ ತುಂಬಲ್ಪಟ್ಟ ಹುತ್ತಗಳಂತೆ ನಿಮ್ಮ ಬೆನ್ನಿನಲ್ಲಿ ಅಲಗುಗಳಿಂದ ತುಂಬಲ್ಪಟ್ಟ ಬತ್ತಳಿಕೆಗಳು ವಿರಾಜಿಸುತ್ತಿರುವುವು. ಜಡೆಗಳಿಂದ ಕೂಡಿದ ನಿಮ್ಮ ಶಿರಸ್ಸುಗಳು ಬೀಳಲುಗಳಿಂದ ಒಪ್ಪುವ ಆಲದ ಮರಗಳನ್ನು ಹೋಲುತ್ತಿರುವುವು. ಮುನಿಗಳಂತೆ ನಾರ್ಮಡಿಗಳನ್ನೂ ಕೃಷ್ಣಾಜಿನಗಳನ್ನೂ ಧರಿಸಿರುವಿರಿ. ನಿಮ್ಮ ಮುಖಗಳ ತೇಜಸ್ಸನ್ನೂ ನಿಮ್ಮ ಅಂಗೋಪಾಂಗಗಳಲ್ಲಿರುವ ಮಹಾಪುರುಷಲಕ್ಷಣಗಳನ್ನೂ ನೋಡಿದರೆ ಪಂಚಾಶತ್ಕೋಟಿಯೋಜನ ವಿಸ್ತೀರ್ಣವಾದ ಈ ಭೂಮಂಡಲವನ್ನು ಪರಿಪಾಲಿಸತಕ್ಕ ಪುರುಷಶ್ರೇಷ್ಠರಾಗಿ ಕಾಣಿಸುತ್ತೀರಿ. ಇಂಥ ನೀವು ಪಾದಚಾರಿಗಳಾಗಿ ಈ ಅರಣ್ಯಭೂಮಿಗೆ ಬರುವುದಕ್ಕೆ ಕಾರಣವೇನು ? ಇತ್ಯಾದಿ ವಿಷಯಗಳನ್ನೆಲ್ಲಾ ದಯೆಯಿಟ್ಟು ನನಗೆ ವಿಸ್ತಾರವಾಗಿ ಹೇಳಬೇಕು. ನಾನು ವಾಲಿಯೆಂಬ ಕಪಿರಾಜನಿಂದ ತಿರಸ್ಕರಿಸಲ್ಪಟ್ಟು ವನದಲ್ಲಿರುವ ಸೂರ್ಯಕುಮಾರನಾದ ಸುಗ್ರೀವನೆಂಬ ಕಪಿರಾಜನ ಮಂತ್ರಿಯು. ನಾನು ಕೇಸರಿಯೆಂಬ ಕಪಿಶ್ರೇಷ್ಠನ ಪತ್ನಿಯಾದ ಅಂಜನಾದೇವಿಯಲ್ಲಿ ವಾಯುದೇವತಾಪ್ರಸಾದದಿಂದ ಹುಟ್ಟಿದವನು. ಜನರು ನನ್ನನ್ನು ಹನುಮಂತನೆಂದು ಕರೆಯುತ್ತಿರುವರು. ನಮ್ಮೊಡೆಯನಾದ ಸುಗ್ರೀವನು ನಿಮ್ಮ ಸ್ನೇಹಸಂಬಂಧವನ್ನು ಬಯಸುತಿರುವನು ಎಂದು ವಿನಯದಿಂದ ಹೇಳಲು ; ಆಗ ಲಕ್ಷ್ಮಣನು ಆತನನ್ನು ಕುರಿತು—ನಾವು ಸಾಕೇತನಗರ ನಾಯಕನಾದ ದಶರಥ ಭೂಪನ ಕುವರರು. ಈತನು ನನ್ನಣ್ಣನು. ಈತನಿಗೆ ರಾಮನೆಂದು ಹೆಸರು. ಲಕ್ಷ್ಮಣನೆಂದು ನನಗಭಿಧಾನವು. ಮಹಾತ್ಮನಾದ ಈ ರಾಮಚಂದ್ರನು ತಾತಾಜ್ಞಾನುಸಾರವಾಗಿ ಜಟಾಚೀರಗಳನ್ನು ಧರಿಸಿ ಸೀತೆಯೆಂಬ ಸತಿಯೊಡನೆಯೂ ನನ್ನೊಡನೆಯೂ ಕೂಡಿ ದಂಡಕವನದಲ್ಲಿ ವಾಸಮಾಡುತ್ತಿರುವವನಾಗಿ ಅಲ್ಲಿದ್ದ ಖರಾದಿ ರಾಕ್ಷಸರನ್ನು ಸಂಹರಿಸಿದನು. ಆ ಹಗೆತನದಿಂದ ದುಷ್ಟನಾದ ರಾವಣನೆಂಬ ರಾಕ್ಷಸನು ಈತನ ಪತ್ನಿಯಾದ ಸೀತೆಯನ್ನು ನಾವಿಲ್ಲದ ವೇಳೆಯಲ್ಲಿ ಅಪಹರಿಸಿಕೊಂಡು ಹೋದನು. ಆದುದರಿಂದ ಅವನನ್ನು ಹುಡುಕುತ್ತ ಸುಗ್ರೀವನ ಸ್ನೇಹವನ್ನು ಬಯಸಿ ಇಲ್ಲಿಗೆ ಬಂದನು ಎಂದು ಹೇಳಿದನು.

ಹನುಮಂತನು ಆ ಮಾತುಗಳನ್ನು ಕೇಳಿ ಸಂತೋಷಪಟ್ಟು ಸನ್ಯಾಸಿರೂಪವನ್ನು ಬಿಟ್ಟು ಮೊದಲಿನ ರೂಪವನ್ನು ಧರಿಸಿ ರಾಮಲಕ್ಷ್ಮಣರನ್ನು ತನ್ನ ಹೆಗಲುಗಳ ಮೇಲೆ ಕುಳ್ಳಿರಿಸಿಕೊಂಡು ಅಲ್ಲಿಂದ ಲಂಘಿಸಿ ಋಷ್ಯಮೂಕಗಿರಿಗೆ ಬಂದು ಅಲ್ಲಿನ ನಳನಳಿಸುವ ಚಿಗುರುಗಳನ್ನು ತಂದು ರಾಮಲಕ್ಷ್ಮಣರಿಗೆ ಹಾಸಿಕೊಟ್ಟು ಕುಳ್ಳಿರಿಸಿ ಆ ಪರ್ವತದ ಗುಹೆಯಲ್ಲಿರುವ ಸುಗ್ರೀವನನ್ನು ಕಂಡು ವೃತ್ತಾಂತವನ್ನೆಲ್ಲಾ ತಿಳಿಸಿ ನಳನೀಲಾದಿ ಕಪಿಸೇನಾಪತಿಗಳೊಡನೆ ಅವನನ್ನು ಕರತರಲು ; ಆಗ ಸುಗ್ರೀವನು ರಾಮನಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿದನು. ರಾಮನು ಆತನನ್ನು ತನ್ನ ಬಾಹುಗಳಿಂದ ಬಿಗಿದಪ್ಪಿ ಸಂತೋಷಿಸಿದನು. ಆ ಮೇಲೆ ರಾಮಸುಗ್ರೀವರು ತಮ್ಮ ತಮ್ಮ ಕಷ್ಟಗಳನ್ನು ಒಬ್ಬರಿಗೊಬ್ಬರು ತಿಳಿಸಿಕೊಂಡ ಮೇಲೆ ರಾಮನು ಸುಗ್ರೀವನನ್ನು ನೋಡಿ—ನಿನ್ನ ಹಗೆಯಾದ ವಾಲಿಯನ್ನು ಕೊಂದು ನಿನಗೆ ಕಪಿರಾಜ್ಯಾಭಿಷೇಕವನ್ನು ಮಾಡಿಸುವೆನೆಂದು ವಾಗ್ದಾನಮಾಡಿದನು. ಸುಗ್ರೀವನು ರಾಮನನ್ನು ನೋಡಿ—ಪಾಪಿಯಾದ ರಾವ

ಣನೂ ನಿನ್ನ ಪತ್ನಿಯಾದ ಸೀತೆಯೂ ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳೊಳಗೆ ಎಲ್ಲಿದ್ದರೂ ಹುಡುಕಿ ಗೊತ್ತುಮಾಡಿ ಆ ರಾವಣನ ಸಂಹಾರಕ್ಕೋಸ್ಕರ ಕಪಿಸೇನಾಸಮೇತನಾದ ನಾನು ನಿನಗೆ ಸಹಾಯಿಯಾಗಿರುವೆನೆಂದು ಭಾಷೆಕೊಟ್ಟನು. ತರುವಾಯ ಅಗ್ನಿಯನ್ನು ಪ್ರತಿಷ್ಠಿಸಿ ಅವರಿಬ್ಬರೂ ಅಗ್ನಿಸಾಕ್ಷಿಯಾಗಿ ಸಖ್ಯವನ್ನು ಮಾಡಿಕೊಂಡು ಒಬ್ಬರ ಕೈಯನ್ನೊಬ್ಬರು ಹಿಡಿದು ಪರಸ್ಪರವಾಗಿ ಆಲಿಂಗನಾದಿಗಳಿಂದ ಆನಂದಿಸಿದರು.

ಆ ಬಳಿಕ ಸುಗ್ರೀವನು ವಿವಿಧವಾದ ಫಲಗಳಿಂದಲೂ ಗಡ್ಡೆಗೆಣಸುಗಳಿಂದಲೂ ಲಕ್ಷ್ಮಣಸಹಿತನಾದ ರಾಮನಿಗೆ ಆತಿಥ್ಯವನ್ನು ಮಾಡಿ ತೃಪ್ತಿಪಡಿಸಿದನು. ಆ ಮೇಲೆ ಮೊದಲು ಸೀತೆಯು ತಮ್ಮ ಬಳಿಗೆ ಹಾಕಿದ್ದ ಒಡವೆಗಳನ್ನು ಅವನಿಗೆ ಒಪ್ಪಿಸಿದನು. ಆಗ ರಾಮನು ಪತ್ನಿಯನ್ನು ನೆನಸಿಕೊಂಡು ವಿಶೇಷವಾಗಿ ದುಃಖಿಸಿ ವ್ಯಸನಪಡುತ್ತಿರಲು ; ಸುಗ್ರೀವಲಕ್ಷ್ಮಣರು ಆತನನ್ನು ಸಮಾಧಾನಪಡಿಸಿದರು. ತರುವಾಯ ಸುಗ್ರೀವನು ವಾಲಿಯ ಅಮೋಘವಾದ ಪರಾಕ್ರಮವನ್ನು ನೆನದು ರಾಮನಿಗೆ ಆತನನ್ನು ಕೊಲ್ಲುವ ಶಕ್ತಿಯುಂಟೋ ? ಇಲ್ಲವೋ ? ಪರೀಕ್ಷಿಸಿ ತಿಳಿಯಬೇಕೆಂದು ಮನಸ್ಸಿನಲ್ಲಿ ಯೋಚಿಸಿ ರಾಮನನ್ನು ಕುರಿತು—ಎಲೈ ರಾಜೇಂದ್ರನೇ, ಇದೋ, ಇಲ್ಲಿ ಬಿದ್ದಿರುವ ಈ ಮೂಳೆಯು ದುಂದುಭಿಯೆಂಬ ರಾಕ್ಷಸನ ಶರೀರಸಂಬಂಧವಾದುದು. ಕಿಷ್ಕಿಂಧೆಯಲ್ಲಿ ವಾಲಿಯು ಅವನನ್ನು ಕೊಂದು ಇಲ್ಲಿಗೆ ಎಡಗೈಯಿಂದ ಬಿಸುಟನು. ಇದೋ, ನೋಡು. ಇಲ್ಲಿ ಕಾಣುವ ಏಳು ಓಲೆಯ ಮರಗಳು ಪಾತಾಳದಿಂದ ಆರಂಭಿಸಿ ಮೇಘಮಂಡಲದ ವರೆಗೂ ಬೆಳೆದಿರುವುವು. ಇವುಗಳನ್ನು ಕತ್ತರಿಸುವುದು ವಾಲಿಗೂ ಅಸಾಧ್ಯವು ಎಂದು ಹೇಳಲು ; ರಾಮನು ಸುಗ್ರೀವನ ಮನೋಭಾವವನ್ನು ತಿಳಿದು ಆ ದುಂದುಭಿಯ ಶರೀರದ ಎಲುವನ್ನು ತನ್ನ ಕಾಲಂಗುಟದಿಂದ ಹಾರಿಸಿ ಹತ್ತು ಗಾವುದಗಳ ದೂರದಲ್ಲಿ ಬೀಳಿಸಿ ಆ ಏಳು ಓಲೆಯ ಮರಗಳನ್ನೂ ಒಂದೇ ಬಾಣದಿಂದ ಕತ್ತರಿಸಿ ಕೆಡಹಲು ; ಆಗ ಸುಗ್ರೀವನು ಸಂತೋಷಪಟ್ಟು ನಿಸ್ಸಂಶಯಚಿತ್ತನಾದನು. ಅನಂತರದಲ್ಲಿ ರಾಮನು ವಾಲಿಯನ್ನು ಸಂಹರಿಸಿ ಸುಗ್ರೀವನಿಗೆ ಕಪಿರಾಜ್ಯಾಭಿಷೇಕವನ್ನೂ ವಾಲಿಯ ಮಗನಾದ ಅಂಗದನಿಗೆ ಯೌವರಾಜ್ಯಾಭಿಷೇಕವನ್ನೂ ಮಾಡಿಸಿ ಸುಗ್ರೀವನನ್ನು ಕುರಿತು—ಎಲೈ ಮಿತ್ರನೇ, ಈಗ ಗ್ರೀಷ್ಮರ್ತುವು ಬಂದಿರುವುದರಿಂದ ನಾವು ದಂಡಯಾತ್ರೆಗೆ ಹೋಗುವುದನ್ನು ನಿಲ್ಲಿಸಿ ಈ ಗ್ರೀಷ್ಮರ್ತುವೂ ವರ್ಷರ್ತುವೂ ಕಳೆದು ಹೋಗುವ ವರೆಗೂ ನೀನು ಕಿಷ್ಕಿಂದಾಪಟ್ಟಣದಲ್ಲಿ ಸುಖವಾಗಿರು. ನಾನು ಈ ಋಷ್ಯಮೂಕಗಿರಿಯಲ್ಲಿ ಲಕ್ಷ್ಮಣನೊಡನೆ ವಾಸಮಾಡಿಕೊಂಡಿರುವೆನು. ಈ ನಾಲ್ಕು ತಿಂಗಳುಗಳು ಮುಗಿದ ಮೇಲೆ ದಯೆಯಿಟ್ಟು ನೀನು ಹೇಳಿದ ಪ್ರಕಾರ ನನಗೆ ಸಹಾಯಮಾಡಬೇಕೆಂದು ಹೇಳಲು ; ಸುಗ್ರೀವನು ಶ್ರೀ ರಾಮನಿಗೆ ನಮಸ್ಕರಿಸಿ ತನ್ನ ಪರಿವಾರದೊಡನೆ ಕೂಡಿ ಕಿಷ್ಕಿಂಧೆಗೆ ಹೋಗಿ ಸುಖದಿಂದಿದ್ದನು.

ಇತ್ತಲಾ ರಾಮನು ಋಷ್ಯಮೂಕಾದ್ರಿಯಲ್ಲಿ ಲಕ್ಷ್ಮಣನೊಡನೆ ವಾಸಮಾಡಿಕೊಂಡಿರುತ್ತ ಗ್ರಿಷ್ಮರ್ತು ಬಂದುದನ್ನು ನೋಡಿ—ಎಲೈ ಲಕ್ಷ್ಮಣನೇ, ಈ ಕಾಲದಲ್ಲಿ

ಜನರು ಹಾಸಿಕೊಳ್ಳುವುದಕ್ಕೆ ಹಾಸಿಗೆಯನ್ನೂ ಹೊದೆದುಕೊಳ್ಳುವುದಕ್ಕೆ ಹೊದಿಕೆಯನ್ನೂ ಪೂರ್ಣವಾಗಿ ಅಪೇಕ್ಷಿಸದೆ ಮರದ ನೆಳಲುಗಳಲ್ಲಿ ಮಲಗಿ ಸುಖವಾಗಿ ನಿದ್ರಿಸುತ್ತಿರುವರು. ಈ ಕಾಲದಲ್ಲಿ ನಾಲ್ಕು ಆಶ್ರಮಗಳವರೂ ತೊರೆ ಕೆರೆ ಕಟ್ಟೆ ಕೊಳ ಕಾಲುವೆಗಳಲ್ಲಿ ತ್ರಿಕಾಲಗಳಲ್ಲೂ ಬಹಳ ಸಂತೋಷದಿಂದ ಮಿಾಯುತ್ತಿರುವರು. ಈ ನಿದಾಘಕಾಲದ ಹಗಲುಗಳು ಬಲು ಚೆಲುವಾಗಿ ಭೋಗ್ಯವಾಗಿರುವುವು. ಪುಣ್ಯಾತ್ಮರಾದವರು ದಾರಿಗಳಲ್ಲಿ ಅರವಟ್ಟಿಗೆಗಳನ್ನಿಡಿಸಿ ಪರಿಶುದ್ಧರ ಮನಸ್ಸಿನ ಹಾಗೆ ನಿರ್ಮಲವಾಗಿಯೂ ಚಂದ್ರಿಕೆಯಂತೆ ಶೀತಲವಾಗಿಯೂ ಸತ್ಯವಾಕ್ಯದಂತೆ ಮಧುರವಾಗಿಯೂ ಇರುವ ನೀರುಗಳನ್ನೂ ನಿಂಬೆಯ ಹುಳಿ ಶುಂಠಿ ಏಲಕ್ಕಿ ಕರಿಬೇವು ಇವುಗಳಿಂದ ಕೂಡಿದ ನೀರ್ಮಜ್ಜಿಗೆಯನ್ನೂ ಎಳನೀರುಗಳನ್ನೂ ದಣಿದುಬಂದ ದಾರಿಗರಿಗೆ ಕುಡಿಯುವುದಕ್ಕೋಸ್ಕರ ಕೊಟ್ಟು ಮೈಗಳಿಗೆ ಘನಸಾರಮಿಶ್ರವಾದ ಶ್ರೀಗಂಧವನ್ನು ಪೂಸಿ ಜಾಜಿ ಪಾದರಿ ಮೊದಲಾದ ಪುಷ್ಪಮಾಲಿಕೆಗಳನ್ನು ಹಾಕಿ ಅವರ ಮಾರ್ಗಾಯಾಸವನ್ನು ಪರಿಹರಿಸಿ ಆದರಿಸುತ್ತಿರುವರು. ಸೂರ್ಯಾಶ್ವಗಳು ಬಿಸಲಿನಿಂದ ಬಳಲಿ ರಥವನ್ನು ಎಳೆಯಲಾರದೆ ಮಂದವಾಗಿ ನಡೆಯುವುದರಿಂದಲೋ ಎಂಬಂತೆ ಈ ಕಾಲದ ಹಗಲುಗಳು ದೀರ್ಘವಾಗಿರುವುವು. ಹಕ್ಕಿಗಳು ಮಧ್ಯಾಹ್ನಕಾಲದಲ್ಲಿ ಬಿಸಿಲಿನ ಬೇಗೆಗಂಜಿ ತಮ್ಮ ತಮ್ಮ ಗೂಡುಗಳನ್ನು ಬಿಟ್ಟು ಹೊರಗೆ ಹೊರಡದಿರುವುವು. ಭೋಗಿಗಳಾಗಿ ಸ್ತ್ರೀಪುರುಷರು ಉನ್ನತವಾದ ಗಿರಿಶಿಖರಗಳಲ್ಲೂ ವಾಯು ಸಂಚಾರಕ್ಕೆ ಯೋಗ್ಯವಾಗಿ ಕಿಟಕಿಗಳಿಂದ ಕೂಡಿರುವ ಮನೆಗಳಲ್ಲೂ ಉನ್ನತವಾದ ಉಪ್ಪರಿಕೆಗಳ ಅಗ್ರಪ್ರದೇಶಗಳಲ್ಲೂ ನದ್ಯಾದಿ ಜಲಸ್ಥಾನ ಸಮಿಾಪದಲ್ಲೂ ವಾಸಮಾಡುತ್ತಿರುವರು ಪ್ರಜೆಗಳು ತಮ್ಮ ತಮ್ಮ ದನಕರುಗಳನ್ನು ಅನೇಕವಾದ ವೃಕ್ಷಗಳ ನೆಳಲುಗಳಿಂದ ಕೂಡಿರುವ ತೊರೆಹಳ್ಳ ಮೊದಲಾದುವುಗಳ ದಡಗಳಲ್ಲಿ ಬಿಟ್ಟುಕೊಂಡು ಹುಲ್ಲುಗಳನ್ನು ಮೇಯಿಸುತ್ತ ನೀರುಗಳನ್ನು ಕುಡಿಸುತ್ತ ದಗೆಯು ಹತ್ತದ ಹಾಗೆ ಕಾಪಾಡುತ್ತಿರುವರು. ಮತ್ತು ಈ ಕಾಲದ ಸಂಜೆಹೊತ್ತುಗಳಲ್ಲಿ ಶೈತ್ಯಸೌರಭ್ಯಮಾಂದ್ಯಯುಕ್ತವಾದ ಗಾಳಿಯು ಬೀಸುತ್ತ ಜನರನ್ನು ಸಂತೋಷಪಡಿಸುತ್ತಿರುವುದು. ಜನರು ಜಲಕ್ರೀಡೆಯಲ್ಲೂ ಚೀನಾಂಬರಗಳನ್ನು ಧರಿಸುವುದರಲ್ಲೂ ಬಹಳ ಆಸಕ್ತರಾಗಿರುವರು ಎಂದು ಹೇಳುತ್ತ ಜ್ಯೇಷ್ಠಾಷಾಢಮಾಸಗಳನ್ನು ಕಳೆಯುತ್ತಿದ್ದನು.

ಆ ಮೇಲೆ ರಾಮನು ವರ್ಷರ್ತುವು ಬಂದುದನ್ನು ನೋಡಿ ಲಕ್ಷ್ಮಣನನ್ನು ಕುರಿತು—ಎಲೈ ತಮ್ಮನೇ, ಇದೋ, ನೋಡು. ಆಕಾಶವು ಪರ್ವತಗಳಿಗೆ ಸಮಾನವಾಗಿರುವ ಕಪ್ಪಾದ ಮುಗಿಲುಗಳಿಂದ ವ್ಯಾಪ್ತವಾಗಿದೆ. ಮೊದಲು ಸೂರ್ಯಕಿರಣಗಳ ಮುಖಾಂತರವಾಗಿ ಸಮುದ್ರದ ಕ್ಷಾರೋದಕವನ್ನು ಕುಡಿದು ಬಂದು ಭೂಲೋಕಕ್ಕೆಲ್ಲಾ ನಿರ್ಮಲೋದಕಗಳನ್ನು ಕೊಡುತ್ತಿರುವ ಮೇಘಗಳು ಸ್ವಲ್ಪೋಪಕಾರವನ್ನು ಹೊಂದಿ ಮಹೋಪಕಾರವನ್ನು ಮಾಡುವ ಸುಜನರಂತೆ ಒಪ್ಪುತ್ತಿರುವುವು. ಸುಕೃತಿಗಳು ಸ್ವರ್ಗಲೋಕಕ್ಕೆ ಹೋಗುವುದಕ್ಕೋಸ್ಕರ ಪ್ರತ್ಯಕ್ಷವಾಗಿ ಕಾಣುತ್ತಿರುವ ಸೋಪಾನಪಂಗ್ತಿಯೋ ಎಂಬಂತೆ ಆಕಾಶದಲ್ಲಿ ಮೇಘಮಾಲೆಗಳು ವಿರಾಜಿಸುತ್ತಿರುವುವು.

ಸಂಧ್ಯಾಕಾಲದ ಕೆಂಪು ಬಣ್ಣದಿಂದಲೂ ಮೇಘಗಳ ಬಿಳುಪು ಕಪ್ಪು ಬಣ್ಣಗಳಿಂದಲೂ ಕೂಡಿದ ಅಂತರಿಕ್ಷವು ಗಗನ ಲಕ್ಷ್ಮಿಯು ಧರಿಸಿದ ಚಿತ್ರಾಂಬರದಂತಿರುವುದು. ಮೇಘಗಳ ಗುಂಪಿನತ್ತಣಿಂದ ಹೊರಟು ವಿವಿಧ ಕುಸುಮಗಳ ಸುಗಂಧವನ್ನು ಧರಿಸಿ ಸುಳಿಯುತ್ತಿರುವ ವಾಯುವು ಆಹ್ಲಾದಕರವಾಗಿದೆ. ಮೇಘವೆಂಬ ಕೃಷ್ಣಾಜಿನವನ್ನೂ ಜಲಧಾರೆಗಳೆಂಬ ಯಜ್ಞಸೂತ್ರವನ್ನೂ ಧರಿಸಿ ತಮ್ಮ ಗುಹೆಗಳೆಂಬ ಹೊಟ್ಟೆಗಳಲ್ಲಿ ತಡೆಯಲ್ಪಟ್ಟ ವಾಯುವೆಂಬ ಪ್ರಾಣವಾಯುಗಳುಳ್ಳ ಪರ್ವತಗಳು ಯೋಗಿಗಳ ಹಾಗೆ ಕಾಣುತ್ತಿವೆ. ಪರಹಿತಜನ್ಮಿಗಳಾದ ಮೇಘಗಳು ತಮ್ಮ ಮಿಂಚೆಂಬ ಕಡೆ ಗಣ್ಣೋಟದಿಂದ ಜಗತ್ತನ್ನು ನೋಡಿ ಪರೋಪಕಾರಕರಣದಲ್ಲಿ ನಮ್ಮ ಮುಂದಾರುಂಟು ಎಂದು ಆರ್ಭಟಿಸುತ್ತಿವೆಯೋ ಎಂಬಂತೆ ಘನಗರ್ಜಿತವುಂಟಾಗಿ ಸರ್ವಲೋಕಜೀವನ ವಾದ ರಸವನ್ನು ಸುರಿಸುತ್ತಿವೆಯೋ ಎಂಬಂತೆ ಎಡೆಬಿಡದೆ ಮಳೆಯನ್ನು ಸುರಿಸುತ್ತಿರು ವುವು. ವ್ಯೋಮಮಾರ್ಗದಲ್ಲಿ ವಿಹರಿಸುತ್ತಿರುವ ವಿದ್ಯಾಧರಾಂಗನೆಯರ ಕಂಠಗತವಾದ ಮುತ್ತಿನ ಹಾರಗಳು ಮೇಘಗಳಿಗೆ ಸಿಕ್ಕಿದುದರಿಂದ ಹರಿದು ಮುತ್ತುಗಳು ಕೆಳಗೆ ಉದುರುತ್ತಿವೆಯೋ ಎಂಬಂತೆ ಆಕಾಶದಿಂದ ಆನೆಕಲ್ಲುಗಳು ಸುರಿಯುತ್ತಿವೆ. ಅಂತರಿಕ್ಷ ಮಾರ್ಗದಲ್ಲಿ ಬೆಳ್ಳಕ್ಕಿಗಳು ಗುಂಪುಗುಂಪಾಗಿ ಹಾರಿಯಾಡುತ್ತಿವೆ. ತಾವರೆ ದಂಟುಗ ಳನ್ನು ಎತ್ತಿಕೊಂಡು ಮಾನಸ ಸರಸ್ಸನ್ನು ಕುರಿತು ಹೋಗುತ್ತಿರುವ ಹಂಸಪಕ್ಷಿಗಳು ಬುತ್ತಿಯನ್ನು ಕಟ್ಟಿ ತೆಗೆದುಕೊಂಡು ಹೋಗುತ್ತಿರುವ ಮಾರ್ಗಸ್ಥರನ್ನು ಹೋಲುತ್ತಿವೆ. ಚಾತಕಪಕ್ಷಿಗಳು ಬಾಯಿಯನ್ನು ತೆರೆದುಕೊಂಡು ಆಕಾಶದಲ್ಲಿ ಹಾರುತ್ತ ನವಮೇಘ ಗಳ ಜಲಬಿಂದುಗಳನ್ನು ಕುಡಿದು ತೃಪ್ತಿಹೊಂದುತ್ತಿವೆ ಆನೆಗಳೆಲ್ಲಾ ಮಳೆಯಿಂದ ನೆನೆದುವುಗಳಾಗಿ ಮೈಯುಬ್ಬಿ ಸಂತೋಷದಿಂದ ಕೊಬ್ಬಿರುವುವು. ಹೊಳೆಗಳು ಕೆಂಪಾದ ಹೊಸನೀರುಗಳಿಂದ ತುಂಬಿ ಎರಡು ದಡಗಳನ್ನೂ ಅತಿಕ್ರಮಿಸಿ ಪ್ರವಹಿಸುತ್ತಿರುವುವು. ಭೂಮಿಯೆಲ್ಲವೂ ನೀರಿನಿಂದಲೂ ಕೆಸರಿನಿಂದಲೂ ವ್ಯಾಪ್ತವಾಗಿರುವುದರಿಂದ ಸಂಚರಿಸು ವುದು ಅಶಕ್ಯವೆಂದು ಜನರು ವಿಶೇಷವಾಗಿ ಹೊರಗೆ ಹೊರಡದೆ ಮನೆಯಲ್ಲೇ ವಾಸ ಮಾಡಿಕೊಂಡಿರುವರು. ಅರಸುಗಳು ಶತ್ರುರಾಜರ ಮೇಲೆ ದಂಡಯಾತ್ರೆಗೆ ಹೊರಡು ವುದನ್ನು ನಿಲ್ಲಿಸಿ ಸ್ವಂತರಾಜ್ಯದಲ್ಲೇ ಸುಖದಿಂದ ವಾಸಮಾಡಿಕೊಂಡಿರುವರು. ನವಿಲು ಗಳು ಮೇಘಧ್ವನಿಯನ್ನು ಕೇಳಿ ಸಂತೋಷದಿಂದ ಕೇಕಾರಾವವನ್ನು ಮಾಡುತ್ತ ದೀರ್ಘವಾದ ಗರಿಗಳನ್ನು ಮೇಲಕ್ಕೆತ್ತಿ ಅಗಲಿಸಿಕೊಂಡು ನರ್ತನ ಮಾಡುತ್ತಿರುವುವು. ಭಿಕ್ಷುಕರು ಗೊರಗುಗಳನ್ನೂ ಕಂಬಳಿಗಳ ಗೊಂಗಡಿಗಳನ್ನೂ ಹಾಕಿಕೊಂಡು ಕೊಡೆ ಗಳನ್ನು ಹಿಡಿದು ಮರದಾವುಗೆಗಳನ್ನು ಮೆಟ್ಟುಕೊಂಡು ಭಿಕ್ಷಕ್ಕೆ ತಿರುಗುತ್ತ ಬಹಳ ಕಷ್ಟಪಡುತ್ತಿರುವರು. ಪ್ರಜೆಗಳು ಸಂತೋಷದಿಂದ ಹೊಲಗಳನ್ನು ಉತ್ತು ಬಿತ್ತಿ ಹರತೆಗಳನ್ನು ಮಾಡಿ ಕಳೆ ಕೀಳುತ್ತ ವ್ಯವಸಾಯಕೃತ್ಯಗಳಲ್ಲಿ ತೊಡಗಿರುವರು. ಮತ್ತು ಗದ್ದೆಗಳಿಗೆಲ್ಲಾ ನೀರು ಕಟ್ಟಿ ಅಟ್ಲುಕ್ಕೆಗಳನ್ನುತ್ತು ಸೊಪ್ಪು ಗೊಬ್ಬರಗಳನ್ನು ತುಳಿದು ಮೊದಲು ಅಗೆ ಹಾಕಿದ್ದ ಪೈರುಗಳನ್ನು ಕಿತ್ತು ತಂದು ಕೆಸರ್ಗದ್ದೆಗಳಲ್ಲಿ ನೆಟ್ಟು ಆ ಪೈರುಗಳಿಗೆ ಹದವರಿತು ನೀರನ್ನು ಹಾಯಿಸುತ್ತ ಒಂದು ಗಳಿಗೆಯಾದರೂ ವಿರಾಮವಿ

ಲ್ಲದೆ ಆರಂಭದ ಕೆಲಸಗಳನ್ನು ನಡಿಸುತ್ತಿರುವರು. ಸೂರ್ಯಚಂದ್ರರು ಮೋಡಗಳಿಂದ ಮುಚ್ಚಲ್ಪಟ್ಟವರಾಗಿರುವರು. ಒಂದು ವೇಳೆ ಕಾಣಿಸಿದಾಗ್ಯೂ ಚೆನ್ನಾಗಿ ಪ್ರಕಾಶಿಸುವುದಿಲ್ಲ. ಈ ಮಳೆಗಾಲವು ಐಶ್ವರ್ಯವಂತರಿಗೆ ಬಹಳ ಸುಖದಾಯಕವಾಗಿಯೂ ಬಡವರಿಗೆ ಬಹಳ ಕಷ್ಟದಾಯಕವಾಗಿಯೂ ಇರುವುದು ಎಂದು ಹೇಳುತ್ತ ಸೀತೆಯನ್ನು ನೆನಸಿಕೊಂಡು ಚಿಂತೆಪಡುತ್ತ ಶ್ರಾವಣ ಭಾದ್ರಪದಗಳೆಂಬ ಎರಡು ತಿಂಗಳುಗಳನ್ನು ಕಳೆಯುತ್ತಿದ್ದನು.

ತರುವಾಯ ರಾಮನು ಲಕ್ಷ್ಮಣನನ್ನು ನೋಡಿ—ಎಲೈ ತಮ್ಮನೇ, ನೋಡು! ಶರತ್ಕಾಲವು ಪ್ರಾಪ್ತವಾಯಿತು. ಆಕಾಶವು ಬಿಳುಪೇರಿತು. ಚಂದ್ರನು ಬಹಳ ನಿರ್ಮಲತೆಯುಳ್ಳವನಾಗಿರುವನು. ಈ ಶರತ್ಕಾಲದ ರಾತ್ರಿಗಳು ಬೆಳುದಿಂಗಳಿಂದ ಮನೋಹರವಾಗಿರುವುವು. ಹೊಳೆಗಳೆಲ್ಲಾ ಸ್ವಲ್ಪಪ್ರವಾಹವುಳ್ಳವುಗಳಾಗಿ ನಿರ್ಮಲವಾದ ಉದಕಗಳಿಂದ ಕೂಡಿರುವುವು. ಅರಸುಗಳು ವಿಜಯಪ್ರಯಾಣಕ್ಕೆ ಸನ್ನದ್ಧರಾಗಿರುತ್ತಿರುವರು. ಇಂಥ ಕಾಲದಲ್ಲಿ ನಮ್ಮ ಪ್ರಿಯಸಖನಾದ ಸುಗ್ರೀವನು ನಮ್ಮನ್ನೂ ನಾವು ಮಾಡಿದ ಉಪಕಾರವನ್ನೂ ಮರೆತು ಹತಶತ್ರುವಾಗಿ ಕಾಮವಿಕಾರವನ್ನು ಹೊಂದಿ ಕಿಷ್ಕಿಂಧೆಯಲ್ಲಿ ತಾನು ಮಾತ್ರ ಸುಖವಾಗಿರುತ್ತಿರುವನು. ಈಗಲೇ ನೀನು ಹೋಗಿ ಎಚ್ಚರಿಸು. ಆತನು ಕೃತಜ್ಞನಾಗಿ ನಿನ್ನ ಸಂಗಡ ಬಂದರೆ ಸರಿ; ರಾಜ್ಯಮದದಿಂದ ಮತ್ತನಾಗಿದ್ದರೆ ಅವನನ್ನು ಕೊಂದು ವಾಲಿಯ ಮಗನಾದ ಅಂಗದನಿಗೆ ಕಪಿರಾಜ್ಯಾಭಿಷೇಕವನ್ನು ಮಾಡಿ ಸೇನೆಯೊಡನೆ ಅವನನ್ನು ಕರೆದುಕೊಂಡು ಬರುವವನಾಗು ಎಂದು ಹೇಳಿ ಕಳುಹಿಸಿದನು.

ಆಗ ಲಕ್ಷ್ಮಣನು ಅಣ್ಣನ ಅಪ್ಪಣೆಯ ಪ್ರಕಾರ ಧನುರ್ಬಾಣಗಳನ್ನು ತೆಗೆದುಕೊಂಡು ಕಿಷ್ಕಿಂಧಾಪಟ್ಟಣದ ಹೆಬ್ಬಾಗಿಲಿಗೆ ಹೋಗಿ ನಿಂತು, ಬಿಲ್ಲಿಗೆ ಹೆದೆಯನ್ನು ಏರಿಸಿ ಝೇಂಕಾರವನ್ನುಂಟುಮಾಡಲು; ಪ್ರಳಯಕಾಲದ ಸಿಡಿಲಿಗೆ ಸರಿಯಾದ ಲಕ್ಷ್ಮಣನ ಧನುಷ್ಟಾಂಕಾರಧ್ವನಿಯನ್ನು ಕೇಳಿ ಸುಗ್ರೀವನು ಗಡಗಡನೆ ನಡುಗಿ ಹನುಮ ನಳ ನೀಲ ಜಾಂಬವಂತ ಸುಷೇಣ ಇವರೇ ಮೊದಲಾದ ಮಂತ್ರಿಗಳೊಡನೆ ಕೂಡಿ ಬಂದು ಲಕ್ಷ್ಮಣನಿಗೆ ನಮಸ್ಕರಿಸಿ—ಎಲೈ ಲಕ್ಷ್ಮಣನೇ, ಶ್ರೀರಾಮಚಂದ್ರನು ನನಗೆ ಮಾಡಿದ ಉಪಕಾರವನ್ನು ಮರೆತು ಈ ವರೆಗೂ ಕೃತಘ್ನತೆಯಿಂದಿರಲಿಲ್ಲ. ಇದೋ, ಹಿಮಾಲಯ ನಿಷಧ ಗಂಧಮಾದನ ಮೇರು ವಿಂಧ್ಯಾದಿ ಪರ್ವತಗಳಲ್ಲೂ ಸಮುದ್ರಪ್ರಾಂತಗಳಲ್ಲೂ ವನಸ್ಥಳಗಳಲ್ಲೂ ಇದ್ದ ಸರ್ವಕಪಿ ಸೇನಾಪತಿಗಳನ್ನೂ ರಾಮಕಾರ್ಯಾರ್ಥವಾಗಿ ಕರಿಸಿದ್ದೇನೆಂದು ಹೇಳಿ ಲಕ್ಷ್ಮಣನಿಗೆ ಸತ್ಕಾರವನ್ನು ಮಾಡಿ ಆತನೊಡನೆ ಕೂಡಿ ಹೊರಟು ರಾಮನ ಬಳಿಗೆ ಬಂದು ಆತನಿಗೆ ನಮಸ್ಕರಿಸಿದನು. ರಾಮನು ಸುಗ್ರೀವನನ್ನು ತೆಗೆದಪ್ಪಿ—ಎಲೈ ಪ್ರಿಯಸಖನೇ, ಮುಂದೆ ಮಾಡಬೇಕಾದ ರಾಜಕಾರ್ಯವಿಷಯವಾಗಿ ಯಾವ ಯೋಚನೆಯನ್ನು ಮಾಡಿದ್ದೀಯೆ? ಎಂದು ಕೇಳಲು; ಸುಗ್ರೀವನು ಕೈಗಳನ್ನು ಮುಗಿದು ನಿಂತುಕೊಂಡು—ಸ್ವಾಮಿಾ, ರಾಜೇಂದ್ರನೇ, ಸಕಲ ಕಪಿಸೇನಾನಾಯಕರೂ ತಮ್ಮ ತಮ್ಮ ಸೇನೆಗಳೊಡನೆ ಕೂಡಿ ಸನ್ನದ್ಧರಾಗಿ ಬಂದು ನಿನ್ನ ಅಪ್ಪ

ಣೆಯನ್ನು ನಿರೀಕ್ಷಿಸಿಕೊಂಡಿದ್ದಾರೆ. ಅವರೆಲ್ಲರ ಗಣಿತಿಯನ್ನು ಪರಾಮರ್ಶಿಸಿ ಚಿತ್ತಕ್ಕೆ ಒಪ್ಪಿಗೆಯಾದ ರೀತಿಯಿಂದ ಅಪ್ಪಣೆಕೊಡಿಸಬೇಕೆಂದು ವಿಜ್ಞಾಪಿಸಿ ಸರ್ವಸೇನಾಪತಿತ್ವವನ್ನು ಹೊಂದಿರುವ ಅಗ್ನಿಯ ಮಗನಾದ ನೀಲನ ಮುಖವನ್ನು ನೋಡಲು; ಆಗ ಆತನು ಶ್ರೀರಾಮಚಂದ್ರನಿಗೆ ಗಣಿತಿಯನ್ನೊಪ್ಪಿಸುವುದಕ್ಕಾಗಿ ತಮ್ಮ ತಮ್ಮ ಸೇನೆಗಳೊಡನೆ ಬರುವಂತೆ ಸರ್ವಸೇನಾಪತಿಗಳಿಗೂ ಆಜ್ಞಾಪಿಸಿದನು.

ಆ ಬಳಿಕ ನದೀ ಪ್ರದೇಶಗಳಲ್ಲೂ ಪರ್ವತಪ್ರದೇಶಗಳಲ್ಲೂ ಕಡಲ ದಡಗಳಲ್ಲೂ ವನಸ್ಥಳಗಳಲ್ಲೂ ವಾಸಮಾಡುತ್ತಿದ್ದವುಗಳೂ ಬೆಟ್ಟದಂತೆ ದೊಡ್ಡ ಮೈಯುಳ್ಳವುಗಳೂ ಕ್ರೂರವಾದ ಹಲ್ಲುಗಳುಳ್ಳವುಗಳೂ ಬಾಲಸೂರ್ಯನೋಪಾದಿಯಲ್ಲಿ ಕೆಂಬಣ್ಣವುಳ್ಳವುಗಳೂ ತಾವರೆಗಳ ಕೇಸರಗಳಂತೆ ಹೊಂಬಣ್ಣವುಳ್ಳವುಗಳೂ ಚಂದ್ರನಂತೆ ಬಿಳುಪುಳ್ಳವುಗಳೂ ಆಗಿರುವ ಹತ್ತು ಕೋಟಿ ಕಪಿಗಳಿಂದ ಕೂಡಿದ ಶತಬಲಿ ಎಂಬ ಕಪಿನಾಯಕನು ಬಂದು ರಾಮನನ್ನು ಕಂಡು ವಂದಿಸಿ ತನ್ನ ಸೇನೆಗಳನ್ನು ತೋರಿಸಿದನು. ಆ ಬಳಿಕ ತಾರೆಯ ತಂದೆಯಾದ ಸುಷೇಣನೆಂಬುವನು ಮೇರುಮಂದರಪರ್ವತಗಳಿಗೆ ಸಮಾನಗಳಾದ ಕಪಿಗಳಿಂದೊಪ್ಪುತ್ತಿರುವ ಅನೇಕ ಕೋಟಿ ಸೇನೆಗಳನ್ನು ತಂದು ರಾಮಚಂದ್ರನಿಗೆ ಗಣಿತಿಯೊಪ್ಪಿಸಿದನು. ಆ ಮೇಲೆ ರುಮೆಯ ತಂದೆಯೂ ಸುಗ್ರೀವನ ಮಾವನೂ ಆದ ರುಮಣ್ವನೆಂಬ ಸೇನಾಪತಿಯು ಅನೇಕಕೋಟಿ ಕಪಿಸೇನೆಗಳನ್ನು ತೆಗೆದುಕೊಂಡು ಬಂದು ರಾಘವನಿಗೆ ಕಾಣಿಸಿದನು. ಹನುಮಂತನ ತಂದೆಯಾದ ಕೇಸರಿಯೆಂಬ ಕಪಿನಾಯಕನು ತನ್ನ ಅಗಣ್ಯವಾದ ಕಪಿಸೇನೆಗಳನ್ನು ಕರತಂದು ರಾಮಚಂದ್ರನ ಮುಂದೆ ನಿಲ್ಲಿಸಿದನು. ಆ ಬಳಿಕ ಮಹಾ ಪರಾಕ್ರಮಶಾಲಿಯಾದ ಗವಾಕ್ಷನೆಂಬ ಕಪಿಸೇನಾನಾಯಕನು ತನ್ನ ಗೋಲಾಂಗೂಲಸೇನೆಗಳನ್ನು ರಘುನಾಥನಿಗೆ ತೋರಿಸಿದನು. ಅದರಂತೆ ಧೂಮ್ರ ಜಾಂಬವಂತರೆಂಬವರು ತಮ್ಮ ಕರಡಿಗಳ ಸೇನೆಗಳನ್ನೂ ನೀಲ ಪನಸರೆಂಬವರು ತಮ್ಮ ಮುಸಿಯ ಸೇನೆಗಳನ್ನೂ ತೋರಿಸಿದರು. ಗವಯ ದರೀಮುಖ ಯೂಥಪ ಗಜ ಗಂಧಮಾದನ ಯುವರಾಜನಾದ ಅಂಗದ ಇಂದ್ರಜಾನು ರಂಭ ದುರ್ಮುಖ ಹನುಮಂತ ನಳ ದಧಿಮುಖ ಶರಭ ಕುಮುದರೆಂಬುವರೂ ಇನ್ನೂ ಅನೇಕ ಕಪಿಸೇನಾಧಿಪತಿಗಳೂ ರಾಮನಿಗೆ ತಮ್ಮ ತಮ್ಮ ಸೇನೆಗಳನ್ನು ತೋರಿಸಿ ಕೈಗಳನ್ನು ಮುಗಿದರು.

ಆಗ ಶ್ರೀರಾಮನು ಆ ಸೇನಾಪತಿಗಳನ್ನೂ ಅವರವರ ತೇಜಸ್ಸುಗಳನ್ನೂ ಆಕೃತಿಗಳನ್ನೂ ಕೊಬ್ಬನ್ನೂ ನೋಡಿ ಬಹಳ ಸಂತೋಷಪಟ್ಟು ಅವರನ್ನೆಲ್ಲಾ ಆಲಿಂಗನ ಹಸ್ತಲಾಘವ ಕುಶಲವಚನಾಲೋಕನಗಳಿಂದ ಸನ್ಮಾನಿಸಿ ಸುಗ್ರೀವನನ್ನು ಆಲಿಂಗಿಸಿಕೊಂಡು—ಎಲೈ ಮಿತ್ರನೇ, ಈ ನಿನ್ನ ಸೇನೆಗಳ ಸಹಾಯದಿಂದ ಸಕಲಲೋಕಗಳನ್ನೂ ಜಯಿಸಬಲ್ಲೆನು. ಹೀಗಿರುವಲ್ಲಿ ರಾವಣನೆಷ್ಟುಮಾತ್ರದವನು ? ಆ ದುಷ್ಟನು ಎಲ್ಲಿರುವನೋ ? ಅದನ್ನು ಗೊತ್ತುಮಾಡಿಸಿ ಆ ಸುದ್ದಿಯನ್ನು ತರಿಸಿದರೆ ಆ ಮೇಲೆ ಮುಂಥಣ ಕಾರ್ಯವನ್ನು ಯೋಚಿಸಬಹುದು, ಆ ಕೆಲಸಕ್ಕೆ ಕಪಿಸೇನಾಪತಿಗಳನ್ನು ನೇಮಿಸು ಅಂದನು. ಆ ಕೂಡಲೆ ಸುಗ್ರೀವನು ರಾಮಲಕ್ಷ್ಮಣರ ಮುಂದೆಯೇ ಪೂರ್ವದಿಕ್ಕಿಗೆ

ವಿನತನೆಂಬ ಕಪಿಸೇನಾಪತಿಯನ್ನೂ ದಕ್ಷಿಣದಿಕ್ಕಿಗೆ ನೀಲ ಹನುಮಂತ ಬ್ರಹ್ಮನ ಮಗನಾದ ಜಾಂಬವಂತ ಸುಹೋತ್ರ ಗಜ ಗವಾಕ್ಷ ಗವಯ ಋಷಭ ಮೈಂಧ ದ್ವಿವಿಧ ವಿಜಯ ಗಂಧಮಾದನ ಉಲ್ಕಾಮುಖ ಅಂಗದ ಇವರೇ ಮೊದಲಾದ ವಾನರ ಶ್ರೇಷ್ಠರನ್ನೂ ಉತ್ತರದಿಕ್ಕಿಗೆ ತಾರೆಯ ತಂದೆಯಾದ ಸುಷೇಣನನ್ನೂ ಪಡುವಣ ದಿಕ್ಕಿಗೆ ಶತಬಲಿಯೆಂಬ ಕಪಿನಾಯಕರನ್ನೂ ನೇಮಿಸಿ—ನೀವೆಲ್ಲರೂ ನಿಮ್ಮ ನಿಮ್ಮ ಸೇನೆಗಳೊಡನೆ ಹೊರಟುಹೋಗಿ ಒಂದು ತಿಂಗಳೊಳಗೆ ನಿಮ್ಮ ನಿಮ್ಮ ದಿಕ್ಕುಗಳ ಕಡೆಯ ವರೆಗೂ ಆಕಳ ಹೆಜ್ಜೆಯಷ್ಟು ಸ್ಥಳವನ್ನಾದರೂ ಬಿಡದೆ ಹುಡುಕಿ ಸೀತೆಯನ್ನೂ ರಾವಣನನ್ನೂ ಗೊತ್ತುಮಾಡಿಕೊಂಡು ಬರಬೇಕು, ಹಾಗೆ ಬಾರದೆ ತಿಂಗಳು ಮುಗಿದ ಮೇಲೆ ಬಂದವರಿಗೆ ಮರಣಶಿಕ್ಷೆಯನ್ನು ವಿಧಿಸುವೆನೆಂದು ಅಪ್ಪಣೆಯನ್ನು ಕೊಟ್ಟು ಕಳುಹಿಸಲು; ಅದೇ ಮೇರೆಗೆ ಅವರೆಲ್ಲರೂ ತಮ್ಮ ತಮ್ಮ ಬಲಗಳೊಡನೆ ಕೂಡಿ ಹೊರಟುಹೋದರು.

ತರುವಾಯ ಪೂರ್ವಪಶ್ಚಿಮೋತ್ತರ ದಿಕ್ಕುಗಳಿಗೆ ನೇಮಿಸಲ್ಪಟ್ಟಿದ್ದ ವಿನತ ಶತಬಲಿ ಸುಷೇಣರೆಂಬ ಕಪಿನಾಯಕರು ತಮ್ಮೊಡೆಯನಾದ ಸುಗ್ರೀವನು ಕ್ರೂರವಾದ ಆಜ್ಞೆಯುಳ್ಳವನೆಂಬ ಭಯವುಳ್ಳವರಾದುದರಿಂದ ಬಹು ತ್ವರಿತದಿಂದ ಸೀತಾರಾವಣರನ್ನು ಹುಡುಕಿ ಎಲ್ಲೂ ಕಾಣದೆ ತಿಂಗಳುಮುಗಿಯುವುದರೊಳಗಾಗಿ ಸುಗ್ರೀವನ ಬಳಿಗೆ ಬಂದು—ನಾವು ಹೋಗಿದ್ದ ಮೂರು ದಿಕ್ಕುಗಳಲ್ಲೂ ಸೀತಾರಾವಣರಿಲ್ಲವೆಂದು ಹೇಳಿದರು. ಇತ್ತ ದಕ್ಷಿಣದಿಕ್ಕಿಗೆ ನೇಮಿಸಲ್ಪಟ್ಟಿದ್ದ ನೀಲ ಅಂಗದ ಹನುಮಂತ ಜಾಂಬವಂತರೇ ಮೊದಲಾದವರು ಋಷ್ಯಮೂಕಾದ್ರಿಯಿಂದ ಹೊರಟು ವಿಂಧ್ಯಪರ್ವತವನ್ನು ಸೇರಿ ಅದರ ತಪ್ಪಲುಗಳಲ್ಲೂ ಗುಹೆಗಳಲ್ಲೂ ಬಹಳವಾಗಿ ಹುಡುಕಿ ಹಸಿವು ಬಾಯಾರಿಕೆಗಳಿಂದ ಕಂದಿ ಕುಂದಿ ಕಡೆಗೆ ಸ್ವಯಂಪ್ರಭೆಯೆಂಬುವಳಿರುವ ಗುಹೆಯನ್ನು ಪ್ರವೇಶಿಸಿ ಅವಳನ್ನು ಕಂಡು ತಾವು ಬಂದಿರುವುದಕ್ಕೆ ಕಾರಣವನ್ನು ಸಾಂಗವಾಗಿ ತಿಳಿಸಲು ; ಆಕೆಯು ಅವರಿಗೆ ತಿನ್ನುವುದಕ್ಕೆ ಕಂದಮೂಲಗಳನ್ನೂ ಕುಡಿಯುವುದಕ್ಕೆ ನಿರ್ಮಲೋದಕವನ್ನೂ ಜೇನುತುಪ್ಪವನ್ನೂ ಕೊಟ್ಟು ಅವರ ಹಸಿವು ಬಾಯಾರಿಕೆಗಳನ್ನು ಶಾಂತಪಡಿಸಿದಳು. ಆ ಮೇಲೆ ಅವರೆಲ್ಲರೂ ಆಕೆಯನ್ನು ಕುರಿತು—ಎಲೈ ತಾಯೇ, ನಿನ್ನ ದಯೆಯಿಂದ ನಮ್ಮ ಕ್ಷುತ್ತೃಷೆಗಳು ಅಡಗಿದುವು. ನಾವು ಬರುವಾಗ ಈ ಗುಹೆಯೊಳಗೆ ಸುಲಭವಾಗಿ ಬಂದೆವು. ಈಗ ನಾವು ಹೇಗೆ ಯಾವ ದಾರಿಯಿಂದ ಹೋಗಬೇಕೋ ತಿಳಿಯುವುದಿಲ್ಲ. ನಮ್ಮೊಡೆಯನಾದ ಸುಗ್ರೀವನು—ಒಂದು ತಿಂಗಳೊಳಗೆ ಹಿಂದಿರುಗಿ ಬಾರದಿದ್ದರೆ ನಿಮ್ಮನ್ನೆಲ್ಲಾ ಕೊಲ್ಲಿಸುವೆನೆಂದು ನಮಗೆ ಅಪ್ಪಣೆ ಕೊಟ್ಟಿದ್ದಾನೆ. ಆದುದರಿಂದ ಎಲೈ ತಾಯೇ, ನೀನು ನಮ್ಮಲ್ಲಿ ದಯೆಯನ್ನಿಟ್ಟು ಈ ಗುಹೆಯಿಂದ ಹೊರಗೆ ಹೋಗುವ ಹಾಗೆ ಸಹಾಯಮಾಡಿದರೆ ನೀನೇ ನಮ್ಮ ಪ್ರಾಣಗಳನ್ನು ಕಾಯ್ದವಳಾಗುತ್ತೀಯೆ ಎಂದು ದೈನ್ಯದಿಂದ ಬೇಡಿಕೊಳ್ಳಲು ; ಆಗ ಆಕೆಯು ಅವರನ್ನು ಕುರಿತು—ಎಲೈ ಕಪಿನಾಯಕರುಗಳಿರಾ, ಮಹಾಪುರುಷರಾದ ದೇವತೆಗಳೂ ಕೂಡ ಈ ಗುಹೆಯನ್ನು ಪ್ರವೇಶಿಸಿ ಹಿಂದಿರುಗಿ ಹೋಗಲಾರರು. ಅದುಕಾರಣ ಈಗ ನೀವೆಲ್ಲರೂ ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ಕಣ್ಣುಗಳನ್ನು ಮುಚ್ಚಿ

ಕೊಳ್ಳಿರೆಂದು ಹೇಳಿದಳು. ಅವರೆಲ್ಲರೂ ಕೂಡಲೆ ಒಬ್ಬೊಬ್ಬರ ಕೈಗಳನ್ನು ಹಿಡಿದು ಕೊಂಡು ಕಣ್ಣುಗಳನ್ನು ಮುಚ್ಚಿಕೊಂಡರು. ಆ ಕ್ಷಣದಲ್ಲಿಯೇ ಅವರೆಲ್ಲರನ್ನೂ ಗುಹೆಯಿಂದ ಹೊರಗೆ ತಂದು ಬಿಟ್ಟು ಆಕೆಯು ಅವರನ್ನು ಕುರಿತು—ಇದೋ, ನೀವೆಲ್ಲರೂ ಹೊರಗೆ ಬಂದಿದ್ದೀರಿ! ಇನ್ನು ಮೇಲೆ ನಿಮ್ಮೊಡೆಯನ ಅಪ್ಪಣೆಯನ್ನು ಅನುಸರಿಸಿ ನಡೆಯಬಹುದೆಂದು ಹೇಳಿ ಗುಹೆಯನ್ನು ಹೊಕ್ಕಳು.

ಅನಂತರದಲ್ಲಿ ಅಂಗದನು ದಿಕ್ಕುಗಳನ್ನು ನೋಡಿ ಶರತ್ಕಾಲವು ಕಳೆದುಹೋಗಿ ಹೈಮಂತಕಾಲವು ಬಂದಿರುವುದನ್ನು ತಿಳಿದು ಮಹಾತಂಕಯುಕ್ತನಾಗಿ ಜಾಂಬವಂತನೇ ಮೊದಲಾದ ಕಪಿವೀರರನ್ನು ಕುರಿತು—ಇದೋ, ನೋಡಿರಿ. ಸುಗ್ರೀವನು ನೇಮಿಸಿದ ತಿಂಗಳ ಅವಧಿಯೂ ಮುಗಿದುಹೋಯಿತು. ಸೀತಾರಾವಣರನ್ನೂ ಕಾಣಲಿಲ್ಲ. ಈಗ ನಾವು ತಿರಿಗಿ ಕಿಷ್ಕಿಂಧೆಗೆ ಹೋದರೆ ಸುಗ್ರೀವನು ನಮ್ಮನ್ನು ಕಲ್ಲುಗಾಣಗಳಿಗೆ ಹಾಕಿಸಿ ಅರೆಯಿಸಬಿಡುವನು. ತಿರಿಗಿ ಅವನ ಬಳಿಗೆ ಹೋಗಿ ಅವನಿಂದ ಕೊಲ್ಲಿಸಿಕೊಳ್ಳುವುದಕ್ಕಿಂತಲೂ ನಾವೇ ಈ ವಿಂಧ್ಯಪರ್ವತದಲ್ಲಿ ಅನ್ನೋದಕಗಳನ್ನು ತೊರೆದು ಪ್ರಾಣಗಳನ್ನು ಬಿಡುವುದೇ ಲೇಸು ಎಂದು ಹೇಳಲು; ಅದಕ್ಕೆ ಕೋಡಗಗಳೆಲ್ಲಾ ಒಪ್ಪಿ ಕೂಡಿಬಂದು ಒಂದು ದೊಡ್ಡ ಬಂಡೆಯ ಮೇಲೆ ಕುಳಿತು ನಿರಶನವ್ರತವನ್ನು ಕೈಕೊಂಡು—ಮೊದಲು ಈ ಸೀತೆಯಿಂದ ವಿರಾಧನೆಂಬ ರಾಕ್ಷಸನೂ ಕಬಂಧನೆಂಬ ನಿಶಾಚರನೂ ಖರದೂಷಣರೇ ಮೊದಲಾದ ಹದಿನಾಲ್ಕು ಸಾವಿರ ಮಂದಿ ರಾತ್ರಿಂಚರರು ಜಟಾಯುವೆಂಬ ಗೃಧ್ರರಾಜನೂ ಈ ಮೊದಲಾದವರೆಲ್ಲರೂ ಹಾಳಾದರು ಈಗ ನಾವೂ ಅವರಂತೆ ಈ ಸೀತೆಗಾಗಿ ಪ್ರಾಣಗಳನ್ನು ತೊರೆಯಬೇಕಾಗಿ ಬಂದಿತು ಎಂದು ಮಾತನಾಡಿಕೊಳ್ಳುತ್ತಿರಲು; ಅವರ ಸಮೀಪದಲ್ಲಿ ಗರಿಗಳೆಲ್ಲಾ ಸೀಯ್ದುಹೋಗಿ ಬಿದ್ದಿದ್ದ ಸಂಪಾತಿಯೆಂಬ ಗೃಧ್ರರಾಜನು ಈ ಕಪಿವೀರರನ್ನು ಕುರಿತು—ನೀವು ಯಾರಪ್ಪಾ? ನನ್ನ ತಮ್ಮನಾದ ಜಟಾಯುವು ಸತ್ತನೆಂದು ಹೇಳಿ ನನ್ನ ಮನಸ್ಸಿಗೆ ಬಹಳ ದುಃಖವನ್ನುಂಟು ಮಾಡಿದಿರಿ. ಆತನನ್ನು ಯಾರು ಕೊಂದರಪ್ಪಾ? ಅದಕ್ಕೆ ನಿಮಿತ್ತವೇನು? ಆ ವರ್ತಮಾನವನ್ನೆಲ್ಲಾ ನನಗೆ ವಿವರವಾಗಿ ತಿಳಿಸಿರಿ ಎನ್ನಲು; ಅಂಗದನು ಆತನನ್ನು ಕುರಿತು—ಅಯೋಧ್ಯಾಧಿಪತಿಯಾದ ದಶರಥರಾಜನಿಗೆ ಪುತ್ರನಾದ ರಾಮನು ತಂದೆಯ ಆಜ್ಞಾನುಸಾರವಾಗಿ ದಂಡಕವನದಲ್ಲಿರುತ್ತಿರಲು; ರಾವಣನೆಂಬವನು ಹಗೆತನದಿಂದ ಆತನ ಪತ್ನಿಯಾದ ಸೀತೆಯನ್ನು ಆತನಿಲ್ಲದ ವೇಳೆಯಲ್ಲಿ ಕಳ್ಳತನದಿಂದ ಎತ್ತಿಕೊಂಡು ಹೋಗುತ್ತಿರುವಲ್ಲಿ ನಿನ್ನ ತಮ್ಮನಾದ ಜಟಾಯುವು ಸೀತೆಯನ್ನು ಬಿಡಿಸುವುದಕ್ಕೋಸ್ಕರ ರಾವಣನೊಡನೆ ಜಗಳಕ್ಕೆ ನಿಲ್ಲಲು; ಅವನು ನಿನ್ನ ತಮ್ಮನನ್ನು ಕೊಂದು ಸೀತೆಯನ್ನು ಎತ್ತಿಕೊಂಡು ಹೋದನೆಂದು ತಿಳಿಸಿ ತಾವು ಆ ಸೀತಾರಾವಣರನ್ನು ಹುಡುಕುವುದಕ್ಕೆ ಬಂದ ಸುದ್ದಿಯನ್ನು ಆಮೂಲಾಗ್ರವಾಗಿ ತಿಳಿಸಿದರು.

ಆಗ ಸಂಪಾತಿಯು—ಎಲೈ ಕಪಿನಾಯಕರೇ, ಆ ರಾಮನು ನನ್ನ ಮಿತ್ರನ ಮಗನು. ಆದುಕಾರಣ ನಾನು ನಿಮಗೆ ಸಹಾಯಮಾಡುವೆನು. ಪೂರ್ವದಲ್ಲಿ ನಾನೂ ನನ್ನ ತಮ್ಮನಾದ ಜಟಾಯುವೂ ನಮ್ಮ ನಮ್ಮ ಶಕ್ತಿಗಳನ್ನು ಪರೀಕ್ಷಿಸಿಕೊಳ್ಳುವುದ

ಕ್ಕೋಸ್ಕರ ಹಟವನ್ನು ಮಾಡಿಕೊಂಡು ನಾವಿಬ್ಬರೂ ಸೂರ್ಯಮಂಡಲದ ವರೆಗೂ ಹಾರಿಹೋಗಲು ; ಆಗ ನಾನು ಸೂರ್ಯಕಿರಣಗಳ ಉಷ್ಣಾತಿಶಯದಿಂದ ಸಂಕಟಪಡುತ್ತಿರುವ ನನ್ನ ತಮ್ಮನಿಗೆ ನನ್ನ ಗರಿಗಳನ್ನು ಮರೆಮಾಡಲು ; ಆತನು ಗರಿಗಳಿಂದ ಕೂಡಿ ಜನಸ್ಥಾನದಲ್ಲಿ ಬಿದ್ದು ಜೀವಿಸಿಕೊಂಡಿದ್ದನು. ನಾನು ಉರಿದುಹೋದ ಗರಿಗಳುಳ್ಳವನಾಗಿ ಇಲ್ಲಿ ಬಿದ್ದೆನು. ನಿಶಾಕರನೆಂಬೊಬ್ಬ ಮಹಾಮುನಿಯು ನನ್ನನ್ನು ನೋಡಿ ದಯೆಯುಳ್ಳವನಾಗಿ--ಮುಂದೆ ಇಲ್ಲಿಗೆ ರಾಮನ ಕಾರ್ಯಾರ್ಥವಾಗಿ ಕಪಿಸೇನಾನಾಯಕರು ಬರುವರು ; ನೀನು ಅವರಿಗೆ ಸೀತಾರಾವಣರಿರುವ ಸ್ಥಳವನ್ನು ತಿಳಿಸಿ ಸಹಾಯ ಮಾಡಿದರೆ ನಿನ್ನ ಗರಿಗಳು ತಿರಿಗಿ ಹುಟ್ಟುವುವು ಎಂದು ವರವನ್ನು ಕೊಟ್ಟಿದ್ದನು. ಅದುಕಾರಣ ಇದೋ ನೋಡಿರಿ ! ಈ ದಕ್ಷಿಣ ಸಮುದ್ರದ ಆಚೆ ಶತಯೋಜನ ದೂರದಲ್ಲಿ ತ್ರಿಕೂಟವೆಂಬ ಪರ್ವತದ ಶಿಖರದ ಮೇಲೆ ಲಂಕೆಯೆಂಬುದೊಂದು ಪಟ್ಟಣವಿರುವುದು. ಅದೇ ದುಷ್ಟನಾದ ರಾವಣನ ವಾಸಸ್ಥಾನವು. ಅವನ ಅಂತಃಪುರೋದ್ಯಾನದಲ್ಲಿ ರಾಕ್ಷಸಿಯರ ಕಾವಲಿನಿಂದ ಸೀತೆ ಇರುವಳು. ನಮ್ಮದು ಪಕ್ಷಿಜಾತಿಯಾದುದರಿಂದ ನಮ್ಮ ದೃಷ್ಟಿಯು ಬಹುದೂರದ ವರೆಗೂ ಪ್ರಸರಿಸುವುದು. ಇದೋ, ಸೀತೆಯು ನನಗೆ ಕಾಣುತ್ತಾಳೆ ! ನೀವು ಸಮುದ್ರವನ್ನು ದಾಟಿ ಲಂಕೆಗೆ ಹೋದರೆ ಸೀತೆಯನ್ನೂ ರಾವಣನನ್ನೂ ಕಾಣುವಿರಿ. ಇದೋ ನನ್ನ ರಕ್ಕೆಗಳು ಹುಟ್ಟಿ ಬೆಳೆಯುತ್ತಿವೆ, ನೋಡಿರಿ ! ಎಂದು ತೋರಿಸಿದನು.

ಕಪಿಸೇನಾಪತಿಗಳು ಆ ಮಾತುಗಳನ್ನು ಕೇಳಿ ನಿಧಿಯನ್ನು ಕಂಡ ದರಿದ್ರರಂತೆಯೂ ಚಂದ್ರನನ್ನು ಕಂಡ ಚಕೋರಗಳಂತೆಯೂ ವರ್ಷರ್ತುವನ್ನು ಕಂಡ ನವಿಲುಗಳಂತೆಯೂ ಮುಂಗಾರು ಹನಿಗಳನ್ನು ಕಂಡ ಚಾತಕಪಕ್ಷಿಗಳಂತೆಯೂ ಸಂತೋಷಪಟ್ಟು ಎಲ್ಲರೂ ಬಂಡೆಯ ಮೇಲಣಿಂದೆದ್ದು ಹೊರಟು ಸಮುದ್ರತೀರಪ್ರದೇಶವನ್ನು ಸೇರಿದರು.

---

## 5. ANJANEYA DISCOVERS SITE AND BURNS THE CITY OF LANKA.

## ೫. ಆಂಜನೇಯನು ಸೀತೆಯನ್ನು ಕಂಡು ಲಂಕಾಪಟ್ಟಣವನ್ನು ಸುಟ್ಟುದು.

ಅನಂತರದಲ್ಲಿ ಕಪಿಸೇನಾಪತಿಗಳಾದ ಜಾಂಬವದಂಗದಾಂಜನೇಯಾದಿಗಳು ಘೋರತರವಾದ ತೆರೆಗಳ ಆರ್ಭಟದಿಂದ ಕೂಡಿ ಒಪ್ಪುತ್ತಿರುವ ಮಹಾ ಸಾಗರವನ್ನು ನೋಡಿ ವ್ಯಾಕುಲಚಿತ್ತರಾಗಿ—ಇದನ್ನು ದಾಟುವುದೂ ಲಂಕೆಯನ್ನು ಸೇರುವುದೂ ಸೀತಾರಾವಣರನ್ನು ಕಂಡು ಹಿಂದಿರುಗಿ ಬರುವುದೂ ಹೇಗೆ ? ಎಂದು ಕರತಲಗಳಲ್ಲಿ ಕೆನ್ನೆಗಳನ್ನಿಟ್ಟುಕೊಂಡು ಕಂಗೆಟ್ಟು ಮುಂಗಾಣದೆ ಕುಳಿತುಕೊಂಡಿರಲು ; ಆಗ ಜಾಂಬವಂತನು ಸಮಸ್ತ ಕಪಿಗಳನ್ನೂ ನೋಡಿ—ಎಲೈ ಕಪಿವೀರರೇ, ದೇವತೆಗಳಿಂದಲೂ ದಾಟಲಶಕ್ಯವಾದ ಈ ಸಮುದ್ರವನ್ನು ದಾಟಿ ಹಿಂದಿರುಗಿ ಬರುವಂಥ ಶೂರರು

ಈ ನಮ್ಮ ಕಪಿಸೇನೆಯೊಳಗೆ ಯಾರಿದ್ದಾರೆ ? ಎಂದು ಕೇಳಲು ; ಆಗ ಯುವರಾಜನಾದ ಅಂಗದನೆದ್ದು—ಸ್ವಾಮಿ, ಶಿವನಂತಿರುವ ನಿಮ್ಮ ಅನುಗ್ರಹವು ನಮಗಿರುವಲ್ಲಿ ಈ ಸಮುದ್ರವನ್ನು ದಾಟುವುದು ಎಷ್ಟರ ಕೆಲಸ ? ನಮ್ಮ ಸೇನೆಯೊಳಗೆ ಈ ಸಮುದ್ರವನ್ನೆಲ್ಲಾ ಒಂದೇ ಸಾರಿ ಕುಡಿದುಬಿಡುವಂಥ ಮಹಾ ಭಟರಿದ್ದಾರೆ ಎಂದು ಹೇಳಿ ಕಪಿಗಳ ಮುಖಗಳನ್ನು ನೋಡಲು; ಕೂಡಲೆ ಕಪಿಗಳೆಲ್ಲಾ ಎದ್ದು ಭುಜಗಳನ್ನು ಅಪ್ಪಳಿಸಿಕೊಂಡು ಹಲ್ಲಿರಿದು ಆರ್ಭಟಿಸಲು; ಜಾಂಬವಂತನು—ಹೋ ! ಹೋ ! ಸಹಿಸಿರಿ ! ಲೋಕತ್ರಯದಲ್ಲಿಯೂ ನಿಮ್ಮಂಥ ವೀರರಿಲ್ಲ ! ಆದರೆ ಸಮುದ್ರವನ್ನು ದಾಟಿ ಲಂಕೆಗೆ ಹೋಗಿ ಬರಬೇಕಾದರೆ ನಾನಾವಿಧೋಪಾಯಗಳನ್ನು ಮಾಡಬೇಕು. ಅಲ್ಲದೆ ಜಾನಕಿಯನ್ನು ಕಂಡು ಬರಬೇಕು. ನಿಮ್ಮಲ್ಲಿ ಇಷ್ಟು ಸಾಮರ್ಥ್ಯವು ಯಾರಿಗುಂಟು ? ಎ ದು ಕೇಳಲು ; ಆಗ ಕಪಿವೀರರೆಲ್ಲಾ ಒಟ್ಟಾಗಿ ಎದ್ದು ನಿಂತು—ತಮ್ಮ ತಮ್ಮ ಸಾಮರ್ಥ್ಯವನ್ನೆಲ್ಲಾ ಹೇಳಿಕೊಳ್ಳಲು ; ಜಾಂಬವಂತನು—ನಾನು ಯೌವನಸ್ಥನಾಗಿದ್ದ ಕಾಲದಲ್ಲಿ ನನಗೆ ಈ ಕಾರ್ಯವು ಲಕ್ಷ್ಯವಾಗಿರಲಿಲ್ಲ. ಈಗ ಸಂಪೂರ್ಣ ವೃದ್ಧನಾಗಿದ್ದೇನೆ. ಆದರೂ ಈಗ ಶತಯೋಜನದೂರವನ್ನು ಹಾರಬಲ್ಲೆನು ; ಪುನಃ ನೂರು ಯೋಜನವನ್ನು ಹಾರಿ ಬರುವುದಕ್ಕೆ ಶಕ್ತಿಯುಂಟಾಗುವುದೋ ಇಲ್ಲವೋ ಎಂದು ಸಂದೇಹವುಳ್ಳವನಾಗಿದ್ದೇನೆ ಎನ್ನಲು ;

ಆಗ ಅಂಗದನು ನೀವೆಲ್ಲರೂ ನೋಡುತ್ತ ಇಲ್ಲಿದ್ದರೆ ನಾನು ಈ ನೂರು ಯೋಜನ ದೂರವನ್ನೂ ದಾಟಿಹೋಗಿ ಸೀತಾರಾವಣರನ್ನು ಕಂಡು ತಿರುಗಿ ಬರುವೆನೆಂದು ಹೇಳಿದುದಕ್ಕೆ ಜಾಂಬವಂತನು—ನಾವೆಲ್ಲರೂ ಇದ್ದುಕೊಂಡು ದೊರೆಯ ಮಗನಾಗಿ ಯುವರಾಜನಾದ ನಿನ್ನೊಬ್ಬನನ್ನೇ ಹಗೆಯ ಪಟ್ಟಣಕ್ಕೆ ಕಳುಹಿಸುವುದು ಧರ್ಮವಲ್ಲವು. ಮತ್ತು ರಾಮಚಂದ್ರನೂ ಸುಗ್ರೀವನೂ ಈ ಕಾರ್ಯವನ್ನು ಒಪ್ಪಲಾರರು ಎಂದು ಎಲ್ಲರನ್ನೂ ಸಮಾಧಾನಪಡಿಸಿ ಬುದ್ಧಿ ಶಕ್ತಿ ಪರಾಕ್ರಮಾದಿಗಳಲ್ಲಿ ಪ್ರಖ್ಯಾತನಾದ ಹನುಮಂತನನ್ನು ನೋಡಿ—ಎಲೈ ಮಹಾನುಭಾವನೇ, ಇಂಥ ವೇಳೆಯಲ್ಲಿ ನೀನು ಒಂದು ಮಾತನ್ನಾದರೂ ಆಡದೆ ಯಾಕೆ ಮೌನದಿಂದಿದ್ದೀಯೆ ? ಈ ಸಮಯದಲ್ಲಿ ಮಹಾವೀರನಾದ ನೀನು ಮನಸ್ಸುಮಾಡಿದರೆ ಇದೆಷ್ಟರ ಕೆಲಸ ? ನಿನ್ನಿಂದ ನಾವೆಲ್ಲರೂ ತಿರಿಗಿ ಸುಗ್ರೀವರಾಮರ ಸನ್ನಿಧಿಗೆ ಹೋಗಿ ನಮ್ಮ ಹೆಂಡಿರುಮಕ್ಕಳುಗಳ ಮೋರೆಗಳನ್ನು ನೋಡುವೆವು. ಅಲ್ಲದೆ ನಮ್ಮೊಡೆಯನಾದ ಸುಗ್ರೀವನು ಕೃತಕೃತ್ಯನಾಗುವನು. ರಾಮನು ದುರ್ಮಾರ್ಗಪ್ರವರ್ತಕನಾದ ರಾವಣನನ್ನು ಕೊಂದು ಸೀತೆಯನ್ನು ಹೊಂದಿ ಸಂತೋಷಿಸುವನು. ಈ ಭಾಗದಲ್ಲಿ ನೀನು ಉದಾಸೀನಮಾಡಿದರೆ ರಾಮಲಕ್ಷ್ಮಣರೂ ಸುಗ್ರೀವನೂ ನಾವೂ ಪ್ರಾಣಗಳನ್ನು ಬಿಡುವುದು ನಿಶ್ಚಯ. ಅದುಕಾರಣ ನೀನು ಧೈರ್ಯದಿಂದ ಈ ಕೆಲಸವನ್ನು ನಿರ್ವಹಿಸಬೇಕೆಂದು ಬೇಡಿಕೊಳ್ಳಲು ; ಆಗ ಹನುಮಂತನು ಉತ್ಸಾಹಸಂಪನ್ನನಾಗಿ ಅಂಗದ ಜಾಂಬವಂತ ಇವರೇ ಮೊದಲಾದವರೆಲ್ಲರನ್ನೂ ಸಮಾಧಾನಪಡಿಸಿ ಕಪಿಸೇನೆಗಳೊಡನೆ ಕೂಡಿ ಸಮುದ್ರದ ದಡದಲ್ಲಿರುವ ಮಹೇಂದ್ರಪರ್ವತದ ಮೇಲಕ್ಕೆ ಹತ್ತಿ ಅಲ್ಲಿಂದ ಆಕಾಶಮಾರ್ಗಕ್ಕೆ

ನೆಗೆದು ಬರುತ್ತಿರುವ ಕಾಲದಲ್ಲಿ ಮೈನಾಕವೆಂಬ ಪರ್ವತವು ಸಮುದ್ರಮಧ್ಯದಿಂದ ಹೊರಟು ಬಂದು ಆಂಜನೇಯನನ್ನು ನಾನಾ ಪ್ರಕಾರವಾಗಿ ಉಪಚರಿಸಲು ; ಅವನು ಅದಕ್ಕೆ ಸಂತೋಷಪಟ್ಟು—ನಾನು ಸೀತೆಯನ್ನು ಕಂಡು ಆ ವರ್ತಮಾನವನ್ನು ಶ್ರೀರಾಮನಿಗೆ ಹೇಳುವ ವರೆಗೂ ಅನ್ನೋದಕಗಳನ್ನು ಸ್ವೀಕರಿಸುವುದಿಲ್ಲವೆಂದು ಶಪಥಮಾಡಿದ್ದೇನೆ. ಆದುದರಿಂದ ನನ್ನ ಕಾರ್ಯವು ಶೀಘ್ರದಲ್ಲಿ ಕೈಗೂಡುವ ಹಾಗೆ ಅನುಗ್ರಹಿಸಬೇಕೆಂದು ಹೇಳಿ ಹೊರಟು ಅಲ್ಲಿಂದ ಮುಂದೆ ಹೋಗುತ್ತ ತನ್ನ ಶೌರ್ಯವನ್ನು ಪರೀಕ್ಷಿಸಬೇಕೆಂದು ಇಂದ್ರನು ಕಳುಹಿಸಿದ ಸುರಸೆಯೆಂಬವಳನ್ನು ಉಪಾಯದಿಂದ ಜಯಿಸಿ ಮುಂದೆ ಹೋಗುತ್ತಿರಲು ; ತನ್ನನ್ನು ಕೊಂದುಹಾಕುವೆನೆಂದು ಆರ್ಭಟಿಸಿಕೊಂಡು ಬಂದ ಸಿಂಹಿಕೆಯೆಂಬ ರಾಕ್ಷಸಿಯನ್ನು ಎರಡು ಭಾಗವಾಗಿ ಸೀಳಿ ಒಂದು ಭಾಗವನ್ನು ಲಂಕಾಪಟ್ಟಣಕ್ಕೂ ಇನ್ನೊಂದನ್ನು ಜಾಂಬವಂತಾದಿಗಳಿರುವ ಸ್ಥಳಕ್ಕೂ ಬಿಸುಟು ಅತಿ ವೇಗದಿಂದ ಹಾರಿ ಮುಂದಕ್ಕೆ ಬಂದು ಲಂಕಾಪಟ್ಟಣದ ಬಳಿಯಲ್ಲಿರುವ ಲಂಬನಾಮಕಪರ್ವತದ ಮೇಲೆ ಇಳಿದು ಲಂಕಾನಗರದ ಸೊಬಗನ್ನು ನೋಡಿ ತಲೆದೂಗಿದನು.

ಆ ನಗರದ ಸುತ್ತಲೂ ವಿರಾಜಿಸುತ್ತಿರುವ ಉದ್ಯಾನವನವು—ನಾನಾವಿಧ ಪಲ್ಲವ ಪುಷ್ಪ ಫಲಭರಿತಗಳಾದ ಮರುಗ ಮಲ್ಲಿಗೆ ಜಾಜಿ ಸಂಪಿಗೆ ಸುರಗಿ ವಕುಳ ಸೇವಂತಿಗೆ ಪಾಟಲಿ ಕರವೀರ ಮುತ್ತು ಕದಳಿ ನಾಳಿಕೇರ ಜಂಬು ಪನಸ ಚೂತ ನಿಂಬೆ ದಾಡಿಮ ದ್ರಾಕ್ಷಿ ಮಾದಲ ಅಂಜೂರ ಖರ್ಜೂರ ಲವಂಗ ಈ ಮೊದಲಾದ ಲತಾವೃಕ್ಷಗಳಿಂದ ಕೂಡಿ ಶುಕಪಿಕಶಾರಿಕಾದಿ ಪಕ್ಷಿಗಳಿಂದ ಒಪ್ಪುತ್ತಿರುವುದಾಗಿಯೂ ಕಮಲ ನೀಲೋತ್ಪಲ ಸೌಗಂಧಿಕಾದಿಗಳಿಂದಲೂ ನಿರ್ಮಲೋದಕಗಳಿಂದಲೂ ಮರಕತಶಿಲೆಗಳ ಸೋಪಾನಗಳಿಂದಲೂ ಹಂಸಕಾರಂಡ ಚಕ್ರವಾಕ ಕ್ರೌಂಚಾದಿ ಜಲ ಪಕ್ಷಿಜಾತಗಳಿಂದಲೂ ಕೂಡಿ ಶೋಭಾಯಮಾನಗಳಾದ ಸರಸ್ಸುಗಳಿಂದ ರಾಜಿಸುತ್ತಿರುವುದಾಗಿಯೂ ಶೈತ್ಯಸೌರಭ್ಯಮಾಂದ್ಯಯುಕ್ತವಾಗಿ ಬೀಸುತ್ತಿರುವ ವಾಯುವಿನಿಂದಲೂ ಮಕರಂದರಸಪಾನವನ್ನು ಮಾಡಿ ಮದಿಸಿರುವ ಭ್ರಮರಗಳ ಝೇಂಕಾರಗಳಿಂದಲೂ ಕೂಡಿ ಮನೋಹರತ್ವವುಳ್ಳುದಾಗಿಯೂ ಹುಲ್ಲೆ ಎರಳೆ ಕಸ್ತೂರಿ ಚಮರಿ ಇವೇ ಮೊದಲಾದ ಮೃಗಗಳಿಂದಲೂ ವಿಚಿತ್ರ ರತ್ನ ನಿರ್ಮಿತಗಳಾದ ಕ್ರೀಡಾಪರ್ವತಗಳಿಂದಲೂ ಕೂಡಿ ಅತಿ ರಮಣೀಯತೆಯುಳ್ಳುದಾಗಿಯೂ ಶೋಭಿಸುತ್ತಿದ್ದಿತು. ಆಂಜನೇಯನು ಇಂಥ ಉದ್ಯಾನವನವನ್ನು ನೋಡಿ ಆಶ್ಚರ್ಯವುಳ್ಳವನಾಗಿ ಆ ಮೇಲೆ ಭೂಮಂಡಲದಲ್ಲಿರುವ ಸಕಲಪರ್ವತಗಳೂ ಸಮವಲ್ಲವೆಂದು ಪರಮೇಶ್ವರನಿಗೆ ಆವಾಸಸ್ಥಾನವಾದ ರಜತಾದ್ರಿಯೋಪಾದಿಯಲ್ಲಿ ಬೆರತುನಿಂತಿದೆಯೋ ಎಂಬಂತೆ ಅತ್ಯುನ್ನತವಾಗಿರುವ ತ್ರಿಕೂಟಾಚಲದ ಮೇಲುಗಡೆಯಲ್ಲಿ ನವರತ್ನಯುಕ್ತವಾದ ಜೀವರತ್ನಗಳಿಂದ ನಿರ್ಮಿತವಾಗಿ ಮೇಘಮಂಡಲವನ್ನು ಆಕ್ರಮಿಸಿಕೊಂಡಿರುವ ಕೋಟೆಗಳಿಂದಲೂ ಕನಕಮಯಗಳಾಗಿ ಸೂರ್ಯಮಂಡಲವನ್ನು ಭೇದಿಸಿಕೊಂಡು ಹೋಗಿರುವ ಕೊತ್ತಲುಗಳಿಂದಲೂ ಚಂದ್ರಮಂಡಲವನ್ನು ಆಕ್ರಮಿಸಿಕೊಂಡಿರುವ ಪಚ್ಚೆಯ ಅಳ್ವೇರಿಗಳಿಂದಲೂ ಥಳಥಳಾಯಮಾನವಾಗಿ ಮೇರುಶಿಖರಗಳ ಹಾಗೆ ಪ್ರಕಾಶಿಸುತ್ತಿರುವ ರತ್ನಕಲಶಗಳಿಂದಲೂ ಪರಿಶೋಭಿಸುತ್ತ ಅಮರಾವತಿಯನ್ನು ಜರಿಯುವಂತಿರುವ ಲಂಕಾಪಟ್ಟಣವನ್ನು ನೋಡಿ ಕಣ್ಣಿಟ್ಟೀ

ಕ್ಷಿಸಲಾರಗೆ ಒಂದು ಕ್ಷಣಮಾತ್ರ ಮನಸ್ಸಿನಲ್ಲಿ ರಾಮನ ಪಾದಗಳನ್ನು ನೆನೆಯುತ್ತ ಕಣ್ಮುಚ್ಚಿಕೊಂಡಿದ್ದು ಅನಂತರದಲ್ಲಿ ಆ ನಗರದ ದ್ವಾರಸಮೀಪಕ್ಕೆ ಬಂದನು.

ಆ ದ್ವಾರಪ್ರದೇಶವು ಹೇಗಿತ್ತೆಂದರೆ—ಸಾಲುಮುತ್ತಿನ ಗೊಂಚಲುಗಳಿಂದ ಕಟ್ಟಲ್ಪಟ್ಟಿರುವ ತೋರಣಗಳಿಂದಲೂ ರತ್ನಖಚಿತಗಳಾದ ವಜ್ರದ ಕವಾಟಗಳಿಂದಲೂ ವಜ್ರಸ್ತಂಭಗಳಿಂದಲೂ ನವರತ್ನಶಿಲಾನಿರ್ಮಿತವಾದ ಗೋಡೆಗಳಿಂದಲೂ ಕರ್ಪೂರದ ದೀವಿಗೆಗಳಿಂದಲೂ ಬಲವಾಗಿ ನೆಡಲ್ಪಟ್ಟಿರುವ ಧ್ವಜಪತಾಕೆಗಳಿಂದಲೂ ಶೋಭಿಸುತ್ತಿದ್ದಿತು. ಮತ್ತು ಆ ದ್ವಾರದಲ್ಲಿ ಹುಲಿಮೊಗದ ರಕ್ಕಸರೂ ಜ್ಯೋತಿರ್ಮುಖದ ನಿಶಾಚರರೂ ಬ್ರಹ್ಮರಾಕ್ಷಸರೂ ಪಿಶಾಚಿಗಳೂ ಆರ್ಭಟಿಸುತ್ತ ಅತಿ ಭಯಂಕರವಾದ ಆಯುಧಗಳನ್ನು ಧರಿಸಿ ಎಡೆಬಿಡದೆ ಕಾದುಕೊಂಡಿದ್ದರು. ಆಂಜನೇಯನು ಅಂಥ ದ್ವಾರಪ್ರದೇಶವನ್ನು ನೋಡಿ ಆಶ್ಚರ್ಯಪಟ್ಟವನಾಗಿ ತಾನು ಕಾಮರೂಪಿಯಾದುದರಿಂದ ಶರೀರಸೂಕ್ಷ್ಮತೆಯನ್ನು ಹೊಂದಿ ಕಳ್ಳಗಂಡಿಯಿಂದ ತೂರಿ ಒಳಹೊಕ್ಕು ನೋಡಲು; ಅಲ್ಲಿ ಒಂದು ನೊಣವನ್ನಾದರೂ ಒಳಗೆ ಹೋಗಬಿಡದೆ ಎಚ್ಚರಿಕೆಯಿಂದ ಕಾಯ್ದುಕೊಂಡಿರುವ ಲಂಕಿಣಿಯೆಂಬ ಮಹಾ ರಾಕ್ಷಸಿಯನ್ನು ಯುದ್ಧದಲ್ಲಿ ಕೊಂದು ಯಮಾಲಯಕ್ಕೆ ಕಳುಹಿಸಿ ಮುಂದಕ್ಕೆ ಹೋಗಿ ರಾತ್ರಿಯಾದ ಮೇಲೆ ಆನೆ ಕುದುರೆಗಳ ಲಾಯಗಳಲ್ಲೂ ದೇವಾಲಯ ಮಂಟಪಗಳೇ ಮೊದಲಾದ ಸ್ಥಳಗಳಲ್ಲೂ ಅಂಗಡಿಬೀದಿಗಳಲ್ಲೂ ಹೂವಾಡಿಗರ ಕೇರಿಗಳಲ್ಲೂ ಅನೇಕ ರಾಕ್ಷಸರ ಮನೆಗಳಲ್ಲೂ ರಾವಣನ ಮುಖ್ಯಮಂತ್ರಿಯಾದ ಪ್ರಹಸ್ತನೆಂಬವನ ಮನೆಯಲ್ಲೂ ಕಿವಿ ಮೂಗುಗಳಿಲ್ಲದೆ ವಿಕಾರರೂಪಿಣಿಯಾಗಿರುವ ಶೂರ್ಪನಖಿಯೆಂಬ ರಾವಣನ ತಂಗಿಯ ಮನೆಯಲ್ಲೂ ಸೀತೆಯನ್ನು ಹುಡುಕಿ ಕಾಣದೆ ಅಲ್ಲಿಂದ ಮುಂದಕ್ಕೆ ಹೊರಟು ನೋಡಲು; ವಿವಿಧವಾದ ಚಿತ್ರಮಂಟಪಗಳಿಂದಲೂ ವಿಚಿತ್ರತರವಾದ ಸೀರಾಜಿಯ ಮೇಲುಕಟ್ಟುಗಳಿಂದಲೂ ಗಗನವನ್ನು ಮುಟ್ಟುತ್ತಿರುವ ಪತಾಕೆಗಳಿಂದಲೂ ಶೋಭಿಸುತ್ತ ಇಂದ್ರಪುಷ್ಪಕದಂತಿರುವ ಕುಂಭಕರ್ಣನ ಮನೆಯನ್ನು ಹೊಕ್ಕು ಅಲ್ಲಿ ಬಿದ್ದು ನಿದ್ರಿಸುತ್ತಿರುವ ಘೋರಾಕಾರಿಣಿಯರಾದ ರಾಕ್ಷಸಸ್ತ್ರೀಯರನ್ನು ನೋಡಿಕೊಂಡು ಪಾನಭೂಮಿಗಳಲ್ಲೂ ಪಾಕಶಾಲೆಗಳಲ್ಲೂ ಇನ್ನೂ ಇತರ ಸ್ಥಳಗಳಲ್ಲೂ ಹುಡುಕುತ್ತ ಬಂದು ಅಂತಃಪುರವನ್ನು ಪ್ರವೇಶಿಸಿ ಅಲ್ಲಿ ಪ್ರಚಂಡಮಾರುತದಿಂದ ತಂದು ಹಾಕಲ್ಪಟ್ಟ ನೀಲಗಿರೀಂದ್ರನೋ ಎಂಬ ಹಾಗೆ ಬಿದ್ದಿರುವ ಕುಂಭಕರ್ಣನೆಂಬ ರಾಕ್ಷಸಾಧಮನನ್ನು ನೋಡಿ—ಇವನು ಜಗತ್ತಿನ ಕೊಲೆಗೆಲಸವನ್ನು ಮಾಡಿ ಮುಗಿಸಿ ಬಳಲಿ ಬಿಗಿದ ಬಲುನಿದ್ದೆಯಿಂದ ಬಿದ್ದಿರುವ ಭೈರವನೋ? ಯಮನೋ? ಅಥವಾ ಸಮುದ್ರೋದಕವನ್ನೆಲ್ಲಾ ಕುಡಿದು ತೃಪ್ತನಾಗಿ ಬಿದ್ದಿರುವ ಬಡಬಾನಲನೋ? ಎಂದು ಬೆರಗಾಗಿ—ಈ ರಾಕ್ಷಸಮಾರಿಯೇನಾದರೂ ಲೋಕವನ್ನೆಲ್ಲಾ ನುಂಗಬೇಕೆಂದು ಎದ್ದು ನಿಂತರೆ ಹರಿಹರಬ್ರಹ್ಮೇಂದ್ರಾದಿದೇವತೆಗಳಲ್ಲೂ ನರಭುಜಂಗಮರಲ್ಲೂ ಬೇಕು ಬೇಡೆಂಬವರನ್ನು ಕಾಣೆನು ಎಂದು ಮನಸ್ಸಿನಲ್ಲಿ ಭಯಪಟ್ಟುಕೊಂಡು ಬರಬರುತ್ತ ಭೂಲೋಕವನ್ನೆಲ್ಲಾ ತೇಲಿಸಿ ಮುಳುಗಿಸುವ ಪ್ರಳಯಕಾಲಸಮುದ್ರದ ರಭಸದಂತೆಯೂ ಪಿನಾಕಿಯ ಡಮರುಗಧ್ವನಿಯಂತೆ

ಯೂ ಕರ್ಣಕಠೋರವಾಗಿ ಮೊರೆಯುತ್ತಿರುವ ಆತನ ಉಸಿರನ್ನು ಆಲಿಸಿ ಕಡೆಗೆ ಆ ಶ್ವಾಸಮಾರುತಕ್ಕೆ ಸಿಕ್ಕಿಕೊಂಡು ಉಸಿರನ್ನು ಎಳೆದಾಗ ಮೂಗಿನೊಳಗೆ ಹೋಗುತ್ತ ಬಿಟ್ಟಾಗ ಹೊರಗೆ ಬರುತ್ತ ಕೆಲವುಹೊತ್ತು ಉಸಿರನ್ನು ಬಿಡದಿರಲು ಹೊರಗೆ ಬರುವುದಕ್ಕೆ ಸಾಧ್ಯವಿಲ್ಲದೆ ಆಂಜನೇಯನು ದಿಗಿಲುಬಿದ್ದು ಕಡೆಗೆ ಅವನ ಮೂಗಿನ ರಂಧ್ರದಲ್ಲಿ ಗಿರಿಯಂತೆ ಬೆಳದು ಉಸಿರನ್ನು ತಡೆದು ನಿಲ್ಲಿಸಲು ; ಆಗ ರಕ್ಕಸನಿಗೆ ಉಬ್ಬಸವಾದುದರಿಂದ ಬರಸಿಡಿಲು ಸಿಡಿದಂತೆ ಹೆದ್ದನಿಯಿಂದ ಸೀತನು. ಕೂಡಲೆ ಆಂಜನೇಯನು ಉಲ್ಕಾಪಾತದಂತೆ ಸಿಡಿದು ಎದುರಿಗಿದ್ದ ವಜ್ರಸ್ತಂಭಕ್ಕೆ ಬಡಿದುದರಿಂದ ಬಹುಯಾತನೆಯನ್ನನುಭವಿಸಿ ಕೋಪಗೊಂಡು ಹಲ್ಲು ಕಡಿಯುತ್ತ ಇವನನ್ನು ಕೊಲ್ಲಬೇಕೆಂದು ನಿಶ್ಚಯಿಸಿ ಅಲ್ಲಿ ಇಟ್ಟಿದ್ದ ಶೂಲಾಯುಧವನ್ನು ತೆಗೆದುಕೊಂಡು ಕುಂಭಕರ್ಣನ ಎದೆಯನ್ನು ತಿವಿಯಲು ; ಆದರಿಂದ ಅವನಿಗೆ ಒಂದು ಸೊಣ ಕಡಿದಷ್ಟಾದರೂ ನೋವಾಗಲಿಲ್ಲ. ಆ ಮೇಲೆ ಆಂಜನೇಯನು ನಿದ್ರಿಸುವವರನ್ನು ಕೊಲ್ಲುವುದು ಶೂರರಿಗೆ ವಿಹಿತವಲ್ಲವೆಂದು ತನ್ನೊಳಗೆ ಯೋಚಿಸಿ ತಿಳಿದುಕೊಂಡು ಮುಂದೆ ಹೋಗಿ ಅವನ ಮನೆಯಲ್ಲೆಲ್ಲಾ ಹುಡುಕಿ ಸೀತೆಯನ್ನು ಕಾಣದೆ ಅಲ್ಲಿಂದ ಹೊರಟು—ಗರುಡಧ್ವಜದಿಂದಲೂ ರತ್ನಖಚಿತವಾದ ವಿಮಾನಗಳಿಂದಲೂ ಪಚ್ಚೆಯ ಕಲಶಗಳಿಂದಲೂ ಪ್ರಕಾಶಿಸುತ್ತಿರುವ ವಿಭೀಷಣನ ಮನೆಯನ್ನು ಹೊಕ್ಕು ಸೂಕ್ಷ್ಮರೂಪವನ್ನು ಧರಿಸಿ ಹುಡುಕುತ್ತಿರಲಾಗಿ—ಎಲೈ ವಾನರಾಧೀಶ್ವರನೇ, ಸೀತೆಯನ್ನು ಹುಡುಕುವ ಸ್ಥಳವು ಇದಲ್ಲವೆಂದು ಅಶರೀರವಾಣಿಯುಂಟಾಗಲು ; ಆಂಜನೇಯನು ಆ ಧ್ವನಿಯನ್ನು ಕೇಳಿ ಅಲ್ಲಿಂದ ಮುಂದಕ್ಕೆ ಹೊರಟು ನವರತ್ನಗಳಿಂದ ಕೆತ್ತಲ್ಪಟ್ಟಿರುವ ಕೋಟೆಗಳ ಸಾಲುಗಳಿಂದಲೂ ಕನಕನಿರ್ಮಿತವಾದ ಕೊತ್ತಲುಗಳಿಂದಲೂ ಸುವರ್ಣಕಲಶಗಳಿಂದಲೂ ಬಾಲಾರ್ಕಕೋಟಿ ತೇಜೋವಿರಾಜಮಾನಗಳಾದ ದ್ವಾರಬಂಧಗಳಿಂದಲೂ ರಂಜಿಸುತ್ತಿರುವ ರಾಕ್ಷಸ ರಾಜನಾದ ರಾವಣನ ಅರಮನೆಯನ್ನು ಹೊಕ್ಕು ಸ್ವರ್ಗದ ಅರಮನೆಯನ್ನು ತಿರಸ್ಕರಿಸ ತ್ತಿರುವ ಆತನ ಸಭಾಸ್ಥಾನಕ್ಕೆ ಬಂದನು.

ಆ ಸಭಾಮಂದಿರವು ಸುವರ್ಣದಿಂದ ನಿರ್ಮಿಸಲ್ಪಟ್ಟು ನವರತ್ನಗಳ ತೋರಣಗಳಿಂದಲೂ ಮೇಲುಕಟ್ಟುಗಳಿಂದಲೂ ಶೋಭಿಸುತ್ತಿದ್ದಿತು. ಒಂದು ಕಡೆಯಲ್ಲಿ ಭೇರಿ ಮೃದಂಗ ಡಂಕ ನಗಾರಿ ರಣಮೌರಿ ಇವೇ ಮೊದಲಾದ ವಾದ್ಯಗಳು ಭೋರ್ಗರೆಯುತ್ತಿದ್ದುವು. ಇನ್ನೊಂದು ಕಡೆಯಲ್ಲಿ ಗಂಧರ್ವರು ದಿವ್ಯಾಸ್ತರಣಗಳ ಮೇಲೆ ಕುಳಿತು ಮುತ್ತಿನ ದಿಂಬುಗಳನ್ನು ಒರಗಿಕೊಂಡು ವೀಣೆ ತಂಬೂರಿ ಸಾರಂಗ ಇವು ಮೊದಲಾದ ವಾದ್ಯಗಳನ್ನು ಬಾರಿಸುತ್ತ ಗಾನಮಾಡುತ್ತಿದ್ದರು ಮತ್ತೊಂದು ಕಡೆಯಲ್ಲಿ ಬಡನಡು ಬಳುಕುತ್ತಿರಲು ಹುಬ್ಬುಗಳನ್ನು ಹಾರಿಸುತ್ತ ಝುಂತಾರಿಯ ಸೀರೆಗಳನ್ನುಟ್ಟು ರತ್ನಕಟಕಾದ್ಯನೇಕಾಭರಣಗಳನ್ನು ಧರಿಸಿಕೊಂಡು ವಾರವಿಲಾಸಿನೀಜನರು ನರ್ತಿಸುತ್ತಿದ್ದರು ಮತ್ತು ಅಲ್ಲಿ ವಿಶ್ವಕರ್ಮನೇ ಬಡಗಿಯು. ಕುಬೇರನೇ ಬೊಕ್ಕಸದವನು. ಬೃಹಸ್ಪತಿಯೇ ಜೋಯಿಸನು. ಇಂದ್ರಾದಿದೇವತೆಗಳೇ ಸೇವಕರು. ಮತ್ತು ಅಗಿಲು ಚಂದನ ಪುಣುಗು ಕಸ್ತೂರಿ ಇವು ಮೊದಲಾದ ಪರಿಮಳದ್ರವ್ಯಗಳು

ಮಘಮಘಿಸುತ್ತಿರುವುವು. ಆಂಜನೇಯನು ಇಂಥ ಸಭಾಸ್ಥಾನದಲ್ಲಿ ಸುತ್ತಲೂ ನೋಡಿ ಅಲ್ಲಿಂದ ಅಂತಃಪುರಕ್ಕೆ ಹೋಗಲು; ಅದರ ಬಾಗಿಲಲ್ಲಿ ಹುಲಿ ಕರಡಿ ಸಿವಂಗಿ ಸಿಂಗಗಳೇ ಮೊದಲಾದ ಕ್ರೂರಮೃಗಗಳ ಮುಖಗಳಂತೆ ಮುಖಗಳುಳ್ಳ ಅನೇಕ ರಾಕ್ಷಸರು ವಿವಿಧಾಯುಧಗಳನ್ನು ಹಿಡಿದು ಕಾದುಕೊಂಡಿದ್ದರು. ಅಲ್ಲಿ ಲಕ್ಷಾಂತರ ಜನ ಸ್ತ್ರೀಯರು ಸಾಲುಮಂಚಗಳ ಮೇಲೆ ಹೊಳೆಹೊಳೆವ ಕಿರುದಾಡೆಗಳಿಂದಲೂ ಥಳಥಳಿಸುವ ದೀರ್ಘನಯನಗಳಿಂದಲೂ ನಿಡುದೋಳುಗಳಿಂದಲೂ ಒಪ್ಪುತ್ತಿದ್ದರು. ಮತ್ತೊಂದು ಕಡೆಯಲ್ಲಿ ಸಿಶಿತವಾದ ಕೋರೆಹಲ್ಲುಗಳಿಂದಲೂ ಹುರಿಯಾದ ಹುಬ್ಬುಗಳಿಂದಲೂ ಕ್ರೂರವಾದ ಶರೀರಲಕ್ಷಣಗಳಿಂದಲೂ ಅತಿ ಭಯಂಕರಾಕಾರಿಣಿಯರಾದ ರಾಕ್ಷಸಸ್ತ್ರೀಯರು ಮಲಗಿ ನಿದ್ರಿಸುತ್ತಿದ್ದರು. ಇಂಥ ಹೆಂಗಸರ ಗುಂಪಿನ ಮಧ್ಯದಲ್ಲಿ ಸೌಂದರ್ಯಾತಿಶಯದಿಂದ ರಂಜಿಸುತ್ತಿರುವ ಮಂಡೋದರಿಯೊಡನೆ ನೀರ್ದುಂಬಿದ ಮೇಘಕಾಂತಿಯಂತೆ ಶೋಭಿಸುತ್ತಿರುವ ಶರೀರಕಾಂತಿಯಿಂದಲೂ ನಗೆಮೊಗದಿಂದಲೂ ಥಳಥಳಿಸುತ್ತಿರುವ ಕುಂಡಲಗಳಿಂದಲೂ ಭೂರಿಭುಜದಂಡಗಳಿಂದಲೂ ಕೂಡಿದ ರಾಕ್ಷಸಾಧಿಪನಾದ ರಾವಣನು ಮಲಗಿ ನಿದ್ರಿಸುತ್ತಿದ್ದನು. ಆಗ ಆಂಜನೇಯನು—ಹೊಳೆಹೊಳೆವ ಕಮಲನೇತ್ರಗಳಿಂದಲೂ ಸಂಪಿಗೆಯ ಹೂವಿನಂತಿರುವ ಮೂಗಿನಿಂದಲೂ ಹವಳದಂತೆ ಕೆಂಪಾಗಿರುವ ತುಟಿಗಳಿಂದಲೂ ಮುತ್ತುಗಳಂತಿರುವ ಹಲ್ಲುಗಳಿಂದಲೂ ಸಿಂಹದ ನಡುವಿನಂತೆ ಸೂಕ್ಷ್ಮವಾದ ನಡುವಿನಿಂದಲೂ ಆನೆಯ ಹಾಗಿರುವ ಪಾದಗಳಿಂದಲೂ ಪ್ರಕಾಶಿಸುತ್ತ ಮುತ್ತಿನ ಸೆರಗುಳ್ಳ ಝುತರ್ಾರಿಯ ಸೀರೆಯನ್ನುಟ್ಟು ಸೀರಾಜಿಯ ಕುಪ್ಪಸವನ್ನು ತೊಟ್ಟುಕೊಂಡು ನೋಡುವವರಿಗೆ ರತಿದೇವಿಯೋ ಎಂಬ ಭ್ರಾಂತಿಯನ್ನು ಹುಟ್ಟಿಸುತ್ತ ನಿದ್ರಿಸುತ್ತಿರುವ ಮಂಡೋದರಿಯನ್ನು ಕಂಡು ಮನಸ್ಸಿನಲ್ಲಿ ಇವಳೇ ಸೀತೆಯೆಂದು ಸಂಶಯಪಟ್ಟು ಕಳವಳಿಸಿ ತಾಪಗೊಂಡು ನಿಜಾಂಶವನ್ನು ತಿಳಿಯಲಾರದೆ ಒಂದು ಗಳಿಗೆಯ ಪರ್ಯಂತರವೂ ಸ್ತಬ್ಧನಾಗಿದ್ದು ಆ ಮೇಲೆ ಕೋಪವುಳ್ಳವನಾದರೂ ಜ್ಞಾನವನ್ನು ತಂದುಕೊಂಡು ನನ್ನೊಡೆಯನು ಹೇಳಿದ ಕೆಲವು ಗುರುತುಗಳು ಈ ಸ್ತ್ರೀಯಲ್ಲಿವೆ. ಇನ್ನು ಕೆಲವು ಅಡಕವಾಗಿವೆ. ಏನು ಮಾಡಲಿ? ಎಂದು ಮನಸ್ಸಿನಲ್ಲಿ ಯೋಚಿಸುತ್ತ ಸಮಾಧಾನವನ್ನು ತಂದುಕೊಂಡು ಚೆನ್ನಾಗಿ ಪರೀಕ್ಷಿಸಿ ನೋಡಬೇಕೆಂದು ನಿಶ್ಚಯಿಸಿ ಅಣುಮಾತ್ರವಿರುವ ದೀವಿಗೆಯ ಬೆಳಕನ್ನು ತೆಗೆದುಕೊಂಡು ಮಂಡೋದರಿಯ ಸರ್ವಾಂಗವನ್ನೂ ನೋಡಿ ರಾಮನು ಹೇಳಿದ ಗುರುತುಗಳನ್ನೆಲ್ಲಾ ಕಂಡು ಕಾಲಿನಲ್ಲಿ ಮಾತ್ರ ಕಾಕರೇಖೆಯಿರಲು; ಇದು ವೈಧವ್ಯಲಕ್ಷಣವೆಂದು ತಿಳಿದು ಅರ್ಧಸಂಶಯವನ್ನು ಬಿಟ್ಟು ನವವ್ಯಾಕರಣಪಂಡಿತನಾದ ಆಂಜನೇಯನು ಅವಳ ಮುಖದಲ್ಲಿ ಸುಧಾಂಶುರೇಖೆಯಿಲ್ಲದಿರುವುದನ್ನು ಕಂಡು ಇವಳು ಸೀತೆಯಲ್ಲವೆಂದು ತಿಳಿದು ಅಲ್ಲಿ ಸ್ವಲ್ಪಸ್ಥಳವನ್ನೂ ಬಿಡದೆ ಚೆನ್ನಾಗಿ ಹುಡುಕಿ ಸೀತೆಯನ್ನು ಕಾಣದೆ ಹೊರಗೆ ಬಂದು ಕುಬೇರನ ಪುಷ್ಪಕದಲ್ಲಿ ನೋಡಿ ಅಲ್ಲಿಯೂ ಸೀತೆಯಿಲ್ಲದುದರಿಂದ ಚಿಂತೆಯನ್ನು ಹೊಂದಿ ಕಂದಿದ ಮುಖವುಳ್ಳವನಾಗಿ ಕಣ್ಣೀರನ್ನು ಸುರಿಸುತ್ತ—ಸೀತೆಯು ಏನಾದಳೋ ಹಾ! ಎಂದು ಹಂಬಲಿಸಿ ಹಲುಬುತ್ತ ಅಲ್ಲಿಂದ ಹೊರಟು ಹುಡುಕುತ್ತ ಬರುತ್ತಿರಲು;

ಆ ಪುರದ ಮಧ್ಯದಲ್ಲಿ ನಾನಾವಿಧವಾದ ಪತಾಕೆಗಳಿಂದಲೂ ಸುರುಚಿರಕಲಶಾಳಿಗಳಿಂದಲೂ ಕೂಡಿ ಹದಿನಾರು ಯೋಜನವುಳ್ಳದಾಗಿ ಶೋಭಿಸುತ್ತ ಮೇರುಶಿಖರದಂತಿರುವ ಉಪ್ಪರಿಗೆಯನ್ನು ಕಂಡು ಬೆರಗಾಗಿ ಉದಯಾಚಲವನ್ನೇರುವ ಸೂರ್ಯನಂತೆ ಅದರ ಮೇಲೆ ಹಾರಿ ಕುಳಿತುಕೊಂಡು ಎಲ್ಲಿ ನೋಡಿದರೂ ಸೀತೆಯು ಸಿಕ್ಕಲಿಲ್ಲವಲ್ಲಾ ಎಂದು ಯೋಚಿಸುತ್ತ—ಘೋರಕರ್ಮಿಯಾದ ರಕ್ಕಸನು ಸೀತೆಯನ್ನು ಏನು ಮಾಡಿದನೋ? ನಾನು ಬ್ರಹ್ಮನಂದನನಿಗೂ ರವಿನಂದನನಿಗೂ ರಘುನಂದನನಿಗೂ ಏನು ಹೇಳಲಿ? ಎಲ್ಲರೂ ನನ್ನ ಬರುವಿಕೆಯನ್ನೇ ನಿರೀಕ್ಷಿಸಿಕೊಂಡಿದ್ದಾರಲ್ಲಾ! ನಾನು ಹೋಗಿ ಸೀತೆಯು ಸಿಕ್ಕಲಿಲ್ಲವೆಂದು ಹೇಳಿದ ಕೂಡಲೆ ರಾಮನು ಪ್ರಾಣಬಿಡುವನು. ಅಗ್ರಜಮೃತಿವ್ಯಸನದಿಂದ ಲಕ್ಷ್ಮಣನೂ ಆತನ ಗತಿಯನ್ನೇ ಹೊಂದುವನು. ಅವರಿಬ್ಬರೂ ಸತ್ತ ಮೇಲೆ ಮಹಾವ್ಯಸನವನ್ನು ಸಹಿಸಲಾರದೆ ಸುಗ್ರೀವನೂ ಸಾಯುವನು. ಈತನ ಮರಣವಾರ್ತೆಯನ್ನು ಕೇಳಿದರೆ ಆತನ ಪತ್ನಿಯರೂ ಆತನ ಮಾರ್ಗವನ್ನೇ ಹಿಡಿಯುವರು. ಈ ಕಾರಣದಿಂದ ಅಂಗದನೂ ಪ್ರಾಣಗಳನ್ನು ತೊರೆದುಕೊಳ್ಳುವನು. ಈ ಸಂಗತಿಯನ್ನು ಭರತಶತ್ರುಘ್ನರು ಕೇಳಿದರೆ ಆ ಕ್ಷಣದಲ್ಲಿಯೇ ಅಸುವನ್ನು ನೀಗುವರು. ತದನಂತರದಲ್ಲಿ ಕೌಸಲ್ಯಾ ಕೈಕೇಯಿಾ ಸುಮಿತ್ರೆಯರು ಜೀವವನ್ನು ಕಳಕೊಳ್ಳುವರು. ಇಂಥವರೆಲ್ಲರೂ ಸತ್ತುಹೋದ ಮೇಲೆ ನಾವಿದ್ದು ಫಲವೇನೆಂದು ಸಾಕೇತನಗರದ ಪ್ರಧಾನಿಗಳೂ ಪುರನಿವಾಸಿಗಳೂ ಮರಣವನ್ನು ಹೊಂದುವರು. ಈ ಮಹಾ ವಿಪತ್ತಿಗೆ ಏನು ಮಾಡಬೇಕು? ನನ್ನೊಬ್ಬನಿಂದ ಇಷ್ಟು ಪ್ರಳಯವಾಗುವುದಲ್ಲಾ! ಇಂಥ ಭಯಂಕರಕೃತ್ಯಗಳನ್ನು ನೋಡುವುದಕ್ಕಿಂತ ಮೊದಲು ನಾನೇ ಜೀವಹತ್ಯವನ್ನು ಮಾಡಿಕೊಳ್ಳುವುದು ಉತ್ತಮವೆಂದು ಯೋಚಿಸಿ ಪುನಃ ಧೈರ್ಯವನ್ನು ತಂದುಕೊಂಡು—ನಾನು ಇಷ್ಟುಮಾತ್ರಕ್ಕೇ ಪ್ರಾಣಗಳನ್ನು ತೊರೆದುಕೊಳ್ಳುವುದರಿಂದ ಸ್ವಾಮಿಕಾರ್ಯವನ್ನು ನಿರ್ವಂಚನೆಯಿಂದ ಮಾಡಿದಂತಾಗುವುದಿಲ್ಲ. ಈಗ ನಾನು ಯಮನ ಪಟ್ಟಣಕ್ಕೆ ಹೋಗಿ ಆ ಯಮನನ್ನೇ ಹಿಡಿದು ಶಿಕ್ಷಿಸಿದರೆ ಆತನಾದರೂ ಸೀತೆಯನ್ನು ತೋರಿಸುವನು. ಹಾಗಿಲ್ಲದಿದ್ದರೆ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನನ್ನು ಹಿಡಿದು ಶಿಕ್ಷಿಸಿದರೆ ಆತನಾದರೂ ಸೀತೆಯನ್ನು ತೋರಿಸುವನು. ಅಥವಾ ಇಂದ್ರಾದಿ ದೇವತೆಗಳನ್ನು ಹಿಂಗಟ್ಟು ಕಟ್ಟಿ ಕೆನ್ನೆಗೆ ಹೊಡೆದು ಕೇಳಿದರೆ ಅವರಾದರೂ ತೋರಿಸುವರು. ಕಡೆಗೆ ಯಾರೂ ತೋರಿಸದೆಹೋದ ಪಕ್ಷದಲ್ಲಿ ಈ ಲಂಕಾದುರ್ಗವನ್ನೇ ನನ್ನ ಬಾಲದಿಂದ ಸುತ್ತಿ ಕಿತ್ತೆತ್ತಿಕೊಂಡು ಹೋಗಿ ರಾಮನ ಬಳಿಯಲ್ಲಿರಿಸಿಬಿಡುವೆನು. ಆ ಮೇಲೆ ಆತನೇ ಸೀತೆಯನ್ನು ಹುಡುಕಿಕೊಳ್ಳಲಿ ಎಂದು ಮನಸ್ಸಿನಲ್ಲಿ ನಿರ್ಧರಿಸಿ ಲಂಕಾಪಟ್ಟಣಸಮೇತವಾದ ತ್ರಿಕೂಟಾಚಲವನ್ನೇ ಕಿತ್ತುಕೊಂಡು ಹೋಗುವುದಕ್ಕೆ ಉದ್ಯುಕ್ತನಾಗಲು; ಆಗ ಅಶರೀರವಾಣಿಯು—ಎಲೈ ವಾನರಶ್ರೇಷ್ಠನೇ ನೀನು ಈ ಪರ್ವತವನ್ನು ಕೀಳಬೇಡ; ನಿನ್ನ ಮನೋರಥವು ಸಿದ್ಧಿಯಾಗುವುದು ಎಂದು ನುಡಿಯಲು; ಆಗ ಆಂಜನೇಯನು ಸಂತುಷ್ಟನಾಗಿ ಸುತ್ತಲೂ ನೋಡುತ್ತಿರುವಷ್ಟರಲ್ಲಿ ಸೀತೆಯನ್ನು ತೋರಿಸುವುದಕ್ಕಾಗಿ ಬಂದನೋ

ಎಂಬಂತೆ ಥಳಥಳಾಯಮಾನವಾಗಿ ಚಂದ್ರನು—ಉದಯಿಸಲು ; ಆ ಮೇಲೆ ಮಾರು ತಿಯು ಸುತ್ತಲೂ ದೃಷ್ಟಿಯಿಟ್ಟು ನೋಡಲು ; ಆಗ ಅಶೋಕವನವು ಪುಷ್ಪಫಲಭರಿತ ಗಳಾದ ವೃಕ್ಷಗಳಿಂದಲೂ ನಾನಾವಿಧ ಕುಸುಮರಂಜಿತವಾದ ಲತೆಗಳಿಂದಲೂ ಕಮಲ ಪುಂಜರಂಜಿತಗಳಾದ ಸರಸ್ಸುಗಳಿಂದಲೂ ಅತಿರಮ್ಯತೆಯನ್ನು ಹೊಂದಿ ಸ್ವರ್ಗಲೋಕದ ನಂದನವನದ ಸೊಬಗಿಗೆ ಇಮ್ಮಡಿಯಾಗಿ ಶೋಭಿಸುತ್ತಿದ್ದಿತು. ಅನಂತರದಲ್ಲಿ ಆಂಜ ನೇಯನು ಅತ್ಯಂತ ಸಂತೋಷವನ್ನು ಹೊಂದಿ ತಾನು ಕೂತಿದ್ದ ಸ್ಥಳದಿಂದ ಅಶೋಕ ವನಕ್ಕೆ ಹಾರಿ ಅದರ ಮಧ್ಯಪ್ರದೇಶದಲ್ಲಿ ಸುವರ್ಣದ ವೇದಿಕೆಗಳಿಂದ ಯುಕ್ತವಾಗಿ ಮೇರುಪರ್ವತದೋಪಾದಿಯಲ್ಲಿ ದಿವಾಕರಮಾರ್ಗವನ್ನು ಆಕ್ರಮಿಸಿಕೊಂಡು ವಿಸ್ತಾ ರವಾದ ಶಾಖೆಗಳಿಂದ ನಿಬಿಡಛಾಯೆಯುಳ್ಳುದಾಗಿ ಒಪ್ಪುತ್ತಿರುವ ಒಂದು ಶಿಂಶುಪ ವೃಕ್ಷವನ್ನು ಕಂಡು ಅಲ್ಲಿ ರಾಘವನ ಪ್ರಿಯಪತ್ನಿಯಾದ ಸೀತಾದೇವಿಯು ರಾಮನನ್ನು ಚಿಂತಿಸುತ್ತ ರೋದಿಸುತ್ತಿರುವ ಧ್ವನಿಯನ್ನು ಕೇಳಿ ಇದೇನಿರಬಹುದೆಂದು ಬಂದು ಆ ವೃಕ್ಷದ ಕೊಂಬೆಯನ್ನೇರಿ ಕುಳಿತುಕೊಂಡು ನೋಡಲು, ಅದರ ಬುಡದಲ್ಲಿ ಮಲಿನ ವಸ್ತ್ರವನ್ನುಟ್ಟು ಉಪವಾಸದಿಂದ ಕೃಶಾಂಗಿಯಾಗಿ ಹುಲಿಗಳ ಮಧ್ಯದಲ್ಲಿ ಸಿಕ್ಕಿರುವ ಹರಿಣಿಯಂತೆಯೂ ಓದದಲ್ಲಿ ಬಿದ್ದಿರುವ ಗಜಪೋತದಂತೆಯೂ ರಾಕ್ಷಸಸ್ತ್ರೀಯರ ಸೆರೆಯಲ್ಲಿ ಸಿಕ್ಕಿ ಸುವರ್ಣದ ವೇದಿಕೆಯ ಮೇಲಿರುವ ಸೀತಾದೇವಿಯನ್ನು ಕಂಡು ಕಣ್ಣೀರನ್ನು ತುಂಬಿ ಒಂದು ಮುಹೂರ್ತಮಾತ್ರ ಧ್ಯಾನಾಸಕ್ತನಾಗಿದ್ದು ಅನಂತ ರದಲ್ಲಿ ಸೀತೆಯನ್ನು ಕುರಿತು—ಎಲೈ ಜಾನಕಿಯೇ, ಕೇಳು. ಶ್ರೀರಾಮನು ಪ್ರಸ್ರ ವಣಗಿರಿಗೆ ಬಂದು ಸುಗ್ರೀವನೊಡನೆ ನಿನ್ನ ಚಿಂತೆಯಿಂದಲೇ ಇದ್ದಾನೆ. ಆತನು ಇಲ್ಲಿಗೆ ಬೇಗ ಬಂದು ರಾವಣನನ್ನು ಸಂಹರಿಸಿ ನಿನ್ನನ್ನು ಕರೆದುಕೊಂಡು ಹೋಗುವನು. ಈಗ ಲಂಕಾಪಟ್ಟಣವನ್ನು ನೋಡಿಬರುವಂತೆ ನನ್ನನ್ನು ಮಾತ್ರ ಕಳುಹಿಸಿದನು ಎಂದು ಹೇಳಲು ; ಸೀತೆಯು ಆ ಮಾತುಗಳನ್ನು ಕೇಳಿದರೂ ಭಯದಿಂದ ಮಾತಾಡದೆ ಸುಮ್ಮನೆ ಇರಲು ; ಆಗ ಆಂಜನೇಯನು ರಪ್ಪೆಯನ್ನು ಮುಚ್ಚದೆ ಸೀತಾದೇವಿಯನ್ನೇ ನೋಡುತ್ತಿದ್ದನು.

ಅಷ್ಟರಲ್ಲಿ ಬೆಳಗಿನ ಜಾವವಾಗಲು ; ದಶಕಂಠನು ಎಚ್ಚೆತ್ತು ತನ್ನ ಸ್ತ್ರೀಯರ ನ್ನೆಲಾ ಜತೆಯಲ್ಲಿ ಕರೆದುಕೊಂಡು ನಿಜಾಲಯದಿಂದ ಹೊರಡಲು ; ಕೂಡಲೆ ಅನೇಕ ಜನ ರಾಕ್ಷಸರು ಬೊಂಬಾಳಗಳನ್ನು ಹಿಡಿದುಕೊಂಡು ಮುಂದೆ ನಡೆದರು. ಆಗ ರಾವಣನು ಪುಷ್ಪಕವನ್ನೇರಿ ಬಂದು ಅಶೋಕವನಮಧ್ಯದಲ್ಲಿಳಿದು ಅತಿ ಶೀಘ್ರದಿಂದ ರಾಕ್ಷಸಿಯರು ತಂದಿಟ್ಟ ಮಣಿಪೀಠದ ಮೇಲೆ ಲೋಕಸುಂದರಿಯಾದ ಮಂಡೋದರಿ ಯೊಡನೆ ಕುಳಿತುಕೊಳ್ಳಲು ; ಸೀತಾದೇವಿಯು ತಲೆಯನ್ನು ಬೊಗ್ಗಿಸಿ ಕಣ್ಣುಗಳನ್ನು ಮುಚ್ಚಿಕೊಂಡು ಹೇಮಲತೆಯಂತಿರುವ ತನ್ನ ಶರೀರವನ್ನು ತನ್ನ ತಲೆಗೂದಲಿಂದ ಮುಚ್ಚಿಕೊಂಡು ಭೂಮಿಯನ್ನೇ ನೋಡುತ್ತ ಮನಸ್ಸಿನಲ್ಲಿ ಶ್ರೀರಾಮಚಂದ್ರನ ಪಾದ ಗಳನ್ನೇ ಧ್ಯಾನಿಸುತ್ತಿದ್ದಳು. ಆಗ ಶ್ಮಶಾನದಲ್ಲಿ ತಂದಿಟ್ಟ ದೇವತಾ ಪ್ರತಿಮೆಯಂತಿ ರುವ ಸೀತೆಯ ಬಳಿಗೆ ದುಷ್ಟನಾದ ರಾವಣನು ತನ್ನ ದೂತಿಯರನ್ನು ಕಳುಹಿಸಲು ;

ಅವರು ಬಂದು ಸೀತೆಯ ಮುಂದೆ ನಿಂತುಕೊಂಡು ಹಿತವಚನಗಳನ್ನಾಡಿ ಪರಿಮಳ ತೈಲವನ್ನು ತಂದು ಹೊಳೆಯುತ್ತಿರುವ ಶುದ್ಧವಸ್ತ್ರಗಳನ್ನು ನೆರಿಹಿಡಿದಿಟ್ಟು ಚಿನ್ನದ ಗುಡಾಣಗಳಲ್ಲಿ ಬಿಸಿನೀರನ್ನು ತಂದಿರಿಸಿ ದಿವ್ಯಸುಗಂಧದ್ರವ್ಯಗಳನ್ನರೆದಿಟ್ಟು ಸೀತೆಯನ್ನು ನೋಡಿ—ಎಲೈ ಸೀತೆಯೇ, ನೀನು ಮೂರು ಲೋಕಗಳಿಗೂ ಗಂಡನಾದ ರಾವಣನ ಮಾತುಗಳನ್ನು ಮೀರಬಹುದೇ? ದೇವತಾಸ್ತ್ರೀಯರು ಶತಜನ್ಮಗಳಲ್ಲಿ ಸದ್ವ್ರತಗಳನ್ನು ಮಾಡಿ ಈ ರಾವಣನನ್ನು ವರಿಸುತ್ತಿರುವರಲ್ಲಾ! ಮೂರು ಲೋಕಗಳಲ್ಲಿಯೂ ಈ ರಾವಣನಿಗೆ ಸಮಾನರಾದ ಪುರುಷಶ್ರೇಷ್ಠರುಂಟೇ? ಹದಿನಾಲ್ಕು ಲೋಕಗಳ ಒಡೆತನವು ಈತನ ವಶದಲ್ಲಿದೆ. ನೀನು ಇಂಥ ಮಹಾತ್ಮನಾದ ರಾವಣನನ್ನು ಅನುಭವಿಸದೆ ಇರಬಹುದೇ? ದೇವಿಯೇ ಎಂದು ಮಾತನಾಡಿಸುತ್ತಿರುವ ರಾಕ್ಷಸಿಯರ ಮಾತಿಗೆ ಕಿವಿಗೊಡದೆ ಸೀತೆಯು ಒಬ್ಬರನ್ನೂ ಕಣ್ಣೆನಿಂದ ನೋಡದೆ ಹೃದಯದಲ್ಲಿ ರಾಮನನ್ನೇ ಧ್ಯಾನಿಸುತ್ತ ಸುಮ್ಮನಿರಲು; ರಾವಣನು ತ್ರಿಜಟೆಯನ್ನು ಕರೆದು—ಎಲೈ ತ್ರಿಜಟೆಯೇ ಸೀತೆಯ ಮನಸ್ಸಿನ ನಿಶ್ಚಯವು ಹೇಗಿರುವುದು? ನರರಾಜರನ್ನು ಮರೆತು ಬಿಟ್ಟಳೋ ಏನು? ಎಂದು ಕೇಳಲು; ಆಗ ತ್ರಿಜಟೆಯು ರಾವಣನ ಕಿವಿಯಲ್ಲಿ—ಎಲೈ ರಾಜೇಂದ್ರನೇ, ಕೇಳು. ನಾನು ಜಾನಕಿಯ ಮನೋನಿಶ್ಚಯವನ್ನು ಕುರಿತು ಏನೂ ಹೇಳಲಾರೆನು. ಈ ಸೀತೆಯು ಜಗತ್ತಿನಲ್ಲಿರುವ ಪತಿಭಕ್ತೆಯರಿಗೆಲ್ಲಾ ತಾಯಿಯು. ಲೋಕದ ಪತಿವ್ರತಾ ಜನರಿಗೆಲ್ಲಾ ಗುರುಪ್ರಾಯಳು. ನಾನು ಲೋಕದಲ್ಲಿ ಬಹುಜನರನ್ನು ನೋಡಿದ್ದೇನೆ. ಧ್ರುವ ವಶಿಷ್ಠ ಅತ್ರಿ ಗೌತಮ ಇವರು ಮೊದಲಾದ ಮುನೀಂದ್ರರ ಪತ್ನಿಯರು ಯಾವ ಭಾಗದಲ್ಲೂ ಈ ಸೀತೆಯನ್ನು ಹೋಲಲಾರರು. ಈಕೆಯು ನಿರಂತರದಲ್ಲೂ ಭರ್ತೃಚಿಂತಾಪರಾಯಣಳಾಗಿರುವಳು. ನಾವು ನಮ್ಮ ಬುದ್ಧಿಗೆ ತೋರಿದ ಹಾಗೆಲ್ಲಾ ಹೇಳಿ ನೋಡಿ ಸಾಕಾದೆವು. ಬಹು ಪ್ರಕಾರವಾಗಿ ಬೆದರಿಸಿದೆವು. ಯಾವುದಕ್ಕೂ ಸಾಧ್ಯಳಾಗಳು. ಇನ್ನೂ ಬೇಕಾದರೆ ನೀನೇ ಹೋಗಿ ಮಾತಾಡಿಸಿ ನೋಡು ಎಂದು ಹೇಳಲು; ರಾವಣನು ಬಂದು—ಎಲೈ ಸೀತೆಯೇ, ಇನ್ನೆಷ್ಟು ದಿವಸಗಳ ವರೆಗೂ ಈ ವನದಲ್ಲಿರುತ್ತೀಯೆ? ನಿನ್ನ ಮನಸ್ಸು ಇನ್ನಾರಲ್ಲಿ ಅನುರಾಗವನ್ನು ಸಂಪಾದಿಸುವುದು? ಎಲೈ ಸೀತೆಯೇ, ನಿನಗೆ ಹುಚ್ಚು ಹಿಡಿದಿತು. ನಿನ್ನನ್ನು ಇಲ್ಲಿಂದ ಬಿಡಿಸಿಕೊಂಡು ಹೋಗಬೇಕಾದರೆ ಮುಕ್ಕಣ್ಣನಿಗಾದರೂ ಸಾಮರ್ಥ್ಯ ಸಾಲದು.

ಹರಿ ಹರ ಬ್ರಹ್ಮಾದಿಗಳನ್ನು ಒಕ್ಕಲಿಕ್ಕುವ ಸಾಮರ್ಥ್ಯವು ನನ್ನಲ್ಲಿದೆಯೋ ಇಲ್ಲವೋ ಚೆನ್ನಾಗಿ ಯೋಚಿಸಿ ನೋಡು. ಈ ಹದಿನಾಲ್ಕು ಲಕ್ಷ ಜನ ಸ್ತ್ರೀಯರ ಸಂಪತ್ತಿಗೆ ನೀನೇ ನಾಯಕಿಯಾಗಿ ಪಟ್ಟದರಸಿಯಾಗಿರು. ಇನ್ನು ಮೇಲಾದರೂ ಹೆಡ್ಡತನವನ್ನು ಬಿಟ್ಟು ಮನೆಗೆ ಬಾ! ದೇವತೆಗಳೆಲ್ಲಾ ನಿನಗೆ ಸೇವಕರಾಗುವರು. ದೇವಮುನಿಗಳಾದ ತುಂಬುರ ನಾರದಾದಿಗಳು ನಿನ್ನ ಗಾಯಕರಾಗುವರು. ದೇವತಾಸ್ತ್ರೀಯರು ನಿನಗೆ ದಾಸಿಯರಾಗುವರು. ಎಲೈ ಸೀತೆಯೇ, ತ್ರಿಲೋಕದಲ್ಲಿ ಯಾರೂ ನನಗೆ ಸರಿಯಿಲ್ಲ. ನಾನು ಚತುರ್ದಶಭುವನಗಳ ಒಡೆಯನೆಂಬುದನ್ನು ನೀನರಿಯೆಯಾ?

ನೀನು ಇಂಥಾ ಸೌಭಾಗ್ಯವನ್ನನುಭವಿಸದೆ ವ್ಯರ್ಥವಾಗಿ ಮನುಷ್ಯನನ್ನು ಧ್ಯಾನಿಸುವುದು ಯೋಗ್ಯವಲ್ಲ. ನರಾಧಮನನ್ನು ಪರಿಭಾವಿಸುವ ಮರುಳುತನವು ನಿನಗೆಲ್ಲಿಂದ ಬಂದಿತು ? ಈ ಅವಿವೇಕವನ್ನು ಬಿಡು ! ಅರಮನೆಗೆ ನಡೆ ! ನನಗೆ ಅರಸಿಯಾಗು ಎಂದು ಹೇಳಲು ; ಸೀತೆಯು ಮಹಾ ಕೋಪದಿಂದ ಕೂಡಿ ಕಣ್ಣುಗಳಿಂದ ಕಿಡಿಗಳನ್ನುಗುಳುತ್ತ ಕೈಯಲ್ಲಿ ಒಂದು ತೃಣವನ್ನು ಹಿಡಿದುಕೊಂಡು ಅದರ ಸಂಗಡ ಮಾತಾಡುವ ಹಾಗೆ—ಎಲೋ ಬಣಗು ರಕ್ಕಸನೇ, ಎಲೋ ದುಷ್ಟಚೋರನೇ, ಪಾಪಿಷ್ಠನಾದ ನಿನ್ನ ಐಶ್ವರ್ಯವನ್ನು ಸುಡಬೇಕು. ಎಲೋ ಹಂದಿಯೇ, ನಾಯಿಯೇ, ಬಹು ವಿಕಾರವಾದ ಮಾತುಗಳನ್ನಾಡಬೇಡ. ಶ್ರೀರಾಮನು ಬ್ರಹ್ಮೇಂದ್ರಾದಿಗಳಿಂದ ಪೂಜೆಯನ್ನು ತೆಗೆದುಕೊಳ್ಳುವಂಥ ಮಹಾತ್ಮನು. ನೀಚನಾದ ನೀನು ಯಾರಿಂದ ಪೂಜೆಯನ್ನು ಹೊಂದುವಿ ? ಎಲಾ ಪಾಪಕರ್ಮಿಯೇ, ಮೂರ್ಖಾಧಮನೇ, ಶ್ರೀರಾಮನನ್ನು ಸಾಮಾನ್ಯನೆಂದು ತಿಳಿದೆಯಾ ? ಪತಿವ್ರತೆಯರನ್ನು ಹಿಂಸೆಪಡಿಸುವುದರಿಂದುಂಟಾದ ಮಹಾಪಾಪವೆಂಬ ಸಮುದ್ರದಲ್ಲಿ ಮುಳುಗಿರುವ ನಿನ್ನ ಎದೆಯನ್ನಿರಿದು ಪ್ರಾಣಗಳನ್ನು ತೆಗೆದುಕೊಂಡು ಹೋಗುವ ಅಂತಕನಲ್ಲವೇ? ನೀನು ಈ ಮಾತನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಂಡಿರು. ನಿನ್ನ ಪತ್ನಿಯನ್ನು ಮತ್ತೊಬ್ಬನು ಅಪೇಕ್ಷಿಸಿದರೆ ನೀನು ಸುಮ್ಮನೆ ಇರುವಿಯಾ ? ನೀನು ನಿನ್ನ ಪತ್ನಿಯೊಡನೆ ಸುಖವಾಗಿ ಬದುಕಬೇಕೆಂಬ ಅಪೇಕ್ಷೆಯಿದ್ದರೆ ಈಗಲೇ ನನ್ನನ್ನು ಕರೆದುಕೊಂಡು ಹೋಗಿ ನನ್ನ ಪತಿಯಾದ ಶ್ರೀರಾಮನಿಗೆ ಒಪ್ಪಿಸಿ ಶರಣಾಗತನಾಗು. ಹಾಗೆ ಮಾಡದಿದ್ದರೆ ನೀಚನಾದ ನಿನ್ನೊಬ್ಬನ ಅಪರಾಧದಿಂದ ನೀನೂ ನಿನ್ನ ಮಕ್ಕಳೂ ನೆಂಟರೂ ಇಷ್ಟರೂ ನಿನ್ನ ಸಕಲೈಶ್ವರ್ಯವೂ ನಿನ್ನ ಪಟ್ಟಣವೂ ನಿನ್ನ ರಾಷ್ಟ್ರವೂ ಹಾಳಾಗುವುದರಲ್ಲಿ ಸ್ವಲ್ಪವೂ ಸಂಶಯವಿಲ್ಲವು. ನಾನು ಶ್ರೀರಾಮಚಂದ್ರನಿಗೆ ಧರ್ಮಪತ್ನಿಯಾಗಿರುವೆನು ನೀನು ಆತನಿಲ್ಲದ ಕಾಲದಲ್ಲಿ ಬಂದು ನನ್ನನ್ನು ಅಪಹರಿಸಿಕೊಂಡು ಬಂದೆ. ನೀನು ಆತನ ಮುಂದೆ ನನ್ನನ್ನು ಎತ್ತಿಕೊಂಡು ಬಂದಿದ್ದರೆ ಈ ನಿನ್ನ ಪಾಪಿದೇಹವು ನಾಯಿನರಿಗಳ ಪಾಲಾಗುತ್ತಿದ್ದಿತು. ಹುಲಿಯ ಎದುರಿನಲ್ಲಿ ನಾಯಿಗೂ ಸಿಂಹದ ಎದುರಿನಲ್ಲಿ ಮೊಲಕ್ಕೂ ಹೇಗೆ ನಿಲ್ಲುವ ಸಾಮರ್ಥ್ಯವಿಲ್ಲವೋ ಹಾಗೆ ಮಹಾತ್ಮನಾದ ನನ್ನ ಪತಿಯ ಎದುರಿನಲ್ಲಿ ನೀಚನಾದ ನಿನಗೆ ನಿಲ್ಲುವ ಸಾಮರ್ಥ್ಯವಿಲ್ಲ. ಕಳ್ಳನಾದ ನೀನು ನಿನ್ನ ತಾಯಿಯ ಹೊಟ್ಟೆಯನ್ನು ಬಗೆದು ಹೊಕ್ಕು ಮರೆಸಿಕೊಂಡಾಗ್ಯೂ ರಾಮನ ಬಾಣವು ಬಂದು ನಿನ್ನನ್ನು ಕೊಂದುಹಾಕುವುದು. ಈ ಮಾತಿನಲ್ಲಿ ಏನೂ ಸಂದೇಹವಿಲ್ಲ. ಹೀಗೆ ನಿಶ್ಚಿತವಾದ ಮನಸ್ಸುಳ್ಳ ನನ್ನೆದುರಿಗೆ ಇಂಥ ಕೆಟ್ಟಮಾತುಗಳನ್ನು ಬೊಗಳುತ್ತಿರುವ ನಿನ್ನನ್ನು ನನ್ನ ಪಾತಿವ್ರತ್ಯಾಗ್ನಿಜ್ವಾಲೆಯಿಂದ ಈಗಲೇ ಸುಟ್ಟು ಬೂದಿಮಾಡಿಬಿಡಬಲ್ಲೆನು. ಆದರೆ ನನ್ನ ಪತಿಯು ಬಂದು ನಿನ್ನನ್ನು ಕೊಂದುಹಾಕಲೆಂಬದಾಗಿ ಸುಮ್ಮನಿದ್ದೇನೆ ಎಂದು ಹೇಳಿ ರಾವಣನಿಗೆ ವಿಮುಖಳಾಗಿ ಕೂತುಕೊಳ್ಳಲು ; ಆಗ ರಾವಣನು ಕೋಪಾಕ್ರಾಂತನಾಗಿ— ಇಂಥಾ ಬಾಯಿಬಡಿಕ ಹೆಂಗಸನ್ನು ಈಗಲೇ ಸಂಹರಿಸಿಬಿಡುತ್ತೇನೆಂದು ಕತ್ತಿಯನ್ನು ಎತ್ತಲು ; ಮಂಡೋದರಿಯು—ಹಾ ! ಹಾ ! ರಾಕ್ಷಸಚಕ್ರವರ್ತಿಯೇ, ನಿಲ್ಲು !

ನಿಲ್ಲು! ನಿನ್ನ ಅವಿಚಾರಕ್ಕೆ ಏನು ಹೇಳಬೇಕು? ಹೆಂಗೊಲೆಯನ್ನು ಮಾಡುವವರುಂಟೇ? ಅಯ್ಯೊ, ಅನ್ಯಾಯವಾಗಿ ಮಹಾಪಾಪಕ್ಕೆ ಒಳಗಾಗುತ್ತಿರುವೆಯಲ್ಲಾ? ಮರುಳುತನವನ್ನು ಬಿಡು; ಸೌಂದರ್ಯವತಿಯಾದ ನನ್ನ ಮುಂದೆ ಈ ಸೀತೆಯೇ! ಎಂದು ಹೇಳಿ ಸಮಾಧಾನಪಡಿಸಿ ಅವನನ್ನು ಎಳೆದು ಕರೆದುಕೊಂಡು ಮನೆಗೆ ಹೋದಳು.

ಅನಂತರದಲ್ಲಿ ರಾವಣನು ದುಮ್ಮಾನದಿಂದ ಕೂಡಿ ಹೊರಟುಹೋಗಲು; ಸೀತಾದೇವಿಯು ತನ್ನ ಪತಿಯನ್ನು ನೆನಸಿಕೊಂಡು ದುಃಖಿಸುತ್ತ—ಎಲೈ ಭೂದೇವಿಯೇ, ಬಾಯ್ದೆರೆದು ನನ್ನನ್ನು ಒಳಗೊಳ್ಳಲೊಲ್ಲೆಯಾ? ಈ ಖಳನ ಬಾಧೆಯನ್ನು ತಾಳಿಕೊಂಡು ಹೇಗೆ ಜೀವಿಸಲಿ? ಎಂದು ಬಾಯಿಬಿಟ್ಟು ರೋದಿಸುತ್ತ ರಾಮನನ್ನು ಸಂಬೋಧಿಸಿ—ಎಲೈ ಪ್ರಾಣನಾಥನೇ, ಜಗತ್ಪತಿಯೇ, ದೀನದಯಾಳುವೇ, ನಿನ್ನನ್ನು ನಂಬಿದ ನನ್ನನ್ನು ಬಿಟ್ಟು ಎಲ್ಲಿರುವೆ? ಈ ನನ್ನ ಮಹಾವ್ಯಥೆಯನ್ನು ಯಾರೊಡನೆ ಹೇಳಲಿ? ಎಲ್ಲಿಗೆ ಹೋಗಲಿ? ಪೂರ್ವದಲ್ಲಿ ಯಾರ ಪತ್ನಿಯರನ್ನು ನೋಯಿಸಿದ್ದೆನೋ, ಯಾವ ದೇವರ ಭಕ್ತಿಯಲ್ಲಿ ಕುಂದು ಒಡೆದಿದ್ದೆನೋ, ಯಾವ ಗುರುಜನರನ್ನು ನೋಯಿಸಿದ್ದೆನೋ, ಯಾರ ಪತಿಗಳನ್ನು ಅಗಲಿಸಿದ್ದೆನೋ, ಆ ದುಷ್ಕರ್ಮಫಲವು ಈಗ ನನಗೆ ಅನುಭವಕ್ಕೆ ಬಂದಿತು. ಹಾ! ಮರಣವು ಬಾರದಲ್ಲಾ! ರಾಮನು ಏನಾಗಿರುವನೋ! ಆ ನರನಾಥನ ಸುದ್ದಿಯನ್ನು ತಿಳಿಯಪಡಿಸುವವರಿಲ್ಲವಲ್ಲಾ! ಹಾ! ರಾಮನೇ! ಎಂದು ಹಮ್ಮೈಸಿ ಬಿದ್ದಳು.

ಆ ಮೇಲೆ ಸೀತೆಯು ಮೂರ್ಛೆತಿಳಿದೆದ್ದು ಮೆಲ್ಲನೆ ಬಂದು, ಪ್ರಾಣಗಳನ್ನಾದರೂ ತೊರೆದುಕೊಳ್ಳಬೇಕೆಂದು ಕೈಗೆ ಕತ್ತಿಯನ್ನು ತೆಗೆದುಕೊಳ್ಳಲು; ಆಗ ತ್ರಿಜಟೆಯು ಥಿಗ್ಗನೆದ್ದುಬಂದು—ಏನಮ್ಮಾ ಸೀತೆಯೇ, ಇದೇನು! ಇಂಥ ಹುಚ್ಚುಕೆಲಸವನ್ನು ಮಾಡುತ್ತಿರುವಿಯಲ್ಲಾ! ಎಂದು ಹೇಳಿ ಅವಳ ಹಸ್ತದಲ್ಲಿದ್ದ ಖಡ್ಗವನ್ನು ಕಿತ್ತುಕೊಂಡು—ಎಲೈ ಜಾನಕಿಯೇ, ನೀನು ಇನ್ನುಮೇಲೆ ಸ್ವಲ್ಪವಾದರೂ ಯೋಚಿಸಬೇಡ. ಶ್ರೀರಾಮನು ನಿನ್ನ ಬಳಿಗೆ ಶೀಘ್ರದಲ್ಲಿಯೇ ಬರುವನು ಕೇಳು. ನಾನು ಸ್ವಪ್ನದಲ್ಲಿ ಶ್ರೀರಾಮನು ಲಕ್ಷ್ಮಣಸಮೇತನಾಗಿ ಇಲ್ಲಿಗೆ ಬಂದು ರಾವಣ ಕುಂಭಕರ್ಣಾದ್ಯರನ್ನು ಕೊಂದು ನಿನ್ನನ್ನು ಕರೆದುಕೊಂಡು ಅಯೋಧ್ಯೆಗೆ ಹೋಗಿ ಪಟ್ಟಾಭಿಷಿಕ್ತನಾದುದನ್ನು ಕಂಡೆನು. ಆದುಕಾರಣ ನೀನು ಯೋಚನೆಯನ್ನು ಬಿಟ್ಟು ಸಂತೋಷಚಿತ್ತಳಾಗಿರು ಎಂದು ಹೇಳಲು; ಸೀತೆಯು ರಾಮನನ್ನು ನೆನಸಿಕೊಂಡು ಹಲುಬುತ್ತ ಇರಲು; ಆಗ ಆಂಜನೇಯನು—ಎಲೈ ರಾಜೀವಲೋಚನೆಯಾದ ದೇವಿಯೇ, ನಿನ್ನ ಪತಿಯೂ ಲಕ್ಷ್ಮಣನೂ ಕ್ಷೇಮದಲ್ಲಿದ್ದಾರೆ ಎಂದು ಹೇಳಲು; ಆ ಮಾತನ್ನು ಕೇಳಿ ಸೀತಾದೇವಿಯು ಮೊಗವೆತ್ತಿ ನೋಡಿ ಇದು ಮಾಯಾವಿಗಳಾದ ರಾಕ್ಷಸರ ನುಡಿಯೇ ಸರಿ ಎಂದು ತಲೆಯನ್ನು ಬೊಗ್ಗಿಸಿಕೊಂಡಳು.

ಆಗ ಆಂಜನೇಯನು ಪುನಃ—ಎಲೈ ಸೀತೆಯೇ, ಖೂಳನಾದ ರಾವಣನು ನಿನ್ನನ್ನು ಕಳವಿನಿಂದ ತೆಗೆದುಕೊಂಡು ಬಂದ ಬಳಿಕ ರವಿಕುಲತಿಲಕನು ಜಟಾಯುವನ್ನು ಕಂಡು ಅವನಿಂದ ನಿನ್ನ ವೃತ್ತಾಂತವನ್ನು ತಿಳಿದು ಆ ಮೇಲೆ ಸತ್ತುಹೋದ

ಜಟಾಯುವಿನ ಪ್ರೇತಕೃತ್ಯಗಳನ್ನು ನೆರವೇರಿಸಿ ಪಂಪಾಸರಸ್ಸಿನ ಒಳಿಗೆ ಬಂದು ಸುಗ್ರೀವನೊಡನೆ ಸಖ್ಯವನ್ನು ಬೆಳಿಸಿ ವಾಲಿಯನ್ನು ಸಂಹರಿಸಿ ಸುಗ್ರೀವನಿಗೆ ಕಿಷ್ಕಿಂಧಾರಾಜ್ಯಾಭಿಷೇಕವನ್ನು ಮಾಡಿಸಿದನು. ಅನಂತರದಲ್ಲಿ ನಿನ್ನನ್ನು ಹುಡುಕುವುದಕ್ಕೋಸ್ಕರ ಚತುರ್ದಿಕ್ಕುಗಳಿಗೂ ಕಪಿವೀರರನ್ನು ಕಳುಹಿಸಲು ; ಆಗ ನಾನು ಅಂಗದ ಜಾಂಬವಾದಿಗಳೊಡನೆ ದಕ್ಷಿಣದಿಕ್ಕಿಗೆ ಬಂದು ಅವರ ಅಪ್ಪಣೆಯ ಮೇರೆಗೆ ಕಡಲನ್ನು ದಾಟಿ ಈ ಲಂಕೆಯನ್ನು ಹೊಕ್ಕು ಖಳೇಂದ್ರಾದಿ ಸಮಸ್ತ ರಾಕ್ಷಸರ ಮನೆಗಳಲ್ಲೂ ನಿನ್ನನ್ನು ಹುಡುಕಿ ಅಲ್ಲೆಲ್ಲೂ ಕಾಣದೆ ವ್ಯಸನದಿಂದ ವಿಮನಾರೂಪನಾಗಿ ಕುಳಿತಿರುವ ಸಮಯದಲ್ಲಿ ಚಂದ್ರೋದಯವಾಗಲು ; ಈ ರಮ್ಯವಾದ ಅಶೋಕವನವನ್ನು ಕಂಡು ಬಂದು ನೀನು ಕುಳಿತಿರುವ ಈ ಶಿಂಶುಪವೃಕ್ಷವನ್ನೇರಿ ರಾಕ್ಷಸನು ನಿನ್ನ ಬಳಿಗೆ ಬಂದು ನಡಿಸಿದ ವೃತ್ತಾಂತವನ್ನೆಲ್ಲಾ ನೋಡಿ ತಿಳಿದು ಅನಂತರ ತ್ರಿಜಟೆಯು ಹೇಳಿದ ಸ್ವಪ್ನದ ಸಂಗತಿಯನ್ನೂ ಕೇಳಿದೆನು ಎಂದು ಹೇಳಿ ಆ ಮೇಲೆ ಆಂಜನೇಯನು ಮರದಿಂದ ಕೆಳಗಿಳಿದು ಸೀತೆಯ ಸಮೀಪಕ್ಕೆ ಬರುತ್ತಿರಲು ; ಆಕೆಯು ಹೆದರಿಕೆಯಿಂದ ಹಿಂದಕ್ಕೆ ಸರಿಯುತ್ತಿರಲು ; ಆಗ ಹನುಮಂತನು—ಎಲೈ ತಾಯಿಯೇ, ಅಂಜಬೇಡ ! ನಾನು ರಾಕ್ಷಸನಲ್ಲ ಎಂದು ಹೇಳಲು; ಸೀತೆಯು—ಎಲೈ ವಾನರಶ್ರೇಷ್ಠನೇ, ನೀನು ಕಪಿಯು, ಶ್ರೀರಾಮನು ದೊರೆಯು. ನಿಮ್ಮಿಬ್ಬರಿಗೂ ಸ್ವಾಮಿಭೃತ್ಯತ್ವವು ಹೇಗೆ ಸಂಭವಿಸಿತು ? ನಿಮಗೆ ಸಮುದ್ರವನ್ನು ದಾಟುವ ಶಕ್ತಿಯುಂಟೇ ? ನಿನ್ನ ಕಪಟವಚನಗಳಿಗೆ ಭಯಪಡುತ್ತೇನೆ ಎಂದು ನುಡಿಯಲು ; ಆಂಜನೇಯನು—ಎಲೈ ಲೋಕಮಾತೃವೇ, ಶ್ರೀರಾಮನ ಪಾದಸೇವಕನಾದ ನನಗೆ ಈ ಸಮುದ್ರವನ್ನು ದಾಟುವುದು ಎಷ್ಟರ ಕೆಲಸ ? ಹಾಗಾದರೆ ನೋಡು ಎಂದು ತ್ರಿವಿಕ್ರಮನ ರೂಪಿಗೆ ಇಮ್ಮಡಿಯಾದ ಘೋರಾಕಾರವನ್ನು ಧರಿಸಿ ನಿಲ್ಲಲು ; ಸೀತೆಯು ಆ ಅತ್ಯದ್ಭುತಾಕಾರವನ್ನು ನೋಡಲಂಜಿ ಕಣ್ಣುಮುಚ್ಚಿಕೊಳ್ಳಲು ; ಆ ಮೇಲೆ ಆಂಜನೇಯನು ಆ ರೂಪವನ್ನಡಗಿಸಿ ಪೂರ್ವದ ರೂಪವನ್ನು ಧರಿಸಿಕೊಳ್ಳಲು ; ಸೀತೆಯು ಇನ್ನೂ ಅನುಮಾನಿಸುತ್ತಿರಲು ;

ಆಗ ಮಾರುತಿಯು—ಎಲೈ ತಾಯಿಯೇ, ಅರಣ್ಯದಲ್ಲಿ ನೀನೂ ಶ್ರೀರಾಮನೂ ನಡಿಸಿದ ಕೆಲವು ಕಾರ್ಯಗಳನ್ನು ಗುರುತಿಗಾಗಿ ಹೇಳುತ್ತೇನೆ ಕೇಳು. ಒಂದು ದಿನ ನೀನೂ ರಾಮನೂ ಚಿತ್ರಕೂಟದಲ್ಲಿ ಸ್ನಾನಮಾಡುವಾಗ ಆಶ್ಚರ್ಯವಿಧದಿಂದ ಕೊಳದ ನೀರನ್ನು ಕಲಕಿದಿರಂತೆ. ಇದು ನಿಜವೋ ಸುಳ್ಳೋ ? ಮಾನವತಿಯಾದ ನಿನಗೆರಡು ಒಗೆದ ಕಾಕಾಸುರನನ್ನು ಶ್ರೀರಾಮನು ದಯದಿಂದ ಸಲಹಿದನಂತೆ. ಮತ್ತು ನೀನು ಮಾಯಾಮೃಗವನ್ನು ಅಪೇಕ್ಷಿಸಿದಿಯಂತೆ. ಇದೆಲ್ಲಾ ನಿಶ್ಚಯವೋ ಸುಳ್ಳೋ? ಎಂದು ಹೇಳಲು ; ಸೀತೆಯು ಘಳಘಳನೆ ಕಣ್ಣೀರನ್ನು ಸುರಸುತ್ತ—ಹಾ, ರಾಮಾ ! ಹೃದಯಾರಾಮ ! ಎಂದು ಬಿದ್ದು ಹೊರಳಿದವಳಾಗಿ—ಎಲೈ ಹನುಮಂತನೇ, ನೀನು ಇದುವರೆಗೂ ಹೇಳಿದ ಗುರುತುಗಳೆಲ್ಲಾ ಯಥಾರ್ಥವಾದುವುಗಳೇ. ನನಗೆ ದುಃಖಬರುತ್ತದೆ. ಇನ್ನು ಹೇಳಬೇಡ ಎನ್ನಲು ; ಆಂಜನೇಯನು ಆಕೆಯ ಕೈಕಾಲುಮೊಗಗಳಲ್ಲಿರುವ ಗುರುತುಗಳನ್ನು ಹೇಳಿ ಅನಂತರ ರಾಮನಾಮಮುದ್ರಿತವಾದ ಉಂಗುರ

ವನ್ನು ಕೊಟ್ಟು ಕೈಮುಗಿದು ನಿಂತುಕೊಳ್ಳಲು ; ಆಗ ಸೀತೆಯು ಸಂಶಯವನ್ನು ಬಿಟ್ಟು ಆ ಮುದ್ರೆಯುಂಗುರವನ್ನು ರಾಮನೆಂದೇ ಭಾವಿಸಿ ಸಂತೋಷಸಮುದ್ರದಲ್ಲಿ ಮುಣುಗಿ—ಎಲೈ ತಂದೆಯೇ, ಹನುಮಂತನೇ, ನೀನು ಹೇಳಿದ ಮಾತುಗಳೆಲ್ಲಾ ಸತ್ಯ ವಾದುವುಗಳೇ. ಶ್ರೀರಾಮಲಕ್ಷ್ಮಣರು ಕುಶಲದಲ್ಲಿದ್ದಾರೆಯೇ? ರಾಘವನು ನನ್ನ ವಿಷ ಯದಲ್ಲಿ ಬೇಸರಿಕೆಯುಳ್ಳವನಾಗಿದ್ದಾನೆಯೇ ? ಹೇಳಯ್ಯಾ ಎಂದು ಕೇಳಲು; ಆಂಜನೇ ಯನು—ಎಲೈ ತಾಯಿಯೇ, ರಾಮನೂ ಲಕ್ಷ್ಮಣನೂ ಕುಶಲಿಗಳಾಗಿದ್ದಾರೆ. ರಘು ವೀರನು ಯಾವಾಗಲೂ ನಿನ್ನ ಚಿಂತೆಯಲ್ಲೇ ಇದ್ದಾನೆ ನೀನು ಚಿಂತೆಯನ್ನು ಬಿಡು. ನಿನ್ನರಸನಾದ ಶ್ರೀರಾಮನನ್ನು ಇನ್ನೊಂದು ತಿಂಗಳಲ್ಲಿಯೇ ಇಲ್ಲಿಗೆ ಕರೆದುಕೊಂಡು ಬಂದು ಪಾಪಿಷ್ಠನಾದ ಈ ದಶಕಂಧರನನ್ನು ಕೊಲ್ಲಿಸಿ ನಿನ್ನನ್ನು ಬಿಡಿಸುವೆನು. ಈ ಭಾಗ ದಲ್ಲಿ ಸಂಶಯವನ್ನು ಬಿಡು. ಧೈರ್ಯವುಳ್ಳವಳಾಗಿರು. ಶ್ರೀರಾಮನಿಗೆ ನಿನ್ನ ಕುರುಹನ್ನು ಕೊಡು ಎಂದು ಹೇಳಲು; ಜಾನಕಿಯು ಸಂತುಷ್ಟಾಂತರಂಗಳಾಗಿ ತನ್ನ ಮಲಿನಾಂಬ ರಾಂಚಲದಲ್ಲಿ ಕಟ್ಟಿಕೊಂಡಿದ್ದ ನಿರುಪಮಚೂಡಾರತ್ನವನ್ನು ಬಿಚ್ಚಿ—ಎಲೈ ಗುಣನಿ ಧಿಯೇ, ನೀನು ಇದನ್ನು ತೆಗೆದುಕೊಂಡು ಹೋಗಿ ದುಷ್ಟಶಿಕ್ಷಾಧ್ಯಕ್ಷನಾದ ರಾಮ ನಿಗೆ ಕೊಡು. ಮಗನೇ, ರಾಕ್ಷಸರು ಮಹಾ ಮಾಯಾವಿಗಳು. ಮತ್ತು ಮನುಷ್ಯ ಭಕ್ಷಕರು. ನೀನು ಇನ್ನಿರಬೇಡ. ಬೇಗ ಹೋಗೆಂದು ಹೇಳಿ ಅವನನ್ನು ಅಗಲಲಾರದೆ ಬಾರಿಬಾರಿಗೂ ಉಪಚರಿಸಿ ಅಪ್ಪಣೆಯನ್ನು ಕೊಟ್ಟಳು. ಆಗ ಆಂಜನೇಯನು ಈ ದಶ ಶಿರಸ್ಕನಾದ ರಾಕ್ಷಸನಿಗೆ ತನ್ನ ಪರಾಕ್ರಮವನ್ನು ತೋರ್ಪಡಿಸದಿದ್ದರೆ ತನ್ನ ವೀರತ್ವಕ್ಕೆ ಕುಂದು ಬರುತ್ತದೆಂದು ಯೋಚಿಸಿ—ತಾಯಿಯೇ, ನಾನು ಹೊರಟಂದಿನಿಂದ ಇಂದಿ ನ ವರೆಗೂ ಅಶನವಿಲ್ಲದವನಾಗಿದ್ದೇನೆ. ಅದುಕಾರಣ ಈ ವನದಲ್ಲಿ ಹಣ್ಣುಗಳನ್ನು ತಿನ್ನ ಬೇಕೆಂದು ಆಶಿಸುತ್ತೇನೆ. ನನಗೆ ಅಪ್ಪಣೆಯನ್ನು ಕೊಡೆಂದು ಕೇಳಲು; ಸೀತೆಯು— ಎಲೈ ಬಾಲಕನೇ, ಬಹುಜನರಾಕ್ಷಸರು ಈ ವನವನ್ನು ಕಾದುಕೊಂಡಿದ್ದಾರೆ. ಅವರು ಅರಿಯದಂತೆ ಭಕ್ಷಿಸಿಕೊಳ್ಳುವವನಾಗೆಂದು ಹೇಳಿ ಕಳುಹಿಸಿದಳು. ಆಗ ಮಹಾ ಪರಾಕ್ರಮಿಯಾದ ಹನುಮಂತನು ಪ್ರಳಯಕಾಲದ ಕುಲಿಶಕೋಟಿಯ ರಭಸದಂತೆಯೂ ಕಾಲಭೈರವನ ಆಟೋಪದಂತೆಯೂ ಸಕಲ ರಾಕ್ಷಸಜನರ ಹೃದಯಗಳು ತಲ್ಲಣಿಸು ವಂತೆಯೂ ಆರ್ಭಟಿಸಿ ಕಂಡ ಕಂಡ ಮರಗಳನ್ನು ಕಿತ್ತುರುಳಿಸಿ ಪಾದಘಾತದಿಂದ ವನಭೂಮಿಯನ್ನೆಲ್ಲಾ ವ್ಯತ್ಯಸ್ತವುಳ್ಳದನ್ನಾಗಿ ಮಾಡಿ ಸರಸ್ಸುಗಳ ಪಾವಟಿಗೆಗಳನ್ನೆಲ್ಲಾ ಕಿತ್ತಿಟ್ಟು ಚಿತ್ರಮಂಟಪಗಳಿಗೆ ಹಾರಿ ತೆನೆಗಳನ್ನೂ ಕಲಶಗಳನ್ನೂ ಕಂಬಗಳನ್ನೂ ಜೋದಿ ಗೆಗಳನ್ನೂ ವೇದಿಕೆಗಳನ್ನೂ ಮುರಿದುಹಾಕುತ್ತಿದ್ದನು. ಆಗ ಆ ವನವು ಮೂಗಿಲ್ಲದ ಮೊಗದಂತೆಯೂ ಚಂದ್ರನಕ್ಷತ್ರಗಳಿಲ್ಲದ ಇರುಳಂತೆಯೂ ಸೂರ್ಯನಿಲ್ಲದ ಹಗ ಲಂತೆಯೂ ಅಮಂಗಲಕರವಾಗಿಯೂ ಅಸಹ್ಯಕರವಾಗಿಯೂ ಇದ್ದಿತು. ಆಗ ಆ ವನ ದಲ್ಲಿದ್ದ ಪಕ್ಷಿಗಳೂ ಮೃಗಗಳೂ ಹನುಮಂತನ ರಭಸಕ್ಕೆ ಬೆದರಿ ಕೂಗಿಕೊಳ್ಳುತ್ತಾ ಓಡಿ ಹೋದುವು. ಆ ವನಪಾಲಕರಾದ ರಾಕ್ಷಸರು ಈ ಕಳವಳವನ್ನು ಕೇಳಿ ಎಚ್ಚೆತ್ತು ದಿಗ್ಭ್ರಮೆಯನ್ನು ಹೊಂದಿ ಆ ಮೇಲೆ ಖಡ್ಗಾದ್ಯಾಯುಧಗಳನ್ನು ತೆಗೆದುಕೊಂಡು—

ಈ ಕೋಡಗವನ್ನು ಹಿಡಿ, ಹಿಡಿ! ಹೊಡಿ, ಹೊಡಿ! ಕಡಿ, ಕಡಿ! ತಿವಿ, ತಿವಿ! ಕವಿ, ಕವಿ! ಎಂದು ಆರ್ಭಟಿಸಿಕೊಂಡು ಬರುತ್ತಿರಲು; ಆಂಜನೇಯನು ದೊಡ್ಡ ಮರಗಳನ್ನು ಕಿತ್ತಿತ್ತಿ ಒಡಿದು ಆ ರಾಕ್ಷಸರನ್ನೆಲ್ಲಾ ಕೊಂದು ನಿಮೇಷಮಾತ್ರದಲ್ಲಿ ಹೆಣಗಳನ್ನು ಬಣಬೆಗಳಂತೆ ಒಟ್ಟಿದನು. ಆ ಮೇಲೆ ಸುಮಾಲಿಯೆಂಬ ರಾಕ್ಷಸನನ್ನು ಕರೆದು–ಎಲೋ, ನೀನು ಹೆಣ್ಗಳ್ಳನಾದ ರಾಕ್ಷಸನ ಬಳಿಗೆ ಓಡಿ ಹೋಗಿ ರಾಮದೂತನು ಬಂದಿರುವನೆಂದು ತಿಳಿಸಿ ವೀರರಿದ್ದರೆ ಬರಹೇಳು. ಇದು ಉಪಚಾರದ ಮಾತಲ್ಲ. ಬಂದವರಿಗೆ ನಿಜವಾಗಿಯೂ ಕಾಲನ ಮನೆಯನ್ನು ತೋರಿಸುವೆನು ಎಂದು ಹೇಳಲು; ಅವನು ಅಲ್ಲಿಂದ ಓಡಿಬಂದು ಒಡ್ಡೋಲಗದಲ್ಲಿ ಕುಳಿತಿರುವ ರಾವಣನಿಗೆ ಕೈಮುಗಿದು–ಬುದ್ಧೀ! ಮೃತ್ಯುವೇ ಕಪಿರೂಪನ್ನು ಧರಿಸಿ ಬಂದು ರಾಕ್ಷಸರನ್ನೆಲ್ಲಾ ಕೊಂದುಹಾಕುತ್ತಿದೆ. ಅದರೊಡನೆ ಕಾದುವುದಕ್ಕೆ ನಮ್ಮಿಂದಾಗುವುದಿಲ್ಲ. ಅದರ ಬಾಧೆಯನ್ನು ತಪ್ಪಿಸಿ ನಮ್ಮನ್ನು ಕಾಪಾಡು ಎಂದು ಬಿನ್ನವಿಸಲು; ಎಲವೊ! ಹರಿಹರಬ್ರಹ್ಮಾದಿಗಳು ನನಗೆ ಪಾಡಲ್ಲ. ಎಲೈ ಶ್ವಾನನವೇ, ಬಗುಳಬೇಡ! ಕಪಿ ಬಂದು ವನವನ್ನು ಮುರಿದು ರಕ್ಕಸರನ್ನು ಕೊಂದಿತಂತೆ! ಇಂಥ ಕಪಿಯನ್ನು ಹಿಡಿದು ದಂಡಿಸಲಾರದೆ ತನ್ನ ಹತ್ತಿರ ಬಂದು ಲಜ್ಜೆಯಿಲ್ಲದೆ ಬೊಗುಳುತ್ತಿರುವಿ. ನಿನ್ನಂಥ ಬಡನಾಯಿಗಳನ್ನು ಸೀಳಿಸಿಬಿಡಬೇಕು ಎಂದು ದಶಕಂಠನು ಹೇಳಿ ಮುಗಿಸುವಷ್ಟರಲ್ಲಿ ಆಂಜನೇಯನಿಂದ ಹತಶೇಷರಾದ ರಾಕ್ಷಸರು ಓಡಿಬಂದು—ಸ್ವಾಮಿ, ನಮ್ಮೊಡೆಯನಾದ ನೀನು ಆಶ್ರಿತರಾದ ನಮ್ಮನ್ನು ಅನ್ಯಾಯವಾಗಿ ಕಪಿಯಿಂದ ಕೊಲ್ಲಿಸಬೇಡ! ನೀನು ರಕ್ಷಿಸಲಾರದಿದ್ದರೆ ಈಗಲೇ ನಿನ್ನ ಕತ್ತಿಯಿಂದ ನಮ್ಮೆಲ್ಲರ ತಲೆಗಳನ್ನೂ ಕಡಿದುಹಾಕು ಎಂದು ಮೊರೆಯಿಡಲು;

ಆಗ ಅಕ್ಷಕುಮಾರನೆದ್ದು ಕಪಿಯನ್ನು ಕೊಂದುಹಾಕುವೆನೆಂದು ತನ್ನ ತಂದೆಯಿಂದ ವೀಳಯವನ್ನು ತೆಗೆದುಕೊಂಡು ವಿವಿಧಾಯುಧಧಾರಿಗಳಾದ ಏಳುನೂರು ಜನ ಸಹೋದರರನ್ನು ಕರೆದುಕೊಂಡು ಖಡ್ಗವನ್ನು ಝಳುಪಿಸುತ್ತ ಸುಳಿಯುತ್ತಿರುವ ಸಿಡಿಲಮರಿಯಂತೆ ಹೊರಟು ಬರುತ್ತಿರಲು; ವೀರನಾದ ಆಂಜನೇಯನು ಗರ್ವಿತರಾಗಿಯೂ ಭಯಂಕರರಾಗಿಯೂ ಇರುವ ರಾವಣಪುತ್ರರನ್ನು ನೋಡಿ ಹಿಗ್ಗಿದವನಾಗಿ ಆರ್ಭಟಿಸಿ ವಿಕಾರರೂಪಿಗಳಾದ ಆ ರಾಕ್ಷಸರನ್ನು ನೋಡಿ ಹಲ್ಗಿರಿದು ಅಣಕಿಸುತ್ತಿರಲು; ಆಗ ರಾಕ್ಷಸರೆಲ್ಲರೂ ನೋಡಿ ನಗುತ್ತ—ಬಾಯಿಯ ಮೇಲೆ ಹೊಡೆಯಿರಿ ಎಂದು ಸಾಣೆಹಿಡಿದ ಖಡ್ಗಗಳಿಂದಲೂ ಶೂಲಗಳಿಂದಲೂ ತಿವಿಯುವುದಕ್ಕೆ ಬರಲು; ಆಗ ಹನುಮಂತನು ತಾನೇರಿಕೊಂಡಿದ್ದ ತೋರಣಸ್ತಂಭದಿಂದಿಳಿದು ಹೆದರಿ ಓಡುವವನಂತೆ ಸ್ವಲ್ಪದೂರ ಹೋಗಲು; ಆಗ ರಾಕ್ಷಸರು—ಎಲೋ, ಕಪಿಯು ಭಯದಿಂದೋಡುತ್ತಿದೆ. ಬೇಗ ಬನ್ನಿರಿ. ಹಿಡಿಯಿರಿ! ಬಡಿಯಿರಿ! ಕಡಿಯಿರಿ! ಎನ್ನುತ್ತ ಮುತ್ತಿಕೊಳ್ಳುವುದಕ್ಕೆ ಬರಲು; ಹನುಮಂತನು ಹಿಂದಿರುಗಿ ಬಾಹುವನ್ನು ಅಪ್ಪಳಿಸಿ ತೋರ್ಣಸ್ತಂಭಗಳನ್ನು ಕಿತ್ತುಕೊಂಡು ಸಂಹಾರರುದ್ರನಿಗೆಂಟುಮಡಿಯಾಗಿ ನಿಮೇಷಮಾತ್ರದಲ್ಲಿ ಎಂಭತ್ತುಸಾವಿರ ಮಂದಿ ರಕ್ಕಸರನ್ನು ಬಡಿದುರುಳಿಸಿ ಭೂದೇವತೆಗೆ ಬಲಿಗೊಟ್ಟು

ತೇರಾನೆಕುದುರೆಕಾಲಾಳುಗಳನ್ನು ನಿರ್ನಾಮಮಾಡಿ ಆರ್ಭಟಿಸಲು; ಆಗ ಜಂಬುಮಾಲಿಯು ರೋಷಾವೇಶವುಳ್ಳವನಾಗಿ ಪ್ರಳಯಕಾಲದ ಭರಸಿಡಿಲುದ್ಭವಿಸಿತೋ ಎಂಬ ಹಾಗೆ ಬೊಬ್ಬಿರಿದು ಕುಂತದಿಂದ ಆಂಜನೇಯನನ್ನು ಹೊಡೆಯಲು ; ಆ ಹನುಮಂತನು ಹಲ್ಗಿರಿದು ಮೈಮರೆತು ಪರ್ವತವು ಬಿದ್ದಂತೆ ಬಿದ್ದು ಎರಡು ಗಳಿಗೆಗಳ ಮೇಲೆ ಎದ್ದು ಒಂದು ಹೆಮ್ಮರದಿಂದ ಜಂಬುಮಾಲಿಯನ್ನು ಹೊಡೆಯಲು ; ಅವನಾಪೆಟ್ಟನ್ನು ತಪ್ಪಿಸಿಕೊಂಡು ಆಂಜನೇಯನನ್ನು ಶೂಲದಿಂದ ತಿವಿಯಲು ಹನುಮಂತನು ಅತಿ ಕೋಪಾಕ್ರಾಂತನಾಗಿ ಆ ದುಷ್ಟರಾಕ್ಷಸನ ಮುಂದಲೆಯನ್ನು ಹಿಡಿದು ಮೇಲೆತ್ತಿ ನೆಲಕ್ಕೆ ಅಪ್ಪಳಿಸಿ ಕಾಲಲ್ಲಿ ಮೆಟ್ಟಿಕೊಂಡು ಜೀರ್ಣವಸ್ತ್ರವನ್ನು ಸೀಳಿದಂತೆ ಸೀಳಿ ಬಿಸುಟನು.

ಅನಂತರದಲ್ಲಿ ಕೋಪಪ್ರತಾಪಿತನಾದ ಅಕ್ಷಕುಮಾರನು ಶರವರ್ಷಗಳಿಂದ ಆಂಜನೇಯನನ್ನು ಮುಚ್ಚಿಸಲು ; ಹನುಮಂತನು ಹೆದರದೆ ತನ್ನ ಮುಷ್ಟಿಯಿಂದ ಅಕ್ಷಕುಮಾರನ ಮಸ್ತಕದ ಮೇಲೆ ಹೊಡೆಯಲು; ಆಗ ಅವನ ತಲೆಯೊಡೆದು ಮೂರ್ಛೆಯುಂಟಾದಿತು. ರಾವಣನು ತ್ರೈಲೋಕ್ಯಭೀಕರನೆಂಬ ಬಿರುದುಳ್ಳವನಲ್ಲವೇ ? ಅಂಥವನ ಮಗನು ಸಾಮಾನ್ಯನೇ ? ಆ ಅಕ್ಷಕುಮಾರನು ತಿರಿಗೆದ್ದು ಆರ್ಭಟಿಸಿ ಗದೆಯನ್ನು ತೆಗೆದುಕೊಂಡು ರಾಮದೂತನನ್ನು ಹೊಡೆಯಲು; ಆಂಜನೇಯನು ಸಿಡಿದು ಬಿದ್ದೊರಲಿ ಅರೆಗಳಿಗೆಗಿಂತಲೂ ಸ್ವಲ್ಪ ಹೆಚ್ಚಾಗಿ ಮೂರ್ಛೆಹೊಂದಲು; ಅಕ್ಷಕುಮಾರನು—ಎಲೋ ಕಪಿಯು ಬಿದ್ದಿತು ! ಬಲೆಯನ್ನು ಹಾಕಿರಿ ಎನಲು; ಕೂಡಲೆ ಮಾರುತಿಯು ಆರ್ಭಟಿಸಿಕೊಂಡೆದ್ದು ಅಕ್ಷಕುಮಾರಕನ ರಥವನ್ನು ತೆಗೆದುಕೊಂಡು ಗರಗರನೆ ತಿರುಗಿಸಿ ರವಿಮಂಡಲಕ್ಕೆಸೆಯಲು ; ಅಕ್ಷಕುಮಾರನು ಸಮುದ್ರನನ್ನುಲ್ಲಂಘಿಸಿ ಬಂದು ಪರಿಘದಿಂದ ಅನಿಲಜನನ್ನು ಹೊಡೆಯಲು ; ವೀರಹನುಮಂತನು ತೋರಣಸ್ತಂಭದಿಂದ ಹೊಡೆದು ಅಕ್ಷಕುಮಾರನ ಶಿರಸ್ಸನ್ನಿಳುಹಿ ಅದನ್ನು ರಾವಣನ ಮುಂದೆ ಬೀಳುವ ಹಾಗೆ ಎಸೆದನು.

ಆಗ ರಾಕ್ಷಸೇಶ್ವರನು ತನ್ನ ಮುದ್ದುಮಗನ ತಲೆಯನ್ನು ಕಂಡು ಮನಸ್ಸಿನಲ್ಲಿ ಮಹಾತಂಕಯುಕ್ತನಾಗಿ ತನ್ನ ಮಗನಾಗಿಯೂ ಅಪ್ರತಿಮವೀರನಾಗಿಯೂ ಇರುವ ಇಂದ್ರಜಿತ್ತನ್ನು ನೋಡಿ—ಇದು ಲೋಕದಲ್ಲಿರುವ ಕಪಿಗಳಂತಲ್ಲ. ಏನೋ ಆಶ್ಚರ್ಯವಾಗಿ ತೋರುತ್ತದೆ. ಈ ಕೂಡಲೆ ನೀನು ವೀರಸೇನೆಯೊಡನೆ ಹೋಗಿ ಆ ಕಪಿಯನ್ನು ಕೊಲ್ಲದೆ ಪ್ರಾಣಸಹಿತವಾಗಿ ಹಿಡಿದು ನನ್ನ ಬಳಿಗೆ ತೆಗೆದುಕೊಂಡು ಬರುವವನಾಗು ಎಂದು ಹೇಳಿ ಕಳುಹಿಸಲು ; ಆತನು ಚತುರಂಗಬಲಪರಿವೃತನಾಗಿ ಹೊರಟುಬಂದು ಅಶೋಕವನದ ಹೆಬ್ಬಾಗಿಲ ಮೇಲೆ ಅಣಕಿಸುತ್ತ ಕೂತಿರುವ ಆಂಜನೆಯ ಮಗನನ್ನು ನೋಡಿ ಗುರಿಗಟ್ಟಿ ಸಕಲ ವಿಧವಾದ ಆಯುಧಗಳಿಂದ ಹೊಡೆದಾಗ್ಯೂ ಅವುಗಳೆಲ್ಲಾ ಆತನ ವಜ್ರಸಮಾನವಾದ ಶರೀರಕ್ಕೆ ತಗುಲಿ ತಗುಲಿ ಮುರಿಮುರಿದು ತುಮುರು ತುಮುರಾಗಿ ಭೂಮಿಗೆ ಬೀಳುತ್ತಿದ್ದವೇ ಹೊರತು ಆತನಿಗೆ ಸ್ವಲ್ಪವಾದರೂ ಗಾಯ ಮಾಡಿ ಬಾಧೆಯನ್ನುಂಟುಮಾಡಲಾರದೆ ಇರುವುದನ್ನೂ ಆತನು ತನ್ನ ಚತುರಂಗಬಲದ ಮೇಲೆ ನೆಗೆದು ಬಾಲದಿಂದ ಬಡಿದು ಬೆರಳುಗಳಿಂದ ತಿವಿದು ಉಗುರುಗಳಿಂದ ಪರಚಿ

ಕಚ್ಚಿ ಒದೆದು ಕ್ರಮವಾಗಿ ಕೊಲ್ಲುತ್ತ ಬರುತ್ತಿರುವುದನ್ನೂ ನೋಡಿ ಇಂದ್ರಜಿತ್ತು ವಿಪರೀತಕೋಪಕಂಪಿತಾಧರನಾಗಿ ಸಕಲವಾದ ದೇವತಾಮಂತ್ರಾಸ್ತ್ರಗಳನ್ನೂ ತೆಗೆದು ಕೊಂಡು ಆತನ ಮೇಲೆ ಪ್ರಯೋಗಿಸಿದಾಗ್ಯೂ ಆತನಿಗೇನೂ ನೋವುಂಟಾಗದಿದ್ದಕಾ ರಣ ಆಶ್ಚರ್ಯಚಕಿತಮನಸ್ಕನಾಗಿ ಕಡೆಗೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಆಗ ಹನುಮಂತನು ಬ್ರಹ್ಮಾಂಡಕಟಾಹವು ಬಿರಿವುದೋ, ಜಗದ ಜೀವಿಗಳ ಜನ್ಮವನ್ನು ತೊಡೆವುದೋ ಎಂಬ ಭ್ರಾಂತಿಯನ್ನು ಹುಟ್ಟಿಸುತ್ತ ಬರುತ್ತಿರುವ ಸರೋಜಸಂಭವಾ ಸ್ತ್ರವನ್ನು ನಿರೀಕ್ಷಿಸಿ ಭಯಪಟ್ಟವನಾದರೂ ಮೊದಲು ಸಾರದೆಯಾಣ್ಮನು ಇದರಿಂದಲೂ ಮರಣವುಂಟಾಗದಂತೆ ತನಗೆ ವರವನ್ನಿತ್ತಿರುವುದನ್ನು ನೆನೆದು ಧೈರ್ಯವುಳ್ಳವನಾಗಿ-ನಿಶಾಚರಚಕ್ರವರ್ತಿಯಾದ ರಾವಣನನ್ನು ಕಂಡು ಶ್ರೀರಾಮನೆಡೆಗೈದುವುದಕ್ಕೆ ಇದೇ ಸಮಯವೆಂದು ನಿಶ್ಚಯಿಸಿ ಮೈಮೇಲೆ ಬಂದ ಅಸ್ತ್ರಕ್ಕೆ ವಶನಾಗಿ ಮೂರ್ಛೆಗೊಂಡವ ನಂತೆ ನಿಶ್ಚೇಷ್ಟತೆಯನ್ನು ಹೊಂದಿ ಭೂಮಿಯಲ್ಲಿ ಬಿದ್ದನು. ಆಗ ಇಂದ್ರಜಿತ್ತು ಕಳೆ ದುಳಿದ ಬಲದೊಡನೆ ಕೂಡಿ ಆತನನ್ನು ಹಿಡಿದು ತೆಗೆದುಕೊಂಡು ರಾವಣನ ಓಲಗದ ಚಾವಡಿಗೆ ಬಂದು ಸಿಂಹಾಸನಾರೂಢನಾಗಿರುವ ರಾವಣನ ಮುಂದಿಳಿಸಲು ; ಅಷ್ಟು ಹೊತ್ತಿನಲ್ಲಿ ಆ ಹನುಮಂತನು ಎಚ್ಚೆತ್ತು ರಾವಣನೆದುರಿನಲ್ಲಿ ತನ್ನ ಬಾಲವನ್ನು ಅತಿ ದೀರ್ಘವಾಗಿ ಬೆಳಿಸಿ ಸಿವುಡಿನಂತೆ ಸುತ್ತಿದುದರಿಂದ ರಾವಣನ ಸಿಂಹಾಸನಕ್ಕಿಂತಲೂ ದ್ವಿಗುಣೋನ್ನತವಾದ ತನ್ನ ವಾಲಸಿಂಹಾಸನದ ಮೇಲೆ ಬಿಂಕದಿಂದ ಕೂತುಕೊಂಡನು.

ಆಗ ರಾವಣನ ಮುಖ್ಯಮಂತ್ರಿಯಾದ ಪ್ರಹಸ್ತನು ಆಂಜನೇಯನ ಬಳಿಗೆ ಬಂದು—ನೀನು ಯಾರು ? ನಿನ್ನನ್ನು ಇಲ್ಲಿಗೆ ಯಾರು ಕಳುಹಿಸಿದರು ? ರಾಜಾಜ್ಞೆಯಿ ಲ್ಲದೆ ನಮ್ಮ ಪಟ್ಟಣಕ್ಕೆ ಏನು ಉದ್ದೇಶದಿಂದ ಬಂದಿ ? ಸರ್ವಲೋಕರಮ್ಯವಾದ ನಮ್ಮ ಅಶೋಕವನವನ್ನು ಯಾಕೆ ಮುರಿದಿ ? ನಮ್ಮ ರಾಕ್ಷಸನಾಯಕರನ್ನು ಕೊಲ್ಲು ವುದಕ್ಕೆ ನಿಮಿತ್ತವೇನು ? ಎಂದು ಕೇಳಲು ; ಹನುಮಂತನು ಪ್ರಹಸ್ತನನ್ನು ಕುರಿತು— ಎಲೈ ರಾಕ್ಷಸನೇ, ನೀನು ಯಾರೆಂದು ನನ್ನನ್ನು ಕೇಳುತ್ತಿರುವಿಯಾ ? ಹೇಳುತ್ತೇನೆ ಕೇಳು. ನಾನು ನಿಮ್ಮೊಡೆಯನಾದ ಈ ರಾವಣನನ್ನು ಯುದ್ಧರಂಗದಲ್ಲಿ ಲೀಲಾಮಾ ತ್ರದಿಂದ ಜಯಿಸಿ ಕೈಕಾಲುಗಳಿಗೆ ಚಿನ್ನದ ಸಂಕೋಲೆಗಳನ್ನು ಹಾಕಿಸಿ ಒಂದು ಸಹಸ್ರ ಸಂವತ್ಸರಗಳ ವರೆಗೂ ಕಾರಾಗೃಹದಲ್ಲಿಟ್ಟಿದ್ದ ಸಾವಿರ ತೋಳುಗಳುಳ್ಳ ಕಾರ್ತವೀ ರ್ಯಾರ್ಜುನನನ್ನು ಕೊಡಲಿಯಿಂದ ಕಡಿದು ಕೊಂದ ಪರಶುರಾಮನನ್ನು ಜಯಿಸಿದವ ನಾಗಿಯೂ ಈ ರಾವಣನು ಯಾವ ಮಹಾವೀರನಾದ ವಾಲಿಯ ಕಂಕುಳಲ್ಲಿ ಸಿಕ್ಕಿ ಕೊಂಡು ನರಳಿ ನಾಯಾಗಿ ಭಯದಿಂದ ಆತನೊಡನೆ ಅಗ್ನಿ ಸಾಕ್ಷಿಯಾಗಿ ಸ್ನೇಹವನ್ನು ಮಾಡಿಕೊಂಡನೋ ಅಂಥ ವಾಲಿಯನ್ನು ಒಂದೇ ಬಾಣದಿಂದ ಕೊಂದವನಾಗಿಯೂ ಇಂದ್ರಸಮಾನನಾದ ದಶರಥರಾಜನ ಪುತ್ರನಾಗಿಯೂ ತ್ರಿಲೋಕೈಕವೀರನಾಗಿಯೂ ರಾಕ್ಷಸಕುಲಮೂಲೋತ್ಪಾಟನತತ್ಪರನಾಗಿಯೂ ಧರ್ಮಸಂಸ್ಥಾಪನ ಧುರಂಧರನಾ ಗಿಯೂ ಇರುವ ಶ್ರೀರಾಮನ ದೂತನು. ಸುಗ್ರೀವನೆಂಬ ಕಪಿಮಹಾರಾಜನ ಮಂತ್ರಿಯು. ನನ್ನ ಹೆಸರು ಹನುಮಂತನೆಂದು ಪ್ರಸಿದ್ಧವಾಗಿರುವುದು. ಈ ಮೂರ್ಖ

ನಾದ ರಾವಣನು ತ್ರಿಭುವನವೀರವಂದಿತಪದಾಂಬುಜನಾದ ಶ್ರೀರಾಮನ ಪಟ್ಟಮಹಿಷಿ ಯಾಗಿಯೂ ಲೋಕಮಾತೃವಾಗಿಯೂ ಇರುವ ಸೀತೆಯನ್ನು ಅಪಹರಿಸಿಕೊಂಡು ಬಂದು ತನ್ನ ಪಟ್ಟಣದಲ್ಲಿಟ್ಟುಕೊಂಡುದರಿಂದ ರಾಮನ ಅಪ್ಪಣೆಯ ಪ್ರಕಾರ ಆಕೆ ಯನ್ನು ಹುಡುಕುವುದಕ್ಕಾಗಿ ಎಲ್ಲಾ ದಿಕ್ಕುಗಳಿಗೂ ಹೋದ ಕಪಿನಾಯಕರಂತೆ ನಾನು ದಕ್ಷಿಣದಿಕ್ಕಿನಲ್ಲಿರುವ ಈ ಪಟ್ಟಣಕ್ಕೆ ಬಂದು ಸೀತೆಯನ್ನು ಕಂಡು ಮಾತನಾಡಿಸಿದೆನು. ನಿನ್ನ ಯಜಮಾನನಾದ ಈ ರಾವಣನನ್ನು ಕಾಣಬೇಕೆಂಬ ಉದ್ದೇಶದಿಂದ ಈ ಅಶೋಕ ವನವನ್ನು ಮುರಿದೆನು ಬಹುಜನ ರಾಕ್ಷಸರು ನನ್ನನ್ನು ಕೊಲ್ಲುವುದಕ್ಕೆ ಬಂದರು. ಅದುಕಾರಣ ಅವರನ್ನೆಲ್ಲಾ ಸಂಹರಿಸಿ ಯಮನಗರಕ್ಕಟ್ಟಿದೆನು. ಬ್ರಹ್ಮಾಸ್ತ್ರದಿಂದಲೂ ಸಾಯದಂತೆ ನನಗೆ ಬ್ರಹ್ಮದೇವನ ವರವುಂಟು. ಬೇಕೆಂದದರಲ್ಲಿ ಕಟ್ಟುಬಿದ್ದು ಈ ರಾವ ಣನನ್ನು ಕಂಡು ಇವನಿಗೊಂದು ಬುದ್ಧಿವಾದವನ್ನು ಹೇಳಬೇಕೆಂದು ಈ ಚಾವಡಿಗೆ ಬಂದಿರುವೆನು. ಅದೇನೆಂದರೆ, ಈ ರಾವಣನಿಗೆ ಇನ್ನೂ ಬದುಕಬೇಕೆಂಬ ಆಶೆಯಿದ್ದರೆ ಈಗಲಾದರೂ ಸೀತೆಯನ್ನು ಕರೆದುಕೊಂಡುಹೋಗಿ ರಾಮನಿಗೊಪ್ಪಿಸಿ ಆತನಿಗೆ ಶರಣಾ ಗತನಾದರೆ ದಯಾಳುವಾದ ಶ್ರೀರಾಮನು ಇವನನ್ನು ಕಾಪಾಡುವನು. ಅದು ಇವನ ಮನಸ್ಸಿಗೆ ಸರಿಬಾರದಿದ್ದರೆ ಈಗಲೇ ತನ್ನ ಜೀವದ ಆಶೆಯನ್ನು ತೊರೆದುಕೊಳ್ಳಲಿ ಎಂಬುವುದೇ ಎಂದು ಹೇಳಿದನು.

ಆ ಮಾತುಗಳನ್ನು ಕೇಳಿದ ಕೂಡಲೆ ರಾವಣನು ಮಹಾಕೋಪೋದ್ದೀಪಿತ ನಾಗಿ ಹಿಂದುಮುಂದು ಯೋಚಿಸದೆ ಈ ಕೋಡಗವನ್ನು ಕೊಂದುಹಾಕಿಸೆಂದು ಪ್ರಹಸ್ತ ನಿಗೆ ಅಪ್ಪಣೆಕೊಡಲು; ಆಗ ನೀತಿವಿದನಾದ ವಿಭೀಷಣನು ರಾವಣನನ್ನು ನೋಡಿ— ನೀನು ರಾಕ್ಷಸ ಚಕ್ರವರ್ತಿಯಾಗಿ ದೂತನನ್ನು ಕೊಲ್ಲುವುದು ಧರ್ಮವಿಹಿತವಲ್ಲವು. ಪ್ರಪಂಚದಲ್ಲಿ ದೂತರು ತಮ್ಮ ಸ್ವಾಮಿಯನ್ನು ಹೊಗಳಿಕೊಳ್ಳುವುದು ಸ್ವಭಾವವು. ಇಷ್ಟು ಮಾತ್ರಕ್ಕೆ ಕೋಪವೇಕೆ? ದೂತರಾದವರು ಏನಾದರೂ ಹೆಚ್ಚಾಗಿ ಅಪರಾಧ ವನ್ನು ಮಾಡಿದರೆ ಅಂಥವರಿಗೆ ಸ್ವಲ್ಪ ಶಿಕ್ಷೆಯನ್ನು ವಿಧಿಸಬಹುದೆಂದು ಹೇಳಲು; ಆಗ ರಾವಣನು ತನ್ನ ದೂತರನ್ನು ನೋಡಿ—ಎಲೈ, ನೀವು ಈ ಕಪಿಯ ಕಿವಿಮೂಗು ಗಳನ್ನು ಕೊಯ್ದುಹಾಕಿರಿ. ಇಲ್ಲಿಂದ ಹೋಗಿ ತನ್ನೊಡೆಯನಿಗೆ ತೋರಿಸಲಿ ಎಂದು ಆಜ್ಞಾಪಿಸಲು ; ಆಗ ದೂತರು ಶೀಘ್ರವಾಗಿ ಚೂರಿ ಕತ್ತಿ ಈ ಮೊದಲಾದ ಆಯುಧ ಗಳನ್ನು ತಂದು ಕೊಯ್ಯುತ್ತಿದ್ದರೂ ಆಂಜನೇಯನ ಒಂದು ಕೂದಲಾದರೂ ಕತ್ತರಿಸಿ ಹೋಗದೆ ಆಯುಧಗಳೆಲ್ಲಾ ಮುರಿದು ನಿರರ್ಥಕವಾಗುತ್ತಿರಲು ; ರಾವಣನು ನೋಡಿ ಬೆರಗಾಗಿ ಮೂಗಿನ ಮೇಲೆ ಬೆರಳಿಟ್ಟುಕೊಂಡು ಕಿರುನಗೆಯಿಂದ ಪ್ರಹಸ್ತನನ್ನು ನೋಡಿ– ಇದೇನು ಪ್ರಹಸ್ತನೇ, ಪರಮಾಶ್ಚರ್ಯವಾಗಿದೆ! ಆಗಲಿ. ಕಪಿಗಳಿಗೆ ಬಾಲವು ಪ್ರಧಾ ನವಾದುದರಿಂದ ಈ ಕಪಿಯ ಬಾಲಕ್ಕೆ ಬಟ್ಟೆಗಳನ್ನು ಸುತ್ತಿ ಎಣ್ಣೆಯನ್ನು ಹೊಯ್ದು ಅಗ್ನಿಯನ್ನು ಹೊತ್ತಿಸಿಬಿಡಿರೆಂದು ಹೇಳಲು; ಇದು ಸರಿಯೆಂದು ಒಪ್ಪಿ ಎಲ್ಲರೂ ಆಂಜನೇಯನ ಬಳಿಗೆ ಬರಲು ; ಆಗ ಮಾರುತಿಯು—ಚೀರಿ ಕೀರಿ ಕಿರುಗುಟ್ಟುತ್ತಾ ಹಾರಿಬಿದ್ದು ಹಲ್ಗಿರಿದು ಹುಬ್ಬುಗಳನ್ನು ಹಾರಿಸುತ್ತ ತಲೆಯನ್ನು ಕುಣಿಸುತ್ತ ಹೆದರಿ

ಸುತ್ತ ಮೈತುರಿಸಿಕೊಳ್ಳುತ್ತ ಆರವತ್ತು ಸಾವಿರ ಯೋಜನಗಳಷ್ಟುದ್ದವಾಗಿ ತನ್ನ ಬಾಲವನ್ನು ಬೆಳಿಸುವುದಕ್ಕೆ ಆರಂಭಿಸಿದನು. ರಾವಣನ ಆಳುಗಳು ಕಪಿಯನ್ನು ಮುತ್ತಿಕೊಂಡು ಬಾಲಕ್ಕೆ ಬಟ್ಟೆಗಳನ್ನು ಸುತ್ತುತ್ತ ಬಂದ ಹಾಗೆಲ್ಲಾ ಬಾಲವು ಮುಂದಕ್ಕೆ ಬೆಳೆಯುತ್ತ ಸಾಗುತ್ತಿರಲು; ಆಗ ಲಂಕಾಪಟ್ಟಣದಲ್ಲಿದ್ದ ವಸ್ತ್ರಗಳನ್ನೆಲ್ಲಾ ತಂದು ಸುತ್ತಿ ಎಣ್ಣೆಯನ್ನು ಹೊಯ್ದು ನೆನಸಿದರು.

ಆ ಮೇಲೆ ರಾವಣನ ಅಪ್ಪಣೆಯನ್ನು ಹೊಂದಿ ರಾಕ್ಷಸದೂತರು ಹತ್ತಿಗಳ ಹೊರೆಗಳನ್ನು ತಂದು ಬಾಲದ ಕೊನೆಗೆ ಸುತ್ತಿ ಕಟ್ಟಿ ಕಣಜಗಳನ್ನು ಒಡೆದು ಸರ್ಜರಸ ಗುಡ ಕರ್ಪೂರ ಈ ಮೊದಲಾದುವುಗಳನ್ನು ಮೆತ್ತಿ ಬೆಂಕಿಯನ್ನು ಹೊತ್ತಿಸಿ ಅವನ ಸೊಂಟಕ್ಕೆ ಹಗ್ಗವನ್ನು ಕಟ್ಟಿ ಹಿಡಿದು ಊರಲ್ಲೆಲ್ಲಾ ಡಂಗುರವನ್ನು ಹೊಡೆದುಕೊಂಡು ಮೆರೆಯಿಸುತ್ತ ಬರುತ್ತಿರುವಲ್ಲಿ ಆ ಪಟ್ಟಣದ ಸಮಸ್ತ ರಾಕ್ಷಸ ಸ್ತ್ರೀಪುರುಷರೆಲ್ಲಾ ಧಗದ್ಧಗಾಯಮಾನವಾಗಿ ಉರಿಯುತ್ತಿರುವ ಮಹಾದೀರ್ಘವಾದ ಬಾಲವುಳ್ಳ ಆಂಜನೇಯನನ್ನು ನೋಡಿ ಕೈತಟ್ಟಿ ನಕ್ಕು ಸಂತೋಷಪಟ್ಟರು. ಆಗ ಹನುಮಂತನು— ನಾನು ನಿನ್ನೆಯ ರಾತ್ರಿಯಲ್ಲಿ ಈ ಲಂಕಾಪಟ್ಟಣವನ್ನು ಚೆನ್ನಾಗಿ ನೋಡಲಿಲ್ಲ. ಆದುಕಾರಣ ಈಗ ಈ ಲಂಕಾಪಟ್ಟಣದ ಹೆಬ್ಬಾಗಿಲುಗಳನ್ನೂ ದಿಡ್ಡಿಬಾಗಿಲುಗಳನ್ನೂ ಕನ್ನಗಂಡಿಗಳನ್ನೂ ಸುರಂಗಗಳನ್ನೂ ಯಂತ್ರಗಳನ್ನೂ ಅವುಗಳ ಕೀಲುಗಳನ್ನೂ ಸ್ಪಷ್ಟವಾಗಿ ನೋಡಿ ಈ ಪಟ್ಟಣದ ವಿಶೇಷಸ್ಥಿತಿಗಳನ್ನೂ ರಹಸ್ಯವಿಷಯಗಳನ್ನೂ ತಿಳಿದುಕೊಂಡು ಕಡೆಗೆ ಇವರನ್ನೆಲ್ಲಾ ಕೊಂದು ರಾಮನ ಬಳಿಗೆ ಹೋಗಬೇಕು. ಇನ್ನು ಸ್ವಲ್ಪ ಕಾಲದ ವರೆಗೂ ಇವರು ನನ್ನನ್ನು ಹಿಡಿದು ಸಾಂಕೊಂಡು ಈ ಪಟ್ಟಣದಲ್ಲಿ ತಿರುಗುತ್ತಿರಲಿ ಎಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಸುಮ್ಮನಿದ್ದನು. ಆಗ ಸೀತೆಯನ್ನು ಕಾಯ್ದುಕೊಂಡಿದ್ದ ರಾಕ್ಷಸಿಯರು ಈ ಸಂಗತಿಯನ್ನೆಲ್ಲಾ ಕಂಡು ಕೇಳಿ ಸೀತೆಯ ಬಳಿಗೆ ಹೋಗಿ—ಎಲೈ ಜಾನಕಿಯೇ, ಕಳೆದ ರಾತ್ರಿಯಲ್ಲಿ ನಿನ್ನ ಸಂಗಡ ಮಾತಾಡಿದ ಕೆಂಪುಮೊಗವುಳ್ಳ ಕೋತಿಯ ಬಾಲಕ್ಕೆ ಬಟ್ಟೆಗಳನ್ನು ಸುತ್ತಿ ಎಣ್ಣೆಯಲ್ಲದ್ದಿ ಬೆಂಕಿಯನ್ನು ಹೊತ್ತಿಸಿ ನಡುವಿಗೆ ಹಗ್ಗವನ್ನು ಕಟ್ಟಿ ಹಿಡಿದುಕೊಂಡು ಊರಲ್ಲೆಲ್ಲಾ ಸಾರುತ್ತ ತಿರುಗಿಸುತ್ತಾರೆ ಎಂದು ಹೇಳಿದರು. ವೈದೇಹಿಯು ಆ ಮಾತುಗಳನ್ನು ಕೇಳಿ ಬಹಳವಾಗಿ ದುಃಖಿಸಿ ಅಗ್ನಿಪುರುಷನಿಗೆ ನಮಸ್ಕರಿಸಿ—ಎಲೈ ಮಹಾತ್ಮನಾದ ಅಗ್ನಿದೇವತೆಯೇ, ನಾನು ಈ ವರೆಗೂ ಸತ್ಯವಾಗಿ ಪತಿಶುಶ್ರೂಷೆಯನ್ನು ಮಾಡಿ ಪಾತಿವ್ರತ್ಯಧರ್ಮವನ್ನು ಕಾಪಾಡಿರುವವಳೂ ಒಳ್ಳೆಯ ನಡತೆಯಿಂದ ಕೂಡಿದವಳೂ ಆಗಿರುವುದೂ ಶ್ರೀರಾಮಚಂದ್ರನು ಪುನಃ ನನ್ನನ್ನು ಕೂಡುವುದರಲ್ಲಿ ಆಶೆಯುಳ್ಳವನಾಗಿ ಬಂದು ನನ್ನನ್ನು ಈ ದುಃಖಸಮುದ್ರದ ದೆಸೆಯಿಂದ ದಾಟಿಸುವುದೂ ನನಗೆ ಒಳ್ಳೆಯ ಭಾಗ್ಯವುಂಟಾಗುವುದೂ ನಿಜವಾಗಿದ್ದರೆ ನಿನ್ನ ಉಷ್ಣವು ಈ ಹನುಮಂತನಿಗೆ ಹಿಮೋದಕದಂತೆ ಶೀತಲವಾಗಲಿ ಎಂದು ಭಯಭರಿತಭಕ್ತಿಭಾವದಿಂದ ಕೂಡಿ ಅನೇಕ ಪ್ರಕಾರವಾಗಿ ಪ್ರಾರ್ಥಿಸಿದಳು.

ಇತ್ತಲಾ ಹನುಮಂತನು ತನ್ನ ಬಾಲವು ಅಗ್ನಿ ಮಹಾಜ್ವಾಲೆಯಿಂದ ಕೂಡಿರುವುದನ್ನು ನೋಡಿ—ನನ್ನ ಬಾಲದಲ್ಲಿ ಅಗ್ನಿಯ ಮಹಾಜ್ವಾಲೆಯು ಕಾಣುತ್ತಿದೆ.

ಆದಾಗ್ಯೂ ಸ್ವಲ್ಪವೂ ಸುಡುವುದಿಲ್ಲ. ಪನ್ನೀರನ್ನು ಸುರಿದಂತೆ ಶೀತಲವಾಗಿದೆ. ಸೀತೆಯ ಪಾತಿವ್ರತ್ಯಧರ್ಮದಿಂದಲೂ ಶ್ರೀರಾಮನ ಸತ್ಯಪ್ರಭಾವದಿಂದಲೂ ನನ್ನ ತಂದೆಯಾದ ವಾಯುದೇವನ ಕರುಣದಿಂದಲೂ ಈ ಅಗ್ನಿಯ ಉಷ್ಣತೆಯು ನನ್ನನ್ನು ಮುಟ್ಟಲಾರದು ಎಂದು ನಿಶ್ಚಯಿಸಿ ಸಂತೋಷವುಳ್ಳವನಾಗಿ ಅತ್ಯುನ್ನತರೂಪವನ್ನು ಧರಿಸಿ ರಾಕ್ಷಸರು ತನ್ನ ನಡುವಿಗೆ ಕಟ್ಟಿದ್ದ ಹಗ್ಗಗಳನ್ನು ತುಂಡುತುಂಡಾಗುವಂತೆ ಕಿತ್ತು ಬಿಸುಟು ನೆಗೆಯುತ್ತ ಬಂದು ಊರುಬಾಗಿಲ ಕಬ್ಬಿಣದ ಲಾಳ್ಕಂಡಿಗೆಯನ್ನು ತೆಗೆದುಕೊಂಡು ತನ್ನ ಜತೆಯಲ್ಲಿ ಸಾರುತ್ತ ಬರುತ್ತಿದ್ದ ರಕ್ಕಸರನ್ನೆಲ್ಲಾ ಒಡಿದುರುಳಿಸಿ ಕುಪ್ಪಳಿಸಿ ಊರುಬಾಗಿಲ ಉಪ್ಪರಿಗೆಯ ಮೇಲೆ ಕುಳಿತುಕೊಂಡು—ಇನ್ನು ಮೇಲೆ ನಾನು ಮಾಡತಕ್ಕ ಕೆಲಸವಾವುದಿರುವುದು? ವನವನ್ನು ಮುರಿದೆನು; ಶ್ರೇಷ್ಠರಾದ ರಾಕ್ಷಸರನ್ನು ಕೊಂದೆನು. ಇಲ್ಲಿರುವ ಚತುರಂಗಬಲದಲ್ಲಿ ಕಾಲುಪಾಲನ್ನು ಸದೆದೆನು. ಇನ್ನು ಈ ಲಂಕಾದುರ್ಗವನ್ನು ಸುಟ್ಟು ಹಾಳುಮಾಡುವುದೊಂದೇ ಕೆಲಸ ಉಳಿದಿರುವುದು. ಈಗ ನನಗೆ ಸ್ವಲ್ಪವಾದರೂ ನೋವನ್ನು ಕೊಡದೆ ನನ್ನ ಬಾಲದಲ್ಲಿ ಉರಿಯುತ್ತಿರುವ ಅಗ್ನಿದೇವತೆಗೆ ಪ್ರತ್ಯುಪಕಾರವಾಗಿ ಈ ನಗರವನ್ನು ಆಹುತಿಕೊಡುವುದು ಕೃತಜ್ಞತೆಯಾಗಿರುವುದು ಎಂದು ಯೋಚಿಸಿಕೊಂಡು ಅಲ್ಲಿಂದ ಹೊರಟು ಮನೆಯಿಂದ ಮನೆಗೆ ನೆಗೆಯುತ್ತ ಅವುಗಳಿಗೆಲ್ಲಾ ಬೆಂಕಿಯನ್ನು ಹೊತ್ತಿಸುತ್ತ ಪಲ್ಗಿರಿದಣಕಿಸಿ ಅಬ್ಬರಿಸುತ್ತ ನಿರ್ಭಯದಿಂದ ಸಂಚರಿಸುತ್ತ ಅಲ್ಲಿಂದ ಪ್ರಹಸ್ತನ ಮನೆಯ ಮೇಲಕ್ಕೆ ಹಾರಿ ಅದಕ್ಕೂ ಬೆಂಕಿಯನ್ನು ಹೊತ್ತಿಸಿ ವಿಭೀಷಣನ ಮನೆಯೊಂದು ಹೊರತು ಮಹಾಪಾರ್ಶ್ವಾದಿ ಸಮಸ್ತ ರಾಕ್ಷಸರ ಮನೆಗಳಿಗೆಲ್ಲಾ ಬೆಂಕಿಯನ್ನು ಹೊತ್ತಿಸಿ ಕಡೆಗೆ ರಾವಣನ ಮನೆಗೂ ಅಗ್ನಿಯನ್ನಂಟಿಸಿ ಸಂತೋಷದಿಂದ ನೋಡುತ್ತಿರಲು; ಅಗ್ನಿಯು ವ್ಯಾಪಿಸಿಕೊಂಡು ಲಂಕಾಪಟ್ಟಣವನ್ನೆಲ್ಲಾ ದಹಿಸುತ್ತಿದ್ದಿತು. ಆಗ ಪುಣ್ಯನಾಶದಲ್ಲಿ ಸ್ವರ್ಗದಿಂದ ಭೂಮಿಗುರುಳುವ ವಿಮಾನಗಳಂತೆ ನವರತ್ನಖಚಿತಗಳಾದ ಮಹಾಸೌಧಗಳೂ ಸಪ್ತಭೂಮಿಕಾ ಗೃಹಗಳೂ ಮುರಿದು ಮುರಿದು ಭೂಮಿಯಲ್ಲಿ ಬೀಳುತ್ತಿದ್ದುವು. ಆಗ ಲಂಕಾಪಟ್ಟಣದ ಸ್ಥಿತಿಯು ಪರಿತಾಪಕರವಾಗಿದ್ದಿತು.

ಆಗ ರಾಕ್ಷಸರೆಲ್ಲರೂ ತಮ್ಮ ತಮ್ಮ ಮನೆಗಳ ಪದಾರ್ಥಗಳನ್ನು ಕಾಪಾಡುವುದರಲ್ಲಿ ಆಶೆಯನ್ನು ತೊರೆದು ತಮ್ಮ ತಮ್ಮ ಪ್ರಾಣರಕ್ಷಣೆಯಲ್ಲೇ ಉದ್ಯುಕ್ತರಾಗಿ ದಿಕ್ಕುದಿಕ್ಕಿಗೆ ಓಡುತ್ತಿದ್ದರು. ಅವರಲ್ಲಿ ಕೆಲರು—ಅಯ್ಯೋ! ಇದು ನಿಜವಾಗಿಯೂ ಕೋಡಗನಲ್ಲ. ಸತ್ಯವಾಗಿ ಕಪಿರೂಪನ್ನು ಧರಿಸಿ ಬಂದ ಅಗ್ನಿಯೇ ಸರಿ. ಅಯ್ಯೋ! ಈ ಲಂಕಾನಗರಕ್ಕೆ ಪ್ರಳಯಾಗ್ನಿಯು ಹೊಕ್ಕು ಪಟ್ಟಣವನ್ನೇ ನಿರ್ಮೂಲಮಾಡುತ್ತಿರುವುದಲ್ಲಾ! ಎಂದು ಕೂಗಿ ದುಃಖಿಸುತ್ತ ಓಡಿದರು. ಕೆಲರು ಅಗ್ನಿಜ್ವಾಲೆಯು ತಮ್ಮನ್ನು ಸುಡುವುದಕ್ಕೆ ಬಂದುದನ್ನು ಕಂಡು—ಹಾ! ಕೆಟ್ಟೆವಲ್ಲಾ! ಗತಿಯೇನು? ಎಂದು ಮೊರೆಯಿಡುತ್ತ ಹಸುಗೂಸುಗಳನ್ನೆತ್ತಿಕೊಂಡು ಓಡಿಹೋದರು. ಆಗ ರಾಕ್ಷಸಿಯರು ಮೈಮೇಲಿನಿಂದ ಜಾರಿ ಬೀಳುತ್ತಿರುವ ವಸ್ತ್ರವನ್ನೆತ್ತಿ ಕಟ್ಟದೆ ಬಿಚ್ಚಿ ಕೆದರಿ ಹೋದ ತಲೆಗೂದಲುಳ್ಳವರಾಗಿ ತೋರಿದ ಕಡೆಗೋಡಿದರು. ಲಂಕಾನಗರದಲ್ಲಿ ಎಲ್ಲಿ

ನೋಡಿದರೂ—ಹಾ! ಮಗನೇ, ಹಾ! ತಂದೆಯೇ, ಅಯ್ಯೋ! ಅತ್ತಿಗೆಯೇ, ಇಂದಿಗೆ ಭೂಲೋಕದ ಹಂಗು ಹರಿಯಿತೇ? ಅಗ್ನಿಯಲ್ಲಿ ಸಿಕ್ಕಿ ನಿಮೇಷಮಾತ್ರದಲ್ಲಿ ಮಾಯವಾದಿರಲ್ಲಾ! ಮಹಾಜ್ವಾಲೆಯಲ್ಲಿ ಅವನು ಬಿದ್ದನು; ಇವಳು ಸಿಕ್ಕಿದಳು; ಅವನ ಕಾಲು ಸೀದುಹೋಯಿತು; ಅವನ ಬೆನ್ನು ಬೆಂದಿತು; ಹಾ! ಅವನು ಓಡುತ್ತ ಬಂದು ಬೆಂಕಿಗೆ ಸಿಕ್ಕಿ ಸತ್ತನು ಎಂದು ಲಂಕಾನಗರದಲ್ಲಿ ಕೂಗುತ್ತಿದ್ದರು. ಲಂಕಾನಗರವು ದುಃಖಧ್ವನಿಮಯವಾಯಿತು. ವೀರರೆಲ್ಲರೂ ತಮ್ಮ ತಮ್ಮ ಶರೀರರಕ್ಷಣೆಯಲ್ಲೇ ಆಸಕ್ತರಾದರು. ಹೇಳತಕ್ಕುದೇನು? ಓಡುತ್ತಿರುವ ಜನರಿಗೆ ಲಂಕಾದುರ್ಗದ ಹೆಬ್ಬಾಗಿಲುಗಳು ಇಕ್ಕಟ್ಟಾದುವು. ವಿರೋಧಿಗಳನ್ನು ತಡೆಯುವುದಕ್ಕಾಗಿ ಕಟ್ಟಿದ್ದ ಕೋಟೆಗಳು ತಮ್ಮ ವಿಪತ್ತಿಗೇ ಕಾರಣವಾದುವು. ತೇರು ಆನೆ ಕುದುರೆ ಮಂದಿ ಒಂಟೆ ಎತ್ತು ಹಸು ಮೊದಲಾದುವುಗಳೂ ಅಸಂಖ್ಯಾತ ರಾಕ್ಷಸರೂ ಬೆಂಕಿಯಲ್ಲಿ ಸುಟ್ಟು ಬೂದಿಯಾಗಿಹೋದರು. ಪಾಪಿಯಾದ ಈ ರಾವಣನು ಮೂಳಿಯಾದ ಶೂರ್ಪನಖಿಯ ದುರ್ಬೋಧೆಯನ್ನು ಕೇಳಿ ಮಹಾರಾಜನಾದ ರಾಮನ ಧರ್ಮಪತ್ನಿಯನ್ನು ತಂದು ನಮ್ಮನ್ನು ಈ ಪಾಡಿಗೆ ಗುರಿಮಾಡಿದನು. ತಾನಾದರೂ ಬದುಕುವನೇ? ಅದೂ ಇಲ್ಲ. ಮಕ್ಕಳು ಮರಿಗಳೊಡನೆ ನಿರ್ಮೂಲವಾಗಿಹೋಗುವನು. ಲೋಕದಲ್ಲಿ ಪರನಾರಿಯರಿಗೆ ಆಶೆಪಟ್ಟವರು ಎಂದಿಗೂ ಬಾಳುವುದಿಲ್ಲ. ಕ್ರೂರಾತ್ಮಳಾದ ಶೂರ್ಪನಖಿಯು ಈ ನಗರವನ್ನು ತನ್ನ ಮುಖದಂತೆ ಅಮಂಗಲಕ್ಕೆ ಗುರಿಮಾಡಿದಳು ಎಂದು ಆ ಪಟ್ಟಣದವರೆಲ್ಲಾ ಮೊರೆಯಿಡುತ್ತಿದ್ದರು. ಅನಂತರದಲ್ಲಿ ಧೀರನಾದ ಆಂಜನೇಯನು ಈ ರೀತಿಯಾಗಿ ಲಂಕಾನಗರವನ್ನೆಲ್ಲಾ ದಹಿಸಿ ಸರ್ವರಾಕ್ಷಸಪ್ರಜೆಯನ್ನೂ ಕಂಗೆಡಿಸಿ ಪುನಃ ಸೀತೆಯ ಬಳಿಗೆ ಬಂದು ವೃತ್ತಾಂತವನ್ನೆಲ್ಲಾ ತಿಳಿಸಿ ಆಕೆಗೆ ಧೈರ್ಯವಚನವನ್ನು ಹೇಳಿ ಅಪ್ಪಣೆಯನ್ನು ತೆಗೆದುಕೊಂಡು ಅಲ್ಲಿಂದ ಹೊರಟು ಒಂದೇ ಲಂಘನದಿಂದ ಸಮುದ್ರವನ್ನು ದಾಟಿ ಜಾಂಬವತಾದಿ ಕಪಿವೀರರಿರುವಲ್ಲಿಗೆ ಬಂದು ವೃದ್ಧನಾದ ಜಾಂಬವಂತನ ಪಾದಗಳಿಗೆರಗಲು; ಆಗ ಆತನು ಹನುಮಂತನನ್ನು ಅಪ್ಪಿಕೊಂಡು—ಎಲೈ ಬಾಲಕನೇ, ಸೌಖ್ಯದಿಂದ ಬಂದೆಯಾ? ಅವನಿಜಾತೆಯನ್ನು ನೋಡಿದೆಯಾ? ನೀನು ಹೋದಂದಿನಿಂದ ಈ ವರೆಗೂ ನಡೆದ ಸಂಗತಿಯನ್ನೆಲ್ಲಾ ಸಂಪೂರ್ಣವಾಗಿ ಹೇಳು ಎನ್ನಲು; ಹನುಮಂತನು ತಾನು ನಡಿಸಿದ ಕೃತ್ಯಗಳನ್ನೆಲ್ಲಾ ಕ್ರಮವಾಗಿ ವಿವರಿಸಿದನು. ಆಗ ಜಾಂಬವಂತನು ಕಪಿವೀರರೊಡನೆ ಆಂಜನೇಯನನ್ನು ಶ್ಲಾಘಿಸಿ ಅಲ್ಲಿಂದ ಹೊರಟು, ಸುಗ್ರೀವನಿದ್ದ ಮಧುವನಕ್ಕೆ ಬಂದು ಅವನಿಗೆ ಸಂಗತಿಯನ್ನೆಲ್ಲಾ ಸಾಂಗವಾಗಿ ತಿಳಿಸಿ ಯಥೇಷ್ಟವಾಗಿ ಮಧುಪಾನವನ್ನು ಮಾಡಿ ಆನಂದಿಸಿ ನೆಗೆಯುತ್ತ ಕುಣಿಯುತ್ತ ಕುಪ್ಪಳಿಸುತ್ತ ಕಿರುಚುತ್ತ ಆರ್ಭಟಿಸುತ್ತ ಶ್ರೀರಾಮನಿರುವ ಋಷ್ಯಮುಕಾದ್ರಿಗೆ ಬಂದನು.

ಅನಂತರದಲ್ಲಿ ಶ್ರೀರಾಮನು ನಗೆಮೊಗಗಳಿಂದ ಕೂಡಿ ತನ್ನ ಬಳಿಗೆ ಬಂದ ಕಪಿವೀರರನ್ನು ನೋಡಿ—ಎಲೈ ಕಪಿನಾಯಕರೇ, ನೀವು ಹೋಗಿದ್ದ ಕಾರ್ಯವು ಜಯವಾಯಿತೇ? ನೀನೆಲ್ಲರೂ ಕ್ಷೇಮದಿಂದ ಬಂದಿರಾ? ಎಂದು ಕೇಳಲು; ಆಗ ಜಾಂಬ

ವಂತನು ಕೈಮುಗಿದು ನಿಂತು—ಜೀಯಾ, ಅವಧರಿಸು. ಮಹಾತ್ಮನಾದ ನಿನ್ನ ಮಹಿಮೆಯ ಬಲವು ನಮಗಿರುವಲ್ಲಿ ಆಶ್ರಿತರಾದ ನಮ್ಮ ಕ್ಷೇಮಕ್ಕೆ ಯಾವ ಹಾನಿಯುಂಟು ? ಯಾವ ಕಾರ್ಯವು ತಾನೆ ಅಸಾಧ್ಯವು ? ನಾವು ನಿನ್ನ ಸನ್ನಿಧಿಯಿಂದ ಹೊರಟು ದಾರಿತಪ್ಪಿ ಸ್ವಯಂಪ್ರಭಾಗುಹೆಯನ್ನು ಪ್ರವೇಶಿಸಿ ಆಕೆಯಿಂದ ಸತ್ಕೃತರಾಗಿ ಮುಂದಕ್ಕೆ ಹೊರಟುಬರುತ್ತ ಅಲ್ಲಿಗೆ ಇಪ್ಪತ್ತೇಳು ದಿನಗಳು ಗತಿಸಿಹೋದುದರಿಂದ ನಾವೆಲ್ಲರೂ ವ್ಯಸನಾಕ್ರಾಂತರಾಗಿ ಕೂತಿದ್ದೆವು ಆಗ ಅಲ್ಲಿದ್ದ ಜಟಾಯುವಿನಣ್ಣನಾದ ಸಂಪಾತಿಯಿಂದ ಲಂಕಾಮಾರ್ಗವನ್ನು ತಿಳಿದು ದಕ್ಷಿಣಸಮುದ್ರತೀರಕ್ಕೆ ಹೋದೆವು. ಆ ಮೇಲೆ ಈ ಧೀರನಾದ ಆಂಜನೇಯನು ಸಮುದ್ರವನ್ನು ದಾಟಿ ಲಂಕಾನಗರಕ್ಕೆ ಹೋಗಿ ಸೀತಾದೇವಿಯನ್ನು ಕಂಡು ಅನೇಕ ರಾಕ್ಷಸರನ್ನು ಕೊಂದು ಲಂಕೆಯನ್ನು ಸುಟ್ಟು ಬಂದನು ಎಂದು ಹೇಳಿ ಹನುಮಂತನನ್ನು ರಾಮನ ಪಾದಗಳ ಮೇಲೆ ಕೆಡಹಲು; ಶ್ರೀರಾಮನು ಆಂಜನೇಯನನ್ನು ತೆಗೆದಪ್ಪಿ ಮುದ್ದಾಡಿ—ನನ್ನ ಕಂದನೇ, ನನ್ನ ಬಂಧುವೇ, ನನ್ನ ದುಃಖವನ್ನು ಪರಿಹರಿಸುವುದಕ್ಕಾಗಿ ಅಪಾರಶ್ರಮವನ್ನು ಹೊಂದಿದೆಯಲ್ಲಾ ! ಎಂದು ಮೈದಡವಿ ಆತನು ಕೊಟ್ಟ ಶಿರೋರತ್ನವನ್ನು ತೆಗೆದುಕೊಂಡು ನೋಡಿ ಸೀತೆಯನ್ನೇ ಕಂಡಂತೆ ಸಂತುಷ್ಟನಾದರೂ ಪರರೆಡೆಯಲ್ಲಿ ಸಿಕ್ಕಿ ಕಷ್ಟಪಡುತ್ತಿರುವ ಆಕೆಯನ್ನು ನೆನನೆನದು ಮರುಗಿ ಶೀಘ್ರವಾಗಿ ಮುಂದೆ ಮಾಡತಕ್ಕ ಪ್ರಯತ್ನಗಳನ್ನು ಸುಗ್ರೀವನಿಗೆ ನೇಮಿಸುತ್ತಿದ್ದನು.

---

## 6. BRIDGING THE SEA OVER TO LANKA.

## ೬. ಸೇತುಬಂಧನದ ಕಥೆ.

ಶ್ರೀರಾಮನು ಋಷ್ಯಮೂಕಮಹೀಧರದಲ್ಲಿ ಆಂಜನೇಯನ ಮುಖದಿಂದ ಸೀತಾರಾವಣರ ವರ್ತಮಾನವನ್ನು ಕೇಳಿದ ಮೇಲೆ ಆ ರಾತ್ರಿಯೇ ಸಭೆಯನ್ನು ಮಾಡಿ ಸುಗ್ರೀವನನ್ನು ನೋಡಿ—ಎಲೈ ಪ್ರಿಯಸಖನೇ, ಮೊದಲು ನೀನು ನನಗೆ ನಂಬುಗೆಯನ್ನು ಕೊಟ್ಟಂತೆಯೇ ನನ್ನ ಪ್ರಾಣವಲ್ಲಭೆಯಿರುವ ಸ್ಥಳವನ್ನೂ ಆಕೆಯನ್ನು ಅಪಹರಿಸಿಕೊಂಡು ಹೋದ ದುಷ್ಟ ರಾವಣನಿರುವ ಸ್ಥಾನವನ್ನೂ ಗೊತ್ತುಮಾಡಿಸಿ ತಿಳಿಸಿದವನಾದಿ. ನನ್ನ ಪ್ರಿಯಳು ಸಂಕಟಪಡುತ್ತಿರುವುದನ್ನು ಕೇಳಿ ಒಂದು ಕ್ಷಣಕಾಲವಾದರೂ ಸಹಿಸಿಕೊಂಡಿರಲಾರೆನು. ಯಾವಾಗ ನನ್ನ ಹಗೆಯಾದ ರಾವಣನನ್ನು ಕೊಂದು ನನ್ನ ಪ್ರಿಯೆಯಾದ ಸೀತೆಯನ್ನು ಬಿಡಿಸಿಕೊಂಡುಬರುವೆನೋ ? ಎಂಬ ಆತುರವು ನನ್ನನ್ನು ಪೀಡಿಸುತ್ತಿದೆ. ನೀನು ಇನ್ನು ಮೇಲೆ ಈ ಭಾಗದಲ್ಲಿ ಏನು ಯೋಚನೆಯನ್ನು ಮಾಡಿರುವಿ ? ಅದನ್ನು ತಿಳಿಸು ಎಂದು ಕೇಳಲು; ಸುಗ್ರೀವನು ಎದ್ದು ಕೈಮುಗಿದು ನಿಂತು—ಜೀಯಾ, ನಿನ್ನ ಅಮಾನುಷ ಪರಾಕ್ರಮಕ್ಕೆ ಈ ಬ್ರಹ್ಮಾಂಡವೇ ವಶವರ್ತಿಯಾಗುವುದು. ಪಟ್ಟಣವನ್ನು ನುಂಗುವವನಿಗೆ ಕದವು ಹಪ್ಪಳವು ಎಂಬ ಗಾದೆಗನುಸಾರವಾಗಿ ಈ ಚತುರ್ದಶ ಭುವನಂಗಳನ್ನು ಏಕಕಾಲದಲ್ಲಿ ಸಂಹರಿಸುವು

ದಕ್ಕೆ ಶಕ್ತನಾದ ನಿನಗೆ ಈ ಅಲ್ಪಜೀವಿಯಾದ ರಾವಣನು ಎಷ್ಟುಮಾತ್ರದವನು? ಅಲ್ಲದೆ ನಿನ್ನ ದಯೆಯಿಂದ ಇಲ್ಲಿರುವ ಕಪಿವೀರರೂ ಮಹಾಪರಾಕ್ರಮಶಾಲಿಗಳಾಗಿದ್ದಾರೆ. ನಿನ್ನ ಅಪ್ಪಣೆಯಾದರೆ ಮೂರೇ ದಿನಗಳಲ್ಲಿ ಬೆಟ್ಟಗಳಿಂದಲೂ ಗುಡ್ಡಗಳಿಂದಲೂ ಅನೇಕವಾದ ವೃಕ್ಷಗಳಿಂದಲೂ ಕಡಲನ್ನು ಮುಚ್ಚಿ ಪ್ರಯಾಣಕ್ಕೆ ಅನುಕೂಲವಾದ ಮಾರ್ಗವನ್ನು ಮಾಡಿಸುವೆನು. ಆ ಮೇಲೆ ನೀನು ಲಕ್ಷ್ಮಣನೊಡನೆ ಕೂಡಿ ಈ ಕಪಿಸೇನಾಸಮೇತನಾಗಿ ಲಂಕೆಗೆ ಹೋಗಿ ದುಷ್ಟನಾದ ರಾವಣನನ್ನು ಸಂಹರಿಸಬಹುದು. ಈಗ ಸಮಸ್ತ ಕಪಿವೀರರೊಡನೆ ಕೂಡಿದ ನಾನು ನಿನ್ನ ಕಾರ್ಯದಲ್ಲಿ ಬದ್ಧಕಂಕಣನಾಗಿ ನಿಂತು ನಮ್ಮ ನಮ್ಮ ಪ್ರಾಣಗಳನ್ನು ಹುಲ್ಲಿಗಿಂತಲೂ ಕಡೆಯಾಗಿ ಎಣಿಸುವವರಾಗಿದ್ದೇವೆ. ಇದೋ, ಈ ಅಗ್ನಿಯ ಮಗನಾದ ನೀಲನೆಂಬ ವಾನರೋತ್ತಮನು ಮಹಾಸಮರ್ಥನಾಗಿಯೂ ಯುಕ್ತಾಯುಕ್ತ ವಿಚಾರತತ್ಪರನಾಗಿಯೂ ಇರುವುದರಿಂದ ಈತನು ಸಕಲ ಕಪಿಬಲಕ್ಕೂ ಯಜಮಾನನಾಗಿರುವಂತೆ ಈತನಿಗೆ ಪಟ್ಟಾಭಿಷೇಕವನ್ನು ಮಾಡಿಸಬೇಕು. ಜಾಂಬವಂತನು ಮುದುಕನಾಗಿಯೂ ಅನುಭವಶಾಲಿಯಾಗಿಯೂ ಸಕಲ ರಾಜನೀತಿಗಳನ್ನು ತಿಳಿದವನಾಗಿಯೂ ಸದಸದ್ವಿಚಾರವನ್ನು ಬಲ್ಲವನಾಗಿಯೂ ಇರುವುದರಿಂದ ಈತನನ್ನು ಮಂತ್ರಾಲೋಚನೆಗೆ ಇರಿಸಿಕೊಳ್ಳಬೇಕು. ವಾಲಿಯ ಮಗನಾದ ಅಂಗದನು ಯುವರಾಜನಾಗಿಯೂ ಮಹಾಬಲಶಾಲಿಯಾಗಿಯೂ ಇರುವುದರಿಂದ ಆತನನ್ನು ನಮ್ಮ ಸರ್ವಕಪಿಸೇನೆಗಳ ಮೇಲೆ ವಿಚಾರಣೆಯನ್ನು ಮಾಡಿಕೊಂಡು ಕಾಪಾಡುವ ಕಾರ್ಯದಲ್ಲಿ ನಿಲ್ಲಿಸಬೇಕು. ಪರಾಕ್ರಮದಲ್ಲಿ ರುದ್ರನಿಗೆ ಸಮಾನನಾದ ಆಂಜನೇಯನನ್ನು ನಿಮ್ಮ ಮೈಗಾವಲಿಗೂ ಸೇವೆಗೂ ನೇಮಿಸಿಕೊಳ್ಳಬೇಕು ಎಂದು ವಿಜ್ಞಾಪಿಸಲು; ಆಗ ಶ್ರೀರಾಮಚಂದ್ರನು ಸಂತೋಷದಿಂದ ಆ ಮಾತಿಗೊಪ್ಪಿ ಅಂಗದ ಜಾಂಬವಂತ ಹನುಮಂತ ಇವರನ್ನು ಆಯಾ ಕಾರ್ಯಗಳಲ್ಲಿ ಅಧ್ಯಕ್ಷರಾಗಿರುವಂತೆ ನೇಮಿಸಿ ಸುಲಗ್ನದಲ್ಲಿ ಅಗ್ನಿಕುಮಾರನಾದ ನೀಲನನ್ನು ಪೀಠದ ಮೇಲೆ ಕುಳ್ಳಿರಿಸಿ ಚತುಸ್ಸಮುದ್ರೋದಕಗಳಿಂದಲೂ ಗಂಗಾದಿ ಸಕಲ ಪುಣ್ಯನದೀ ಜಲಗಳಿಂದಲೂ ದಿವ್ಯೌಷಧಿಗಳ ರಸಗಳಿಂದಲೂ ಅಭಿಷೇಕವನ್ನು ಮಾಡಿ ದಳಪತಿಪಟ್ಟವನ್ನು ಕಟ್ಟಿಸಿದನು. ಆಗ ಸಕಲ ಕಪಿಸೇನಾಪತಿಗಳೂ ಬಂದು ಬಂದು ನೀಲನನ್ನು ಕಾಣಿಸಿಕೊಂಡು ಪುಷ್ಪಫಲಗಳನ್ನು ಕೈಗಾಣಿಕೆಯಾಗಿ ಕೊಟ್ಟು ಕೈ ಮುಗಿದರು. ಆ ಮೇಲೆ ನೀಲನೆದ್ದು ರಾಮ ಲಕ್ಷ್ಮಣ ಸುಗ್ರೀವ ಜಾಂಬವಂತರಿಗೆ ನಮಸ್ಕಾರವನ್ನು ಮಾಡಿ ಸಕಲ ಕಪಿಸೇನಾಪತಿತ್ವವನ್ನು ಹೊಂದಿ ತನ್ನ ತಂದೆಯಾದ ಅಗ್ನಿಯಂತೆ ತೇಜಸ್ಸಂಪನ್ನನಾಗಿ ರಾರಾಜಿಸಿದನು.

ತರುವಾಯ ಮಾರ್ಗಶಿರಮಾಸದ ಶುಕ್ಲಪಕ್ಷದಲ್ಲಿ ಉತ್ತರಾನಕ್ಷತ್ರಯುಕ್ತವಾದ ಅಷ್ಟಮಿಯ ದಿನದ ನಡುವಗಲೆಂಬ ಅಭಿಜಿನ್ಮುಹೂರ್ತದಲ್ಲಿ ಮಹಾಹರ್ಷದೊಡನೆ ವಿಜಯ ಪ್ರಯಾಣವನ್ನು ಬೆಳಸಿ ಶ್ರೀರಾಮನು ಹನುಮಂತನ ಮೇಲೆ ಕೂತುಕೊಂಡು ಹೊರಟನು. ಲಕ್ಷ್ಮಣನು ಅಂಗದನ ಮೇಲೇರಿ ಬಂದನು. ಸಮಸ್ತ ಕಪಿಸೇನೆಗಳೂ ನೀಲನ ಅಪ್ಪಣೆಯ ಮೇರೆಗೆ ದೊಡ್ಡ ದೊಡ್ಡ ಮರಗಳನ್ನೂ ಪರ್ವತ ಶಿಖರ

ಗಳನ್ನೂ ಕಿತ್ತು ತೆಗೆದುಕೊಂಡು ಆರ್ಭಟಿಸುತ್ತ ನಡೆದುವು. ಆ ಸೇನಾಸಮೂಹದಲ್ಲಿ ಕರಡಿಗಳೇ ಕರಿಘಟೆಗಳು ; ಮುಸುಗಳೇ ಕುದುರೆಗಳು ; ಸಿಂಗಳೀಕಗಳೇ ತೇರುಗಳು; ಇತರ ಕಪಿಗಳೆಲ್ಲಾ ಕಾಲಾಳುಗಳು. ಈ ಪ್ರಕಾರವಾದ ಕಪಿಚತುರಂಗಬಲಕ್ಕೆ ತೋಳುಗಳೇ ಗದಾಯುಧಗಳಾಗಿಯೂ ಉದ್ದವಾದ ಬಾಲಗಳೇ ಸಬಳಗಳಾಗಿಯೂ ಕ್ರೂರವಾದ ಉಗುರುಗಳೇ ಗರಗಸಗಳಾಗಿಯೂ ಕೋರೆ ಹಲ್ಲುಗಳೇ ಕತ್ತಿಗಳಾಗಿಯೂ ಬೆಟ್ಟ ಗುಡ್ಡ ಮರಗುಂಡುಗಳೇ ಕೋದಂಡಾದಿ ನಾನಾಯುಧಗಳಾಗಿಯೂ ಕಾಣಿಸುತ್ತಿದ್ದುವು. ಇಂಥ ಕಪಿಸೇನಾ ಮಹಾ ಭಾರವನ್ನು ತಡೆಯಲಾರದೆ ಆದಿಶೇಷನ ಕೊರಳುಗಳು ಕುಸಿದುವು. ಕುಲಗಿರಿಗಳು ಜರುಗಿದುವು. ಕೂರ್ಮನ ಉಸಿರು ಕುತ್ತಿಗೆಯಲ್ಲಿ ಮಿಡುಕಿತು. ದಿಗ್ಗಜಗಳು ತಲೆಗಳನ್ನು ಕೊಡಹಿದುವು. ಬ್ರಹ್ಮಾಂಡ ಮಂಡಲವು ಒಲು ಬೊಬ್ಬೆಯಿಂದ ತುಂಬಿತು. ಕಪಿಬಲದ ಪದಹತಿಯಿಂದೆದ್ದ ರಜೋರಾಜಿಯಿಂದ ಸೂರ್ಯನ ಬೆಳಕು ಚೆನ್ನಾಗಿ ಕಾಣಿಸಲಿಲ್ಲ. ಸಮುದ್ರವು ಮುಚ್ಚಿ ಪಂಕಪ್ರಾಯವಾಯಿತು. ಮೇರುಗಿರಿಯ ಕೀಲುಗಳು ಕಳಚಿದುವು. ಊರ್ಧ್ವಲೋಕಗಳು ಅಲ್ಲಾಡಿದುವು. ಇಂಥ ಸೇನೆಯ ಮಹಾ ಭಾರದಿಂದ ಲೋಕವೇನಾಗುವುದೋ ಎಂದು ಹಿರಣ್ಯಗರ್ಭನು ಚಿಂತಿಸುತ್ತಿದ್ದನು.

ಈ ರೀತಿಯಾಗಿ ಹೊರಟ ಸೈನ್ಯವು ಆ ದಿವಸದಲ್ಲೇ ಮಲಯಪರ್ವತದ ಬಳಿಗೆ ಹೋಗಿ ಅದರ ವಿಸ್ತಾರವಾದ ತಪ್ಪಲಲ್ಲಿ ದಳಪತಿಯಾದ ನೀಲನ ಅಪ್ಪಣೆಯ ಮೇರೆಗೆ ಬೀಡುಬಿಟ್ಟಿತು. ಮಾರನೆಯ ದಿವಸ ಬೆಳಗಾದ ಕೂಡಲೆ ಅಲ್ಲಿಂದ ಹೊರಟು ಮೂರು ದಿವಸಗಳಲ್ಲೇ ಸಮುದ್ರದ ದಡವನ್ನು ಸೇರಿತು ಆ ಸಮುದ್ರರಾಜನು ತೆರೆಗಳೆಂಬ ತೋರಣಗಳಿಂದಲೂ ನೊರೆಗಳೆಂಬ ಬೆಳುಗೊಡೆಗಳಿಂದಲೂ ತುಂತುರು ಹನಿಗಳೆಂಬ ಚೌರಿಗಳಿಂದಲೂ ಸುಳಿಗಳ ಘುಳುಘುಳು ಧ್ವನಿಗಳೆಂಬ ಭೇರ್ಯಾದಿವಾದ್ಯರವಗಳಿಂದಲೂ ಕೂಡಿ ಬಂದು ರಘುಪತಿಯನ್ನು ಇದಿರುಗೊಳ್ಳುವವನ ಹಾಗೆ ಮೆರೆದನು. ಆಗ ಸಕಲ ಸೇನಾನಾಯಕರೂ ಕಡಲ ದಡದಲ್ಲಿಳಿದರು. ಅಲ್ಲಿ ಶ್ರೀರಾಮನಿಗೆ ಎಳೆಚಿಗುರುಗಳ ಹೊದಿಕೆಯಿಂದ ದಿವ್ಯವಾದ ಅರಮನೆಯೂ ಓಲಗದ ಚಾವಡಿಯೂ ಕ್ಷಣಮಾತ್ರದಲ್ಲಿ ಉಂಟಾದುವು.

ಹೀಗೆ ಎರಡನೆಯ ಕಡಲಿನಂತೆ ಬಂದು ಕಡಲ್ದಡದಲ್ಲಿಳಿದ ಕಪಿಬಲವನ್ನು ಕಂಡು ಅಲ್ಲಿದ್ದ ರಾವಣನ ಕಡೆಯ ರಕ್ಕಸರು ಹೆದರಿ ಓಡಿಹೋಗಿ ಒಡ್ಡೋಲಗದ ಚಾವಡಿಯಲ್ಲಿ ಕೂತಿದ್ದ ರಾವಣನ ಮುಂದೆ ಕೈಮುಗಿದು ತಾವು ಹೊತ್ತುಕೊಂಡು ಬಂದ ಭಯದ ಬೀಜಗಳ ಬಹು ಭಾರದಿಂದ ಬಳಲಿದರೋ ಎಂಬಂತೆ ಕಂಗೆಟ್ಟು ಒಂದೆರಡು ಗಳಿಗೆಗಳ ವರೆಗೂ ಸುಮ್ಮನಿದ್ದು ಒಣಗಿದ ತುಟಿಗಳನ್ನು ನಾಲಿಗೆಯಿಂದ ಒರಸಿಕೊಳ್ಳುತ್ತ ಆ ಮೇಲೆ—ಜೀಯಾ, ಕಾಮರೂಪಿಗಳೂ ಮೈಕೊಬ್ಬುಳ್ಳುವುಗಳೂ ಇಂದ್ರಾದಿ ದೇವತೆಗಳನ್ನೂ ಕೂಡ ಲಕ್ಷೀಕರಿಸದುವುಗಳೂ ಗಿರಿ ವೃಕ್ಷಗಳೇ ಆಯುಧವಾಗುಳ್ಳುವುಗಳೂ ಕಣ್ಣೆತ್ತಿ ನೋಡಕೂಡದುವುಗಳೂ ಆಗಿರುವ ಕಪಿಸಮೂಹದಿಂದ ಕೂಡಿದ ಮಹಾ ಸೇನೆಯು ಸಮುದ್ರತೀರದಲ್ಲಿ ಬಂದಿಳಿದಿದೆ. ಆ ಕಪಿಸೇನಾಸಮುದ್ರ

ದಲ್ಲಿ ಮೃತ್ಯುವಿನ ಮುಖದಂತೆ ಭೀಕರಾನನವುಳ್ಳವುಗಳೂ ಮೊದಲು ನಮ್ಮ ಈ ಲಂಕೆಯನ್ನು ಬೆಂಕಿಗೆ ತುತ್ತಾಗಿ ಮಾಡಿದ ಕೋಡಗನಂತಿರುವ ಕೋಡಗಗಳೂ ಅಸಂಖ್ಯಾತವಾಗಿರುವವು. ಈ ಕಪಿಗಳ ದಂಡು ನೀನು ಮೊದಲೆಳೆತಂದ ಸೀತೆಯ ಗಂಡನ ಸಹಾಯಕ್ಕಾಗಿ ಬಂದಿದೆಯಂತೆ. ಆ ಮಹಾಕಪಿಬಲಕ್ಕೆಲ್ಲಾ ಸುಗ್ರೀವನೆಂಬುವನು ಒಡೆಯನಂತೆ ಎಂದು ಬಿನ್ನವಿಸಿದರು.

ರಾವಣನು ಅವರ ಮಾತುಗಳನ್ನು ಕೇಳಿ—ಹೊಡಿ, ಈ ರಕ್ಕಸನಾಯಿಗಳ ಬಾಯ್ಗಳ ಮೇಲೆ ಒಡಿ. ಇವರು ಹುಲುಮಾನಿಸನ ಕಾಡುಕೋತಿಗಳ ಹಿಂಡಿಗೆ ಹೆದರಿ ಬೆಬ್ಬರ ಬಿದ್ದೋಡಿಬಂದ ಹೇಡಿಗಳಲ್ಲವೇ ? ಎಂದು ಹೇಳುತ್ತ ಮಹಾ ಕೋಪದಿಂದ ಕೂಡಿ ಜಗ್ಗನೆ ಸಿಂಹಾಸನದಿಂದಿಳಿದು ಅರಮನೆಗೆ ಹೋಗಿ ಕುಳಿತುಕೊಂಡು ಪ್ರಹಸ್ತೇಂದ್ರಜಿದಾದಿ ರಾಕ್ಷಸ ನಾಯಕರನ್ನು ಕರಿಸಿಕೊಂಡು—ಬಡಗಣದಿಕ್ಕಿನ ಸುದ್ದಿಯ ಚಂದವನ್ನು ಕೇಳಿದಿರಾ ? ಸೀತೆಯ ಮೊದಲ ಗಂಡನಿಗೆ ಧೈರ್ಯವು ಮೊಳೆತು ನಮ್ಮೊಡನೆ ಕಾದುವುದಕ್ಕೆ ಕಪಿಬಲದೊಡನೆ ಬಂದು ಕಡಲ ದಡದಲ್ಲಿಳಿದಿದ್ದಾನೆಯಂತೆ. ಅಂದು ನಮ್ಮ ಪೊಳಲನ್ನು ಉರಿಯಲ್ಲಿ ಸೇರಿಸಿದ ಕೋಡಗನಂದದ ಭಟರು ಅಪರಮಿತವಾಗಿ ಬಂದು ಕೂಡಿರುವರಂತೆ. ದಂಡು ಪಡಿಗಡಲಂತೆ ಅಸಂಖ್ಯಾತವಾಗಿರುವುದಂತೆ. ಈಗ ಈ ರೀತಿಯಾಗಿ ಒದಗಿರುವ ರಾಜಕಾರ್ಯಕ್ಕೆ ಏನು ಯೋಚನೆಯನ್ನು ಹೇಳುವಿರಿ ? ಎಂದು ಕೇಳಲು ; ಆಗ ಪ್ರಹಸ್ತನು ರಾವಣನನ್ನು ಕುರಿತು—ಜೀಯಾ, ನಿನ್ನ ಅದ್ಭುತಪರಾಕ್ರಮಕ್ಕೆ ಮುಕ್ಕಣ್ಣನಂಜುವನು. ನಿನ್ನ ಪ್ರತಾಪದ ವರ್ತಮಾನವನ್ನು ಕೇಳಿದ ಹರಿಬ್ರಹ್ಮೇಂದ್ರಾದಿಗಳು ತರತರನೆ ನಡುಗಿ ಮೈಮರೆವರು. ಹೀಗಿರುವಲ್ಲಿ ಈ ಕೋಡಗಪಡೆಯ ಬಲುಮೆಯೆಷ್ಟರದು ? ಆದರೂ ಹಗೆಗಳು ಕೋತಿಗಳೂ ಮನುಷ್ಯರೂ ಆದುದರಿಂದ ಅಲ್ಪರೆಂದು ಭಾವಿಸಿ ಅಸಡ್ಡೆಯಿಂದಿರಕೂಡದು. ಶತ್ರುವು ಅಣುವಿನಷ್ಟಿದ್ದರೂ ಅವನನ್ನು ಆಗಲೇ ತೀರಿಸಿಬಿಡಬೇಕೆಂದು ನೀತಿಜ್ಞರು ಹೇಳುತ್ತಿರುವರು. ಅದುಕಾರಣ ನಾವು ಈ ಸಮಯದಲ್ಲಿ ಎಚ್ಚರವಾಗಿರಬೇಕು. ವೀರಭಟರು ಈ ನಮ್ಮ ಲಂಕಾನಗರವನ್ನು ಜಾಗರೂಕತೆಯಿಂದ ಕಾದುಕೊಂಡಿರುವಂತೆ ಅಪ್ಪಣೆಯನ್ನು ಕೊಡಿಸು. ಕೋಟೆ ಕೊತ್ತಲು ಹೆಬ್ಬಾಗಿಲು ಈ ಮೊದಲಾದ ಸ್ಥಳಗಳಲ್ಲಿಯೂ ಪಟ್ಟಣದ ಬೀದಿ ಬೀದಿಗಳ ಮೂಲೆಗಳಲ್ಲಿಯೂ ಸಕಲಾಯುಧ ಸಮೇತಗಳಾದ ಚತುರಂಗ ಬಲಗಳು ಸರದಿಯ ಮೇರೆಗೆ ಎಡಬಿಡದೆ ಕಾದುಕೊಂಡಿರುವಂತೆ ನೇಮಿಸು. ಮತ್ತು ಹಗೆಗಳ ಬಲದಲ್ಲಿ ಬಲುಮೆಯುಳ್ಳವರಾರು ? ಆ ಒಲಿಷ್ಠರಲ್ಲಿ ಹೆಸರಾದ ಸಾಹಸಿಗಳು ಯಾರು ? ಆ ಸಾಹಸಿಗಳಲ್ಲಿ ದುಡುಕಿಗಳು ಯಾರು ? ಯಾರು ದುಡಕಿಲ್ಲದವರು ? ಆಲೋಚನಾಪರರು ಯಾರು ? ಆ ಆಲೋಚನಾಪರರಲ್ಲಿ ಒಬ್ಬರಿಗೊಬ್ಬರಿಗೆ ವೈಮನಸ್ಯವುಳ್ಳವರಾರು ? ಎಂಬ ಈ ಮೊದಲಾದ ಸಂಗತಿಗಳನ್ನೆಲ್ಲಾ ಸಂಪೂರ್ಣವಾಗಿಯೂ ಸ್ಪಷ್ಟವಾಗಿಯೂ ತಿಳಿದುಕೊಂಡು ಬಂದು ಹೇಳುವ ಬಗ್ಗೆ ಚತುರರಾದವರಿಗೆ ಬೆಸಸು ಎನ್ನಲು ; ರಾವಣನು—ಅಹುದು ; ಈ ನೀತಿಯು ಯುಕ್ತವಾದುದೇ ಸರಿ ಎಂದು ಮನಸ್ಸಿನಲ್ಲಿ ನಿಶ್ಚಯಿಸಿ ಕೂಡಲೆ ಆ[illegible]ರಾದ ಬೇಹಿನವರನ್ನು ಕರಿಸಿ

ಮಾಡಬೇಕಾದ ಕಾರ್ಯಕ್ರಮಗಳನ್ನೆಲ್ಲಾ ರಹಸ್ಯವಾಗಿ ತಿಳಿಸಿ ರಾಮನ ಬಲದ ಬಳಿಗೆ ಕಳುಹಿಸಿ ಮಂತ್ರಿಯಾದ ಪ್ರಹಸ್ತನನ್ನು ಮನೆಗೆ ಕಳುಹಿಸಿದನು.

ಆ ಬಳಿಕ ಇಂದ್ರಜಿತ್ತೇ ಮೊದಲಾದ ಕುಮಾರರು ತಂದೆಯಾದ ರಾವಣನನ್ನು ಕುರಿತು— ಎಲೈ ಜನಕನೇ, ಬಲದಲ್ಲೂ ಪರಾಕ್ರಮದಲ್ಲೂ ನಮ್ಮೆದುರಿಗೆ ನಿಲ್ಲುವವರಾರು ? ಇಂಥ ನಾವು ಕೋತಿಗಳ ಬಲವನ್ನು ನಂಬಿ ಬಂದಿರುವ ಅಲ್ಪನಾದ ನರಪತಿಗೆ ಏಕಂಜಬೇಕು ? ಹಗೆತನದಲ್ಲಿ ನಮ್ಮನ್ನು ಸೋಲಿಸಿ ಹೆಂಡತಿಯನ್ನು ಕರೆದುಕೊಂಡು ಹೋಗುವ ಆ ಮನುಜನ ಆಳುತನವನ್ನು ನಾವು ನೋಡಿಕೊಳ್ಳುವೆವು ಎಂದು ತಮ್ಮ ತಮ್ಮ ಶೌರ್ಯೋಕ್ತಿಗಳನ್ನು ಆಡಿಕೊಂಡರು. ರಾವಣನು ಸಂತೋಷಿಸಿ ಅವರನ್ನೆಲ್ಲಾ ಅವರವರ ಮನೆಗಳಿಗೆ ಕಳುಹಿಸಿ ತಾನು ಹಗೆಯ ಹಮ್ಮನ್ನೂ ಆತನ ಕಾರ್ಯಗಳನ್ನೂ ನೆನನೆನದು ನಿದ್ರೆಬಾರದೆ ಹಾಸಿಗೆಯಲ್ಲಿ ಹೊರಳುತ್ತ ಏಳುತ್ತ ಮಲಗುತ್ತ ಕುಳ್ಳಿರುತ್ತ ಚಿಂತಾಲಲನೆಯ ಕೂಟದಲ್ಲಿ ಇರುಳನ್ನೆಲ್ಲಾ ನೂಕುತ್ತಿದ್ದನು. ಅಷ್ಟರೊಳಗೆ ಮುಂಗೋಳಿಯು ಕೂಗಿತು. ಪಕ್ಷಿಗಳೆಲ್ಲಾ ತಮ್ಮ ತಮ್ಮ ಗೂಡುಗಳಲ್ಲಿ ಚಿಲಪಿಲಗುಟ್ಟುತ್ತಿದ್ದುವು. ಪೂರ್ವದಿಗಂಗನೆಯು ಸೂರ್ಯನೆಂಬ ವರನನ್ನು ವರಿಸುವುದಕ್ಕಾಗಿ ಮನೋಹರವಾದ ಚಿತ್ರಾಂಬರವನ್ನುಟ್ಟಳೋ ಎಂಬ ಹಾಗೆ ಉದಯರಾಗವು ಶೋಭಿಸುತ್ತಿದ್ದಿತು. ಉದಯಾಚಲವೆಂಬ ಮಾಣಿಕ್ಯದ ಮಂಚದಲ್ಲಿ ಸೂರ್ಯನೆದ್ದೆತ್ತು ಕೂತುಕೊಂಡನೋ ಎಂಬಂತೆ ಸೂರ್ಯೋದಯವಾಗುತ್ತಿದ್ದಿತು. ಆ ಸೂರ್ಯೋದಯ ಕಾಲದಲ್ಲಿ ಮಂಗಳಪಾಠಕರ ಸ್ತುತಿವಚನಗಳಿಂದ ರಾವಣನು ರತ್ನಪರ್ಯಂಕದಿಂದಿಳಿದು ಗುರುವಾದ ಶುಕ್ರಾಚಾರ್ಯನಿಗೂ ಮುತ್ತಜ್ಜನಾದ ಬ್ರಹ್ಮದೇವನಿಗೂ ನಮಸ್ಕರಿಸಿ ಅವರ ಆಶೀರ್ವಾದಗಳನ್ನು ಕೈಕೊಂಡು ಸ್ನಾನ ಸಂಧ್ಯಾವಂದನೆಗಳನ್ನು ಮಾಡಿ ಶಿವಾರ್ಚನೆಯನ್ನು ನೆರವೇರಿಸಿ ದಿವ್ಯಾಂಬರಾಭರಣಗಳನ್ನು ಧರಿಸಿ ಓಲಗದ ಚಾವಡಿಗೆ ಬಂದನು. ಆ ಸಭಾಸ್ಥಾನಕ್ಕೆ ಇಂದ್ರಜಿತ್ಪ್ರಹಸ್ತಾದಿ ದನುಜಶ್ರೇಷ್ಠರು ಕೋಟ್ಯಂತರ ಸಂಖ್ಯೆಯಿಂದ ಬಂದು ನೆರೆದರು.

ಆಗ ವಿಭೀಷಣನು ತನ್ನ ಗದಾಯುಧವನ್ನು ಕೈಯಲ್ಲಿ ಹಿಡಿದುಕೊಂಡು ಓಲಗಕ್ಕೆ ಬರಲು ; ರಾವಣನು ಕಂಡು ಮುಗುಳುನಗೆಯಿಂದ ಕೂಡಿ ಆತನನ್ನು ಕುರಿತು ಕೈಸನ್ನೆಯಿಂದ—ಇತ್ತ ಬಾರೈ ಎಂದು ಕರೆದು ತನ್ನ ಸಮೀಪದಲ್ಲಿ ಮಣಿಮಯವಾದ ಗದ್ದುಗೆಯಲ್ಲಿ ಕುಳ್ಳಿರಿಸಿಕೊಂಡು ಆ ಮೇಲೆ ಸಭಾಸ್ಥಾನದಲ್ಲಿ ನೆರೆದಿರುವ ವೀರಭಟರನ್ನು ನೋಡಿ—ಸೀತೆಯ ಗಂಡನಾದ ರಾಮನು ನಮ್ಮ ಸೆರೆಯಲ್ಲಿ ಸಿಕ್ಕಿಬಿದ್ದಿರುವ ಸೀತೆಯನ್ನು ಕರೆದುಕೊಂಡು ಹೋಗುವುದಕ್ಕಾಗಿ ಕೋಡಗಪಡೆಯೊಡನೆ ಕೂಡಿ ಬಂದಿದ್ದಾನೆಯಂತೆ. ಇದಕ್ಕೆ ನಿಮ್ಮ ನಿಮ್ಮ ಮನೋಗತಾಭಿಪ್ರಾಯಗಳಾವುವು ? ಅವುಗಳನ್ನು ಹೇಳಿರಿ ಎಂದು ಕೇಳಿದನು. ಆಗ ತನ್ನ ಕುಮಾರನೂ ಮಹಾವೀರನೂ ಆದ ಇಂದ್ರಜಿತ್ತು—ಜೀಯಾ, ಇದೆಷ್ಟರ ಕೆಲಸ ! ಹಾವಿನ ಮರಿಗಳು ಗರುಡನನ್ನು ಕೆಣಕಿ ಬದುಕಬಲ್ಲುವೇ ? ಕರಿಕಲಭಗಳು ಮೃಗೇಂದ್ರನನ್ನು ಗೆಲ್ಲಬಲ್ಲುವೇ ? ಗಿಡ ಮರ ಮೆಳೆಗಳ ಮೇಲೆ ಓಡಿಯಾಡಿಕೊಂಡು ಚಿಗುರು ಹೂವು ಹಣ್ಣುಗಳನ್ನು

ತಿಂದು ಜೀವಿಸುವ ಕೋಡಗಗಳು ನಮಗೆ ಗಣ್ಯವೇ ? ಯಮನ ತಲೆಯನ್ನು ತರಹೇಳು. ಸ್ವರ್ಗದಮರಾವತಿಯನ್ನು ಕಿತ್ತುತಂದು ಪಾತಾಳದಲ್ಲಿ ಬಿಸುಡಹೇಳು. ಅಷ್ಟದಿಕ್ಪಾಲಕರ ಮೂಗುಗಳನ್ನು ಕೊಯ್ದುತರುವುದಕ್ಕೆ ಆಜ್ಞಾಪಿಸು. ಹಾವುಗಳೊಡೆಯನ ಹೊಳಲನ್ನು ತಂದು ಸ್ವರ್ಗದಲ್ಲಿಳಿಸಹೇಳು. ಎಲೈ ತಂದೆಯೇ, ಕೇಳು. ಯಮಾದಿಗಳಿಂದಲೂ ಕೂಡ ನೋಡಲಮ್ಮದ ಕಲ್ಪಾಂತ ರುದ್ರನ ಹಣೆಗಣ್ಣಿನ ಕೇಸುರಿಗಂಜದ ನಮ್ಮಂಥ ವೀರಾಗ್ರೇಸರರೊಡನೆ ತೃಣಪ್ರಾಯರಾದ ಮನುಜ ಕಪಿಗಳ ರಣದ ರಾಜಕಾರ್ಯದ ಗೌರವವನ್ನು ಹೇಳಬಹುದೇ ? ಇಷ್ಟುಮಾತ್ರಕ್ಕೆ ಈ ಮಹಾಭಟರ ಪರ್ಯಂತರವೂ ಯೋಚಿಸಬೇಕೇ ? ಈ ನಿನ್ನ ಚಾಮರಧಾರಿಗಳಿಂದಲೇ ಆ ಕೋಡಗಗಳ ತಂಡವನ್ನೂ ಅಲ್ಪರಾದ ಮನುಷ್ಯರನ್ನೂ ಬೀಳಬಡಿಸುವೆನು. ಈ ಮಾತು ಹಾಗಿರಲಿ. ಸೀತೆಯು ಶೀಘ್ರವಾಗಿ ನಿನಗೆ ಒಲಿಯುವ ಉಪಾಯದ ಮಾತುಗಳನ್ನಾಡು. ಈ ಮಹಾ ಸಭಾಸ್ಥಾನದಲ್ಲಿ ಕಪಿಬಲದ ವರ್ತಮಾನವನ್ನಾಡುವುದು ಲಜ್ಜಾಸ್ಪದವೆಂದು ಹೇಳಿದನು.

ಆಗ ವಿಭೀಷಣನು ಇಂದ್ರಜಿತ್ತಿನ ಗರ್ವೋಕ್ತಿಗಳು ಕಿವಿಯಲ್ಲಿ ಬಿದ್ದ ಕೂಡಲೆ ಮುಖದಲ್ಲಿ ಕೋಪಾಗ್ನಿಯು ಭುಗಿಲೆನ್ನಲು ; ಗಹಗಹಿಸಿ ನಗುತ್ತ ತಲೆಯನ್ನು ತೂಗಿ ಮೈಯನ್ನು ಒಲೆದೊಲೆದು ಇಂದ್ರಜಿತ್ತನ್ನು ನೋಡಿ—ಎಲೈ ಶೂರನೇ, ನೀನು ಹೇಳಿದ ಮಾತುಗಳಿಂದ ನನಗೆ ಅತಿ ಸಂಶಯಾಶ್ಚರ್ಯಭಾವಗಳುಂಟಾಗಿವೆ. ಇನ್ನೊಂದುಸಾರಿ ಚೆನ್ನಾಗಿ ತಿಳಿಯ ಹೇಳು. ನೀನು ಮಹಾ ಪರಾಕ್ರಮಶಾಲಿಯಷ್ಟೆ. ಈಗ ನಾವು ನಿನ್ನ ಬಾಳುತನವನ್ನು ಹೊಸದಾಗಿ ತಿಳಿಯಬೇಕೇ ? ಸತ್ತಿಗೆಯವರಿಂದ ಕೋಡಗಗಳನ್ನೂ ಮನುಜರನ್ನೂ ಹೊಯ್ಸಿ ಬಿಡುವಿಯೋ ? ಇಂಥ ಸಾಮರ್ಥ್ಯದ ಮಹಿಮೆಯು ನಿನ್ನ ತಮ್ಮನಾದ ಅಕ್ಷಾದ್ಯಸಂಖ್ಯಾತ ರಾಕ್ಷಸವೀರರ ಹೊಟ್ಟೆಗಳನ್ನು ಬಗೆದು ಪ್ರಾಣಗಳನ್ನು ಹಾರಿಸಿ ಈ ನಮ್ಮ ಲಂಕಾನಗರವನ್ನು ಅಗ್ನಿಗೆ ಆಹುತಿಮಾಡಿದ ಒಂದು ಕೋಡಗದ ಮುಂದೇಕೆ ನಡೆಯದೆಹೋಯಿತು ? ಆ ವೇಳೆಯಲ್ಲಿ ಈ ಕುಂಭ ನಿಕುಂಭ ದೇವಾಂತಕ ನರಾಂತಕಾದಿ ಶೂರರೆಲ್ಲರೂ ಎಲ್ಲಡಗಿದ್ದರು ? ಎಲೇ ಅಣ್ಣಾ, ಕೇಳು. ಇವರುಗಳ ಬನ್ನಣೆಯ ಬಿಂಕದ ಮಾತುಗಳು ಹಾಗಿರಲಿ. ಭೂಮಿಯ ಭಾರವನ್ನು ಇಳಿಸುವುದಕ್ಕೋಸ್ಕರ ಶ್ರೀ ಮಹಾ ವಿಷ್ಣುವು ನರರೂಪವನ್ನು ಧರಿಸಿ ಬಂದಿರುವನು. ಈ ಹೆಣ್ಣಿನ ನೆಪದಿಂದ ನಮ್ಮನ್ನು ಮಣ್ಣುಪಾಲು ಮಾಡದೆ ಬಿಡನು. ಹೀಗಿರುವುದನ್ನು ತಿಳಿದೂ ಅಶಕ್ತರಾದ ನಾವು ಆತನೊಡನೆ ವಿರೋಧವನ್ನು ಸಂಪಾದಿಸಿಕೊಂಡು ವ್ಯರ್ಥವಾಗಿ ಉಣ್ಣದೆ ಉಡದೆ ಉರಿದುಹೋಗಬೇಕಾಗುವುದು. ಆ ರಾಮನು ಸತ್ಯವಾಗಿ ಮನುಜನಲ್ಲ. ಆ ಕೋಡಗಗಳು ಮೃಗಗಳಲ್ಲ. ಲೋಕಕಂಟಕರಾದ ದುಷ್ಟರೆಂಬ ಕ್ರೂರ ಮೃಗಗಳನ್ನು ಕೆಡಹಿ ಕೊಲ್ಲುವುದಕ್ಕೋಸ್ಕರ ಒಡ್ಡಿದ ಬಲೆಗಳೆಂದು ತಿಳಿಯುವವನಾಗು. ಜನಕನ ಪಟ್ಟಣದಲ್ಲಿ ನಿನ್ನನ್ನು ಕೆಡಹಿ ಮೇಲೆ ಬಿದ್ದು ಒದೆದಾಡಿಸಿದ ಶಿವನ ಬಿಲ್ಲನ್ನು ಮುರಿದವನು ಯಾರು ? ನಿನ್ನ ತಮ್ಮನಾದ ಖರಾಸುರನು ಸಾಮಾನ್ಯನೇ ? ದೂಷಣಾಸುರನು ಕೈಯಲ್ಲಿ ಹರಿಯದವನೇ ? ಲೋಕವಿಖ್ಯಾತರಾದ ಶೂರರಲ್ಲವೇ?

ಅಂಥವರನ್ನು ಕೊಂದವನು ಸಾಧಾರಣನೇ ? ನೀನು ಹೆದರಿ ಸ್ನೇಹಿತನನ್ನಾಗಿ ಮಾಡಿಕೊಂಡ ವಾಲಿಯನ್ನು ಒಂದೇ ಬಾಣದಿಂದ ಕೊಂದವನು ಮಾನುಷಮಾತ್ರನೇ ? ಈ ಮೊದಲಾದ ಸಂಗತಿಗಳನ್ನೆಲ್ಲಾ ನಿನ್ನ ಮನಸ್ಸಿನಲ್ಲಿ ಚೆನ್ನಾಗಿ ಯೋಚಿಸದೆ ಅಜ್ಞಾನದಿಂದ ಆ ರಾಮನಲ್ಲಿ ಹಗೆತನವನ್ನು ಬೆಳಿಸಿ ಹಾಲುಣ್ಣುವ ಬಾಯಲ್ಲಿ ಮಣ್ಣುಹಾಕಿಕೊಳ್ಳಬೇಡ. ಈ ಸೀತೆಯನ್ನು ಆ ರಾಮನ ಬಳಿಗೆ ಕಳುಹಿಸಿ ಸರ್ವರೊಡನೆ ಕೂಡಿ ಸುಖವಾಗಿ ಬದುಕು ಎಂದನು.

ಆ ಮಾತುಗಳನ್ನು ಕೇಳಿ ರಾವಣನು ಮಹಾ ಕೋಪವುಳ್ಳವನಾಗಿ ವಿಭೀಷಣನನ್ನು ನೋಡಿ—ಎಲೇ ತಮ್ಮಾ, ನಮ್ಮಲ್ಲಿ ನಿನಗೆ ಇಷ್ಟು ನೈಷ್ಠುರ್ಯವು ಏಕೆ? ನೀನು ನಮ್ಮ ವೀರಭಟರ ಸಾಹಸಶಕ್ತಿ ಪರಾಕ್ರಮಾದಿಗಳನ್ನು ಬಲ್ಲವನಾದಾಗ್ಯೂ ಗರ್ವದಿಂದ ಹೀಗೆ ಹೀಯಾಳಿಸಿ ನುಡಿಯಬಹುದೇ ? ಲೋಕಭೀಕರಪರಾಕ್ರಮಶಾಲಿಗಳಾದ ನಮ್ಮ ಅಂಜಿಕೆಯನ್ನು ಬಿಟ್ಟು ನಮ್ಮನ್ನು ಹುಲ್ಲಿಗಿಂತಲೂ ಕಡೆಯಾಗಿ ಎಣಿಸಿ ಈ ರೀತಿಯಾಗಿ ಹೇಳುವುದು ನಿನಗೆ ಯುಕ್ತವೇ ? ನಾನು ನಿನಗಿಂತಲೂ ಹಿರಿಯವನಲ್ಲವೇ ? ಹೀಗಿರುವಲ್ಲಿ ನೀನು ನನ್ನನ್ನು ತಿರಸ್ಕರಿಸಿ ಮಾತಾಡುವುದನ್ನು ನೋಡಿದರೆ ನನಗೆ ಹಗೆಯೂ ಅಲ್ಪನೂ ಆದ ರಾಮನು ದುರುಪದೇಶದಿಂದ ನಿನ್ನನ್ನು ಪ್ರೇರಿಸಿ ನನ್ನ ದೆಸೆಯಿಂದ ಹಿಗ್ಗುದೆಗೆದಿದ್ದಾನೆಂದು ತಿಳಿಯಬೇಕಾಗಿದೆ. ನೀನು ಹೋಗಿ ಆ ರಾಮನನ್ನೇ ಸೇರಿಕೋ. ನಾನು ದ್ರೋಹಿಯಾದ ನಿನ್ನನ್ನೂ ರಾಮನನ್ನೂ ಸಂಹರಿಸದೆ ಎಂದಿಗೂ ಬಿಡುವುದಿಲ್ಲ. ಇನ್ನು ಮೇಲೆ ನೀನು ನಮ್ಮೆದುರಿನಲ್ಲಿ ನಿಂತು ಹೆಚ್ಚಾಗಿ ಗಳಹಿದರೆ ನಾಲಿಗೆಯನ್ನು ಕೊಯ್ಸಿಬಿಡುವೆನು ಎಂದು ಹೇಳಿ ದೂತರನ್ನು ಕರೆದು ಈ ಪಾಪಿಯನ್ನು ನೂಕಿಬಿಡಿರಿ ಎಂದು ಹೇಳಲು ; ಆಗ ವಿಭೀಷಣನು—ನೀನು ನನ್ನನ್ನು ನೂಕುವುದೇಕೆ ? ಈ ದುಷ್ಟಸಂಗದಿಂದ ನಾನೇ ನನ್ನನ್ನು ನೂಕಿಕೊಳ್ಳುವೆನು ಎಂದು ಹೇಳಿ ಮನಸ್ಸಿನಲ್ಲಿ ಶ್ರೀರಾಮನಡಿದಾವರೆಗಳನ್ನು ಚಿಂತಿಸುತ್ತ ಚಾವಡಿಯಿಂದ ಶೀಘ್ರವಾಗಿ ಹೊರಟು ತನ್ನ ತಾಯಾದ ಕೈಕಸೆಯ ಮನೆಗೆ ಬಂದು ಆಕೆಯ ಚರಣಂಗಳಿಗೆ ನಮಸ್ಕರಿಸಲು ; ಆಕೆಯು ವಿಭೀಷಣನನ್ನು ತಬ್ಬಿಕೊಂಡು ತೊಡೆಯ ಮೇಲೆ ಕುಳ್ಳಿರಿಸಿಕೊಂಡು—ಮಗನೇ, ರಾವಣನ ದುರುಕ್ತಿಗಳನ್ನೆಲ್ಲಾ ಕೇಳಿದೆನು. ಆದರಿಂದ ನಿನಗೆ ಒಳ್ಳೆಯದಾಯಿತು. ಆದುಕಾರಣ ಸ್ವಲ್ಪವೂ ವ್ಯಸನಪಡಬೇಡ. ನೀನು ನಿರಪರಾಧಿಯಾಗಿ ರಾಘವನನ್ನು ಮರೆಹೊಗುವುದಕ್ಕೆ ಇದೇ ಸಮಯವು. ಈ ಸ್ಥಳವನ್ನು ಬಿಟ್ಟು ಹೋಗು. ಆ ದಯಾಳುವಾದ ರಾಮನು ನಿನಗೆ ಚ್ಯುತಿಯಿಲ್ಲದ ಆಯುಸ್ಸನ್ನೂ ಐಶ್ವರ್ಯವನ್ನೂ ದಯಪಾಲಿಸುವನು. ನೀನು ಮುಂದೆ ಮೃತರಾಗುವ ನಮ್ಮೆಲ್ಲರಿಗೂ ತಿಲೋದಕವನ್ನು ಕೊಟ್ಟು ಸದ್ಗತಿಯನ್ನು ಹೊಂದಿಸುವವನಾಗು ನಡೆ ಎಂದು ಕಣ್ಣೀರುಗಳನ್ನು ಸುರಿಸುತ್ತ ಅಪ್ಪಣೆಯನ್ನು ಕೊಡಲು ; ಆಗ ವಿಭೀಷಣನೂ ದುಃಖಿಸುತ್ತ ತಾಯಿಯ ಅಡಿಗಳಿಗೆರಗಿ ನಾಲ್ಕುಜನ ಮಂತ್ರಿಗಳೊಡನೆ ತೇರನ್ನೇರಿ ರಾಮನನ್ನು ನೆನಸುತ್ತ ಸಂಭ್ರಮದಿಂದ ಆಕಾಶಕ್ಕೆ ಹಾರಿ ಪುನಃ ಅಣ್ಣನ ವಿಷಯದಲ್ಲಿ ಮನಸ್ಸು ಮರುಗಿ—ಕ್ರೂರನಾದ ಅಣ್ಣನಿಗೆ ಇನ್ನೊಂದುಸಾರಿ ವಿವೇಕವನ್ನು ಹೇಳಿ ನೋಡುವೆ

ನೆಂದು ಯೋಚಿಸಿ ಚಾವಡಿಯ ಸಮೀಪವಾಗಿ ಆಕಾಶದಲ್ಲಿ ನಿಲ್ಲಲು ; ರಾವಣನು ಅದನ್ನು ಕಂಡು ಇಲ್ಲಿ ನಿಲ್ಲದೆ ಬೇಗ ಹೋಗಹೇಳು, ಅವನೇಕೆ ತಿರಿಗಿಲ್ಲಿಗೆ ಬಂದನು ? ಮಹಾ ದ್ರೋಹಿಯನ್ನು ಬಾಗಿಲಲ್ಲಿ ಹೊಗಿಸದಿರಿ ಎಂದು ಆಜ್ಞಾಪಿಸಲು ; ಕೂಡಲೆ ಕೈಗುದಿಗೆಗಳ ಖಳರು ಬಂದು ವಿಭೀಷಣನನ್ನು ತರುಬಲು; ಅವನು ತನ್ನ ಗದೆಯಿಂದ ಬಡಿದು ಅವರ ಪ್ರಾಣಗಳನ್ನು ತೆಗೆದು ಅಣ್ಣನನ್ನು ಕುರಿತು—ಸಾಯುವ ರೋಗಿಗೆ ಮದ್ದು ಸೊಗಸದೆಂಬ ಗಾದೆಯು ಸುಳ್ಳಲ್ಲ. ಲೋಕದಲ್ಲಿ ಆಗದವರು ಮುಂಗಡೆಯಲ್ಲಿ ಸವಿನುಡಿಗಳನ್ನಾಡುವರು, ಹಿಂಗಡೆಯಲ್ಲಿ ಹೀಯಾಳಿಸುವರು. ಮೊದಲು ಕ್ರೂರವಾಗಿದ್ದಾಗ್ಗೂ ಆ ಮೇಲೆ ಹಿತವಾಗುವಂಥ ಮಾತುಗಳನ್ನಾಡುವವರು ಅಪೂರ್ವರು. ಅಂಥ ಮಾತುಗಳನ್ನು ಕೇಳಿ ತಿಳಿದು ನಡೆವವರೂ ದುರ್ಲಭರು. ಇಂಥವರಿಗೆ ವಿಪತ್ತುಗಳು ಒದಗಲಾರವು. ಈಗ ನಾನು ನಿರಪರಾಧಿಯಾಗುವುದಕ್ಕೋಸ್ಕರ ಸಾರಿ ಹೇಳುತ್ತೇನೆ ಬೀದಿಯಲ್ಲಿ ಹೋಗುವ ಮಾರಿಯನ್ನು ಕೂಗಿ ಮನೆಗೆ ಕರೆದುಕೊಳ್ಳುವುದು ಯುಕ್ತವಲ್ಲ. ನೀನು ಬುದ್ಧಿಶಾಲಿಯಾದರೆ ಶೀಘ್ರವಾಗಿ ಸೀತೆಯೆಂಬ ಕಾಂತೆಯನ್ನು ಬಿಟ್ಟು ಕೀರ್ತಿಯೆಂಬ ಕಾಂತೆಯ ಕೈ ಹಿಡಿದು ಬದುಕುವುದು ಒಳ್ಳೆಯದು. ನಾನಾಡುವ ಹಿತದ ಮಾತುಗಳು ಈಗ ನಿನಗೆ ಒಡಂಬಡುವುದಿಲ್ಲ. ಏಕೆಂದರೆ ಮೃತ್ಯುವು ನಿನ್ನ ಹೆಗ್ಗತ್ತಿನ ಮೇಲೇರಿ ಕುಳಿತಿರುವುದು. ಕಪಿಬಲವು ಬಂದು ರಾಕ್ಷಸರನ್ನೆಲ್ಲಾ ಕೊಂದು ಶ್ರೀರಾಮನು ನಿನ್ನ ತಲೆಗಳನ್ನು ಕತ್ತರಿಸುವಾಗ ನನ್ನ ಮಾತುಗಳನ್ನು ನೆನಸಿಕೋ ಎಂದು ಹೇಳಿ ವಿಭೀಷಣನು ತನ್ನ ಭ್ರಾತೃಸಂಗದ ಕೋಟಲೆಯನ್ನೂ ಲಂಕಾನಗರದ ಕೋಟೆಯನ್ನೂ ದಾಟಿ ರಾಕ್ಷಸ ಜನ್ಮದಿಂದುಂಟಾದ ಪಾಪವೆಂಬ ಕಡಲನ್ನೂ ಶತಯೋಜನ ವಿಸ್ತಾರವಾದ ಸಮುದ್ರವನ್ನೂ ಹಾರಿ ಬರುತ್ತಿರುವಲ್ಲಿ ಆ ವಿಭೀಷಣನ ಕಣ್ಣುಗಳಿಗೆ ಕಪಿಬಲವು ಪಾಲ್ಗಡಲಂತೆಯೂ ರಾಮನು ಲಕ್ಷ್ಮೀಪತಿಯಂತೆಯೂ ತೋಳ್ಸಿರಿಯು ಶ್ರೀದೇವಿಯಂತೆಯೂ ಲಕ್ಷ್ಮಣನು ಮಹಾ ಶೇಷನಂತೆಯೂ ಹನುಮಂತನು ಗರುಡನಂತೆಯೂ ಕಾಣಿಸಿದರು. ಸದ್ಯೋಜಾತ ವಾಮದೇವ ತತ್ಪುರುಷ ಅಘೋರಗಳೆಂಬ ನಾಲ್ಕು ಮೊಗಗಳ ನಡುವೆ ಪ್ರಕಾಶಿಸುವ ಈಶಾನವೆಂಬ ಈಶ್ವರನ ಐದನೆಯ ಮುಖದಂತೆ ಚತುರ್ದಿಕ್ಕುಗಳಲ್ಲಿಯೂ ಮೈಗಾವಲುಗಾರರಾಗಿರುವ ನಾಲ್ವರು ಮಂತ್ರಿಗಳ ಮಧ್ಯದಲ್ಲಿ ಬರುತ್ತಿರುವ ವಿಭೀಷಣನನ್ನು ನೋಡಿ ಪಾಳಯದ ಮುಂಗಡೆಯಲ್ಲಿದ್ದ ಕೋತಿಗಳ ಗುಂಪು ಖೋಯೆಂದೋಡಿ ಬಂದು ವಿಭೀಷಣನ ರಥವನ್ನು ಮುತ್ತಿಕೊಂಡಿತು.

ಆಗ ವಿಭೀಷಣನು—ಸರ್ವಜ್ಞನೇ, ಸರ್ವಾಂತರ್ಯಾಮಿಯೇ, ಶರಣಾಗತ ಸುರಧೇನುವೇ, ಪೂರ್ಣದಯಾರಸಭರಿತನೇ, ಕಷ್ಟಾನುಭವದಿಂದ ಕಂಗೆಟ್ಟ ಜನರನ್ನು ಕಾಪಾಡುವವನೇ, ಶ್ರುತಿಸತೀ ಚೂಡಾಮಣಿಯೇ, ಸಕಲ ದೇವತೆಗಳ ಕಿರೀಟ ತಟ ಘಟಿತ ರತ್ನ ರುಚಿ ನೀರಾಜಿತ ಚರಣ ಕಮಲಗಳುಳ್ಳವನೇ, ರಕ್ಷಿಸು ರಕ್ಷಿಸೆಂದು ಮೊರೆಯಿಡುತ್ತಿದ್ದನು. ಆಗ ಸರ್ವ ವೇದಗಳ ಹೊಗಳಿಕೆಗೂ ತೃಪ್ತನಾಗದ ಶ್ರೀರಾ

ಮನ ಕಿವಿಗಳಿಗೆ ಶರಣಾಗತನಾದ ವಿಭೀಷಣನ ದೈನ್ಯವಚನಾಮೃತವು ಸಂತೋಷ ವನ್ನೀಯಲು ; ಎಸಳುಗಣ್ಣಿಡೆ ನೋಟದಿಂದ ವಿಭೀಷಣನನ್ನು ನೋಡಿ ಉಬ್ಬಿದ ಹರ್ಷ ದಿಂದ ಕೂಡಿ ಭಕ್ತ ಮುಖ್ಯನಾದ ಈತನನ್ನು ಅಂಗೀಕರಿಸಬೇಕೆಂದು ನಿಶ್ಚಯಿಸಿ ಹನು ಮಂತನ ಮುಖವನ್ನು ನೋಡಲು ; ಆತನು ಒಡೆಯನ ಇಂಗಿತವನ್ನು ತಿಳಿದು ಜತೆ ಯಲ್ಲಿ ಯುವರಾಜನಾದ ಅಂಗದನನ್ನು ಕರೆದುಕೊಂಡು ವಿಭೀಷಣನ ಬಳಿಗೆ ಬಂದು ಮೊದಲೇ ಅವನ ಸುಗುಣಗಳನ್ನು ತಿಳಿದವನಾಗಿದ್ದಕಾರಣ ಉಕ್ಕುತ್ತಿರುವ ಆನಂದ ಬಾಷ್ಪವುಳ್ಳವನಾಗಿ ಆತನನ್ನು ಆಲಿಂಗಿಸಿ ಮುಗುಳ್ನಗೆಯುಳ್ಳವನಾಗಿ—ಎನ್ನೈ ವಿಭೀ ಷಣನೇ, ಇದ್ದುದಕ್ಕಿದ್ದ ಹಾಗೇ ಬರುವಿಕೆಯಾಯಿತು. ಕಾರಣವೇನು ? ನಿಮ್ಮಣ್ಣ ನಾದ ರಾವಣನ ಅಪ್ಪಣೆಯೋ ? ಅಥವಾ ನಿನ್ನ ಮನಸ್ಸಿನ ಯೋಚನೆಯೋ ? ಈ ಎರಡರೊಳಗೆ ಯಾವುದು ನಿಶ್ಚಯವು ? ನಿಜವಾಗಿ ತಿಳಿಸುವವನಾಗು ಎಂದು ಬೆಸ ಗೊಳ್ಳಲು ; ವಿಭೀಷಣನು—ನೀನು ಕೇಳಿದ ಎರಡು ವಿಧವಾದ ಉದ್ದೇಶಗಳಿಂದಲೂ ನಾನು ಬಂದೆನು ಎನ್ನಲು ; ಆಂಜನೇಯನು ಕಣ್ಣುಸನ್ನೆಯಿಂದ ವಿಭೀಷಣನ ಕಾವ ಲಿಗೆ ಅಂಗದನನ್ನು ಇರಿಸಿ ತಾನು ಹೊರಟು ಶೀಘ್ರವಾಗಿ ರಾಮನ ಬಳಿಗೆ ಬಂದು— ಜೀಯಾ, ಈಗ ಬಂದಿರುವವನು ರಾವಣನ ತಮ್ಮನಾದ ವಿಭೀಷಣನು. ಈತನು ಚೆನ್ನಾಗಿ ನೀತಿಯನ್ನು ತಿಳಿದವನು. ಅಸಹಾಯಶೂರನು. ಉದಾರ ಗುಣಮಣಿ ಭೂಷಿತನು. ಧೀರನು ಮತ್ತು ಧಾರ್ಮಿಕನು. ಇವನಲ್ಲಿ ಮಾಯೆಯೆಂಬುದು ಸ್ವಲ್ಪವಾದರೂ ಇಲ್ಲ. ಇವನು ಮೊದಲು ಲಂಕಾದುರ್ಗದಲ್ಲಿ ದುಷ್ಟನಾದ ರಾವಣ ನಿಗೆ ನೀತಿಯನ್ನು ಬೋಧಿಸಿ ನನಗುಂಟಾಗಿದ್ದ ಕಷ್ಟಗಳನ್ನೆಲ್ಲಾ ತಪ್ಪಿಸಿದನು. ಈತನು ರಕ್ಕಸರೊಳಗೆ ತಪ್ಪಿ ಹುಟ್ಟಿದ್ದಾನೆ. ಈತನು ತನ್ನ ಅಣ್ಣನಾದ ರಾವಣನಿಗೆ ಜಗತ್ಪತಿ ಯಾದ ರಾಮನ ಹೆಂಡತಿಯನ್ನು ಬಿಟ್ಟು ಬದುಕು, ಆಕೆಯನ್ನು ಬಿಡದಿದ್ದರೆ ಈ ಭೂಲೋಕದಲ್ಲಿ ನಿನಗೆ ಉಳಿವಿಲ್ಲವು ಎಂದು ಬಹುವಿಧವಾಗಿ ತಿಳಿಯ ಹೇಳಿದರೂ ಅವನು ಗರ್ವದಿಂದ ಕೂಡಿದವನಾಗಿ ಕೇಳದೆ ತಮ್ಮನೆಂದಾದರೂ ಗಣಿಸದೆ ವಿರೋಧ ದಿಂದ ಸಭೆಯನ್ನು ಬಿಟ್ಟು ನೂಕಿಸಿ ಬಿಟ್ಟುದರಿಂದ ಈ ವಿಭೀಷಣನು ದೇವನಾದ ನಿನ್ನ ಅಡಿದಾವರೆಗಳನ್ನು ಸೇವಿಸಿ ಕೃತಾರ್ಥನಾಗುವುದಕ್ಕೆ ಬಂದಿದ್ದಾನೆ ಎಂದು ಬಿನ್ನ ವಿಸಿದನು.

ಆಗ ಸುಗ್ರೀವನು ಕೈಮುಗಿದು ರಾಮನನ್ನು ಕುರಿತು—ಸ್ವಾಮಿಾ, ಈ ಜಗ ತ್ತಿನ ಜೀವರಾಶಿಯ ಅಂತರ್ಯವು ಸ್ವಲ್ಪವಾದರೂ ನಿನಗೆ ತಿಳಿಯದಿರುವುದಿಲ್ಲ. ಹೀಗಿದ್ದರೂ ನಾನು ನಿನ್ನ ಸನ್ನಿಧಾನದಲ್ಲಿ ಭಯಭಕ್ತಿಯಿಂದ ಅರಿಕೆಮಾಡಿಕೊಳ್ಳುವ ಮಾತುಗಳನ್ನು ಲಾಲಿಸಿ ಸರ್ವಜ್ಞಚಿತ್ತಕ್ಕೆ ಒಪ್ಪಿಕೆಯಾದ ರೀತಿಯಿಂದ ನಮ್ಮನ್ನು ನಡಿಸಬಹುದು. ಅದೇನೆಂದರೆ ರಕ್ಕಸರು ಸ್ವಭಾವವಾಗಿ ಮಾಯಾವಿಗಳು. ರಾವಣನು ಸಕಲ ವೇದಶಾಸ್ತ್ರಗಳನ್ನೂ ಸಕಲ ರಾಜನೀತಿಗಳನ್ನೂ ತಿಳಿದವನೇ ಹೊರತು ಮೂಢ ನಲ್ಲ. ವಿರೋಧಿಗಳು ತನ್ನ ಮೇಲೆ ದಂಡೆತ್ತಿ ಬಂದಿರುವ ಇಂಥ ಸಮಯದಲ್ಲಿ ಸಕಲ ಮರ್ಮಗಳನ್ನು ತಿಳಿದವನಾಗಿಯೂ ಅಪ್ರತಿಮವೀರನಾಗಿಯೂ ತನ್ನ ತಮ್ಮನಾ

ಗಿಯೂ ಇರುವ ಇವನನ್ನು ಇಲ್ಲಿಗಟ್ಟುವುದು ನಿಶ್ಚಯವೆಂದು ನಂಬುವುದು ಹೇಗೆ? ಅಣ್ಣನು ವಿರೋಧಿಯಾಗಿದ್ದರೆ ಇವನು ಇಷ್ಟುದಿನಗಳ ಪರ್ಯಂತರವೂ ಅವನಿಗೆ ವಿಧೇಯನಾಗಿದ್ದು ಈ ವೇಳೆಯಲ್ಲಿ ಮಾತ್ರ ನಮ್ಮ ಬಳಿಗೆ ಬರುವುದುಂಟೇ? ನನ್ನ ಬುದ್ಧಿಗೆ ಇದೇನೋ ಒಂದು ಕಪಟಯುಕ್ತಿಯಾಗಿ ಕಾಣುತ್ತದೆ. ಪೂರ್ವದಲ್ಲಿ ಹುಲಿಯು ವೇಷದಿಂದ ಹಸುಗಳ ಮಂದೆಯನ್ನು ಹೊಕ್ಕು ಅವುಗಳನ್ನು ಸಂಹರಿಸಿ ನಿರ್ಮೂಲಮಾಡಿದ ಹಾಗೆ ಇವನು ಬಂದು ನಮ್ಮಲ್ಲಿ ಸೇರಿ ಕಡೆಗೆ ನಮ್ಮನ್ನು ವಂಚಿಸದೆ ಬಿಡನು. ಹಿಂದೆಲ್ಲಾ ಈ ರಾಕ್ಷಸರ ಮಾಯೆಯು ನಮ್ಮನ್ನು ಅಪಾರವಾದ ಕಷ್ಟಕ್ಕೂ ನಷ್ಟಕ್ಕೂ ಗುರಿಮಾಡಿರುವುದು ಅನುಭವಸಿದ್ಧವಾಗಿದೆ. ಆದುಕಾರಣ ಇವನನ್ನು ಖಂಡಿತವಾಗಿ ಸೇರಿಸಿಕೊಳ್ಳಕೂಡದು ಎಂದು ಹೇಳಿದನು.

ಅದಕ್ಕೆ ಜಗದೇಕವೀರನಾದ ಶ್ರೀರಾಮಚಂದ್ರನು ಸುಗ್ರೀವನನ್ನು ನೋಡಿ—ಎಲೈ ಪ್ರಿಯ ಸ್ನೇಹಿತನೇ, ನೀನು ನಮ್ಮಲ್ಲಿರುವ ಸ್ನೇಹಾತಿಶಯದಿಂದ ಹಿತಕಾಂಕ್ಷಿಯಾಗಿ ಇಂಥ ಯೋಚನೆಯನ್ನು ಹೇಳಿದುದು ಯುಕ್ತವೇ ಸರಿ. ಆದರೆ ಯುದ್ಧರಂಗದಲ್ಲಿ ಇದಿರಾದವರನ್ನು ಇರಿಯುವುದೂ ಮರೆಹೊಕ್ಕವರನ್ನು ಪರಿಪಾಲಿಸುವುದೂ ಧರ್ಮವನ್ನು ಕಾಪಾಡುವುದೂ ಅಧರ್ಮವನ್ನು ನಾಶಮಾಡುವುದೂ ಅರಸುಗಳಿಗೆ ವಿಹಿತವಾದ ಧರ್ಮವು. ನಮಗೆ ಭುಜಬಲವಿಲ್ಲದಿದ್ದರೆ ಭಯಪಡಬೇಕು. ಕೀಳಾದ ಬಲವುಳ್ಳವರು ನಮ್ಮೊಳಹೊಕ್ಕು ನಮಗೇನುತಾನೆ ಮಾಡಬಲ್ಲರು? ಕತ್ತಲೆಯು ಮಧ್ಯಾಹ್ನಾದಿತ್ಯನನ್ನು ಹೇಗೆ ಜಯಿಸಲಾರದೋ ಹಾಗೆ ಕಪಟವು ಸತ್ಯವನ್ನು ಎಂದಿಗೂ ಸೋಲಿಸಲಾರದು. ಇದಲ್ಲದೆ ನಮ್ಮ ಇಕ್ಷ್ವಾಕುವಂಶದಲ್ಲಿ ಹುಟ್ಟಿದವರಿಗೆ ಶರಣಾಗತರನ್ನು ರಕ್ಷಿಸುವುದೇ ಮುಖ್ಯವಾದ ಬಿರುದಾಗಿರುವುದು. ಈ ವಿಷಯದಲ್ಲಿ ನಾನು ನಿನಗೆ ವಿಶೇಷವಾಗಿ ಹೇಳಬೇಕೇ? ನೀನು ಈ ಸರ್ವವಿಷಯಗಳನ್ನೂ ತಿಳಿಯದವನೇ? ತಮ್ಮ ಮರೆಹೊಕ್ಕವರನ್ನು ಕಾಪಾಡುವುದಕ್ಕಾಗಿ ತಮ್ಮ ಒಡಲನ್ನಾದರೂ ಈಯುವುದು ಲೋಕದಲ್ಲಿ ಉತ್ತಮ ಕ್ಷತ್ರಿಯರ ಧರ್ಮವು. ಪೂರ್ವಕಾಲದಲ್ಲಿ ಪಾರಿವಾಳದ ಹಕ್ಕಿಯು ಮಳೆಯಿಂದ ನೆನೆದು ಕಂಗೆಟ್ಟು ತನ್ನ ಮನೆಗೆ ಬಂದ ಕಿರಾತನಿಗೆ ಕಟ್ಟಿಗೆಯನ್ನು ತಂದು ಅಗ್ನಿಯನ್ನು ಉರಿಮಾಡಿ ಅವನ ಚಳಿಯ ನಡುಕವನ್ನು ತಪ್ಪಿಸಿದುದಲ್ಲದೆ ಅವನಿಗೆ ತನ್ನ ದೇಹವನ್ನೇ ಆಹಾರಕ್ಕಾಗಿ ಕೊಟ್ಟ ಚರಿತ್ರೆಯನ್ನು ನೀನು ಕೇಳಿ ಅರಿಯೆಯಾ? ಈ ಭಾಗದಲ್ಲಿ ನೀನು ಬದಲು ಯೋಚನೆಯನ್ನು ಮಾಡಬೇಡ. ಈ ವಿಭೀಷಣನು ಧರ್ಮಜ್ಞನಾದುದರಿಂದಲೂ ಇವನಣ್ಣನೂ ದುಷ್ಟನೂ ಆದ ರಾವಣನು ನಿಮ್ಮಣ್ಣನಾದ ವಾಲಿಯಂತೆ ದುರ್ಮಾರ್ಗಪ್ರವರ್ತಕನಾಗಿ ಪಾಪಕೃತ್ಯದಲ್ಲಿ ಉದ್ಯುಕ್ತನಾದುದರಿಂದಲೂ ನಾನು ವಾಲಿಯನ್ನು ಕೊಂದು ಸತ್ಪುರುಷನಾದ ನಿನಗೆ ರಾಜ್ಯಾಭಿಷೇಕವನ್ನು ಮಾಡಿದುದನ್ನು ಕೇಳಿದುದಲ್ಲದೆ ಈಗ ನಿನ್ನನ್ನು ಕಣ್ಣಾರ ಕಂಡುದರಿಂದಲೂ ತನ್ನಣ್ಣನನ್ನು ಕೊಂದು ತನಗೆ ಲಂಕಾರಾಜ್ಯಾಭಿಷೇಕವನ್ನು ನಾನು ಮಾಡುವೆನೆಂಬ ಮನೋನಿಶ್ಚಯವುಳ್ಳವನಾಗಿ ನಮ್ಮನ್ನು ಮರೆಹೊಗುವುದಕ್ಕೆ ಬಂದಿದ್ದಾನೆ. ಇದರಲ್ಲಿ ಲೇಶಮಾತ್ರವೂ ಸಂದೇಹವಿಲ್ಲವೆಂದು ಹೇಳಲು; ಆಗ ವಿಭೀ

ತಸಾದ ಸುಗ್ರೀವನು ರಾಮನನ್ನು ಕುರಿತು—ದೇವಾ, ನಿನ್ನ ಮಹಿಮೆಯ ಸೊಬಗು ಯಾರಿಗುಂಟು ? ನೀನು ದೇವದೇವನಲ್ಲವೇ ? ನೀನು ಲೋಕದವರಂತೆ ಪ್ರಾಕೃತಪುರುಷನೇ ? ನೀನು ಸರ್ವಜ್ಞನು. ನಾವು ಅಲ್ಪಜ್ಞರು. ನಮಗೇನು ತಿಳಿಯುವುದು ? ತೋರಿದ ಸಂಗತಿಯನ್ನು ಸನ್ನಿಧಾನದಲ್ಲಿ ವಿಜ್ಞಾಪಿಸದಿರುವುದು ಅಪರಾಧವೆಂದು ತಿಳಿದು ನಾನು ಅರಿಕೆಮಾಡಿಕೊಂಡೆನಲ್ಲದೆ ಅನ್ಯಥಾ ಅಲ್ಲವು. ದೇವರ ಅಪ್ಪಣೆಗೆ ಬೇಕು ಬೇಡ ಎಂಬವರು ಯಾರೂ ಇಲ್ಲವು. ಚಿತ್ತಕ್ಕೆ ಸರಿಬಂದ ರೀತಿಯಿಂದ ಆಜ್ಞಾಪಿಸಬಹುದು ಎಂದು ವಿಜ್ಞಾಪನೆಮಾಡಿದನು.

ಆ ಮಾತುಗಳನ್ನು ಕೇಳಿ ಲಕ್ಷ್ಮಣನೂ ಜಾಂಬವಂತ ಹನುಮಂತ ನೀಲಾದಿ ಸಕಲ ಕಪಿ ಸೇನಾನಾಯಕರೂ ಸಂತೋಷದಿಂದ ಒಡಂಬಡಲು ; ರಾಮಚಂದ್ರನು ಸುಗ್ರೀವನನ್ನು ನೋಡಿ—ಎಲೈ ಪ್ರಿಯ ಸ್ನೇಹಿತನೇ, ರಾಜನಾದ ನೀನೇ ಹೋಗಿ ವಿಧೇಯನಾಗಿ ಬಂದಿರುವ ವಿಭೀಷಣನನ್ನು ಕರೆದುಕೊಂಡು ಬಾ ಎಂದು ಅಪ್ಪಣೆಯನ್ನು ಕೊಡಲು ; ಕೂಡಲೆ ಸುಗ್ರೀವನು ತನ್ನ ಪರಿವಾರದೊಡನೆ ಕೂಡಿ ವಿಭೀಷಣನ ಬಳಿಗೆ ಬಂದು ಬಹಳ ಸಂತೋಷದಿಂದ ಆತನನ್ನು ಆಲಿಂಗಿಸಿ—ಶ್ರೀರಾಮನ ಕೃಪಾಕಟಾಕ್ಷವು ನಿನ್ನಲ್ಲಿ ಸಂಪೂರ್ಣವಾಗಿದೆ. ಆದುಕಾರಣ ಲೋಕದಲ್ಲಿ ನೀನೇ ಧನ್ಯನು. ರಾಮನ ಅಡಿದಾವರೆಗಳ ದರ್ಶನಾರ್ಥವಾಗಿ ಒರುವವನಾಗು ಎನ್ನಲು ; ವಿಭೀಷಣನು ಆಯುಧಗಳನ್ನು ತನ್ನ ಮಂತ್ರಿಗಳ ವಶಕ್ಕೆ ಕೊಟ್ಟು ರಥದಿಂದ ಭೂಮಿಗಿಳಿದು ಬಂದು ನವರತ್ನಖಚಿತವಾದ ತನ್ನ ಸಿಂಗಾಡಿಯನ್ನೂ ವಜ್ರದಲಗುಳ್ಳ ಬಾಣವನ್ನೂ ರಾಮನ ಪಾದಪದ್ಮಗಳಿಗೆ ಸಮರ್ಪಿಸಿ ದೀರ್ಘದಂಡ ನಮಸ್ಕಾರವನ್ನು ಮಾಡಿ ಬಹುವಿಧವಾಗಿ ಸ್ತುತಿಸಿ—ಅನಾಥನಾದ ನನ್ನನ್ನು ಕಾಪಾಡಬೇಕೆಂದು ಬಾರಿಬಾರಿಗೂ ಬೇಡಿಕೊಳ್ಳುತ್ತ ನಮಸ್ಕರಿಸುತ್ತ ಇದ್ದನು. ಆಗ ಶ್ರೀರಾಮಚಂದ್ರನು ಶರಣಾಗತನಾದ ವಿಭೀಷಣನನ್ನು ಕೃಪಾದೃಷ್ಟಿಯಿಂದ ನೋಡಿ—ಏಳು, ಸುಗುಣಮಣಿಗಣಭೂಷಿತನೇ, ಭಯಪಡಬೇಡ. ಇಲ್ಲಿಗೆ ನಿನ್ನ ಸರ್ವಪಾಪವೂ ಕಷ್ಟಗಳೂ ಪರಿಹಾರವಾದುವೆಂದು ತಿಳಿಯುವವನಾಗು. ಎಲೈ ವಿಭೀಷಣನೇ, ಕೇಳು, ನನ್ನ ತಂದೆಯಾದ ದಶರಥರಾಜನಾಣೆ, ಲಕ್ಷ್ಮಣನನ್ನು ಹೇಗೋ ಹಾಗೆ ನಿನ್ನನ್ನೂ ಕಾಪಾಡುವೆನು. ಚಿಂತೆಯನ್ನು ಬಿಡು ಎಂದು ಹೇಳಿ ಆತನ ಮುಂಡೆಯನ್ನು ಹಿಡಿದೆತ್ತಿ ಪ್ರಿಯೆಯಾದ ಸೀತೆಯನ್ನು ಆಲಿಂಗಿಸುವ ತೋಳುಗಳಿಂದ ಆಲಿಂಗಿಸಿಕೊಂಡು ಲಕ್ಷ್ಮಣ ಸುಗ್ರೀವರನ್ನು ಕುರಿತು—ಈ ಪ್ರಿಯನಾದ ವಿಭೀಷಣನಿಗೆ ಈಗಲೇ ಲಂಕಾರಾಜ್ಯಾಭಿಷೇಕವನ್ನು ಮಾಡಿರಿ ಎಂದು ಅಪ್ಪಣೆಯನ್ನು ಕೊಡಲು ; ಆಗ ಅವರು ಸಕಲ ಸಾಮಗ್ರಿಗಳನ್ನು ಸಿದ್ಧಮಾಡಿಕೊಂಡು ಸುಮುಹೂರ್ತದಲ್ಲಿ ವಿಭೀಷಣನನ್ನು ದಿವ್ಯವಾದ ರತ್ನಪೀಠದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕವನ್ನು ಮಾಡಿದರು. ಆಗ ದೇವತೆಗಳು ವಿಭೀಷಣನ ತಲೆಯ ಮೇಲೆ ದೇವಗಂಗೋದಕಗಳನ್ನು ಸುರಿದರು. ನಾರದನು ಸಂತೋಷದಿಂದ ದಿವ್ಯ ವೀಣಾಗಾನವನ್ನು ಮಾಡಿದನು. ಅಪ್ಸರಸ್ತ್ರೀಯರು ಮನೋಲ್ಲಾಸದಿಂದ ನರ್ತನವನ್ನು ಮಾಡಿದರು. ಅನಂತರದಲ್ಲಿ ವಿಭೀಷಣನು ಶರತ್ಕಾಲದ ಪೂರ್ಣಿಮಾ

ಚಂದ್ರನಂತಿರುವ ಮುಖವುಳ್ಳವನಾಗಿ ಬಂದು ರಾಮನ ಪಾದಕಮಲಗಳಿಗೆ ಭಕ್ತಿಯಿಂದ ನಮಸ್ಕರಿಸಲು ; ಆಗ ಶ್ರೀರಾಮಚಂದ್ರನು ಆತನನ್ನು ತೆಗೆದು ಆಲಿಂಗಿಸಿಕೊಂಡು ತನ್ನ ತೊಡೆಯೆಂಬ ಸಿಂಹಾಸನದ ಮೇಲೆ ಕುಳ್ಳಿರಿಸಿ ತನ್ನ ನೇತ್ರಗಳೆಂಬ ಪೊಂಗೊಡಗಳಲ್ಲಿ ತುಂಬಿದ ಆನಂದಬಾಷ್ಪಗಳೆಂಬ ಪನ್ನೀರುಗಳಿಂದ ತಾನೂ ಆತನಿಗೆ ಲಂಕಾರಾಜ್ಯಾಭಿಷೇಕವನ್ನು ಮಾಡಿ—ಚಿರಂಜೀವಿಯಾಗಿದ್ದುಕೊಂಡು ಈಗಿರುವ ಬ್ರಹ್ಮಕಲ್ಪದ ಪರ್ಯಂತರವೂ ಈ ಲಂಕಾರಾಜ್ಯವನ್ನು ಅನುಭವಿಸಿಕೊಂಡಿರು ಎಂದು ತಲೆಯ ಮೇಲೆ ಕೈಗಳನ್ನಿಟ್ಟು ಆಶೀರ್ವಾದವನ್ನು ಮಾಡಿ—ಎಲೈ ಪ್ರಿಯನಾದ ವಿಭೀಷಣನೇ, ಈಗ ನಾವು ರಾವಣನ ಮೇಲೆ ಮಾಡಬೇಕಾಗಿರುವ ರಾಜಕಾರ್ಯಕ್ಕೆ ಸಮುದ್ರರಾಜನು ತಡೆಯಾಗಿರುವನಲ್ಲ ! ಈ ಶತಯೋಜನ ವಿಸ್ತಾರವಾದ ಸಮುದ್ರವನ್ನು ನಾವೂ ನಮ್ಮ ಸೇನೆಗಳೂ ನಿರಾಯಾಸವಾಗಿ ದಾಟಿ ಲಂಕೆಯನ್ನು ಸೇರುವುದಕ್ಕೆ ಯಾವ ಉಪಾಯವನ್ನು ಮಾಡಬೇಕು ? ಈ ವಿಷಯದಲ್ಲಿ ನಿನ್ನ ಬುದ್ಧಿಗೆ ಏನು ತೋಚುತ್ತದೆ ? ಎಂದು ಕೇಳಿದನು. ಅದಕ್ಕೆ ವಿಭೀಷಣನು ಕೈಮುಗಿದು ನಿಂತುಕೊಂಡು—ಸ್ವಾಮಿಾ ಸರ್ವಜ್ಞನೇ, ಭಕ್ತರಾದ ಸರ್ವಜನರನ್ನೂ ಅಪಾರವಾದ ಸಂಸಾರಸಾಗರದಿಂದ ಸುಲಭವಾಗಿ ದಾಟಿಸುವ ಮಹಾತ್ಮನಾದ ನಿನಗೆ ನಿನ್ನಿಂದ ಸೃಷ್ಟಿಸಲ್ಪಟ್ಟ ಈ ಬ್ರಹ್ಮಾಂಡದಲ್ಲಿ ಸ್ವಲ್ಪಮಾತ್ರವಾಗಿರುವ ನೂರು ಯೋಜನ ವಿಸ್ತೀರ್ಣ ಸಮುದ್ರವನ್ನು ದಾಟುವುದು ಅಸಾಧ್ಯಕಾರ್ಯವೇ ? ಆದರೂ ಧರ್ಮ ಸಂಸ್ಥಾಪನಾರ್ಥವಾಗಿ ನರರೂಪವನ್ನು ಧರಿಸಿ ಲೋಕದವರಂತೆ ನಟಿಸುತ್ತಿರುವ ಪರಮಪುರುಷನಾದ ನಿನ್ನ ಲೀಲಾನಾಟಕಕ್ಕೆ ಅನುಸಾರವಾಗಿ ಈ ಸಮುದ್ರರಾಜನನ್ನು ಕುರಿತು ತಪಸ್ಸನ್ನು ಮಾಡಿ ಆತನು ಪ್ರಸನ್ನನಾಗುವಂತೆ ಮಾಡಿಕೊಳ್ಳಬೇಕೆಂದು ನನ್ನ ಬುದ್ಧಿಗೆ ತೋಚುತ್ತದೆಂದು ಅರಿಕೆಮಾಡಿಕೊಂಡನು.

ಆ ಮಾತುಗಳನ್ನು ಕೇಳಿ ಶ್ರೀರಾಮಚಂದ್ರನು ತನ್ನ ಮನೋಗತವಾದ ಅಭಿಪ್ರಾಯವನ್ನೇ ಭಕ್ತನಾದ ವಿಭೀಷಣನೂ ಹೇಳಿದನೆಂದು ಭಾವಿಸಿ ಆತನ ಬುದ್ಧಿ ಕೌಶಲ್ಯಕ್ಕೆ ಬಹಳವಾಗಿ ಸಂತೋಷಿಸಿ ಆ ಕ್ಷಣದಲ್ಲಿಯೇ ಕೈಕಾಲ್ಮೊಗಗಳನ್ನು ತೊಳೆದುಕೊಂಡು ಶುದ್ಧಾಚಮನವನ್ನು ಮಾಡಿ ಕಡಲ್ದಡದಲ್ಲಿ ದರ್ಭೆಯನ್ನು ಹಾಕಿ ಕುಳಿತುಕೊಂಡು ಸಮುದ್ರರಾಜನನ್ನು ಕುರಿತು—ಎಲೈ ಸರ್ವಪ್ರಾಣಿಗಳಿಗೂ ಆಧಾರಭೂತನಾದ ರತ್ನಾಕರನೇ, ಮಹಾ ಗಾಂಭೀರ್ಯಸಂಪನ್ನನೇ, ನಿನ್ನ ಶರಣಾಗತನಾದ ನಾನು ಸೇನೆಯೊಡನೆ ಸುಖವಾಗಿ ಲಂಕೆಗೆ ಹೋಗುವುದಕ್ಕೆ ದಾರಿಯನ್ನು ಕೊಟ್ಟು ನನ್ನನ್ನು ಕಾಪಾಡುವವನಾಗಬೇಕು. ನೀನು ಹಾಗೆ ಮಾಡದಿದ್ದರೆ ನಾನು ನಿರಾಹಾರಿಯಾಗಿ ನಿನ್ನ ಸನ್ನಿಧಾನದಲ್ಲೇ ಪ್ರಾಣಗಳನ್ನು ಬಿಡುವೆನು ಎಂದು ನಿರಶನವ್ರತವನ್ನು ಕೈಕೊಂಡು ದರ್ಭಶಯ್ಯೆಯಲ್ಲಿ ಮಲಗಿಕೊಂಡನು. ಶ್ರೀರಾಮನು ಹೀಗೆ ಮೂರು ದಿನಗಳ ಪರ್ಯಂತರವೂ ಶುದ್ಧಮನಸ್ಸಿನಿಂದ ಪ್ರಾರ್ಥನೆ ಮಾಡುತ್ತ ಮಲಗಿಕೊಂಡಿದ್ದಾಗ್ಯೂ ಸಮುದ್ರರಾಜನು ಪ್ರಸನ್ನನಾಗಿ ಬಂದು ಮೈದೋರದಿರಲು ; ನಾಲ್ಕನೆಯ ದಿನದಲ್ಲಿ ಶ್ರೀರಾಮನು ಕಣ್ದೆರೆದು ಮಹಾ ಕೋಪದಿಂದ

ಸಮುದ್ರನನ್ನು ನೋಡಿ—ಇವನು ನಮ್ಮನ್ನು ಲಕ್ಷ್ಯೀಕರಿಸದಿರುವನಲ್ಲಾ, ಶಿವ! ಶಿವಾ! ನಾವಿವನಿಗೆ ಸದರವಾದೆವೇ? ಎಂದು ಮತ್ತೂ ಹೆಚ್ಚಾಗಿ ರೌದ್ರಾವೇಶಿತ ಮನಸ್ಕನಾಗಿ ಮೂಗಿನ ರಂಧ್ರಗಳಲ್ಲಿ ಅತ್ಯುಷ್ಣವಾದ ಶ್ವಾಸಗಳನ್ನು ಬಿಡುತ್ತ ಕಣ್ಣುಗಳಲ್ಲಿ ಕಾಲ ರುದ್ರನ ಭಾಳಲೋಚನಗಳ ಕಿಡಿಗಳಂತಿರುವ ಕಿಡಿಗಳನ್ನು ಸುರಿಸುತ್ತ, ನಾವು ಇಂಥ ದುರ್ಮದಾಂಧರಲ್ಲಿ ತಾಳ್ಮೆಯನ್ನು ಧರಿಸುವುದು ಯುಕ್ತವಲ್ಲ. ಲೋಕದಲ್ಲಿ ಯಾವನು ಅತಿ ಮೃದುಸ್ವಭಾವಿಯಾಗಿರುವನೋ ಅಂಥವನು ಪತ್ನೀಪುತ್ರಾದಿಗಳಿಂದಲೇ ತಿರಸ್ಕರಿಸಲ್ಪಡುವನೆಂದು ಹೇಳುವಲ್ಲಿ ಇತರರ ವಿಷಯವಾಗಿ ಹೇಳತಕ್ಕುದೇನು? ಎಂದು ಲಕ್ಷ್ಮಣನನ್ನು ನೋಡಿ—ಎಲೈ ತಮ್ಮನೇ, ನನ್ನ ಬಿಲ್ಲನ್ನೂ ಮಹೋರಗನಿಗೆ ಸಮಾನವಾದ ಸರಳನ್ನೂ ಶೀಘ್ರವಾಗಿ ಕೊಡು. ಕ್ಷಣಮಾತ್ರದಲ್ಲಿ ಈ ಸಮುದ್ರವನ್ನು ಬತ್ತಿಸಿ, ತಾಯ್ಮಳಲನ್ನು ಕಾಣಿಸುವೆನು. ಆ ಮೇಲೆ ನಮ್ಮ ಕಪಿಬಲವು ನಿರಾಯಾಸವಾಗಿ ಕಾಲಿನಿಂದ ನಡೆದು ಹೋಗಲಿ ಎಂದು ಧನುರ್ಬಾಣಗಳನ್ನು ತೆಗೆದುಕೊಂಡು ಬಿಲ್ಲಿಗೆ ಹೆದೆಯನ್ನೇರಿಸಿ ಅದರಲ್ಲಿ ಅಂಬನ್ನು ತೊಡಿಸಿ ಅಗ್ನಿಮಂತ್ರವನ್ನು ಪಠಿಸಿ ಕಿವಿವರೆಗೆ ಸೇದಿಬಿಡಲುದ್ಯುಕ್ತನಾದ ಕ್ಷಣದಲ್ಲಿಯೇ ಕಡಲೊಳಗೆ ಉರಿಯಿಳಿದು ತೆರೆಗಳೆಲ್ಲವೂ ಕಾಯ್ದು ಕುದಿದು ತಳಮಳಿಸುತ್ತ ಛಟಛಟತ್ಕೃತಿಗಳಿಂದ ಕೂಡಿ ತುಳುಕಿತೂರುತ್ತಿರುವ ತುಂತುರ್ವನಿಗಳು ಒಳಗಿರುವ ಬಡಬಾಗ್ನಿಯಿಂದ ಕಾಯ್ದುದೋ ಎಂಬಂತೆ ಚತುರ್ದಿಕ್ಕುಗಳಲ್ಲೂ ಸುರಿಯುತ್ತ ಪ್ರಾಣಿಗಳನ್ನು ಸುಡುವುದಕ್ಕಾರಂಭಿಸಲು; ಆಗ ಜಲಜಂತುಗಳೆಲ್ಲವೂ ಬೆಂದು ಕರಿಮುರಿಯಾಗಿ ತಣ್ಣೀರ್ಗಡಲು ಬಿಸಿನೀರ್ಗಡಲಾಗಲು; ಕೂಡಲೆ ಹಾ, ಸರಿತ್ಪತಿಯೇ ಎಂದು ಹಂಬಲಿಸುತ್ತ ಬಾಯ್ಬಿಡುತ್ತ ತಲೆಗೂದಲನ್ನು ಕೆದರಿಕೊಂಡು ಗಂಗಾದಿ ಸಕಲ ನದಿಗಳೂ ಬಂದು ಸಮುದ್ರನನ್ನು ಕುರಿತು—ಎಲೈ ಪಾಪಿಯೇ, ಅಜ್ಞಾನಿಯೇ, ಬೇಗಹೊರಡು. ರೌದ್ರಾಕಾರವನ್ನು ಧರಿಸಿಬಂದು ಕ್ಷಣಕಾಲದಲ್ಲಿ ಸರ್ವ ಲೋಕಗಳನ್ನೂ ಸುಡಬಲ್ಲಿದನಾದ ಮಹಾವಿಷ್ಣುವಿನ ಕೋಪೋದ್ರೇಕದ ಮುಂದೆ ಅಲ್ಪನಾದ ನಿನ್ನ ಗಾಂಭೀರ್ಯವು ಏನು ಮಾಡಬಲ್ಲುದು? ಅನ್ಯಾಯವಾಗಿ ಕೆಟ್ಟುಹೋಗಬೇಡ ನಡೆ ಎಂದು ಬೋಧಿಸಿ ತಮ್ಮ ಗಂಡನಾದ ಸಮುದ್ರರಾಜನನ್ನು ಕರೆದುಕೊಂಡು ಶ್ರೀರಾಮನ ಸನ್ನಿಧಿಗೆ ಬಂದು ತಮ್ಮ ತಮ್ಮ ಕಿವಿಗಳ ಓಲೆಗಳನ್ನು ಕಳೆದು ರಾಮನ ಅಡಿದಾವರೆಗಳ ಮುಂದಿಟ್ಟು ನಮಸ್ಕರಿಸಿದರು.

ಅವರೊಳಗೆ ಗಂಗೆಯು ಮುಂದೆ ಬಂದು ರಾಮನನ್ನು ಕುರಿತು—ಎಲೈ ರಘುಪತಿಯೇ, ದೀನದಯಾಳುವೇ, ನಾನು ನಿನಗೆ ಮಗಳಲ್ಲವೇ? ತಂದೆಯೂ ರಕ್ಷಕನೂ ಆದ ನಿನಗೆ ವಿಧೇಯಳೂ ಪುತ್ರಿಯೂ ಆದ ನನ್ನಲ್ಲಿ ಇಷ್ಟು ಅಗಡುತನವೇಕೆ? ನೀನು ನನ್ನ ಕೊರಳಲ್ಲಿರುವ ತಾಳಿಯ ಮೇಲಾದರೂ ದೃಷ್ಟಿಯನ್ನಿಡದೆ ಹೋಗುವುದು ಯಾವ ಧರ್ಮವು? ಲೋಕದಲ್ಲಿ ತಂದೆಯಾದವನು ಮಗಳಿಗೆ ಮುನಿದರೆ ಬಲ್ಲವರು ನಗದಿರುವರೇ? ಸಾಕು. ನಿನ್ನ ಕೋಪವನ್ನು ಬಿಡು. ಶರಣಾಗತರಕ್ಷಕನೆಂಬ ಲೋಕವಿಶ್ರುತವಾದ ನಿನ್ನ ಬಿರುದನ್ನು ಕಾಪಾಡಿಕೋ. ಇದೋ! ದೀನನಾಗಿ ಬಂದಿರುವ ನನ್ನ ಪತಿಯಾದ ಸಮುದ್ರರಾಜನನ್ನು ಕೃಪಾದೃಷ್ಟಿಯಿಂದ ನೋಡಿ ಅನುಗ್ರಹಿಸು. ಇವನು

ನಿನ್ನಲ್ಲಿ ರಕ್ಷಣಾರ್ಥಿಯಾಗಿ ಬಂದಿರುವನೋ? ವಿರೋಧಿಸುವುದಕ್ಕಾಗಿ ಬಂದಿರುವನೋ? ಪರೀಕ್ಷಿಸಿನೋಡು. ಇವನನ್ನು ಸ್ವೀಕರಿಸಿ ರಕ್ಷಿಸುವವನಾಗು. ಅನ್ಯಾಯವಾಗಿ ನನ್ನ ಮಾಂಗಲ್ಯಸೂತ್ರವನ್ನು ಹರಿದುಹಾಕಬೇಡ ಎಂದು ನಾನಾ ವಿಧವಾಗಿ ಹೇಳಿಕೊಂಡು ನಿಜಪತಿಯಾದ ಸಮುದ್ರರಾಜನನ್ನು ಕರೆದುಕೊಂಡು ಬಂದು ಶ್ರೀರಾಮನ ಪಾದಗಳ ಮೇಲೆ ಕೆಡಹಲು ; ಆಗ ಶ್ರೀರಾಮನು ಪ್ರೀತಿಯಿಂದ ಆತನನ್ನು ಆಲಂಗಿಸಿಕೊಂಡು ಆತನ ಅಪರಾಧಗಳನ್ನು ಕ್ಷಮಿಸಿ—ಎಲೈ ಸಮುದ್ರರಾಜನೇ, ನೀನು ದೇವಪುರುಷನು. ನಾನು ಮನುಜನು. ಅದುಕಾರಣ ನಿನಗೂ ನನಗೂ ಆಶ್ರಯಾಶ್ರಯಿಭಾವವು ಸ್ವಭಾವವಾಗಿ ಉಂಟಾಗಿದೆ. ಅದುಕಾರಣ ಈಗ ನಾನು ನಿನ್ನ ಸಹಾಯವನ್ನು ಅಪೇಕ್ಷಿಸುವವನಾಗಿದ್ದೇನೆ. ಕಾರಣವೇನೆಂದರೆ—ದುಷ್ಟನಾದ ರಾವಣನು ನಾನು ಕಾಣದಂತೆ ಬಂದು ನನ್ನ ಪತ್ನಿಯಾದ ಸೀತೆಯನ್ನು ಅಪಹರಿಸಿಕೊಂಡು ಹೋಗಿ ನನ್ನನ್ನು ಅಪಾರ ವ್ಯಸನಕ್ಕೂ ಕಷ್ಟಕ್ಕೂ ಗುರಿಮಾಡಿರುವನು. ಅದುಕಾರಣ ಧೂರ್ತನಾದ ಅವನ ಸಂಹಾರಾರ್ಥವಾಗಿ ಸೇನೆಯೊಡನೆ ಹೊರಟಿರುವ ನನ್ನಲ್ಲಿ ನೀನು ಕನಿಕರವನ್ನಿಟ್ಟು ಮಾರ್ಗವನ್ನು ಕೊಡಬೇಕು. ಅದರಿಂದ ರಾವಣನನ್ನು ಸಂಹರಿಸಿ ನನ್ನ ಪತ್ನಿಯೊಡನೆ ಸೇರಿ ಸಂತೋಷಿಸುವೆನು ಎಂದು ಕೇಳಿಕೊಳ್ಳಲು; ಆಗ ಸಮುದ್ರರಾಜನು ರಾಮನನ್ನು ನೋಡಿ—ಎಲೈ ರಘುಪತಿಯೇ, ಕೇಳು. ದೇವತೆಗಳ ಬಡಗಿಯಾದ ವಿಶ್ವಕರ್ಮನಿಗೆ ಪುತ್ರನಾಗಿರುವ ಈ ನಳನೆಂಬ ಕಪಿನಾಯಕನಿಂದ ಸೇತುವನ್ನು ಕಟ್ಟಿಸು. ಪೂರ್ವದಲ್ಲಿ ಈ ನಳನ ತಂದೆಯಾದ ವಿಶ್ವಕರ್ಮನು ಈತನಿಗೆ—ನಿನ್ನ ಹಸ್ತಸ್ಪರ್ಶವಾದ ವಸ್ತುಗಳೆಲ್ಲಾ ನೀರಿನ ಮೇಲೆ ತೇಲಲಿ ಎಂದು ವರವನ್ನು ಕೊಟ್ಟಿರುವನು. ಈ ನಳನ ಹಸ್ತಸ್ಪರ್ಶದಿಂದ ಹಾಕಲ್ಪಡುವ ಗಿರಿತರು ಶಿಲಾದಿ ಸಮಸ್ತವಸ್ತುಗಳೂ ನನ್ನಲ್ಲಿ ತೇಲವುವಾದುದರಿಂದ ನಿನ್ನ ಸೇತುಬಂಧನಕಾರ್ಯವು ಸುಲಭವಾಗಿ ಮುಗಿದು ನಿನ್ನ ಮನೋರಥಗಳೆಲ್ಲಾ ಕೈಸೇರುವುವು ಎಂದು ಹೇಳಿ ಅನಂತರದಲ್ಲಿ—ಇದೋ, ಈಗ ನೀನು ನನ್ನ ಮೇಲೆ ಪ್ರಯೋಗಿಸುವುದಕ್ಕಾಗಿ ತೊಟ್ಟ ಆಗ್ನೇಯಾಸ್ತ್ರವು ಅಮೋಘವಾದುದಷ್ಟೆ. ಈಗ ನನ್ನ ದ್ವೀಪದಲ್ಲಿ ಬಹು ಜನ ಕಿರಾತರು ಇದ್ದುಕೊಂಡು ನನಗೆ ಬಹಳವಾಗಿ ತೊಂದರೆಯನ್ನು ಕೊಡುತ್ತಿರುವರು. ಅದನ್ನು ಅವರ ಮೇಲೆ ಪ್ರಯೋಗಿಸಿ ಅವರನ್ನೆಲ್ಲಾ ನಿರ್ಮೂಲಮಾಡು ಎಂದು ಕೇಳಿಕೊಳ್ಳಲು ; ಶ್ರೀರಾಮನು ಆ ಮಾತಿಗೆ ಸಮ್ಮತಿಸಿ ಕೂಡಲೆ ಆ ಮಹಾಸ್ತ್ರವನ್ನು ಅವರ ಮೇಲೆ ಪ್ರಯೋಗಿಸಿ ಅವರನ್ನೆಲ್ಲಾ ಕೊಂದು ಸಮುದ್ರರಾಜನಿಗೂ ಸಕಲ ನದೀನಾರಿಯರಿಗೂ ಅಪ್ಪಣೆಯನ್ನಿತ್ತು ಕಳುಹಿಸಿಬಿಟ್ಟನು.

ಆ ಬಳಿಕ ಶ್ರೀರಾಮನು ಕಪಿರಾಜನಾದ ಸುಗ್ರೀವನನ್ನು ಕುರಿತು—ಎಲೈ ಕಪಿವಲ್ಲಭನೇ, ಸಮುದ್ರರಾಜನ ವೃತ್ತಾಂತವೆಲ್ಲಾ ತಿಳಿದಂತಾಯಿತಷ್ಟೆ. ನೀನು ಇನ್ನು ಮುಂದೆ ಏನು ಯೋಚನೆಯನ್ನು ಮಾಡಿರುವಿ? ಎನ್ನಲು ಸುಗ್ರೀವನು—ಎಲೈ ದಿನೇಶಕುಲದೀಪಕನೇ, ನಾನು ಮಾಡತಕ್ಕ ಯೋಚನೆಯು ಇನ್ನಾವುದಿರುವುದು? ಭೂಮಿಯ ಮೇಲೆ ಅಪಾರವಾಗಿ ಗಿರಿತರುಗಳಿವೆ. ಅಮೋಘವಾದ ಬಾಹುಬಲವುಳ್ಳವರಾದ ವಾನರನಾಯಕರು ನಿನ್ನ ಆಜ್ಞಾಧಾರಕರಾಗಿದ್ದಾರೆ. ಅಪ್ಪಣೆಯಾದರೆ ಅತಿಶೀಘ್ರ

ವಾಗಿ ಈ ಕಡಲನ್ನು ಹೂಳಿಸಿ ಮಾರ್ಗವನ್ನು ಸಿದ್ಧಮಾಡಿ ಕರೆದುಕೊಂಡು ಹೋಗಿ ಹಗೆಯಾದ ರಾವಣನನ್ನು ನಿನಗೆ ತೋರಿಸುವೆನು. ಆ ಮೇಲೆ ಅವನನ್ನು ಕೊಲ್ಲಬೇಕಾದರೂ ಉಳುಹಬೇಕಾದರೂ ಸರ್ವಜ್ಞಚಿತ್ತವೇ ಕಾರಣವೆಂದು ಬಿನ್ನವಿಸಿದನು. ಆ ಮೇಲೆ ಗವಾಕ್ಷನೆಂಬ ಕಪಿನಾಯಕನೆದ್ದು ಕೈಮುಗಿದು—ಎಲೈ ರಾಘವೇಂದ್ರನೇ, ಈ ನಮ್ಮೊಡೆಯನಾದ ಸುಗ್ರೀವನು ನುಡಿದ ನುಡಿಯು ನಮ್ಮ ಶೌರ್ಯಾತಿಶಯಕ್ಕೆ ಭೂಷಣವಾದುದೆಂದು ಹೇಳಲಾರೆನು. ಕಪಿನಾಯಕರೆಲ್ಲಾ ಕಷ್ಟಪಟ್ಟು ಈ ಕಡಲನ್ನು ಹೂಳುವುದೇಕೆ? ಈ ನನ್ನ ಉದ್ದವಾದ ಬಾಲವೊಂದನ್ನೇ ಲಂಕೆಗೆ ಕಳುಹಿಸಿ ಹುಲ್ಲುಪರೆಗೆ ಸಮಾನನಾದ ರಾವಣನನ್ನು ಹಿಡಿದು ತರಿಸುವೆನು ಎಂದು ಹೇಳಿದನು. ಆಗ ಗವಯನೆಂಬ ವಾನರ ಸೇನಾಪತಿಯು ಗವಾಕ್ಷನನ್ನು ಕುರಿತು—ಲೋಕೈಕವೀರನಾದ ರಾಮನ ಮುಂಗಡೆಯಲ್ಲಿ ಒಳ್ಳೆಯ ಪರಾಕ್ರಮೋಕ್ತಿಯನ್ನಾಡಿದಿ! ಬಲುಚೆನ್ನಾಯಿತು. ಛೆ! ಆಚೆಗೆ ಹೋಗು. ಹಗೆಯಾದ ರಾವಣನೊಬ್ಬನನ್ನು ಮಾತ್ರ ಹಿಡಿದು ತರುವುದು ಮಹಾ ಪೌರುಷವೋ? ಆಜ್ಞೆಯಾದರೆ ಆ ಖಳನನ್ನೂ ಅವನ ಸಮಸ್ತ ಬಲವನ್ನೂ ಅವನ ವಾಸಸ್ಥಾನವಾದ ಲಂಕಾದುರ್ಗವನ್ನೂ ಕ್ಷಣಕಾಲದಲ್ಲಿ ತಂದು ಈ ರಾಘವನ ಮುಂದಿಳುಹದಿದ್ದರೆ ನಾನು ಬಂಟನಲ್ಲವೆಂದು ಬೊಬ್ಬಿರಿದನು. ಆ ಮೇಲೆ ಶರಭನೆಂಬ ಕಪಿವೀರನು—ನಮ್ಮೆದುರಿಗಿರುವ ಈ ಸಮುದ್ರವನ್ನು ಬಿಟ್ಟು ಈ ಕೆಲಸವನ್ನು ಮಾಡುವುದು ಬಲು ದೊಡ್ಡದಲ್ಲ. ಕೊಡನ ಮಗನಾದ ಅಗಸ್ತ್ಯನ ಹಾಗೆ ಮೊದಲು ಈ ಕಡಲನ್ನೆಲ್ಲಾ ಕುಡಿದು ಆ ಮೇಲೆ ರಾವಣನ ತಲೆಗಳನ್ನು ತರಿದು ತಂದು ಈ ರಾಮನ ಮುಂದೊಟ್ಟುವೆನು ಅಂದನು. ಅನಂತರದಲ್ಲಿ ಸರ್ವಸೇನಾಪತಿಯಾದ ನೀಲನು—ನೀವು ಹೇಳಿದುದೆಲ್ಲಾ ಮಹಾತಿಶಯವಾದ ಕಾರ್ಯವಲ್ಲ. ಒಡೆಯನ ಅಪ್ಪಣೆಯಾದರೆ ಈ ಬ್ರಹ್ಮಾಂಡವನ್ನೇ ತಲೆಕೆಳಗುಮಾಡಿಬಿಡುವೆನು ಎಂದುಬ್ಬಿ ಗರ್ಜಿಸಿದನು.

ಈ ಪ್ರಕಾರವಾಗಿ ಸಮಸ್ತ ಕಪಿಸೇನಾನಾಯಕರೂ ತಮ್ಮ ತಮ್ಮ ಶಕ್ತಿ ಸಾಹಸಗಳನ್ನು ವಾಗ್ರೂಪವಾಗಿ ಪ್ರಕಟಿಸಿಕೊಳ್ಳುತ್ತ ಆರ್ಭಟಿಸುತ್ತಿರಲು; ದಿನಕುಲೇಂದ್ರನು ಅದನ್ನೆಲ್ಲಾ ಕೇಳಿ ಅತ್ಯಂತ ಸಂತೋಷದಿಂದ ಹಿಗ್ಗಿ ಹನುಮಂತನ ಮುಖವನ್ನು ನೋಡಿ—ಈ ವಿಷಯದಲ್ಲಿ ನಿನ್ನ ಬುದ್ಧಿಗೆ ಏನು ಯೋಚನೆಯು ತೋರುತ್ತಿರುವುದೈಯ್ಯಾ? ಎಂದು ಕೇಳಲು; ಮಾರುತಿಯು ಎದ್ದು ಕೈಮುಗಿದು—ಜೀಯಾ, ಈ ಪ್ರಖ್ಯಾತರಾದ ಕಪೀಂದ್ರರೊಳಗೆ ನಾನೆಷ್ಟರವನು? ಪ್ರಭುವಿನ ಅಪ್ಪಣೆಯಾದಂತೆ ನಡೆಯುವುದೊಂದೇ ನನ್ನ ಮತವು ಎಂದು ಬಿನ್ನವಿಸಲು; ರಾಮನು ಆಂಜನೇಯನ ವಿಚಾರಪೂರ್ವಕವಾದ ಬಿನ್ನಪಕ್ಕೆ ಮೆಚ್ಚಿ ಸುಗ್ರೀವನನ್ನು ನೋಡಿ—ಎಲೈ ಪ್ರಿಯಸಖನೇ, ನಿನ್ನ ಕಪಿಸೇನಾಪತಿಗಳೆಲ್ಲರಿಗೂ ಅಪ್ಪಣೆಯನ್ನು ಕೊಟ್ಟು ತರುಪರ್ವತಾದಿಗಳನ್ನು ತರಿಸು. ಅವರು ತಂದ ತರುಗಿರಿಶಿಲಾದಿಗಳನ್ನು ತೆಗೆದುಕೊಂಡು ಸಮುದ್ರದಲ್ಲಿಟ್ಟು ಸೇತುವನ್ನು ಕಟ್ಟುವಂತೆ ನಳನಿಗೆ ಆಜ್ಞಾಪಿಸು. ಇನ್ನು ನಾವಕಾಶವೇತಕ್ಕೆ? ಎಂದು ಅಪ್ಪಣೆಯನ್ನು ಕೊಡಲು; ಆಗ ಸುಗ್ರೀವನು ನಳನನ್ನು ಕರಿಸಿ ಅವನಿಗೆ ಶ್ರೀ

ರಾಮನ ಆಜ್ಞೆಯನ್ನು ಹೇಳಲು; ಆತನು ಸಂತೋಷದಿಂದ ರಾಮನ ಚರಣಾರವಿಂದ ಗಳಿಗೆ ನಮಸ್ಕರಿಸಿ ಮೊದಲು ಹನುಮಂತನು ನಿಂತು ಲಂಕಾನಗರಕ್ಕೆ ಹಾರಿದ ಸ್ಥಳ ವಾದ ಮಹೇಂದ್ರಾದ್ರಿಯನ್ನು ಸಮೂಲವಾಗಿ ಕಿತ್ತು ಅಂಬುಧಿಯ ಬಡಗಣ ದಿಕ್ಕಿನ ಮೊದಲಿನಲ್ಲಿಟ್ಟು ಸೇತುವನ್ನು ಕಟ್ಟುವುದಕ್ಕೆ ಪ್ರಾರಂಭಿಸಿದನು. ಆಗ ಆಕಾಶದಲ್ಲಿ ಬಿಡುಗಣ್ಣರು ಆತನ ಸಾಹಸವನ್ನು ನೋಡಿ ಮೆಚ್ಚಿ ಶಹಬಾಸು ! ಶಹಬಾಸು ! ಎಂದು ಹೊಗಳಿದರು. ಶ್ರೀರಾಮನು ನಸುನಕ್ಕು ನಲಿದನು. ಆಗ ಶತಬಲಿಯೆಂಬ ಕಪಿವೀರನು ಈ ನಳನು ಕಿತ್ತುತಂದ ಮಹೇಂದ್ರಗಿರಿಯು ಬಲು ದೊಡ್ಡದೋ ? ಎಂದು ಶೀಘ್ರವಾಗಿ ಹೋಗಿ ದಶಯೋಜನ ವಿಸ್ತಾರವಾದ ಒಂದು ಮಹಾಭೂಧರವನ್ನು ಕಿತ್ತುಕೊಂಡು ಬಂದು ನಳನ ಹಸ್ತಕ್ಕೆ ಕೊಟ್ಟನು. ಆಗ ಅವನದನ್ನು ಮಹೇಂದ್ರನಗದ ಒತ್ತಿನಲ್ಲಿಟ್ಟನು. ತತ್‍ಕ್ಷಣದಲ್ಲೇ ಗಜಗವಯಾದಿ ವಾನರನಾಯಕರೆಲ್ಲರೂ ಹುರುಡಿಂದ ಹೋಗಿ ಮಹಾಪರ್ವತಗಳನ್ನು ತಂದು ತಂದು ನಳನ ಕೈಗೆ ಕೊಡುತ್ತಿದ್ದರು. ಆ ನಳನ ಸಾಮ ರ್ಥ್ಯವಿನ್ನೆಷ್ಟೋ ? ಅಸಂಖ್ಯಾತರಾದ ಕಪಿಸೇನಾನಾಯಕರೆಲ್ಲರೂ ವಿರಾಮವಿಲ್ಲದೆ ತಂದು ತಂದು ಕೊಡುವ ತೋರವಾದ ಬೆಟ್ಟಗಳನ್ನು ಲಕ್ಷ್ಯವಿಲ್ಲದೆ ತನ್ನ ಕೈಯಲ್ಲಿ ತೆಗೆದುಕೊಂಡು ಎಸೆಯುತ್ತಿರಲು ಆ ಪರ್ವತಗಳು ಸೂತ್ರಿಸಿದ ಪ್ರಕಾರವಾಗಿ ಓರೆ ಕೋರೆಯಾಗದೆ ಸಾಗರದಲ್ಲಿ ಬೀಳುತ್ತಿದ್ದುವು.

ಆಗ ಮಹಾಗಿರಿಗಳು ಬೀಳುತ್ತಿರುವ ಮಹಾಘಾತದಿಂದಲೂ ಮೀನ್ಮೊಸಳೆ ನೀರಾನೆಯಾಮೆಗಳೇ ಮೊದಲಾದ ಮಹಾಜಲಜಂತುಗಳು ಭಯದಿಂದ ಆ ಸೇತು ಬಂಧನಸ್ಥಾನವನ್ನು ಬಿಟ್ಟು ಮತ್ತೊಂದು ಕಡೆಗೆ ಓಡಿಹೋಗುತ್ತಿರುವ ವೇಗದಿಂದಲೂ ಆ ಸಮುದ್ರದ ಅಗಾಧತೆಯು ಕದಲಿ ಬಲ್ತೆರೆಗಳುಂಟಾಗಿ ಅಂಬರದ ತುದಿಯ ವರೆಗೂ ಹಾರುತ್ತಿದ್ದುದರಿಂದ ಅಕಾಲಪ್ರಳಯವುಂಟಾಗುತ್ತಿರುವುದೋ ಎಂಬ ಭಯದಿಂದ ಬಾಧಿಸಲ್ಪಟ್ಟು ಜೀವಿಜಾಲವು ಕಂಪಿಸುತ್ತಿದ್ದಿತು. ನಳನ ಸೇತುನಿರ್ಮಾಣಕಾರ್ಯಕ್ಕೆ ಉಪಯೋಗಿಸಲ್ಪಟ್ಟು ಅಂಗವಂಗ ಕಳಿಂಗ ಕೇರಳ ಕಾಶ್ಮೀರ ಪಾರಶೀಕ ಗೌಳ ಮಾಳವ ಗೂರ್ಜರ ಗಾಂಧಾರ ಪಾಂಚಾಳ ಸೇವಣ ಸಿಂಧು ಕಾಂಭೋಜ ಆಂಧ್ರ ಕರೂಷ ಕುರು ಹಮ್ಮಿರಾದಿ ದೇಶಗಳ ದೊಡ್ಡ ದೊಡ್ಡ ಬೆಟ್ಟಗಳೆಲ್ಲಾ ತೀರಿ ಹೋದುವು. ಇಷ್ಟಾ ದಾಗ್ಗೂ ಸೇತುವು ಬೆಳೆದು ಸ್ವಲ್ಪವಾದರೂ ಮುಂದಕ್ಕೆ ಸಾಗದಿರಲು; ಪುನಃ ಕಪಿ ನಾಯಕರು ಹೋಗಿ ಕಿನ್ನರ ಕಿಂಪುರುಷ ಗುಹ್ಯಕ ಯಕ್ಷ ವಿದ್ಯಾಧರ ಖಚರ ಗರುಡ ಗಂಧರ್ವಾದಿಗಳ ನಾನಾ ವಿಧವಾದ ಭೂಮಿಗಳಲ್ಲಿರುವ ದೊಡ್ಡ ದೊಡ್ಡ ಬೆಟ್ಟಗಳನ್ನು ಕಿತ್ತು ತಂದು ನಳನ ಕೈಯಲ್ಲಿ ಕೊಡಲು; ಅವನು ತೆಗೆದುಕೊಂಡು ಸಮುದ್ರದಲ್ಲಿ ಅಡಕುತ್ತಿದ್ದನು.

ಈ ರೀತಿಯಾಗಿ ಕಪಿಸೇನಾನಾಯಕರೆಲ್ಲರೂ ತಂದು ತಂದಿಡುತ್ತಿರುವ ಮಹಾ ಗಿರಿಗಳನ್ನು ನಳನು ತೆಗೆತೆಗೆದೊಟ್ಟಿ ಮೆಟ್ಟಿ ಗಿರಿಗಿರಿಗೆ ಜೋಡಿಸಿ ಸಣ್ಣ ಗುಡ್ಡಗಳನ್ನು ಸಂದುಗಳಲ್ಲಿಟ್ಟು ತುಳಿದು ದೊಡ್ಡ ಗಿರಿಗಳನ್ನು ತೆಗೆದುಕೊಂಡು ಕಟ್ಟೆಯಲ್ಲಿಟ್ಟು ಕೋಪದೃಷ್ಟಿಯಿಂದ ನೋಡುತ್ತ ಭಟರನ್ನು ಕುರಿತು—ಹೂ ! ಹೂ ! ಸಾವಕಾಶವೇ

ತಕ್ಕೆ ? ಬೆಟ್ಟಗಳು ಬೇಗ ಬೇಗ ಬರಲಿ ಎಂದು ಆರ್ಭಟಿಸುತ್ತಿರಲು ; ಅದನ್ನು ಕೇಳಿ ಸುಗ್ರೀವನು—ಸೇತುವು ಇಷ್ಟು ಮಾತ್ರದಿಂದ ಬೇಗ ಸಾಗುವುದಿಲ್ಲವೆಂದು ಕೋಪ ದಿಂದೆದ್ದು ಉದಯಪರ್ವತಕ್ಕೆ ಹಾರಿ ಅದರ ಶಿಖರವನ್ನು ಕಿತ್ತು ತನ್ನೆಡಗೈಯ ಲ್ಲಿಟ್ಟುಕೊಂಡು ಅಲ್ಲಿಂದ ಅಸ್ತಾಚಲಕ್ಕೆ ಹಾರಿ ಅದರ ಶಿಖರವನ್ನು ಕಿತ್ತು ಬಲಗೈಯ ಲ್ಲಿಟ್ಟು ತೆಗೆದುಕೊಂಡು ಬಂದು ನಳನ ಕೈಯಲ್ಲಿ ಕೊಟ್ಟನು. ಕೂಡಲೆ ವಿನತನು ಶತಕೋಟಿಯೆಂಬ ಪರ್ವತವನ್ನೂ ಸುಷೇಣನು ಸುದರ್ಶನಾದ್ರಿಯನ್ನೂ ಪನಸನು ಪಾರಿಯಾತ್ರಮಹೀಧರವನ್ನೂ ವೃಷಭನು ವೃಷಭಾಚಲವನ್ನೂ ಗವಯನು ಗೋವ ರ್ಧನ ಭೂಧರವನ್ನೂ ಗವಾಕ್ಷನು ಅಂಜನಶಿಖರಿಯನ್ನೂ ತೆಗೆದುಕೊಂಡು ಬಂದು ನಳನ ಕೈಗೆ ಕೊಟ್ಟರು. ಅರರೇ ! ಶಿವಶಿವಾ ! ಈ ಸಾಹಸವನ್ನು ಹೊಗಳುವುದಕ್ಕೆ ಎರಡು ಸಾವಿರ ನಾಲಿಗೆಗಳುಳ್ಳ ಶೇಷನಿಗಾದರೂ ಸಾಧ್ಯವೇ ? ಕುಲಗಿರಿಗಳೋ ? ಕಿಡಿ ಕಲ್ಲುಗಳೋ ? ವಾನರವೀರರೋ ? ಅದ್ಭುತವಜ್ರಶರೀರಿಗಳೋ ? ಸುಮುಖದುರ್ಮು ಖತಾರದಧಿಮುಖ ಕುಮುದ ಮೈಂಧ ದ್ವಿವಿಧ ಶತಬಲಿ ರುಮರುಮಣ್ವಕ ಜ್ಯೋತಿ ರ್ಮುಖ ಗಜಗಂಧಮಾದನರೇ ಮೊದಲಾದ ಕಪಿನಾಯಕರು ಮೇರುಮಹೀಧರವನ್ನು ಬಳಸಿದ ಕಡಲ ನಡುವೆಯಿರುವ ಗಿರಿಗಳನ್ನೆಲ್ಲಾ ತಂದೊಟ್ಟಿದರು.

ಈ ವರೆಗೂ ಯಾರ ಹವಣೂ ಸ್ತೋತ್ರಾರ್ಹವಾದುದಲ್ಲ. ವಾಲಿಕುಮಾರನಾದ ಅಂಗದನ ಸಾಹಸವು ಎಲ್ಲರನ್ನೂ ಮೀರಿಸಿತು. ಮೂವತ್ತುಮೂರುಕೋಟಿ ದೇವತೆಗಳಿಗೆ ಅಧೀಶ್ವರನಾದ ಇಂದ್ರನ ಮೊಮ್ಮಗನಲ್ಲವೇ ? ಅಂಥವನ ಪರಾಕ್ರಮವನ್ನು ಹೇಳಬೇಕೆಂ ಬುದೇನು ? ಕೂಗಿ ಬೊಬ್ಬಿರಿದು ಕೈಲಾಸಪರ್ವತದ ಬಳಿಗೆ ಹಾರಿ ನೋಡಿ—ಆಹಾ ! ಇದೊಂದು ಗಿರಿಯಿಂದಲೇ ನಮ್ಮ ಸೇತುಬಂಧನಕಾರ್ಯವು ಮುಗಿದುಹೋಗುವುದು. ನಾನು ಇದನ್ನು ತೆಗೆದುಕೊಂಡು ಹೋಗಿ ಕೊಡುವುದರಿಂದ ನಳನ ಕೋಪವು ಅಡಗು ವುದು. ಪೂರ್ವದಲ್ಲಿ ರಾವಣನು ಈ ಪರ್ವತವನ್ನು ಅಲ್ಲಾಡಿಸಿ ಸಿಕ್ಕಿನೊಂದು ಬಲಹೀ ನನಾಗಿ ಗೋಳಾಡಿದನು. ನಾನು ಇಂಥ ಪರ್ವತವನ್ನು ಕಿತ್ತು ಎತ್ತಿಕೊಂಡು ಹೋಗಿ ಸಮುದ್ರದಲ್ಲಿ ಹಾಕಿದರೆ ರಾವಣನು ಆ ವರ್ತಮಾನವನ್ನು ಕೇಳಿ ನನಗೆ ಹೆದರಿ ಜಗಳವನ್ನಪೇಕ್ಷಿಸದೆ ಶರಣಾಗತನಾಗಿ ಬಂದು ರಾಮನಿಗೆ ಸೀತೆಯನ್ನೊಪ್ಪಿಸಿ ಓಡಿಹೋಗುವನು ಎಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ ತನ್ನ ಮಹಾಬಾಹುಗಳಿಂದ ಆ ಕೈಲಾಸನಗವನ್ನು ಬಿಗಿಯಾಗಿ ತಬ್ಬಿ ಹಿಡಿದು ಜಡಿದು ಅಲ್ಲಾಡಿಸಲು ; ತಿರುಗಿ ಮೂರ್ಖನಾದ ರಾವಣನು ಬಂದನೆಂದು ಶಿವನ ಪಟ್ಟಣವು ಬೆದರಿತು. ಆಗ ಶಂಕರನು ಜ್ಞಾನದೃಷ್ಟಿಯಿಂದ ತಿಳಿದು ಅಂಗದನ ಬಳಿಗೆ ಬಂದು--ಎಲಾ, ನೀನು ಯಾರೋ ? ಈ ಗಿರಿಯನ್ನು ಕೀಳುವಂತೆ ನಿನಗೆ ಅಪ್ಪಣೆಯನ್ನಿತ್ತವರಾರು ? ಬಿಟ್ಟು ಆಚೆಗೆ ಹೋಗು ಎನ್ನಲು ; ಅಂಗದನು ಕಿರುನಗೆಯಿಂದ ಕೂಡಿ ಶೂಲಿಯನ್ನು ನೋಡಿ—ಹೋಗೆಂದು ಹೇಳುವಷ್ಟು ಸಲಿಗೆಯು ನಿನಗೆ ಯಾರಿಂದುಂಟಾಯಿತು ? ಸುಮ್ಮನಿರು ಎಂದು ಹೇಳಿ ಮಹಾದೇವನನ್ನು ಗಣಿಸದೆ ಕೈಲಾಸಪರ್ವತವನ್ನು ಸಮೂಲವಾಗಿ ಕಿತ್ತು ಮೇಲೆತ್ತಿ ದನು. ಆಗ ಈಶ್ವರನು ಬೆರಗಾಗಿ ಅಂಗದನನ್ನು ಕುರಿತು---ಎಲೈ ಕಪಿವೀರನೇ, ಈ

ಗಿರಿಯು ನಮ್ಮದು. ನಿನ್ನ ರಾಮನು ನನಗೆ ಮಿತ್ರನು. ಇದು ನಿಶ್ಚಯವು. ಹುಸಿಯಲ್ಲ. ಅದುಕಾರಣ ಚಿತ್ತೈಕಾಗ್ರತೆಯಿಂದ ನಮ್ಮನ್ನು ನೋಡು ಎಂದು ಸುರಮುನಿಗಳ ಅಗಮ್ಯವಾದ ತಪಸ್ಸಿಗೂ ದುರ್ಲಭವಾದ ತನ್ನ ಸದ್ಯೋಜಾತಾದಿ ಪಂಚಮುಖಗಳನ್ನು ಧರಿಸಿ ಕಾಣಿಸಿಕೊಂಡನು. ಅಂಗದನು ನೋಡಿ ಮನಸ್ಸಿನಲ್ಲಿ ವಂದಿಸಿ—ನಾನೇನು ಹೆಡ್ಡನೇ ? ನೀನು ಶಂಕರನೆಂದೂ ಈ ಪರ್ವತವು ನಿನ್ನದೆಂದೂ ತಿಳಿಯೆನೇ ? ನೀನು ನಮ್ಮೊಡೆಯನಿಗೆ ಮಿತ್ರನಾಗಿದ್ದ ಮೇಲೆ ಈ ಗಿರಿಯು ಆತನ ಕಾರ್ಯಕ್ಕೆ ಉಪಯೋಗವಾಗತಕ್ಕುದೇ ನ್ಯಾಯವು. ನಾನು ಇಷ್ಟು ಮಾತ್ರಕ್ಕೆ ಸ್ವಾಮಿಕಾರ್ಯವನ್ನು ಬಿಡತಕ್ಕವನಲ್ಲ. ಇದೆಲ್ಲಾ ಏತಕ್ಕೆ?ನಮ್ಮೊಡೆಯನಿರುವ ಸ್ಥಳವು ಇಲ್ಲಿಗೆ ಬಹು ದೂರವೇ? ಈ ಗಿರಿಯನ್ನು ತರಬೇಡ ಎಂದು ಆತನಪ್ಪಣೆಯು ಬರಲಿ ಆ ಮೇಲೆ ಈ ಗಿರಿಯನ್ನು ಇಲ್ಲೇ ಬಿಟ್ಟು ಮತ್ತೊಂದು ಕಡೆಗೆ ಹೋಗುವೆನು ಎನ್ನಲು ; ಆಗ ಮಹೇಶ್ವರನು ನಗುತ್ತ ಸಮೀಪದಲ್ಲಿರುವ ತನ್ನ ಮಕ್ಕಳಾದ ಗುಹಗಣೇಶರನ್ನು ನೋಡಿ ಆಗಲೆ ರಾಮನ ಮೂರ್ತಿಯನ್ನು ಧರಿಸಿ ಅಂಗದನನ್ನು ಕುರಿತು——ಎಲೈ ಕಂದಾ, ಕೇಳು. ಈ ಶಂಕರನಿಗೂ ನನಗೂ ಭೇದವಿಲ್ಲ. ಲೋಕರಕ್ಷಣಾರ್ಥವಾಗಿ ಭೇದವನ್ನು ಕಲ್ಪಿಸಿಕೊಂಡಿರುವೆವು. ವಿಚಾರದಿಂದ ಅದು ಮಿಥ್ಯವಾಗಿರುವುದು. ಆದುದರಿಂದ ಈ ಗಿರಿಯನ್ನು ಬಿಟ್ಟು ಇದರ ಸುತ್ತುಮುತ್ತಣ ಬೆಟ್ಟಗಳನ್ನು ಕಿತ್ತುಕೊಂಡು ಬಾ ಎಂದು ಹೇಳಿ ಅದೃಶ್ಯನಾಗಲು ; ಆಗ ಅಂಗದನು ಆ ಕೈಲಾಸಪರ್ವತವನ್ನು ಹೆಚ್ಚುಕಡಿಮೆಯಾಗದಂತೆ ಮೊದಲಿದ್ದ ಹಾಗೆಯೇ ಇಟ್ಟು ಅದರ ಸಮೀಪದಲ್ಲಿದ್ದ ಗಿರಿಗಳನ್ನು ಕಿತ್ತು ತೆಗೆದುಕೊಂಡು ಬಂದು ನಳನಿಗಿತ್ತನು.

ಅನಂತರದಲ್ಲಿ ನೀಲನು ಮಂದರಪರ್ವತಕ್ಕೆ ಹಾರಿಹೋಗಿ ಅದನ್ನು ಕೀಳುವುದಕ್ಕಾರಂಭಿಸಲು ; ಆ ಕೂಡಲೆ ದೇವೇಂದ್ರನು ಓಡಿಬಂದು—ಎಲೈ ಕಪಿನಾಯಕನೇ, ಈ ಪರ್ವತದಲ್ಲಿ ನನ್ನೊಡನೆ ಸಕಲ ದೇವತೆಗಳೂ ವಾಸಮಾಡಿಕೊಂಡಿರುವರು. ಇದರಲ್ಲಿ ಮೃತಸಂಜೀವಿನ್ಯಾದಿ ದಿವ್ಯೌಷಧಿಗಳಿವೆ. ಇದು ಲಕ್ಷ್ಮೀಪತಿಯಿಂದ ಪ್ರತಿಷ್ಠಿತವಾದ ಪರ್ವತವು. ಇದನ್ನು ಕೀಳಬೇಡವೆಂದು ಬೇಡಿಕೊಳ್ಳಲು ; ನೀಲನು ಓರೆಗಣ್ಣಿನಿಂದ ನೋಡಿ—ನೀನಾರು, ಇಂದ್ರನೇ ? ಹು ! ಹು ! ಇಂದ್ರನಾಗು, ಚಂದ್ರನಾಗು ! ಹರನಾಗು ! ಹಿರಣ್ಯಗರ್ಭನಾಗು ! ಆದರಿಂದ ನಮಗೇನು ? ಎಂದು ಕೀಳುತ್ತಿರಲು ; ಕೂಡಲೆ ನಾರದ ಮಹರ್ಷಿಯು ಬಂದು——ಎಲೈ ವೀರನಾದ ನೀಲನೇ, ಶ್ರೀರಾಮನು ನಿಮ್ಮೆಲ್ಲರಿಗೂ ಒಡೆಯನಾಗಿರುವಂತೆ ನಮಗೂ ಒಡೆಯನಾಗಿರುವನು. ಅದುಕಾರಣ ದೇವನಿವಾಸಸ್ಥಾನವಾದ ಈ ಗಿರಿಯನ್ನು ಕೀಳಬೇಡ ಎಂದು ಬಹಳ ವಿಧವಾಗಿ ಹೇಳಿಕೊಂಡಾಗ್ಯೂ ಕೇಳದೆ ಹೋದುದರಿಂದ ಕಡೆಗೆ ಅವನ ತಂದೆಯಾದ ಅಗ್ನಿಯನ್ನು ಕರೆದುಕೊಂಡು ಬಂದು ಹೇಳಿಸಿದುದರಿಂದ ನೀಲನು ಆ ಗಿರಿಯನ್ನು ಅಲ್ಲೇ ಬಿಟ್ಟು ಅದರ ಸಮೀಪದ ಪರ್ವತಗಳನ್ನು ಕಿತ್ತು ತೆಗೆದುಕೊಂಡು ಬಂದು ನಳನ ಕೈಗೆ ಕೊಟ್ಟನು. ಮೊದಲು ಅಂಗದನು ತಂದ ಗಿರಿಗಳಿಂದ ಸೇತುವು ಹತ್ತುಗಾವುದಗಳ ವರೆಗೂ ಸಾಗಿದ್ದಿತು. ಈಗ ಈ ನೀಲನು ತಂದ ಪರ್ವತಗಳಿಂದ ಹತ್ತುಯೋಜನಗಳ ವರೆಗೂ ಸಾಗಿತು.

ಕಪಿನಾಯಕರ ಬಲಸಾಹಸಾದಿಗಳ ಆಧಿಕ್ಯವು ಇಷ್ಟೇ ಎಂದು ನಿರ್ಣಯಿಸಿ ಹೇಳಬಲ್ಲವರಾರುಂಟು ? ಅನಂತರದಲ್ಲಿ ಬ್ರಹ್ಮನ ಮಗನಾದ ಜಾಂಬವಂತನ ಬಲವು ಸರ್ವಕಪೀಶ್ವರರ ಅದ್ಭುತಬಲವನ್ನೂ ಮರೆಯಿಸಿತು. ಈತನು ಹಿಮಾಚಲಕ್ಕೆ ಹಾರಿ ಕಣ್ಣುಗಳ ಮೇಲಿರುವ ಜೋಲುಕೂದಲುಗಳನ್ನು ಮೇಲಕ್ಕೆ ನೆಗಹಿ ಹಿಡಿದು ನೋಡಿ— ಓಹೋ ! ನಾವು ಮುದುಕರು; ಶರೀರದಲ್ಲಿ ಬಲವಿಲ್ಲದವರು. ಇದಕ್ಕಿಂತಲೂ ದೊಡ್ಡ ದಾದ ಗಿರಿಯನ್ನು ಹೊರಲಾರೆವು. ಆದುದರಿಂದ ನಮಗೆ ಈ ಬಡ ಬೆಟ್ಟವೊಂದೇ ಸಾಕು ಎಂದು ಎರಡು ಸಾವಿರ ಯೋಜನಗಳ ಅಗಲವೂ ಎರಡು ಸಾವಿರ ಯೋಜನಗಳ ಮಟ್ಟವೂ ಐವತ್ತೆರಡು ಸಾವಿರ ಯೋಜನಗಳ ಉದ್ದವೂ ಇರುವ ಆ ಹಿಮವತ್ಪರ್ವತ ವನ್ನು ಕಿತ್ತು ಮೇಲಕ್ಕೆತ್ತಲು ; ಆ ಗಿರಿರಾಜನ ಪತ್ನಿಯಾದ ಮೇನಕೆಯು ದಿಗ್ಗನೆ ಎದ್ದು ಜಾಂಬವಂತನ ಬಳಿಗೆ ಬಂದು—ಎಲೈ ವೃದ್ಧನೇ, ನೀನು ಕೃತ್ಯಾಕೃತ್ಯಗಳನ್ನು ತಿಳಿದ ವಿವೇಕಶಾಲಿಯಾಗಿ ಈ ಪರ್ವತವನ್ನು ಕೀಳುವುದಕ್ಕೆ ಉಜ್ಜುಗಿಸಬಹುದೇ ? ನೀನು ಪರಾತ್ಪರನಾದ ಶಿವನ ಭಕ್ತನು. ಆ ಶಿವನ ಪಟ್ಟಮಹಿಷಿಯಾದ ಪಾರ್ವತಿ ಯು ನನ್ನ ಮಗಳು. ಸಕಲವನ್ನೂ ತಿಳಿದು ಪ್ರೌಢನಾಗಿರುವ ನಿನಗೆ ನಾನು ವಿಶೇ ಷವಾಗಿ ಹೇಳತಕ್ಕುದೇನಿದೆ ? ಎನ್ನಲು ; ಆಗ ಜಾಂಬವಂತನು—ನಾವು ಇದನ್ನು ಕೀಳುವುದರಿಂದ ಶಂಕರನ ಚಿತ್ತಕ್ಕೆ ವಿರೋಧವನ್ನುಂಟುಮಾಡಿದಂತಾಗುವುದು. ಆದುಕಾರಣ ಈ ಕಾರ್ಯವು ಅನುಚಿತವಾದುದೆಂದೆಣಿಸಿ ಆ ಗಿರಿಯನ್ನು ಅಲ್ಲೇ ಬಿಟ್ಟು ಮೇನಾದೇವಿಯನ್ನು ಕುರಿತು—ನೀವು ಮಹಾದೇವನಿಗೆ ನಿಮ್ಮ ಮಗಳನ್ನು ಕೊಟ್ಟು ಮದುವೆಮಾಡಿದ ಮಹಾತ್ಮರಾದುದರಿಂದ ಈ ದಿವಸ ನಿಮ್ಮ ದರ್ಶನದಿಂದ ನಾನು ಕೃತಾರ್ಥನಾದೆನು ಎಂದು ಕೈಮುಗಿದು—ನೀವು ತೆರಳಬಹುದೆಂದು ಆಕೆಯನ್ನು ಕಳುಹಿಸಿ ಅದರ ಸುತ್ತಣ ಗಿರಿಗಳನ್ನು ಕಿತ್ತು ತಲೆಯ ಮೇಲೆ ಎಂಟು ಗಿರಿಗಳನ್ನೂ ಒಂದೊಂದು ಭುಜದಲ್ಲಿ ನಾಲ್ಕರಂತೆ ಎರಡು ಭುಜಗಳಲ್ಲೂ ಎಂಟು ಬೆಟ್ಟಗಳನ್ನೂ ಎರಡು ಕಂಕುಳುಗಳಲ್ಲೂ ಎರಡೆರಡು ಪರ್ವತಗಳನ್ನೂ ಎರಡಂಗೈಗಳಲ್ಲೂ ಒಂದೊಂದು ಗಿರಿಯನ್ನೂ ಧರಿಸಿಕೊಂಡು ಎರಡು ಕಾಲುಗಳಿಂದಲೂ ಒಂದೊಂದು ಗಿರಿಯನ್ನು ಉರುಳಿಸಿಕೊಂಡು ಹೊರಟು ಬರುತ್ತಿದ್ದನು. ಆಗ ಸುರರು ಆಶ್ಚರ್ಯದಿಂದ ಸ್ತಂಭೀ ಭೂತರಾಗಿ ನೋಡುತ್ತ ನಿಂತರು. ಶ್ರೀರಾಮನು ವಿಸ್ಮಿತನಾಗಿ ನೋಡುತ್ತಿದ್ದನು. ಈ ಮಹಾದ್ಭುತಕೃತ್ಯವನ್ನು ನಳನು ದೂರದಿಂದಲೇ ನೋಡಿ ಓಡಿ ಜಾಂಬವಂತನೆದುರಿಗೆ ಬಂದು ಆತನು ತಂದ ಗಿರಿಗಳನ್ನು ಅತಿಭಯಭಕ್ತಿಯಿಂದ ತೆಗೆದುಕೊಂಡು ಹೊತ್ತು ಕೊಂಡು ಹೋಗಿ ಅವುಗಳನ್ನೆಲ್ಲಾ ಕಡಲಿನಲ್ಲಿ ಹುದುಗಿಸಿ ಸಂದುಸಂದುಗಳಿಗೆ ಚಿಕ್ಕ ಬೆಟ್ಟಗಳನ್ನು ಹವಣಿಸಿ ನೀರ್ಕೋರೆಯದಂತೆ ಇದಿರ್ಗಲ್ಲುಗಳ ಬೆಣೆಗಳನ್ನು ಹಾಕಿ ಹತ್ತು ಯೋಜನಗಳ ವರೆಗೂ ಸೇತುವನ್ನು ಕಟ್ಟಿದನು. ಅನಂತರದಲ್ಲಿ ಗವಯ ದಧಿಮುಖ ಕುಮುದ ಮೈಂಧಾದಿ ಕಪೀಶ್ವರರು ತೆಗೆದುಕೊಂಡು ಬಂದು ಹಾಕಿದ ಪರ್ವತಗಳಿಂದ ಸೇತುವು ಮೂವತ್ತು ಯೋಜನಗಳ ಪರ್ಯಂತರವೂ ಸಾಗಿತು. ಇಲ್ಲಿಗೆ ಅರವತ್ತು ಯೋಜನಗಳ ವರೆಗೂ ಸೇತುವು ಕಟ್ಟಲ್ಪಟ್ಟು ಸಂಚಾರಕ್ಕೆ ಸಿದ್ಧವಾಯಿತು. ಲಂಕಾಪ

ಟ್ಟಣವನ್ನು ಸೇರಬೇಕಾದರೆ ಇನ್ನೂ ನಾಲ್ವತ್ತು ಯೋಜನಗಳ ವರೆಗೂ ಸೇತು ನಿರ್ಮಾಣಕಾರ್ಯವು ನಡೆಯಬೇಕಾಗಿದೆ.

ಆಗ ದಯಾಳುವಾದ ಶ್ರೀರಾಮನು—ಕಪಿವೀರರೆಲ್ಲರೂ ಬಹಳವಾಗಿ ಶ್ರಮಪಟ್ಟು ಕಂಗೆಟ್ಟಿದ್ದಾರೆ ಎಂದು ಸುಗ್ರೀವ ವಿಭೀಷಣ ಜಾಂಬವಂತರೊಡನೆ ಯೋಚನೆ ಮಾಡುತ್ತ ಸಮೀಪದಲ್ಲಿ ತನ್ನ ಕಾಲನ್ನೊತ್ತುತ್ತಿರುವ ನಿಜದಾಸನೂ ಅಸಹಾಯ ಶೂರನೂ ಆಗಿರುವ ಹನುಮಂತನ ಮುಖವನ್ನು ನೋಡಲು; ಆತನು ಜಗ್ಗನೆದ್ದು ಕೂಡಲೆ ಮೇರುಪರ್ವತವಿದ್ದೆಡೆಗೆ ಹಾರಿ ಅದರ ಸಮೀಪದಲ್ಲಿ ನಿಂತು ಆ ಗಿರಿಯನ್ನು ಬುಡದಿಂದ ತುದಿಯ ವರೆಗೂ ಚೆನ್ನಾಗಿ ನೋಡಿ--ಇದು ಲಕ್ಷ ಯೋಜನಗಳ ಉದ್ದವೂ ಲಕ್ಷ ಯೋಜನಗಳ ಅಗಲವೂ ಉಳ್ಳುದಾಗಿರುವುದು. ಲವಣಾಂಬುಧಿಯೂ ಕೂಡ ಲಕ್ಷ ಯೋಜನಗಳ ಅಗಲವೂ ಲಕ್ಷ ಯೋಜನಗಳ ಉದ್ದವೂ ಇರುವುದರಿಂದ ಈ ಒಂದು ಗಿರಿಯನ್ನು ಕಿತ್ತು ತೆಗೆದುಕೊಂಡು ಹೋಗಿ ಅದರಲ್ಲಿ ಹಾಕಿಬಿಟ್ಟರೆ ಆ ಉಪ್ಪುನೀರ್ಗಡಲೇ ಹೂತು ನಿರ್ನಾಮವಾಗಿ ಭೂಮಿಯಾಗುವುದು ಎಂದೆಣಿಸಿ ಆ ಗಿರಿಯ ತೋರ ಉದ್ದಗಳಿಗೆ ಸರಿಯಾಗಿ ತನ್ನ ಶರೀರವನ್ನು ಬೆಳಿಸಿ ತನ್ನ ಮಹಾ ದೀರ್ಘವಾದ ಬಾಲವನ್ನು ಆ ಪರ್ವತಕ್ಕೆ ಮೂರು ಸುತ್ತು ಸುತ್ತಿ ಕೀಳಲು; ಆಗ ಕೆಳಗಣ ಸಪ್ತಲೋಕಗಳೂ ಉಲ್ಲೋಲಕಲ್ಲೋಲವಾಗಿ ಸತ್ಯಲೋಕದಲ್ಲಿ ಬ್ರಹ್ಮನು ತನ್ನ ಸಿಂಹಾಸನದಿಂದ ಕೆಳಗೆ ಬಿದ್ದುರುಳಿ ಶೀಘ್ರದಿಂದೆದ್ದು—ಇದೇನು ಪರಮಾಶ್ಚರ್ಯವು! ಅಕಾಲದಲ್ಲಿ ಸಕಲ ಲೋಕಗಳಿಗೂ ಅವಸಾನಕಾಲವು ಸಂಪ್ರಾಪ್ತವಾಗಿರುವುದಲ್ಲಾ! ಎಂದು ಯೋಚಿಸಿ ಕಡೆಗೆ ತನ್ನ ಜ್ಞಾನದೃಷ್ಟಿಯಿಂದ—ಇದು ಧರ್ಮಸಂಸ್ಥಾಪನಾರ್ಥವಾಗಿ ನರಲೋಕದಲ್ಲಿ ಮನುಜಲೀಲೆಯಿಂದ ನಟಿಸುತ್ತಿರುವ ಮಹಾವಿಷ್ಣುವಿನ ಮಹಿಮಾತಿಶಯವು. ಹಾಗಲ್ಲದಿದ್ದರೆ ಗಿಡಮರಗಳ ಮೇಲಾಡುವ ಕೋಡಗಗಳಿಗೆ ಇಷ್ಟು ಕಲಿತನವು ಎತ್ತಣಿಂದ ಬರುವುದು? ಎಂದು ಶೀಘ್ರವಾಗಿ ಅಲ್ಲಿಂದ ಹೊರಟು ಆಂಜನೇಯನ ಬಳಿಗೆ ಬಂದು—ಇದೇನಿದೇನುದ್ದಂಡತನವು? ವಾನರ ವೀರರ ಕಟಕದಲ್ಲಿ ನೀನು ಹುಚ್ಚನೋ? ಮೂರ್ಖನೋ? ಅಥವಾ ರಾಮನಿಗೆ ಹಗೆಯೋ? ಪ್ರಿಯನೋ? ಆಹಾ! ವಿಪರೀತಕಾರ್ಯವನ್ನು ಕೈಕೊಂಡಿರುವೆಯಲ್ಲಾ! ನಿನ್ನ ಪರಾಕ್ರಮಾತಿಶಯಕ್ಕೆ ಫಲವಾವುದು? ಅದನ್ನು ಹೇಳು, ನಾವು ಕೇಳುವೆವು ಎನ್ನಲು; ಹನುಮಂತನು ಸಾರದೆಯಾಣ್ಮನನ್ನು ಕುರಿತು—ಅದನ್ನು ಹೇಳಿ ನಾನು ಮಾಡುವುದೇನು? ಕೇಳಿ ನೀವು ಮಾಡುವುದೇನು? ನಮ್ಮೊಳಗದ ವಿಚಾರವು ನಿಮಗೇಕೆ? ನನ್ನನ್ನು ಮಾತಾಡಿಸುವುದರಿಂದ ನಿಮಗಾಗುವ ಪ್ರಯೋಜನವಾವುದು? ನೀವು ನನಗದನ್ನು ಮೊದಲು ಹೇಳಿರಿ ಎನ್ನುತ್ತ ಬೊಮ್ಮನನ್ನು ಗಣಿಸದೆ ಆ ಮಹೀಧರವನ್ನು ಬರ ಸೆಳೆದು ಕೀಳುವುದರಲ್ಲಿ ಉದ್ಯುಕ್ತನಾದನು. ತಿರುಗಿ ತಾವರೆಯಣುಗನು—ಎಲಾ, ನೀನು ಹುಡುಗನಾಗಿದ್ದೀಯೆ? ನಿನಗೆ ಸ್ವಲ್ಪವಾದರೂ ಬುದ್ಧಿಯಿಲ್ಲವಲ್ಲಾ! ಈ ಗಿರಿಯನ್ನು ಕಿತ್ತು ಹಾಕುವುದರಿಂದ ಸುರನರೋರಗಾದಿ ಜಗಜ್ಜೀವಿಗಳ ಪ್ರಾಣಲತಾಸಂಚಯವು ಮೂಲೋತ್ಪಾಟಿತವಾಗದಿರುವುದೇ? ಈ ಮಹಾ ಗಿರಿಯು ವಿವಿಧವಾದ ಲೋಕಾವ

ಳಿಗಳೆಂಬ ಮಹಾಲಯಗಳಿಗೆ ಆಧಾರಸ್ತಂಭವಾಗಿರುವುದೆಂದು ನೀನು ತಿಳಿಯೆಯಾ ? ನಿನ್ನೊಡೆಯನಾದ ರಾಮನ ವೃದ್ಧಿಯನ್ನೇ ನೀನು ವಿಚಾರಿಸದೆ ಹೋದೆಯಲ್ಲಾ ! ಈ ನಗವನ್ನು ಕಿತ್ತುಹಾಕಿದ ಮೇಲೆ ಕಡಲೆಲ್ಲಿರುವುದು ? ನೀನೆಲ್ಲಿ ನಿಲ್ಲುವಿ ? ನಿನ್ನರಸನೆಲ್ಲಿರುವನು ? ಲಂಕೆಯೆಲ್ಲಿರುವುದು ? ಸೀತಾರಾವಣರ ಸ್ಥಿತಿಯೆಂತಿರುವುದು ? ಹಗೆಗಳೆಲ್ಲಿ ನಿಲ್ಲುವರು ? ಛೀ ! ಅವಿಚಾರಮತಿಯೇ, ಹೋಗೆಂದನು.

ಆಗ ಅಂಜನಾತನಯನು ಆ ಮಾತುಗಳನ್ನು ಕೇಳಿ ನಾಲ್ಮೊಗನನ್ನು ಕುರಿತು—ನೀವು ಅನಾದಿಸಂಸಿದ್ಧವಾಗಿ ಲೋಕಗಳನ್ನು ನಿರ್ಮಾಣಮಾಡುವುದೆಂಬುದೊಂದೇ ಕಾರ್ಯದಲ್ಲಿ ಆಸಕ್ತರಾಗಿರುವುದರಿಂದ ಉನ್ಮಿಷದ್ಬುದ್ಧಿಶಕ್ತಿಯಿಲ್ಲದವರಾಗಿದ್ದೀರಿ. ಮೇಲೆ ವೃದ್ಧಾಪ್ಯವೊಂದೆಡೆಗೊಂಡಿದೆ. ಅದುಕಾರಣ ನನ್ನ ಉದ್ದೇಶ ಶಕ್ತಿಗಳಿಗೆ ಫಲವಿಂಥದೆಂದು ಯೋಚಿಸಿ ತಿಳಿಯಲಾರದವರಾಗಿದ್ದೀರಿ. ಆದರೂ ಚಿಂತೆಯಿಲ್ಲ. ಅದನ್ನು ನಾನೇ ವಿವರಿಸಿ ಹೇಳುತ್ತೇನೆ ಕೇಳಿರಿ. ನೀವು ಈ ಸುರಾಚಲದ ವಿಚಾರವು ನನಗೆ ತಿಳಿಯದೆಂದು ಹೇಳುತ್ತೀರೋ ? ಹಾಗಲ್ಲ. ನಾನು ಇದರ ಸಂಗತಿಗಳನ್ನೆಲ್ಲಾ ಮೊದಲೇ ತಿಳಿದಿದ್ದೇನೆ. ಈಗ ನಾನು ಈ ರನ್ನದಪ್ಪಲನ್ನು ಕಿತ್ತು ಇದನ್ನು ಆಧಾರೀಕರಿಸಿಕೊಂಡಿರುವ ಸಮಸ್ತ ಲೋಕಗಳನ್ನೂ ನನ್ನ ಬಾಲದಿಂದ ಧರಿಸಿ ಕೈಕಾಲು ಮೊದಲಾದ ಅಂಗಗಳಿಂದ ರಾಮನ ಸೇವೆಯನ್ನು ಮಾಡಿ ವಿರೋಧಿಯಾದ ದಶಕಂಠನನ್ನು ಸಂಹರಿಸಿದ ಮೇಲೆ ಪುನಃ ಈ ರತ್ನಸಾನುವನ್ನು ಅಲ್ಲಿಂದ ತಂದು ಇಲ್ಲೇ ಇಟ್ಟು ನನ್ನ ಬಾಲವನ್ನು ಬಿಡಿಸಿಕೊಂಡು ನನ್ನೊಡೆಯನಾದ ರಘುವಂಶೋತ್ತಂಸನ ಸೇವಾರ್ಥವಾಗಿ ಅಯೋಧ್ಯಾನಗರವನ್ನು ಕುರಿತು ಹೋಗುವೆನು ಎಂದು ನಾನು ಮೊದಲೇ ನಿಶ್ಚಯಿಸಿದ್ದೇನೆ. ಅದುಕಾರಣ ನೀವು ನಿಮ್ಮ ದಾರಿಯನ್ನು ಹಿಡಿದುಕೊಂಡು ಹೋಗಿರಿ ಎನ್ನಲು; ಅಂಚೆದೇರನು ಆ ಮಾತುಗಳಿಗೆ ಪ್ರತಿಯಾಗಿ ಉತ್ತರವನ್ನು ಹೇಳುವುದಕ್ಕೆ ಉಪಾಯವಿಲ್ಲದವನಾಗಿ ಪೊಂಬೆಟ್ಟವನ್ನು ಕೀಳುತ್ತಿರುವ ಹನುಮಂತನ ಹೊಟ್ಟೆಯಲ್ಲಿ ತನ್ನ ನಾಲ್ಕು ಮೊಗಗಳನ್ನೂ ಚಾಚಿ ತನ್ನ ಕೈಗಳಿಂದ ಅವನ ಕೈಗಳನ್ನು ಹಿಡಿದುಕೊಂಡು ದೈನ್ಯದಿಂದ—ಎಲೈ ವಾಯುಪುತ್ರನೇ, ಕೇಳು ! ನಿನ್ನರಸನಾದ ರಾಮನು ನನ್ನನ್ನು ಈ ಕಲ್ಪಕ್ಕೊಡೆಯನನ್ನಾಗಿ ನೇಮಿಸಿರುವನು. ಮುಂದಣ ಕಲ್ಪಕ್ಕೆ ನಿನ್ನನ್ನು ಒಡೆಯನನ್ನಾಗಿ ತೀರ್ಪುಮಾಡಿರುವನು. ಮುಂದುಂಟಾಗುವ ನಿನ್ನ ಪ್ರಭುತ್ವದಲ್ಲಿ ನಿನ್ನ ಮನಸ್ಸು ಬಂದಂತೆ ಮಾಡಿಕೊಳ್ಳುವವನಾಗು. ನಮ್ಮ ಅಧಿಕಾರಕಾಲವಾಗಿರುವ ಈಗ ನೀನು ಸರ್ವರಂತೆ ನಮ್ಮ ಮಾತನ್ನು ಮನ್ನಿಸು ಎಂದು ಹೇಳಿ ತಬ್ಬಿಕೊಂಡನು. ಆಗ ಮರುತ್ತನುಜನು—ಮೊದಲು ನೀವೇ ರಾವಣಾದಿಗಳಿಗೆಲ್ಲಾ ವರವನ್ನು ಕೊಟ್ಟು ಅಧರ್ಮವನ್ನು ಹೆಚ್ಚಿಸಿದಿರಿ. ಈಗ ಅಂಥ ದುಷ್ಟರನ್ನು ಕೊಲ್ಲುವವರ ಪ್ರಯತ್ನಕ್ಕೂ ತಡೆಮಾಡುತ್ತೀರಿ. ಇದಾವಧರ್ಮಸಾರವೋ ನನಗೆ ತಿಳಿಯದು. ಆಗಲಿ, ಹೇಗಾದರೂ ನೀವು ಜಗತ್ತಿನ ಪ್ರಭುತ್ವವನ್ನು ಹೊಂದಿದವರಾಗಿದ್ದೀರಿ. ಆದುದರಿಂದ ಇದೊಂದು ಸಾರಿ ನಿಮ್ಮ ಪ್ಪಣೆಯನ್ನು ಮನ್ನಿಸುವೆನು. ನಿಮ್ಮೊಡನೆ ನನಗೆ ವಾದವೇಕೆ ? ಬಿಜಯಮಾಡಿರಿ ಎಂದುಕೊಳ್ಳುತ್ತ ಓಸರಬಾರದಂತೆ ಸುರಗಿರಿಯನ್ನು ಯಥಾಸ್ಥಾನ

ದಲ್ಲಿಟ್ಟು ಆದರ ಸುವರ್ಣಶಿಖರವೊಂದನ್ನು ಮಾತ್ರ ಕಿತ್ತು ತೆಗೆದುಕೊಂಡು ಹೊರಟು ನಡೆಯುವ ಗಿರಿಯೋಪಾದಿಯಲ್ಲಿ ಬಂದು ನಳನ ಕೈಗೆ ಕೊಡಲು; ಅದರಿಂದ ಉಳಿದಿದ್ದ ನಾಲ್ವತ್ತು ಯೋಜನಗಳ ಸೇತುಕಾರ್ಯವು ನಡೆದು ಸಂಪೂರ್ಣವಾಗಿ ಶತಯೋಜನ ಗಳ ವರೆಗೂ ಸೇತುವು ಕಟ್ಟಲ್ಪಟ್ಟು ಸಿದ್ಧವಾಯಿತು. ಆಗ ನಳನು ಶ್ರೀರಾಮನ ಸನ್ನಿಧಿಗೆ ಬಂದು—ಎಲೈ ಕರುಣಾಜಲನಿಧಿಯೇ, ಸೇತುಕಾರ್ಯವೆಲ್ಲಾ ಮುಗಿಯಿತು. ಪರೀ ಕ್ಷಾರ್ಥವಾಗಿ ದಯೆಮಾಡಿಸಬಹುದೆಂದು ಭಯಭರಿತ ಭಕ್ತಿಯಿಂದ ಬಿನ್ನವಿಸಿದನು.

ಆಗ ಶ್ರೀರಾಮನು ಸಂತುಷ್ಟಾಂತರಂಗನಾಗಿ ವಾನರ ಚಕ್ರೇಶ್ವರನಾದ ಸುಗ್ರೀ ವನ ಹಸ್ತವನ್ನು ಹಿಡಿದು ಸಿಂಹಪೀಠದಿಂದಿಳಿದು ಸುರರು ಜಯಜಯ ಎನ್ನುತ್ತಿರಲು ; ಸುರಮುನಿಗಳು ಸ್ತುತಿಸುತ್ತಿರಲು; ವಿದ್ಯಾಧರರು ಹೊಗಳುತ್ತಿರಲು; ಸೂತಮಾಗಧರು ಬಿರುದನ್ನು ಹೇಳುತ್ತಿರಲು ; ಹನುಮಂತನು ಧೀರುರೇ ! ಪಾಯವಧಾರು ! ಎಂದು ಆರ್ಭಟಿಸುತ್ತಿರಲು ; ಸೇತುವಿನ ಬಳಿಗೆ ಬಂದು ನಿಂತು—ಮೃತ್ಯುವು ದುಷ್ಟನಾದ ರಾವಣನನ್ನು ಎಳೆದುಕೊಂಡು ಹೋಗುವುದಕ್ಕೋಸ್ಕರ ನೀಡಿದ ಹಸ್ತವೋ, ವಾನರ ಮಹಾವೀರರ ಅತುಲಪರಾಕ್ರಮ ವರ್ಣನೆಯಿಂದ ಕೂಡಿದ ಮಹಾಶಿಲಾಶಾಸನವೋ, ರಾಘವನ ಕೀರ್ತಿನಿತಂಬಿನಿಯ ಬೈತಲೆಯೋ, ರಾವಣ ರಾತ್ರಿಂಚರನ ವಿಜಯಾರ್ಥವಾಗಿ ಹೊರಟಿರುವ ಶ್ರೀರಾಮನಿಗೆ ಕಾಲವೆಂಬ ಅಗಸನು ಒಪ್ಪದಿಂದ ಹಾಸಿದ ನಿರ್ಮಲವಾದ ನಡೆಮಡಿಯೋ, ದುರಹಂಕಾರ ದೂಷಿತರಾದ ನಕ್ತಂಚರರನ್ನು ನಿರ್ಮೂಲಮಾಡುವುದ ಕ್ಕೋಸ್ಕರ ತ್ರಿಜಗತ್ಪತಿಯಾದ ಭಗವಂತನು ಶ್ರೀರಾಮನಿಗೆ ಕೊಟ್ಟ ಮಹಾಖಡ್ಗಫಲ ಕವೋ ಎಂಬ ಹಾಗೆ ಪರಿಶೋಭಿಸುತ್ತಿರುವ ನಳನಿರ್ಮಿತವಾದ ಮಹಾಸೇತುವನ್ನು ನೋಡಿ ಆಶ್ಚರ್ಯಪಟ್ಟು ನಳನನ್ನು ಆಲಿಂಗಿಸಿಕೊಂಡು ಬಹಳವಾಗಿ ಮೆಚ್ಚಿ ಆ ನಳನಿಗೆ ಮುಂದಣ ಇಂದ್ರಪದವಿಯನ್ನಿತ್ತು ಮನ್ನಿಸಿದನು. ಆ ಮೇಲೆ ರಘುಕುಲತಿಲಕನು ಲಂಕಾಪ್ರಯಾಣಕ್ಕೆ ಸನ್ನದ್ಧನಾಗಲು ; ಆಗ ಕಪಿಬಲದ ಮುಂದಣಾರೈಕೆಯು ನೀಲ ನಿಗೂ ಹಿಂಗಡೆಯ ರಕ್ಷಣೆಯು ಸುಷೇಣನಿಗೂ ಮೇಲಾರೈಕೆಯು ನಳಶತಬಲಿಗವಾ ಕ್ಷರಿಗೂ ಹಗೆಗಳು ಬಾರದಂತೆ ಎಚ್ಚರದಿಂದ ನೋಡುತ್ತಿರುವಿಕೆಯು ವಿಭೀಷಣನಿಗೂ ಶೂರಕಪಿಪರಿವಾರಪರೀತನಾದ ಶ್ರೀರಾಮನು ಗೋಧೂಳೀಲಗ್ನದಲ್ಲಿ ಲಂಕಾನಗರದ ಬಳಿಗೆ ಬಂದು ಪಾಳಯವನ್ನು ಬಿಡಿಸಿದನು.

---

## 7. THE SLAUGHTER OF KUMBHAKARNA.

### ೭. ಕುಂಭಕರ್ಣಸಂಹಾರ.

ಇತ್ತ ಲಂಕಾನಗರದಲ್ಲಿ ನಿಶಾಚರ ಚಕ್ರೇಶ್ವರನಾದ ರಾವಣನು ಲೋಕೋತ್ತರ ವಾದ ತನ್ನ ಓಲಗದ ಚಾವಡಿಯಲ್ಲಿ ರತ್ನಸಿಂಹಾಸನದ ಮೇಲೆ ಕುಳಿತು ಒಡ್ಡೋಲಗ ವನ್ನು ಕೊಡುತ್ತಿರಲು ; ಆ ಸಮಯದಲ್ಲಿ ಬೇಹಿನವರು ಬಂದು ಅಡ್ಡಬಿದ್ದು—ಜೀಯಾ,

ರಾಕ್ಷಸ ಕುಲರಕ್ಷಕನೇ, ನಮ್ಮಲ್ಲಿರುವ ಈ ಸೀತೆಯ ಗಂಡನಾದ ರಾಮನು ನಳನೆಂಬ ಕಪಿವೀರನಿಂದ ಉತ್ತರಸಮುದ್ರದಲ್ಲಿ ದಶಯೋಜನಗಳ ಅಗಲವೂ ಶತಯೋಜನಗಳ ಉದ್ದವೂ ಉಳ್ಳ ಸೇತುವನ್ನು ಕಟ್ಟಿಸಿ ಅಸಂಖ್ಯಾತಕಪಿಬಲಸಮೇತನಾಗಿ ಸಮುದ್ರವನ್ನು ದಾಟಿಬಂದು ಈ ನಮ್ಮ ಲಂಕಾದುರ್ಗದ ಒತ್ತಿನಲ್ಲಿರುವ ಸುವೇಲಾಚಲದಲ್ಲಿ ಪಾಳಯವನ್ನು ಬಿಡಿಸಿಕೊಂಡಿಳಿದಿದ್ದಾನೆ. ಆ ಕಪಿಬಲವನ್ನು ವರ್ಣಿಸಿ ಹೇಳುವುದಕ್ಕೆ ಎರಡು ಸಾವಿರ ನಾಲಿಗೆಗಳುಳ್ಳ ಆದಿಶೇಷನಂಥವರು ಎಷ್ಟು ಜನರಾದರೂ ಸಾಲದು. ಕಪಿಗಳ ಶರೀರಗಳೋ, ಮಹಾ ಪರ್ವತಗಳೋ ಎಂದು ಥಟ್ಟನೆ ವಿವರಿಸಿಹೇಳುವುದು ಅಸಾಧ್ಯವು. ಉಳಿದ ಸಂಗತಿಗಳನ್ನೆಲ್ಲಾ ನೀನೇ ಪ್ರತ್ಯಕ್ಷವಾಗಿ ನೋಡಿ ತಿಳಿಯಬಹುದೆಂದು ಹೇಳಿದರು. ಆಗ ರಾವಣನು ಮನಸ್ಸಿನಲ್ಲಿ ಬಹಳವಾಗಿ ಆತಂಕಪಟ್ಟು ಕೂಡಲೆ ತನ್ನ ಸರ್ವಸೇನಾನಾಯಕನಾದ ಪ್ರಹಸ್ತನನ್ನು ಅನೇಕ ಚತುರಂಗಬಲದೊಡನೆ ಲಂಕಾನಗರದ ಪೂರ್ವದಿಗ್ದ್ವಾರದಲ್ಲಿಯೂ ದೇವಾಂತಕ ನರಾಂತಕ ತ್ರಿಶಿರ ಅತಿಕಾಯ ಕುಂಭ ನಿಕುಂಭ ಮಕರಾಕ್ಷರೇ ಮೊದಲಾದ ತನ್ನ ಮಕ್ಕಳನ್ನು ಅಪರಿಮಿತಶೂರಸೇನೆಯೊಡನೆ ದಕ್ಷಿಣದಿಕ್ಕಿನ ಹೆಬ್ಬಾಗಿಲಲ್ಲಿಯೂ ಶೂರಾಗ್ರೇಸರನಾದ ಇಂದ್ರಜಿತ್ತನ್ನು ಗಣನಾತೀತವಾದ ಮಹಾಬಲದೊಡನೆ ಲಂಕಾಪುರಿಯ ಪಡುವಣದೆಸೆಯ ಬಾಗಿಲಿನಲ್ಲಿಯೂ ಎಚ್ಚರಿಕೆಯಿಂದಿರುವಂತೆ ಕಾವಲಿರಿಸಿ ತಾನು ಬಹುಜನ ರಾಕ್ಷಸವೀರರೊಡನೆ ಕೂಡಿ ಹೊರಟುಬಂದು ಉತ್ತರದಿಗ್ದ್ವಾರಪ್ರದೇಶದಲ್ಲಿ ಸನ್ನದ್ಧನಾಗಿ ನಿಂತು ದೂತರನ್ನು ಕರೆದು—ಬಿಟ್ಟ ಹೆಂಡತಿಯನ್ನು ಆಳುವುದಕ್ಕಾಗಿ ಕಪಿಬಲದೊಡನೆ ಬಂದಿರುವ ರಾಮನನ್ನು ತಡಮಾಡದೆ ಯುದ್ಧಕ್ಕೆ ಕರೆದುತರಬೇಕೆಂದು ನೇಮಿಸಿ, ಕಳುಹಿಸಲು ; ಅವರು ಶೀಘ್ರವಾಗಿ ರಾಮನ ಬಳಿಗೆ ಬಂದು ರಾವಣನು ಹೇಳಿದ ಸಂಗತಿಯನ್ನು ಯಥಾವತ್ತಾಗಿ ಹೇಳಲು ; ಆಗ ರಾಮನು—ಒಳ್ಳೆಯದು, ಈಗಲೇ ಹೊರಟು ಬರುತ್ತಿದ್ದೇವೆ. ನೀವು ಹೋಗಿ ಈ ಸಂಗತಿಯನ್ನು ನಿಮ್ಮೊಡೆಯನಿಗೆ ತಿಳಿಸಿರೆಂದು ಹೇಳಿ ಕಳುಹಿಸಿ, ಆ ರಾವಣನು ಲಂಕಾದುರ್ಗದ ಚತುರ್ದ್ವಾರಗಳಲ್ಲೂ ರಕ್ಷಣಾರ್ಥವಾಗಿ ಪ್ರಹಸ್ತಾದಿಗಳನ್ನು ನೇಮಿಸಿರುವ ವೃತ್ತಾಂತವನ್ನು ಶ್ರೀರಾಮನು ಕೇಳಿ ಅದಕ್ಕೆ ಪ್ರತಿಯಾಗಿ ಪ್ರಹಸ್ತನನ್ನು ಪ್ರತಿಭಟಿಸುವುದಕ್ಕೆ ತನ್ನ ಸರ್ವಸೇನಾಪತಿಯಾದ ನೀಲನನ್ನೂ ದೇವಾಂತಕಾದಿನಿಶಾಚರರನ್ನು ತಡೆಯುವುದಕ್ಕೆ ಯುವರಾಜನಾದ ಅಂಗದನನ್ನೂ ಇಂದ್ರಜಿತ್ತನ್ನು ಎದುರಿಸುವುದಕ್ಕಾಗಿ ಪರಾಕ್ರಮಶಾಲಿಯಾದ ಲಕ್ಷ್ಮಣನನ್ನೂ ನೇಮಿಸಿ ರಾವಣನಿಗೆ ಪ್ರತಿಯಾಗಿ ತಾನೇ ನಿಂತು ಲಂಕಾದುರ್ಗವನ್ನು ಲಗ್ಗೆ ಹತ್ತುವ ಹಾಗೆ ಸುಗ್ರೀವನಿಗೆ ಅಪ್ಪಣೆಕೊಡಲು ; ಸುಗ್ರೀವನು ಶೀಘ್ರವಾಗಿ ಸಕಲಸೇನೆಯೊಡನೆ ಕೂಡಿ ಹೊರಟು ಬಂದು ಲಂಕಾದುರ್ಗಕ್ಕೆ ಮುತ್ತಿಗೆಯನ್ನು ಹಾಕಿದನು.

ಆಗ ರಾವಣನ ಅಪ್ಪಣೆಯಿಂದ ರಾಕ್ಷಸಬಲವು ಹೊರಟು ಬಂದು ಕಪಿಬಲದ ಮೇಲೆ ಬೀಳಲು ; ಕೂಡಲೆ ಕಪಿರಾಕ್ಷಸವೀರರಿಗೆ ಬಹಳ ಯುದ್ಧಗಳಾಗಿ ರಾಕ್ಷಸಪತಾಕಿನಿಯಲ್ಲೂ ಕಪಿಬಲದಲ್ಲೂ ಅನೇಕ ಕಪಿರಾಕ್ಷಸವೀರರು ಮಡಿದರು. ಮತ್ತು ರಾಕ್ಷಸಾನೀಕಿನಿಯಲ್ಲಿ ಬಹುಗಜಸಮುದಾಯವೂ ಅಶ್ವನಿಕರವೂ ರಥಸಂದೋಹವೂ

ನಾಶವಾಗಿ ರಕ್ತನದಿಯು ದಡವಿೂರಿ ಹರಿಯಿತು. ಆಗ ರಾಮಾನುಯಾಯಿಯಾದ ವಿಭೀಷಣನು ಧನುರ್ಬಾಣಗಳನ್ನು ತೆಗೆದುಕೊಂಡು ಮಹಾಶೂರನಾದ ಮಿತ್ರಘ್ನ ನೆಂಬ ರಕ್ಕಸನೊಡನೆ ಯುದ್ಧಕ್ಕೆ ನಿಂತು ಬಲು ಹೊತ್ತು ಹೆಣಗಿ ಕಡೆಗೆ ಅವನನ್ನು ಕೊಂದು ಅವನ ದುರ್ನಾಮಧೇಯವನ್ನೂ ತೊಡೆದನು. ಅನಂತರದಲ್ಲಿ ಇಂದ್ರಜಿತ್ತು ಈ ವರ್ತಮಾನವನ್ನು ಕೇಳಿ ಮಹೋಗ್ರಕೋಪಕಂಪಿತನಾಗಿ ಧನುರ್ಬಾಣಗಳನ್ನು ತೆಗೆದುಕೊಂಡು ತಾಮಸಿಯೆಂಬ ಮಹಾಮಾಯೆಯನ್ನವಲಂಬಿಸಿ ಈಶ್ವರನ ವರದಿಂದ ಹೊಂದಿದ್ದ ಅರಿಭೀಕರವಾದ ಮಹಾರಥವನ್ನೇರಿ ಆ ರಾತ್ರಿಯಲ್ಲೇ ಹೊರಟು ಕಪಿ ಬಲವನ್ನು ಹೊಕ್ಕು ಯಾರಿಗೂ ಕಾಣಿಸಿಕೊಳ್ಳದೆ ಕಲ್ಪಾಂತಘನಗರ್ಜಿತದಂತೆ ಸಿಂಹ ನಾದವನ್ನು ಮಾಡಲು ; ಆ ಮಹೋಗ್ರಾರ್ಭಟಧ್ವನಿಯು ಸುಗ್ರೀವಾದಿ ವಾನರನಾಯ ಕರನ್ನು ಅಳುಕಿಸಿತು. ಆಗ ಕಪಿವೀರರು ದಿಗ್ಭ್ರಾಂತರಾಗಿ—ಎಲೈ, ಖಳರು ಈ ಕತ್ತ ಲೆಯಲ್ಲಿ ಬಂದು ಕವಿದು ಕಪಿಬಲವನ್ನು ಕೊಲ್ಲುತ್ತಿರುವರು. ತಡಮಾಡಬೇಡಿರಿ. ಏಳಿರಿ, ಏಳಿರಿ ಎಂದು ಕೂಗುತ್ತ ತೋರವಾದ ಗಿರಿಗಳನ್ನೂ ದೊಡ್ಡ ದೊಡ್ಡ ಮರ ಗಳನ್ನೂ ಕಿತ್ತು ತೆಗೆದುಕೊಂಡು ಸುತ್ತಲೂ ನೋಡುತ್ತ ವಿರೋಧಿಗಳಾದ ರಕ್ಕಸರನ್ನು ಕಾಣದೆ ಕಂಗೆಟ್ಟು ಆಶ್ಚರ್ಯಪಟ್ಟು ಹುಡುಕಿಕೊಂಡು ತಿರುಗುತ್ತಿದ್ದರು. ಆಗ ವಿಭೀ ಷಣನು ತನ್ನ ಮನಸ್ಸಿನಲ್ಲಿ—ಇದು ಇಂದ್ರಜಿತ್ತಿನ ಭಯಂಕರವಾದ ಮಾಯಾಯುದ್ಧ ವೆಂದು ತಿಳಿದು ಆ ರಾತ್ರಿಯಲ್ಲಿ ಇವನಿಂದ ಕಪಿಬಲಕ್ಕೆ ಅಪಾಯವು ಸಂಭವಿಸದೆ ಇರದು ಎಂದು ಬಹಳವಾಗಿ ಮರುಗುತ್ತ ಶೀಘ್ರವಾಗಿ ಸುಗ್ರೀವನ ಬಳಿಗೆ ಬಂದು— ಎಲೈ ವಾನರರಾಜನೇ, ನೀನು ತ್ವರಿತದಿಂದ ರಾಮಲಕ್ಷ್ಮಣರ ಮೈಗಾವಲಿಗೆ ನೀಲಾಂ ಗದರನ್ನು ಇರಿಸು. ಸುಷೇಣ ಜಾಂಬವಂತರನ್ನು ಮೇಲಾರೈಕೆಯಲ್ಲಿ ಜಾಕರೂಕತೆ ಯಿಂದಿರುವಂತೆ ನಿಲ್ಲಿಸು. ಉಳಿದ ನಳಕೇಸರಿ ಗವಾಕ್ಷ ದ್ವಿವಿಧ ದುರ್ಮುಖ ಶರಭ ಶತಬಲಿ ಹನುಮಂತ ಇವರೇ ಮೊದಲಾದವರನ್ನು ಯುದ್ಧಮಾಡುವುದಕ್ಕೆ ನೇಮಿಸು. ಇದೋ, ಮೊಳಗುವಂತೆ ಸಿಂಹಗರ್ಜನೆಯನ್ನು ಮಾಡುತ್ತಿರುವವನು ರಾವಣನ ಮಗ ನಾದ ಇಂದ್ರಜಿತ್ತು. ಇವನು ಇರುಳ್ಗಾಳಗದವನು. ಮಾಯಾಯುದ್ಧದಲ್ಲಿ ಬಹು ಸಮರ್ಥನು. ನೀನು ಬೇಗ ಹೋಗಿ ರಾಮಲಕ್ಷ್ಮಣರಿಗೆ ಈ ಸಂಗತಿಯನ್ನು ತಿಳಿಸು ವವನಾಗು ಎಂದು ಹೇಳಿ ತಾನು ತನ್ನ ನಾಲ್ಕು ಜನ ಮಂತ್ರಿಗಳೊಡನೆ ಆಕಾಶಕ್ಕೆ ಹಾರಿ ಇಂದ್ರಜಿತ್ತಿನ ಮೇಲೆ ಎಡಬಿಡದೆ ಬಾಣಗಳನ್ನು ಸುರಿಸಲು ; ಇಂದ್ರಜಿತ್ತು ಆ ಬಾಣಗಳನ್ನೆಲ್ಲಾ ತುಮುರು ತುಮುರಾಗಿ ಕಡಿದುಬಿಟ್ಟು ಪ್ರತಿಬಾಣಗಳನ್ನು ಪ್ರಯೋಗಿಸಿ ವಿಭೀಷಣನನ್ನು ಬಾಣಸಮುದ್ರದೊಳಗೆ ಮುಳುಗಿಸಿದನು. ಅವನ ನಾಲ್ಕು ಜನ ಮಂತ್ರಿಗಳನ್ನು ಬಾಣಭಿತ್ತಿಯಿಂದ ಮುಚ್ಚಿದನು. ಆಹಾ ! ಇಂದ್ರಜಿತ್ತು ಎಂಥಾ ವೀರನೋ ! ಅನಂತರದಲ್ಲಿ ಕಪಿಸೇನೆಯ ಮೇಲೆಲ್ಲಾ ಬಾಣವೃಷ್ಟಿಯು ಸುರಿದು ಕೊಲ್ಲುತ್ತಿದ್ದಿತು. ವಿಶೇಷವೇಕೆ ? ಯುದ್ಧಾಂಗಣದಲ್ಲಿ ಅಪ್ರತಿಮಮಲ್ಲನಾದ ಇಂದ್ರ ಜಿತ್ತಿನೆದುರಿಗೆ ನಿಲ್ಲುವುದಕ್ಕೆ ಹರಹಿರಣ್ಯಗರ್ಭಾದಿಗಳಿಂದಲೂ ಸಾಧ್ಯವಲ್ಲವು. ಇಂದ್ರ ಜಿತ್ತಿನ ಒಂದೊಂದು ಬಾಣಕ್ಕೆ ತಪ್ಪದೆ ಒಂದೊಂದು ಕಪಿಯ ಹೆಣವು ಭೂಮಿಗುರುಳು

ತ್ತಿದ್ದಿತು. ಒಂದೆಡೆಯಲ್ಲಿ ಶೂರನಾದ ಇಂದ್ರಜಿತ್ತಿನ ತೇರಿನ ಚೀತ್ಕಾರಧ್ವನಿಯೂ ಇನ್ನೊಂದು ಕಡೆಯಲ್ಲಿ ಅವನ ರಥಾಶ್ವಗಳ ಹೇಷಾರವವೂ ಮತ್ತೊಂದು ದೆಸೆಯಲ್ಲಿ ವಿರೋಧಿ ವಕ್ಷಸ್ಸ್ಥಲಕ್ಕೆ ಕಂಪನವನ್ನುಂಟುಮಾಡುತ್ತಿರುವ ಕೋದಂಡಠಾಂಕಾರಧ್ವಾನವೂ ಒಂದು ಸ್ಥಳದಲ್ಲಿ ಇಂದ್ರಜಿತ್ತಿನ ಸಿಂಹನಾದರಭಸವೂ ಕೇಳಿಸುತ್ತ ಕಪಿಸೇನೆಯೆಲ್ಲವೂ ಇಂದ್ರಜಿನ್ಮಯವಾಗಿ ಹೋಯಿತೋ ಎಂಬಂತೆ ಅರಿಗಳ ಮನಸ್ಸಿಗೂ ನೇತ್ರಗಳಿಗೂ ಗೋಚರನಾಗದೆ ಸರ್ವದಿಕ್ಕುಗಳಲ್ಲೂ ಸರ್ವವಿಧದಿಂದಲೂ ಕಾಲಭೈರವನಂತೆ ಕಪಿಬಲವನ್ನು ಕೊಲ್ಲುತ್ತಿದ್ದನು. ಆಗ ಕಪಿವೀರರು ಮಾಡತಕ್ಕುದೇನು? ಕೆಲರು ಒಂದು ಕಡೆಯಲ್ಲಿ ನೋಡಿದರು. ಇನ್ನು ಕೆಲರು ತಮ್ಮ ಹಸ್ತಗಳಲ್ಲಿರುವ ಗಿರಿಗಳನ್ನು ಮುಂದಕ್ಕೆ ಮರೆಮಾಡಿ ಇಣಿಕಿ ನೋಡಿದರು. ಕೆಲರು ತಮ್ಮ ಬಾಹುಬಲಪ್ರಚಾರಕ್ಕೆ ಉಪಾಯವನ್ನು ಹುಡುಕುತ್ತಿದ್ದರು. ಮತ್ತು ಕೆಲರು—ನಾವು ಅರಿಯನ್ನು ಕಾಣುವ ರೀತಿ ಯಾವುದು? ಎಂದು ನಾನಾವಿಧವಾಗಿ ಯೋಚಿಸುತ್ತ ಯಾವ ಉಪಾಯವನ್ನೂ ಕಾಣದೆ ಕಂಗೆಟ್ಟು ಕಳವಳಿಸುತ್ತ ಹಗೆಯನ್ನು ಮನಸ್ಸಿನಲ್ಲಿ ಹಿಡಿದು ಹಿಂಡುತ್ತ ಅರಿಬಾಣಘಾತಗಳಿಂದ ತನುಗಳನ್ನು ಕಳೆದುಕೊಳ್ಳುತ್ತ ಮಹಾಚಿಂತಾಸಮುದ್ರದಲ್ಲಿ ಮುಳುಗಿದ್ದರು. ಅನಂತರದಲ್ಲಿ ಗಜಗವಯನೀಲಾದಿ ಕಪಿಸೇನಾನಾಯಕರು ಹಗೆಯಿರುವೆಡೆಯನ್ನರಿಯದೆ ಗಿರಿತರುಗಳನ್ನೆಸೆದು ಆಕಾಶಾಂತರಾಳವನ್ನು ತುಂಬಿಸಿದರು. ಆಗ ರಾವಣಿಯು ವಿಪರೀತವಾದ ಸರಳ್ಮಳೆಯನ್ನು ಸುರಿದು ಕಪಿಸೇನಾನಾಯಕರೆಲ್ಲರನ್ನೂ ನೆಲದಲ್ಲಿ ಒರಗಿಸಿ ರಾಮಲಕ್ಷ್ಮಣರ ಸಮೀಪಕ್ಕೆ ಬಂದು ಅವರ ಮೇಲೆ ಬಾಣಗಳನ್ನು ಪರಂಪರೆಯಾಗಿ ಸುರಿಸುತ್ತಿರಲು; ಕಪಿವೀರರೊಳಗೆ ರಾಮಲಕ್ಷ್ಮಣರ ಮೈಗಾವಲಿನಲ್ಲಿದ್ದ ಆಂಜನೇಯನ ಸಾಹಸವೆಷ್ಟು ಮಿಗಿಲಾದುದೋ? ಆ ರಾವಣಿಯ ಕರಗತವಾದ ಬಿಲ್ದನಿಯ ಜಾಡಿನಿಂದ ಅವನಿರುವ ಸ್ಥಾನವನ್ನರಿದು ಗರುಡ ಪಕ್ಷಿಯಂತೆ ಆಕಾಶಕ್ಕೆ ಹಾರಿ ಅವನನ್ನು ಒದೆಯಲು; ರಾವಣನ ಮಗನು ಮಾಯಾಬಲದಿಂದ ರಥವನ್ನು ಬಿಟ್ಟು ಆಚೆಗೆ ಹಾರಿ ತಪ್ಪಿಸಿಕೊಂಡನು. ರಥವು ನುಚ್ಚುನೂರಾಗಿ ಭೂಮಿಗುದುರಿತು. ಆಗ ಅರಿವೀರನು ಮತ್ತೊಂದು ರಥವನ್ನೇರಿ ಬಾಣಗಳನ್ನು ಪ್ರಯೋಗಿಸಿ ಹನುಮಂತನ ಮೈಯೊಳಗೆ ಎಡೆಯಿಲ್ಲದಂತೆ ತೂರಿಸಿ ತಿರಿಗಿ ರಾಮನ ಮೇಲೆ ಕಣೆಗಳನ್ನು ಸುರಿಸುತ್ತಿರಲು; ಆಗ ರಾಮನು ಕೋದಂಡವನ್ನು ತೆಗೆದುಕೊಂಡು ಹೆದೆಯಲ್ಲಿ ದಿವ್ಯಾಸ್ತ್ರಗಳನ್ನು ತೊಡಿಸಿ ಅರಿಬಾಣಗಳು ಬರುವ ಮಾರ್ಗದಲ್ಲಿಯೇ ಪ್ರಯೋಗಿಸಿ ಅವನ ರಥರಥಾಶ್ವಸಾರಥಿಪತಾಕೆಗಳನ್ನು ಕತ್ತರಿಸಿ ಕೆಡಹಲು; ಇದುವರೆಗೂ ನನ್ನೊಡನೆ ಯುದ್ಧಮಾಡಿದ ಸುರಾಸುರ ಯಕ್ಷಕಿನ್ನರಾದಿ ಮಹಾವೀರರಲ್ಲಿ ಈ ರಾಮನಿಗೆ ಸಮಾನನಾದ ಪರಾಕ್ರಮಶಾಲಿಯನ್ನು ನಾನು ಕಾಣೆನು. ಆದುದರಿಂದಲೇ ಪ್ರಚಂಡರಾದ ಖರದೂಷಣಾದಿ ರಾಕ್ಷಸವೀರರನ್ನೂ ಪ್ರಸಿದ್ಧವೀರನಾದ ವಾಲಿಯನ್ನೂ ಕೊಂದನು ಎಂದು ಮನಸ್ಸಿನಲ್ಲಿ ರಾಮನನ್ನು ಹೊಗಳುತ್ತ ಮತ್ತೆ ರಾಮನ ಮೇಲೆ ಬಾಣವೃಷ್ಟಿಯನ್ನು ಕರೆಯಲು; ಶ್ರೀರಾಮನು ತಿರಿಗಿ ದಿವ್ಯಮಾರ್ಗಣಗಳನ್ನು ಪ್ರಯೋಗಿಸಿದನು. ಆ ಬಾಣಗಳು ನಡುದಾರಿಯಲ್ಲೇ ರಾವಣಿಯ

ಅಂಬುಗಳನ್ನು ಕತ್ತರಿಸಿ ಹೊರಟು ಅವನ ಸರ್ವಾಂಗಗಳಲ್ಲೂ ಹೊಕ್ಕು ರಕ್ತಪ್ರವಾಹ ವನ್ನು ಹರಿಸಿ ಅರಿವೀರನ ರಥಾಶ್ವಗಳಿಂದ ರಕ್ತವನ್ನು ಕಾರಿಸಿ ಸಕಲ ದಿಕ್ಕುಗಳಲ್ಲೂ ವ್ಯಾಪಿಸಿಕೊಂಡು ಅವನ ಛತ್ರಚಾಮರ ಸೀಗುರಿ ಪತಾಕೆ ಇವುಗಳನ್ನು ಕಡಿದು ಕೆಡಹಿದುವು.

ಅದನ್ನು ನೋಡಿ ರಾವಣಿಯು ತಲೆಯನ್ನು ತೂಗಿ—ಅಮಮಾ! ಈ ಧನು ರ್ವಿದ್ಯಾ ಪ್ರೌಢಿಮೆಯು ಮೂರು ಕಣ್ಣುಗಳುಳ್ಳ ಪರಮೇಶ್ವರನಿಗೂ ಇಲ್ಲ. ಈತನು ಲೋಕದವರಂತೆ ಸಾಧಾರಣನಾದ ಮನುಜನಲ್ಲ. ಮಹಾ ವಿಷ್ಣುವೇ ಶ್ರೀರಾಮನಾಗಿ ಹುಟ್ಟಿರುವನೆಂದು ಜನರು ಹೇಳುತ್ತಿರುವುದು ನಿಜವೇ ಸರಿ. ಹಾಗಲ್ಲದಿದ್ದರೆ ಲೋಕಾಶ್ಚ ರ್ಯಕರವಾದ ಈ ಬಾಣಪ್ರಯೋಗ ಕೌಶಲ್ಯವು ಈತನಿಗೆತ್ತಣಿಂದ ಬರುತ್ತಿದ್ದಿತು? ಎಂದು ಯೋಚಿಸುತ್ತ ತಾನು ಮೊದಲು ಶಿವನಿಂದ ಪಡೆದಿದ್ದ ಸರ್ಪಾಸ್ತ್ರವನ್ನು ಮೂಡಿ ಗೆಯಿಂದ ತೆಗೆದು ತಿರುವಿನಲ್ಲಿ ಹೂಡಿ ಆಕರ್ಣಾಂತವಾಗಿ ಸೇದಿ ರಾಮನ ಮೇಲೂ ರಾಮನ ಬಲದ ಮೇಲೂ ಪ್ರಯೋಗಿಸಲು ; ಕೂಡಲೆ ಎಂಟು ವಿಧವಾದ ಹಾವುಗಳ ತಂಡಗಳು ಕಪಿಬಲವನ್ನೂ ರಾಮಲಕ್ಷ್ಮಣರನ್ನೂ ಮುತ್ತಿಕೊಂಡು ವಿಷದಂತಗಳಿಂದ ಕಚ್ಚಿ ಕವರಿ ಗರಳಜ್ವಾಲೆಗಳಿಂದ ಕಪಿಬಲಗಳನ್ನೆಲ್ಲಾ ಮೂರ್ಛೆಗೊಳಿಸಿ ರಾಮಲಕ್ಷ್ಮ ಣರನ್ನೂ ಕೂಡ ಮೂರ್ಛೆಹೊಂದಿಸಿದುವು. ಆ ಮೇಲೆ ಇಂದ್ರಜಿತ್ತು ಬಹು ಸಂತೋ ಷಭರಿತಮನಸ್ಕನಾಗಿ ಜಯಭೇರಿಯನ್ನು ಹೊಡಸಿಕೊಂಡು ಹಿಂದಿರುಗಿ ಲಂಕಾನಗರಕ್ಕೆ ಹೋಗಿ ತಂದೆಯಾದ ದಶಗಳನಿಗೆ ನಮಸ್ಕರಿಸಿ ತನ್ನ ವಿಜಯವಾರ್ತೆಯನ್ನು ಹೇಳಲು ; ರಾವಣನು ಸಂತೋಷವೆಂಬ ಸುಧಾಸಾಗರದಲ್ಲಿ ಮುಳುಗಿ ಇಂದ್ರಜಿತ್ತನ್ನು ತೆಗೆದು ಆಲಿಂಗಿಸಿಕೊಂಡು ಕುಲರತ್ನವೇ, ಮುತ್ತಿನ ಗಿಣಿಯೇ ಎಂದು ಹೊಗಳಿ ಮುತ್ತಿಟ್ಟನು.

ಇತ್ತ ಕಪಿಬಲದ ಮಧ್ಯದಲ್ಲಿ ಸುಗ್ರೀವ ನೀಲ ನಳ ಜಾಂಬವದಾಂಜನೇಯಾದಿ ಗಳು ಮೂರ್ಛಿತರಾಗಿ ಬಿದ್ದಿರುವ ರಾಮಲಕ್ಷ್ಮಣರನ್ನು ನೋಡಿ ಮರುಗಿದವರಾಗಿ— ಅಯ್ಯೋ! ಮಹಾನುಭಾವರೇ, ನಮ್ಮನ್ನು ನಂಬಿ ನಿಮಗೆ ಇಂಥಾ ದುಃಸ್ಥಿತಿಯು ಸಂಭ ವಿಸಿತೇ ? ಹಾ ! ಎಂದು ಹಂಬಲಿಸಿ ಕಣ್ಣೀರುಗಳನ್ನು ಸುರಿಸುತ್ತ ರಾಮಲಕ್ಷ್ಮ ಣರ ಸುತ್ತಲೂ ಕುಳಿತಿರಲು ; ಆಗ ಜಾಂಬವಂತನು ಸುಷೇಣನನ್ನು ನೋಡಿ—ಎಲೈ ಕಪೀಂದ್ರನೇ, ನಿನಗೆ ವೈದ್ಯಶಾಸ್ತ್ರದಲ್ಲಿ ವಿಶೇಷಪರಿಚಯವುಂಟಲ್ಲ ? ದೇವೇಂದ್ರನ ಮನೆಯ ವೈದ್ಯನಾದ ಧನ್ವಂತರಿಯು ನಿನಗೆ ತಂದೆಯಾಗಬೇಕಷ್ಟೆ. ಈ ರಾಮಲಕ್ಷ್ಮ ಣರನ್ನು ನೋಡು ಎನ್ನಲು ; ಸುಷೇಣನು ಬಂದು ರಾಮಲಕ್ಷ್ಮಣರನ್ನು ನೋಡಿ ಜಾಂಬವಂತನನ್ನು ಕುರಿತು—ಬಡಗಣ ದಿಕ್ಕಿನಲ್ಲಿರುವ ಮೇರುಪರ್ವತದ ಮಾರ್ಗದಲ್ಲಿ ಹರಿದಶ್ವವೆಂಬೊಂದು ಗಿರಿಯಿರುವುದು. ಅದರ ಶಿಖರದಲ್ಲಿ ನಾಲ್ಕು ವಿಧಗಳಾದ ಓಷ ಧಿಗಳಿರುವುವು. ಯಾರಾದರೂ ಬೇಗ ಹೋಗಿ ಅವುಗಳನ್ನು ಇಲ್ಲಿಗೆ ತೆಗೆದುಕೊಂಡು ಬಂದರೆ ನೀವೇ ನಿಶಾಚರರ ಪಡೆಯನ್ನು ತಿಂದು ತೇಗಿದವರು. ವಿರೋಧಿಯಾದ ರಾವ ಣನನ್ನು ಕೊಂದವರು. ಮತ್ತು ಶರಣಾಗತನಾದ ವಿಭೀಷಣನಿಗೆ ಲಂಕಾರಾಜ್ಯಾಭಿಷೇ ಕವನ್ನು ಮಾಡಿಸಿದವರು. ಇದರಲ್ಲಿ ಸಂಶಯವೇನೂ ಇಲ್ಲ ಎಂದು ಹೇಳಲು ;

ಕೂಡಲೆ ಹನುಮಂತನು ಆ ಲತೆಗಳನ್ನು ತರುವುದಕ್ಕಾಗಿ ಜಾಂಬವದಾದಿಗಳಿಗೆ ನಮಸ್ಕರಿಸಿ ಸನ್ನದ್ಧನಾಗಿ ನಿಲ್ಲಲು ;

ಅಷ್ಟರಲ್ಲಿಯೇ ಗೈರಿಕಾದಿಧಾತುಮಯವಾದ ಮಹಾಶರೀರವನ್ನು ಧರಿಸಿ ಅದರಲ್ಲಿ ಋಗ್ವೇದ ಮಯವಾದ ಬಲದ ಗರಿಯೂ ಯಜುರ್ವೇದಮಯವಾದ ಎಡದ ಗರಿಯೂ ಸಾಮವೇದಮಯವಾದ ಮುಖಮಂಡಲವೂ ಉಪನಿಷದ್ವಿಕಾರವಾದ ಒಡಲೂ ಉಳ್ಳವನಾಗಿ ಗರುಡನು ಚಂದ್ರಮಂಡಲದತ್ತಣಿಂದ ಹೊರಟು ಆ ರಣಭೂಮಿಗಿಳಿದು ಬರುತ್ತಿರಲು ; ಆತನ ಗರಿಯ ಗಾಳಿಯ ಘಾತದಿಂದ ಸಮುದ್ರವೆಲ್ಲವೂ ಕಲಕಲ್ಪಟ್ಟು ತುಂತುರುಹನಿಗಳು ಅಂಬರದಲ್ಲಿ ತುಂಬಿದುವು. ಮೇರುಮಂದರ ವಿಂಧ್ಯಾದಿ ಕುಲಾಚಲಗಳು ಅಲುಗಿದುವು. ಮಹಾಶೇಷವಾಸುಕಿತಕ್ಷಕಾದಿ ಸರ್ಪಪತಿಗಳ ಮೈಸಿರಿಗಳು ಉಡುಗಿದುವು. ಉಳಿದ ಬಣಗುಹಾವುಗಳಲ್ಲಿ ಖಗರಾಜನ ಮುಂದೆ ಒಂದನ್ನಾದರೂ ಕಾಣೆನು. ಕೆಲವು ಭುಜಂಗಮಗಳು ಕ್ಷಣಮಾತ್ರದಲ್ಲಿ ಅಸುಗಳನ್ನು ತೊರೆದುವು. ಇನ್ನು ಕೆಲವು ನೆಲವನ್ನು ಕೊರೆಕೊರೆದು ಹೊಕ್ಕು ಮರೆಯಾದುವು. ಕೆಲವು ಪನ್ನಗಗಳು ಮುನ್ನೀರಲ್ಲಿ ಹೊಕ್ಕು ಅಡಗಿಕೊಂಡುವು. ಕೆಲವು ತೋರಿದ ಕಡೆಗೆ ಮುರಿದು ಕೆಟ್ಟೋಡಿದುವು. ಇನ್ನು ಕೆಲವು ಆ ರಣಭೂಮಿಯಲ್ಲಿ ಹುತ್ತಗಳನ್ನು ಅರಸುತ್ತ ತಿರುಗಿದುವು. ಕೆಲವು ಗರುತ್ಮಂತನ ಉಗ್ರದೃಷ್ಟಿಗೆದುರಾಗಿ ಸುಟ್ಟು ಕರಿಮುರಿಯಾಗಿ ಹೋದುವು. ಇನ್ನು ಹೇಳತಕ್ಕುದೇನು ? ಜಗತ್ತಿನಲ್ಲಿ ಸರ್ಪಕುಲಕ್ಕೆ ಮಹಾ ಪ್ರಳಯದಿನವು ಸಂಭವಿಸಿತು. ಆ ಮೇಲೆ ಶ್ರೀರಾಮನೂ ಲಕ್ಷ್ಮಣನೂ ಮೂರ್ಛೆಯಿಂದೆಚ್ಚೆತ್ತು ಕಣ್ದೆರೆದು ನಸುನಗುತ್ತ ವಿಹಗೇಂದ್ರನನ್ನು ನೋಡಿದರು. ಸರ್ಪಗಳೂ ಅವುಗಳ ವಿಷೋನ್ನತಿಯೂ ನಿರ್ನಾಮವಾದುದರಿಂದ ವಾನರಬಲವೆಲ್ಲಾ ಮಲಗಿದ್ದೆದ್ದಂತೆ ಎದ್ದು ಒಡೆಯನಾದ ಶ್ರೀರಾಮನಿಗೆ ನಮಸ್ಕರಿಸಿ ಶೀಘ್ರವಾಗಿ ಅಲ್ಲಿಂದ ಹೊರಟು ಮೃತ್ಯುವಿನ ದಂಡಿನಂತೆ ಲಂಕಾನಗರವನ್ನು ಮುತ್ತಿ ರಾಕ್ಷಸಸಂಘವನ್ನು ಸಂಹರಿಸುತ್ತಿರಲು ; ಆಗ ರಾವಣನು ಅದನ್ನು ನೋಡಿ ಚಿಂತಾಕ್ರಾಂತನಾಗಿ ಶೂರದೈತ್ಯಪರಿವಾರದೊಡನೆ ಬಲ್ಲಿದರಾದ ವಜ್ರದಂಷ್ಟ್ರನನ್ನೂ ಧೂಮ್ರಾಕ್ಷನನ್ನೂ ಯುದ್ಧಕ್ಕೆ ಕಳುಹಿಸಲು; ಕೂಡಲೆ ಕಪಿವೀರಾಗ್ರಗಣ್ಯನಾದ ಅಂಗದನು ವಜ್ರದಂಷ್ಟ್ರನೊಡನೆಯೂ ನಿಶಾಚರಕುಲತೂಲದಾವಾನಲನಾದ ಆಂಜನೇಯನು ಧೂಮ್ರಾಕ್ಷನೊಡನೆಯೂ ಯುದ್ಧಕ್ಕೆ ನಿಂತು ಆಶ್ಚರ್ಯರೀತಿಯಿಂದ ಯುದ್ಧಮಾಡಿ ಕಡೆಗೆ ಆ ರಾಕ್ಷಸರಿಬ್ಬರನ್ನೂ ಬಲವಾಗಿ ಬಡಿದು ಕೊಂದುಬಿಟ್ಟು ಅವರೊಡನೈತಂದಿದ್ದ ಚತುರಂಗಬಲದಲ್ಲಿ ಸ್ವಲ್ಪವಾದರೂ ಹಿಂದಿರುಗದಂತೆ ಸವರಿ ಬೊಬ್ಬಿರಿದರು. ರಾವಣನು ಆ ಸಂಗತಿಯನ್ನು ಕೇಳಿ ಪರಿತಪ್ತಚಿತ್ತನಾಗಿ ಅಪರಿಮಿತಬಲದೊಡನೆ ಅಕಂಪನೆಂಬ ಘೋರಪರಾಕ್ರಮಿಯನ್ನು ರಣರಂಗಕ್ಕಟ್ಟಲು ; ಮಹಾಬಲಗರ್ವಿತನಾದ ಮಾರುತಿಯು ಅವನ ಮೇಲೆ ಬಿದ್ದು ಅವನ ಕೈಗಳನ್ನು ಹಿಡಿದೆಳೆದು ತಿರುಗಿಸಿ ಎತ್ತಿ ಬಡಿದು ಕೊಂದು ಬಿಸುಟು ಅವನ ಬಲವನ್ನೆಲ್ಲಾ ಬಯಲು ಮಾಡಿದನು. ಇದನ್ನು ಕೇಳಿ ಕುಪಿತನಾದ ರಾಕ್ಷಸಚಕ್ರವರ್ತಿಯು ತಿರುಗಿ ತನ್ನ ಸರ್ವಸೇನಾನಾಯಕನಾದ ಪ್ರಹಸ್ತನನ್ನು ಕರೆದು

ಯುದ್ಧಕ್ಕಟ್ಟಲು ; ಆಗ ಸುಗ್ರೀವನು ತನ್ನ ಸರ್ವಸೇನಾಪತಿಯಾದ ನೀಲನನ್ನು ಕಳು ಹಿಸಿದನು. ಅನಂತರದಲ್ಲಿ ಆ ದಳಪತಿಗಳಿಬ್ಬರೂ ಯುದ್ಧಕ್ಕೆ ಉಪಕ್ರಮಿಸಿ ದೀರ್ಘಕಾ ಲದ ವರೆಗೂ ಕಾದಾಡಿದರು. ಆ ಮೇಲೆ ಕಪಿನಾಯಕನು ರಾಕ್ಷಸವೀರನನ್ನು ಹಿಡಿ ದೆತ್ತಿ ಕುಕ್ಕುತ್ತ ಚೆನ್ನಾಗಿ ತದುಕಿ ಕೊಂದು ಕಾಲನಪುರಿಗೋಡಿಸಿದನು. ಆ ಮೇಲೆ ಅಧರ್ಮವೆಂಬ ರಥದ ಗಾಲಿಯು ಮುರಿದು ಬಿದ್ದಂತೆ ಅವನೊಡನೆ ಬಂದಿದ್ದ ರಾಕ್ಷ ಸಚತುರ್ಬಲವು ಕಣ್ಗೆಟ್ಟು ನಿಂತಿತು. ನೀಲನ ಲೀಲೆಯನ್ನು ಬಣ್ಣಿಪರಾರು ? ಗಿರಿತರು ಗಳನ್ನು ತರುವುದರಿಂದ ಸಾವಕಾಶವಾಗುವುದೆಂದು ರಥದಿಂದ ರಥವನ್ನೂ ಆನೆಯಿಂದ ಆನೆಯನ್ನೂ ರಕ್ಕಸರಿಂದ ರಕ್ಕಸರನ್ನೂ ಬಡಿದೊರಗಿಸಿ ಆ ರಣರಂಗದಲ್ಲಿ ಸಂಹಾರರುದ್ರ ನಂತೆ ಆರ್ಭಟಿಸುತ್ತ ವಿರೋಧಿಗಳನ್ನು ಹುಡುಕಿಕೊಂಡು ತಿರುಗಿದನು.

ಅನಂತರದಲ್ಲಿ ರಾವಣನು ಮಹಾಕೋಪಸಂತಾಪಾವಿಷ್ಟನಾಗಿ ದೇವಾಂತಕ ನರಾಂತಕ ತ್ರಿಶಿರ ಅಸಿಕಾಯರೆಂಬವರೇ ಮೊದಲಾದ ತನ್ನ ಮಕ್ಕಳೊಡನೆಯೂ ಶೌರ್ಯಧುರಂಧರರಾದ ಅನೇಕ ಸೇನಾಪತಿಗಳೊಡನೆಯೂ ಬಹು ಭಯಂಕರಾಕಾರಧರ ರಾದ ಕುಂಭನಿಕುಂಭರೆಂಬ ಕುಂಭಕರ್ಣನ ಪುತ್ರರೊಡನೆಯೂ ಕೂಡಿ ರಥಾರೂಢನಾಗಿ ಹೊರಟು ಯುದ್ಧಭೂಮಿಗೆ ಬರಲು ; ಆಗ ರಾಮಲಕ್ಷ್ಮಣರು ಸುಗ್ರೀವಾಂಗದರೊ ಡನೆಯೂ ನಳನೀಲಾದ್ಯನೇಕ ವಾನರ ಸೇನಾಪತಿಗಳೊಡನೆಯೂ ಸಮಸ್ತ ಕಪಿಬಲ ದೊಡನೆಯೂ ಕೂಡಿ ಬಂದು ಯುದ್ಧಕ್ಕೆ ಆರಂಭಿಸಿ ರಾವಣನೊಡನೆ ಬಂದಿದ್ದ ಸರ್ವ ರಾಕ್ಷಸ ಬಲವನ್ನೂ ಸಂಹರಿಸಿ ರಾಮನು ರಾವಣನೆದುರಿಗೆ ಬಂದು ಅವನು ಪ್ರಯೋ ಗಿಸಿದ ಬಾಣಗಳನ್ನೆಲ್ಲಾ ಇಕ್ಕಡಿಗೆಯ್ದು ಅವನ ರಥವನ್ನು ಕಡಿದು ಕವಚ ಕಿರೀಟ ಬಿಲ್ಲು ಇವುಗಳನ್ನು ಕತ್ತರಿಸಿ ಬಲಹೀನನಾಗಿರುವ ರಾವಣನನ್ನು ನೋಡಿ—ಎಲೈ ಚೋರನೇ, ಈ ವರೆಗೂ ನೀನು ನಮ್ಮೊಡನೆ ಹೆಣಗಿ ಬಹಳವಾಗಿ ನೊಂದಿರುವಿ. ಅದು ಕಾರಣ ಈಗ ಹಿಂದಿರುಗಿ ಲಂಕೆಗೆ ಹೋಗು. ಆಯಾಸವಿಶ್ರಾಂತಿಯನ್ನು ಮಾಡಿ ಕೊಂಡು ಭೂಲೋಕದ ಆಶೆಯನ್ನೆಲ್ಲಾ ಮುಗಿಸಿಕೊಂಡು ಬರುವವನಾಗು. ಈಗ ನಿನ್ನನ್ನು ಕೊಲ್ಲುವುದಿಲ್ಲ. ಹೆದರಬೇಡ ಎಂದು ಹೇಳಲು ; ಆಗ ರಾವಣನು ಘೋರ ಕೋಪಕಂಪಿತಾಧರನಾದರೂ ಕಾರ್ಯಶೇಷವಿರುವುದೆಂದು ಹಿಂದಿರುಗಿ ಲಂಕೆಗೆ ಬಂದು ತನ್ನ ಮನಸ್ಸಿನಲ್ಲಿ—ನನ್ನ ತಮ್ಮನಾದ ಕುಂಭಕರ್ಣನನ್ನು ಎಬ್ಬಿಸಿ ಈ ಅಲ್ಪಮನುಜ ರಾದ ರಾಮಲಕ್ಷ್ಮಣರಿಬ್ಬರನ್ನೂ ತುಳಿಸಿ ಉಳಿದ ಮರ್ಕಟಸಂಕುಲವನ್ನು ಕೊಲ್ಲಿಸಿ ಭೂತ ಪ್ರೇತಾದಿಗಳಿಗೆ ಹಬ್ಬವನ್ನು ಮಾಡಿಸುವೆನೆಂದು ಯೋಚಿಸಿ ಕೂಡಲೆ ಶೂರರಾದ ರಕ್ಕಸರನ್ನು ಕರಿಸಿ ನಿದ್ರಿಸುತ್ತಿರುವ ಕುಂಭಕರ್ಣನನ್ನು ತ್ವರಿತವಾಗಿ ಎಬ್ಬಿಸತಕ್ಕದೆಂದು ಅಪ್ಪಣೆಯನ್ನಿತ್ತನು.

ಆಗ ಅನೇಕ ಸಹಸ್ರಜನ ರಾಕ್ಷಸರನ್ನು ಕೂಡಿಸಿಕೊಂಡು ಮಹಾ ಪ್ರಧಾನಿಗಳು ಕುಂಭಕರ್ಣನ ನಿದ್ರಾಲಯಕ್ಕೆ ಬಂದು ಮುರಜ ಡಿಂಡಿಮ ಪಟಹ ಕಂಸಲೆ ಕರಡೆ ಕೊಂಬು ರಣಮಾರಿ ಭೇರಿ ಕಹಳೆ ಇವು ಮೊದಲಾದ ನಾನಾ ಮಹಾವಾದ್ಯಗಳನ್ನು ಏಕಕಾಲದಲ್ಲಿ ಬಾರಿಸಲು ; ಆ ಶಬ್ದದಿಂದ ವಿಧ್ಯಂಡಮಂಡಲವು ಬೆಚ್ಚಿತು. ಕಡಲುಗಳು

ಜರಿದುವು. ದಿಗ್ಗಜಗಳ ಕಿವಿಗಳು ಕಿವುಡಾದುವು. ಇಷ್ಟಾದರೂ ಆ ಕುಂಭಕರ್ಣನಿಗೆ ಎಚ್ಚರ ತೋರದಿರಲು ; ಕೆಲವರು ಉಕ್ಕಿನ ದಡಿಗಳನ್ನು ತೆಗೆದುಕೊಂಡು ಅವುಗಳಿಂದ ಒಡಿದರು. ಕೆಲವರು ಕಬ್ಬಿಣದ ಚಮ್ಮಟಿಗೆಗಳನ್ನು ತೆಗೆದುಕೊಂಡು ಬಂದು ಹೊಯ್ದರು. ಕಲ್ಕುಟಿಗರು ಉಕ್ಕಿನ ಉಳಿಗಳನ್ನು ತೆಗೆದುಕೊಂಡು ಬಂದು ಕಬ್ಬೆಟ್ಟದಂತೆ ಬಿದ್ದಿರುವ ಆವನ ಮೈಮೇಲಿಟ್ಟು ಕಬ್ಬಿಣದ ಕೊಡತಿಗಳಿಂದ ಕುಟ್ಟಿದರು. ಕುಂಭಕರ್ಣನಿಗೆ ಆ ಪೆಟ್ಟುಗಳೆಲ್ಲಾ ಮಲಗುವವರ ಮೈತಟ್ಟಿದಂತೆ ಹಿತವಾಗಿ ಮತ್ತೂ ನಿದ್ರಾಭಾರವು ಹೆಚ್ಚಾಯಿತು. ಆ ಮೇಲೆ ಅವನ ಕೈಕಾಲುಗಳ ಉಗುರು ಕಣ್ಣುಗಳಲ್ಲಿ ಉಕ್ಕಿನ ಮೊನೆಯಾದ ಶಲಾಕೆಗಳನ್ನು ಕಾಯ್ಸಿಟ್ಟು ಕೊಡತಿಗಳಿಂದ ಜಡಿದರು. ಮತ್ತು ಗದ್ದದಲ್ಲಿ ಅಲಗುಗಳನ್ನು ಬಡಿದರು. ಸಬಳಗಳಿಂದ ಅಳ್ಳೆಗಳನ್ನು ಕುತ್ತಿದರು. ಕೋಡುಗಲ್ಲುಗಳನ್ನು ತಂದು ಬಾಯಿಯ ಇಪ್ಪಕ್ಕಗಳಲ್ಲಿರುವ ಕೋರೆದಾಡೆಗಳನ್ನು ಬಡಿದು ಮುರಿದರು. ಆಗ ಬಹು ಕಾರ್ಯಾಸಕ್ತತೆಯಿಂದ ಕುಂಭಕರ್ಣಾಸುರನ ಸರ್ವಾಂಗಗಳಲ್ಲೂ ಓಡಿಯಾಡುತ್ತಿರುವ ರಾಕ್ಷಸರು ನೀಲಾಚಲದ ಮೇಲಾಡುತ್ತಿರುವ ಮೃಗಗಳಂತೆಯೂ ಕುಂಭಕರ್ಣನಿಗೆ ಅವರು ಮಾಡುವ ನಿರ್ಬಂಧಗಳು ಆ ಗಿರಿಯನ್ನು ಮೃಗಗಳು ಉಗುರುಗಳಿಂದ ಪರಚಿದಂತೆಯೂ ಗಣ್ಯವಾಗಲಿಲ್ಲ. ಆ ದಡಿಗ ರಕ್ಕಸನ ಮೂಗಿನಿಂದ ಹೊರಡುತ್ತಿದ್ದ ನಿಟ್ಟುಸಿರುಗಳ ವೈಹಾಳಿಯಲ್ಲಿ ಸಿಕ್ಕಿ ಲಕ್ಷಾಂತರ ಜನ ರಾಕ್ಷಸರು ತರಗೆಲೆಗಳಂತೆ ಆಕಾಶಮಂಡಲಕ್ಕೆ ಹಾರಿ ಹೋಗುತ್ತಿದ್ದರು. ಅವನ ನಿದ್ರಾಲಯವನ್ನು ಪ್ರವೇಶಿಸಿದ ಆಳುಗಳಲ್ಲಿ ಕೆಲವರು ಮೇಲೆ ಹಾರಿ ಭೂಮಿಯಲ್ಲಿ ಬಿದ್ದು ಪ್ರಾಣಗಳನ್ನು ನೀಗಿದರು. ಮತ್ತೆ ಕೆಲರು ಆ ನಿಶಾಚರನ ಕೈಕಾಲುಗಳ ನಿಗುರಾಟದಲ್ಲಿ ಸಿಕ್ಕಿ ಹೊಸಗಲ್ಪಟ್ಟು ಹಾಳಾದರು. ತಿರಿಗಿ ರಕ್ಕಸರು ಸಾವಿರಾರು ಕಬ್ಬಿಣದ ಇಕ್ಕಳಗಳನ್ನು ತೆಗೆದುಕೊಂಡು ಬಂದು ಅವನ ಕಿವಿಗಳನ್ನು ಹಿಡಿದು ಕಿತ್ತರು. ಸುಣ್ಣವನ್ನೂ ಸಾಸಿವೆಯನ್ನೂ ಕೂಡಿಸಿ ಅರೆದು ಅವನ ಕಣ್ಣುಗಳಲ್ಲಿ ಹಾಕಿದರು. ಆ ಮೇಲೆ ನೂರಾರು ಪೆಟ್ಟಿಗೆಗಳ ಮೆಣಸಿನ ಕಾಯಿಗಳನ್ನು ಕುಟ್ಟಿ ಪುಡಿಮಾಡಿ ತಂದು ಅವನ ಮೂಗಿನ ರಂಧ್ರಗಳಲ್ಲಿ ಸುರಿದು ನೂಕಿದರು. ತವರಸೀಸಗಳನ್ನು ಕಾಯ್ಸಿ ಕರಗಿಸಿ ಅವನ ಮೈ ಮೇಲೆ ಚೆಲ್ಲಿದರು. ಮೂಗಿನ ಸೊಳ್ಳೆಗಳಲ್ಲಿ ಸುರಿದಿದ್ದ ಮೆಣಸಿನ ಕಾಯಿಗಳ ಪುಡಿಯು ಉಸಿರುಗಳ ತೀವ್ರಗತಿಯಿಂದ ಒಳಗೆ ಹೋಗಿ ನೆತ್ತಿಗೇರಿದುದರಿಂದ ಸೀನಲು ; ಅದು ಜಗದಂತ್ಯ ಮೇಘಧ್ವನಿಯಂತೆ ಹೊರಟು ಬಂದು ಅಲ್ಲಿ ನೆರೆದಿದ್ದವರನ್ನು ಹೊಯ್ದಪ್ಪಳಿಸಿಕೊಂದಿತು. ಆಗ ಆ ರಾಕ್ಷಸಭೂತವೇನಾದರೂ ಎದ್ದರೆ ಈ ಊರನ್ನೇ ನುಂಗದೆ ಬಿಡದು, ಎದ್ದೋಡಿಯಾಡುವ ಈ ಮಾರಿಯ ಕಣ್ಣೆದುರಿಗೆ ಸಿಕ್ಕಿದ ಜೀವಿಗೆ ಭೂಲೋಕದ ಋಣವು ತೀರುವುದು. ಈ ಮಾತು ನನ್ನ ಜೀವದಾಣೆ ಸತ್ಯವು ಎಂದು ಕೆಲರು ರಕ್ಕಸರು ಭಯಕಂಪಿತಶರೀರರಾಗಿ ಆ ಪಟ್ಟಣವನ್ನು ಬಿಟ್ಟು ತಮ್ಮತಮ್ಮ ಹೆಂಡಿರ್ಮಕ್ಕಳೊಡನೆ ಹೊರಟು ತಿರಿಗಿ ನೋಡದೆ ಪರಸ್ಥಳಗಳಿಗೆ ಓಡಿದರು. ಇನ್ನು ಕೆಲವರು ತಮ್ಮ ಉತ್ಕೃಷ್ಟಪದಾರ್ಥಗಳನ್ನು ಒಟ್ಟುಗೂಡಿಸಿ ತೆಗೆದುಕೊಂಡು ಓಡಿ ಕಾಡುಮುಟ್ಟಿದರು. ಬಲು ನಿದ್ದೆಯಿಂದ ಬಿದ್ದಿರುವ ಅವನ ಬಾಯಾಕಳಿಕೆಯಿಂದ

ಸಂಭೂತವಾದ ಸುಂಟರಗಾಳಿಯು ಉತ್ಪಾತಮೇಘಮಾರುತದಂತೆ ಹೊರಟು ರಾವಣನ ಓಲಗದ ಚಾವಡಿಯಲ್ಲಿ ನುಗ್ಗಿ ಅಲ್ಲಿದ್ದವರನ್ನು ಅಪ್ಪಳಿಸಿ ಕೆಡವಿತು. ಮತ್ತೆ ರಾಕ್ಷಸಜನರು ಬಂದು ಆ ಸುರವಿರೋಧಿಯ ಮೂಗಿನೊಳಗೆ ಕುರಿಕೋಣಗಳ ಹಿಂಡುಗಳನ್ನು ಹೊಗಿಸಿದರು. ಆ ಮೇಲೆ ಮದಿಸಿದ ಆನೆಗಳನ್ನು ಅವನ ಮೈ ಮೇಲೆ ಬಿಟ್ಟು ತುಳಿಸಿದರು. ಆಗ ಅವನ ಸರ್ವಾಂಗಗಳಲ್ಲೂ ಸಂಚರಿಸುತ್ತಿರುವ ಆನೆಗಳು ತಲೆಗೂದಲುಗಳಲ್ಲಿರುವ ಹೇನುಗಳು ದಾರಿಯನ್ನು ಕಾಣದೆ ಅಲ್ಲೇ ಸುತ್ತುವಂತೆ ಸುತ್ತುತ್ತ ಅವನ ರೋಮಕೂಪಗಳಲ್ಲಿ ಬಿದ್ದು ಕೆಡೆದುವು. ಮತ್ತು ಕೆಲವು ಗಜಗಳು ಅವನ ಸೀಸಿನಿಂದ ಸಿಡಿದು ಬಿದ್ದ ಸಿಂಬಳದಲ್ಲಿ ಸಿಕ್ಕಿ ಶ್ಲೇಷ್ಮಸಂಕ್ರಾಂತವಾದ ನೊಣಗಳಂತೆ ಮಿಡುಕುತ್ತಿದ್ದುವು. ಆಹಾ! ಈ ಮೊಬ್ಬಿಗನ ಮೈಗೊಬ್ಬನ್ನು ಏನು ಹೇಳುವುದು? ಮತ್ತೆ ಕೆಲವರು ಚುಕ್ಕಿಗುವರರು ಸಬಳಗಳನ್ನು ತಂದು ಅವನ ಬಲ್ಮಡಕೆಯಂತಿರುವ ಕಿವಿಗಳಲ್ಲಿ ಹಾಕಿ ತಿವಿದು ತಿರುಗಿಸಿದರು. ಅದರಿಂದ ಮುಳ್ಳುಹಂದಿಗಳ ಮುಳ್ಳುಗಳನ್ನು ತಂದು ಕಿವಿಗಳಲ್ಲಿರುವ ಗುಗ್ಗೆಯನ್ನು ತೆಗೆದಂತಾಗಿ ಅವನು ಸುಖನಿದ್ರೆಗೆಯ್ದನು. ಆ ಮೇಲೆ ಗಿರಿಗಳನ್ನು ತಂದು ತಂದು ಅವನ ಮೈ ಮೇಲೆ ಹೇರುತ್ತಿರಲು ; ಮೈಯನ್ನು ತಟ್ಟಿದಂತಾಗಿ ಸುಖದಿಂದ ನಿದ್ರಿಸಿದನು.

ಈ ರೀತಿಯಾಗಿ ಎಷ್ಟು ವಿಧದಿಂದ ಪ್ರಯಾಸಪಟ್ಟಾಗ್ಯೂ ಅವನೇಳದಿರಲು ; ಆಗ ದನುಜರೆಲ್ಲರೂ ನಿರಾಶರಾಗಿ ರಾವಣನ ಬಳಿಗೆ ಬಂದು—ಸ್ವಾಮಿ, ಎಷ್ಟು ವಿಧವಾದ ಘೋರಕೃತ್ಯಗಳನ್ನು ಮಾಡಿದಾಗ್ಯೂ ಅವನು ಏಳಲಿಲ್ಲ. ಅದರಿಂದ ಅನೇಕಜನ ರಾಕ್ಷಸವೀರರು ಮಡಿದರು. ಅನೇಕರು ಹೆದರಿ ಓಡಿದರು. ಇನ್ನುಮೇಲೆ ಅವನನ್ನು ಎಬ್ಬಿಸುವ ಉಪಾಯವು ಇನ್ನಾವುದಿರುವುದೋ ನಮಗೆ ತಿಳಿಯದು. ಅಪ್ಪಣೆಯಾಗಬೇಕು ಎಂದು ಅರಿಕೆಮಾಡಲು ; ರಾವಣನು—ಅವನಿಗೆ ವರವನ್ನು ಕೊಟ್ಟ ಬೊಮ್ಮನನ್ನು ಕರೆದುಕೊಂಡು ಬನ್ನಿರೋ ; ಅವನೇ ಈ ನಿದ್ರಾಜಾಡ್ಯವನ್ನು ಪರಿಹರಿಸಲಿ ಎಂದು ಅಪ್ಪಣೆಯನ್ನೀಯಲು ; ಕೂಡಲೆ ರಾಕ್ಷಸದೂತರು ಓಡಿಹೋಗಿ ಬಿದಿಯನ್ನು ಕರೆದುತಂದು ರಕ್ಕಸರೊಡೆಯನೆದುರಿನಲ್ಲಿ ನಿಲ್ಲಿಸಿದರು. ಕಮಲಜನು ಗಡಗಡನೆ ನಡುಗುತ್ತ ಕೈಗಳಿಂದ ಬಾಯಿಯನ್ನು ಮುಚ್ಚಿಕೊಂಡು—ನನ್ನನ್ನು ಕರಿಸಿದ ಕಾರ್ಯವೇನೆಂದು ಕೇಳಿದುದಕ್ಕೆ—ಬೇರೆ ಕೆಲಸವೇನು ? ಬೇಗ ಕುಂಭಕರ್ಣನನ್ನು ಎಬ್ಬಿಸು, ಹೋಗು ಎನ್ನಲು ; ಪೊಂಬೊಡೆಯನು ಕೈಗಳಿಂದ ಎದೆಯನ್ನು ಸವರಿಕೊಳ್ಳುತ್ತ ಶೀಘ್ರದಿಂದ ಕುಂಭಕರ್ಣನ ಬಳಿಗೆ ಬಂದು ಅವನ ಮುಸುಡಿನ ಮುಂಗಡೆಗೆ ಸುಳಿಯಲಮ್ಮದೆ ಮಂಡೆಯ ಹಿಂಗಡೆಯಲ್ಲಿ ಕುಳಿತುಕೊಂಡು ತನ್ನ ಕಮಂಡುಲೋದಕವನ್ನು ಮಂತ್ರಿಸಿ ಅವನ ಮೂಗಿನ ಸೊಳ್ಳೆಗಳಲ್ಲಿ ಸುರಿಯಲು ; ಆ ಕುಂಭಕರ್ಣನು ಎಚ್ಚರವನ್ನು ಹೊಂದಿ ಬೆದರುತ್ತ ಎದ್ದು—ಯಾರವರು ನನ್ನ ನಿದ್ದೆಯನ್ನು ಕೆಡಿಸಿದ ಪಾಪಿಗಳು ? ಎನ್ನಲು; ಆ ಮಾತನ್ನು ಕೇಳಿ ಸಮೀಪದಲ್ಲಿದ್ದ ಜನವೆಲ್ಲಾ ಸದ್ದುಮಾಡದೆ ಹಾರಿ ನೆಗೆದು ತೋರಿದ ಕಡೆಗೆ ಓಡಿಹೋಯಿತು. ಆ ಮೇಲೆ ಕುಂಭಕರ್ಣನು ಸಂಪೂರ್ಣವಾಗಿ ನಿದ್ದೆಯ ಮರವೆಯನ್ನು ಬಿಟ್ಟು ಪಟ್ಟಾಗಿ ಕುಳಿತು—ಈಗ ನನ್ನ ಹಸಿವಿಗಾಗಿ ಬ್ರಹ್ಮಾಂಡ ಮಂಡಲವನ್ನೇ ನುಂಗುವೆನೋ ? ಬಾಯಾರಿಕೆಗೆ ಏಳು ಕಡಲುಗಳನ್ನು

ಕುಡಿಯುವೆನೋ ? ಹಾ ! ಏನು ಮಾಡಲಿ ? ಎನ್ನುತ್ತ, ಮುಂಗಡೆಗೆ ನೋಡಲು ; ಅಷ್ಟರಲ್ಲಿ ರಾವಣನಪ್ಪಣೆಯಿಂದ ಸಿದ್ಧಮಾಡಿಟ್ಟಿದ್ದ ಅಂಬರವನ್ನು ತಿವಿಯುತ್ತಿರುವ ಮಾಂಸಗಳ ಒಟ್ಟಲುಗಳನ್ನೂ ಕುಲಗಿರಿಗಳನ್ನು ಹೋಲುತ್ತಿರುವ ರಕ್ತೋದನಗಳ ರಾಶಿಗಳನ್ನೂ ಅವುಗಳ ಬಳಿಯಲ್ಲಿ ಕಿರುಗುಡ್ಡಗಳಂತೆ ಬಿದ್ದಿರುವ ಕಜ್ಜಾಯಗಳ ಬಣಬೆಗಳನ್ನೂ ತರಿದು ಕೆಡಹಿದ ಕುರಿಕೋಣಗಳ ಗುಂಪುಗಳೆಂಬ ಬೆಟ್ಟಗಳನ್ನೂ ಗರಿಗಳನ್ನು ಹರಿದು ತಂದು ಹಾಕಿದ ಹಕ್ಕಿಗಳ ರಾಶಿಗಳನ್ನೂ ಇರಿದು ಕೆಡಹಿದ ನಾನಾ ಮೃಗಗಳ ಗುಡ್ಡೆಗಳನ್ನೂ ಹುರಿದು ಒಗ್ಗರಣೆಸಿದ ಮೀನುಗಳ ಕುಪ್ಪೆಗಳನ್ನೂ ವಿವಿಧವಾದ ಗುಂಬಗಳಲ್ಲಿ ತುಂಬಲ್ಪಟ್ಟಿರುವ ಹಾಲ್ಮೊಸರ್ತುಪ್ಪ ಜೇನುತುಪ್ಪಗಳನ್ನೂ ಓಲೆ ತೆಂಗು ಮೊದಲಾದ ಫಲಾವಳಿಗಳನ್ನೂ ನೋಡಿ ಅವುಗಳನ್ನೆಲ್ಲಾ ಬಾಚಿ ಬಾಯ್ಗೂಡಿಸಿ ತಿಂದು ಕುಡಿದು ಕ್ಷಣಕಾಲದಲ್ಲಿ ಮುಗಿಸಿಬಿಟ್ಟನು. ಅದರಿಂದ ಅವನಿಗೆ ಅರ್ಧಗ್ರಾಸವಾಯಿತು. ತಿರಿಗಿ ಅವನು ತನಗೆ ಹೊಟ್ಟೆ ತುಂಬಲಿಲ್ಲವೆಂದು ಕೂಗಿಕೊಳ್ಳುತ್ತಿರಲು; ರಾವಣನ ಮಂತ್ರಿಗಳು ಆ ವರೆಗೂ ಯುದ್ಧರಂಗದಲ್ಲಿ ಸುತ್ತುಬಿದ್ದಿದ್ದ ಹೆಣಗಳನ್ನು ತರಿಸಿ ಅವನ ಮುಂದೊಟ್ಟಿಸಲು ; ಸುಲಿದ ಬಾಳೆಹಣ್ಣುಗಳನ್ನು ನುಂಗುವಂತೆ ಅವುಗಳನ್ನೆಲ್ಲಾ ನುಂಗಿ ಹಸಿವು ಅಡಗಲಿಲ್ಲವೆಂದು ಬೊಬ್ಬಿಡುತ್ತ ಹೊರಟು ಊರಿನ ಜನರನ್ನೆಲ್ಲಾ ತಿನ್ನುತ್ತ ಬರುತ್ತಿರಲು ; ಆಗ ಪಟ್ಟಣದಲ್ಲೆಲ್ಲಾ ಹಾಹಾಕಾರವುಂಟಾಯಿತು. ರಾವಣನದರ ಸಂಗತಿಯನ್ನು ಕೇಳಿ ಶೀಘ್ರವಾಗಿ ಶುಕ್ರಾಚಾರ್ಯನನ್ನು ಕರಿಸಿ— ಕುಂಭಕರ್ಣನ ಹಸಿವಡಗುವಂತೆ ಮಾಡು ನಡೆ ಅಂದನು ಆತನು ಆ ಕ್ಷಣದಲ್ಲಿಯೇ ಬಂದು ಕುಂಭಕರ್ಣನಿಗೆ ಮಂತ್ರಸಿದ್ಧವಾದ ಗುಳಿಗೆಯನ್ನು ಕೊಡಲು ; ಅವನದನ್ನು ತಿಂದು ಹಸಿವಡಗಿ ತೃಪ್ತನಾಗಿ ಧರ್ರನೆ ತೇಗಿದನು. ಅನಂತರದಲ್ಲಿ ಮಂತ್ರಿಗಳು ಸೇವಕರಿಂದ ಶ್ರೀಗಂಧತೈಲದ ಕೊಪ್ಪರಿಕೆಗಳನ್ನು ತರಿಸಿ ಅವನ ಮೈಗೆಲ್ಲಾ ಲೇಪನಗೊಳಿಸಿ ಅಡಕೆಗಳನ್ನು ತಂದು ಅವನ ಮುಂದೆ ರಾಶಿ ರಾಶಿಯಾಗಿ ಸುರದು, ಬಿಳಿಯ ವೀಳಯದೆಲೆಗಳ ಪಿಂಡಿಗಳ ಮಧ್ಯದಲ್ಲಿ ಸುಣ್ಣದ ಮುದ್ದೆಗಳನ್ನಿಟ್ಟು ತಂದವನ ಮುಂದಿರಿಸಿದರು. ಅವನು ಅವುಗಳನ್ನೆಲ್ಲಾ ತೆಗೆದು ಬಾಯಿಯಲ್ಲಿ ಹಾಕಿಕೊಂಡು ಅಗಿದು ನುಂಗಿ ಸ್ವಸ್ಥತೆಯಿಂದ ಕುಳಿತನು.

ಆ ಮೇಲೆ ಕುಂಭಕರ್ಣನು ನಡೆದು ಬರುವ ಅಂಜನಾದ್ರಿಯಂತೆ ಅಣ್ಣನಾದ ರಾವಣನ ಓಲಗದ ಚಾವಡಿಗೆ ಬಂದು ಆತನಿಂದ ಸನ್ಮಾನಿತನಾಗಿ ಸಿಂಹಾಸನಾರ್ಧದಲ್ಲಿ ಕುಳಿತುಕೊಂಡು ರಾವಣನನ್ನು ನೋಡಿ—ಎಲೈ ಅಗ್ರಜನೇ, ಇದೇಕೆ ನಿನ್ನ ಮೊಗವು ಕಳೆಗುಂದಿರುವುದು ? ಈ ದುರ್ಮಾನವು ಯಾರಿಂದುಂಟಾಯಿತು ? ನಿನ್ನ ಓಲಗದ ಚಾವಡಿಯು ಬಯಲಾಗಿರುವುದಕ್ಕೆ ನಿಮಿತ್ತವೇನು ? ವಿಭೀಷಣ ಮಹೋದರ ಪ್ರಹಸ್ತಾತಿಕಾಯ ದೇವಾಂತಕ ನರಾಂತಕಾದಿ ವೀರರೆಲ್ಲಾ ಎಲ್ಲಿ ಹೋದರು ? ರುದ್ರನು ನಿನ್ನ ನೆನಹಿಗೆ ಒದಗನೋ ? ಕಮಲಯೋನಿಯು ನಿನ್ನ ಅರಮನೆಯ ಬಾಗಿಲಲ್ಲಿರನೋ ? ವಾಯುವು ಪ್ರತಿನಿತ್ಯದಲ್ಲೂ ಬಂದು ನಿನ್ನ ಓಲಗದ ಚಾವಡಿಯ ಕಸಗಳನ್ನು ಗುಡಿಸನೋ ? ಅಗ್ನಿಯು ವಿಧೇಯತೆಯಿಂದ ಬಂದು ನಿನ್ನ ಪಾಕಶಾಲೆಯಲ್ಲಿ

ದ್ದುಕೊಂಡು ಅಡಿಗೆಯ ಕೆಲಸವನ್ನು ಮಾಡನೋ? ಬೋಳೆಯರೋಜನು ಬಂದು ನಿನಗೆ ತಿಥಿವಾರಗಳನ್ನು ಹೇಳನೋ? ಮುನ್ನೀರೆರೆಯನು ನಿನಗೆ ನೀರುಗಳನ್ನು ಒದಗಿಸನೋ? ಸಗ್ಗಿಗರೆರೆಯನು ನಿನ್ನ ಪಾದಸನ್ನಿಧಿಯಲ್ಲಿ ಎಚ್ಚರಿಕೆಯಿಂದಿರನೋ? ಜವನು ನೀನಟ್ಟಿದೆಡೆಗೆ ಓಡನೋ? ಪೊನ್ನೊಡೆಯನು ನಿನ್ನ ಬೊಕ್ಕಸದಲ್ಲಿ ಧನವು ಮುಗಿದರೆ ತತ್‌ಕ್ಷಣದಲ್ಲೇ ತಂದು ಸುರಿಯನೋ? ನಿರುತಿಯು ನಿನ್ನ ಪಾದವನ್ನು ಒರಸಿಕೊಳ್ಳುವ ಪಾವುಡವನ್ನು ಹಿಡಿದು ನಿಂತಿರನೋ? ರಂಭಾದ್ಯಪ್ಸರಸ್ತ್ರೀಯರು ನಿನಗೆ ಒಲಿಯರೋ? ಕೀಳು ಮೇಲಿನ ಲೋಕಗಳವರು ನಿನ್ನ ಆಳುಗೆಲಸದಲ್ಲಿ ಸಿದ್ಧರಾಗಿ ನಿಂತಿರರೋ? ವಿಮಾನವು ನೀನು ಹೇಳಿದಲ್ಲಿಗೆ ತೆರಳದೋ? ನಿನ್ನ ಮುಖಕಮಲಗಳಲ್ಲಿ ಇಷ್ಟು ಉತ್ಸಾಹಶೂನ್ಯತೆಗೆ ಕಾರಣವೇನೆಂದು ಕೇಳಿದನು.

ಆಗ ರಾವಣನು ತಂಗಿಯಾದ ಶೂರ್ಪನಖಿಯ ಕಿವಿಮೂಗುಗಳ ಛೇದನದಾರಭ್ಯ ಯುದ್ಧದಲ್ಲಿ ರಾಮನಿಂದ ತನಗಾದ ಅಭಿಮಾನಹಾನಿಯ ವರೆಗೂ ನಡೆದ ಸಂಗತಿಗಳನ್ನೆಲ್ಲಾ ಹೇಳಲು; ಕುಂಭಕರ್ಣನು ರಾವಣನನ್ನು ಕುರಿತು—ಎಲೈ, ಅಣ್ಣನೇ, ಕೇಳು; ಪರರ ಹೆಂಡಿರ ಆಶೆಯಿಂದ ಇಂದ್ರಾದಿ ದೇವತೆಗಳೂ ಕೋಳುಹೋದರು. ಲೋಕದಲ್ಲಿ ಕಾಮನು ಯಾರಿಗಾದರೂ ಹಿತನೆಂದು ತಿಳಿಯಬೇಡ. ಪ್ರಪಂಚದಲ್ಲಿ ಜಾಣನಾದವನು ತಾನೇ ತನ್ನ ಬುದ್ಧಿಯಿಂದ ಯುಕ್ತಾಯುಕ್ತಗಳನ್ನು ಯೋಚಿಸಿ ತಿಳಿದು ಸನ್ಮಾರ್ಗದಲ್ಲಿ ನಡೆಯಬೇಕು. ಒಂದು ವೇಳೆಯಲ್ಲಿ ತನಗೆ ಸದಸದ್ವಿವೇಚನಾಶಕ್ತಿಯು ತೋಚದಿದ್ದರೆ ಆಪ್ತರಾದ ಬಂಧು ಮಿತ್ರರು ಮುರಿದು ಹೇಳಿದ ದಾರಿಯಲ್ಲಿ ಅಡಿಗಳನ್ನಿಡಬೇಕು. ಹಾಗೆ ನಡೆಯದಿದ್ದರೆ ನಿಜವಾಗಿ ತನ್ನ ಪ್ರಾಣಗಳಿಗೆ ಅಳಿವು ಸಂಭವಿಸುವುದು. ಸದ್ಧರ್ಮವು ಆಚಾರವನ್ನು ಅನುಸರಿಸುವುದು. ಕೀರ್ತಿಯು ಧರ್ಮವನ್ನು ಹಿಂಬಾಲಿಸಿರುವುದು. ಸಿರಿಯು ಕೀರ್ತಿಯನ್ನು ಬೆಂಬಿಡದಿರುವುದು. ಲೋಕಗಳನ್ನು ಕಂಪನಗೊಳಿಸುವ ನಮ್ಮ ತಪಸ್ಸೂ ಇಂದ್ರಾದಿಗಳನ್ನು ಬಡಿಯುವ ನಮ್ಮ ಭುಜಬಲವೂ ಶಿವನನ್ನು ಮೆಚ್ಚಿಸುವ ನಮ್ಮ ಧೈರ್ಯವೂ ಕುಡಿಯೊಡೆದು ಹಬ್ಬುತ್ತಿರುವ ನಮ್ಮ ಕೀರ್ತಿಲತಾ ಸಮೂಹವೂ ಇವುಗಳೆಲ್ಲವೂ ಲೋಗರನ ಮಡದಿಗೆ ಬಗೆಯಳುಕಿದುದರಿಂದ ಬಯಲಾಗುವ ಸ್ಥಿತಿಗೆ ಬಂದುವು. ಸುರರು ನಮ್ಮನ್ನು ಶಪಿಸುವರು. ತನ್ನ ಗಿರಿಯನ್ನು ಕಿತ್ತಂದಿನಿಂದ ಐಮೊಗನ ಕೃಪೆಯು ನಮ್ಮಲ್ಲಿ ಸಾಮಾನ್ಯವಾಗಿರುವುದು. ದಿಗೀಶರು ಭೀತಿಯಿಂದ ಕಾರ್ಯಸಾಧನೆಗಾಗಿ ನಮಗೆ ಕರಗಳನ್ನು ಮುಗಿಯುತ್ತಿರುವರು. ನಿನ್ನ ಅಂತಃಪುರದಲ್ಲಿ ಹದಿನಾಲ್ಕು ಲಕ್ಷ ಜನ ಸತಿಯರಿದ್ದರೂ ನಮ್ಮ ಕುಲಕ್ಕೆ ಮೃತ್ಯುಪ್ರಾಯಳಾದ ಈ ಹೆಣ್ಣಿನ ಮೇಲಣ ಆಶೆಯು ನಿನಗೇಕುಂಟಾಯಿತು? ಈ ಸೀತೆಯು ಸಾಕ್ಷಾಲ್ಲಕ್ಷ್ಮಿಯು. ರಾಮನು ಸರೋಜಭವನ ತಾತನಾದ ವಿಷ್ಣುವು. ಈತನು ನಮ್ಮ ಪಿತಾಮಹನಿಗೆ ಪಿತಾಮಹನಾದುದರಿಂದ ಈತನಲ್ಲಿ ನಿನಗೆ ಕಲಹಾಪೇಕ್ಷೆಯು ಬೇಡ. ಈತನು ವರುಣಯಮೇಂದ್ರಾದಿಗಳ ಹಾಗಲ್ಲ. ಬಲುಬಲ್ಲಿದನು. ಈ ವರೆಗೂ ರಣದಲ್ಲಿ ಮಡಿದುಹೋದವರು ಹೋಗಲಿ. ಉಳಿದಿರುವವರನ್ನಾದರೂ ಬದುಕಿಸಬೇಕೆಂಬ ಅಪೇಕ್ಷೆಯು ನಿನ್ನಲ್ಲಿದ್ದರೆ ಈ ಸೀತೆಯನ್ನು ಕರೆದು

ಕೊಂಡು ಹೋಗಿ ರಾಮನಿಗೊಪ್ಪಿಸಿಬಿಡು ಎಂದು ಹೇಳಿದನು. ಅದನ್ನು ಕೇಳಿ ರಾವಣನು ಕೋಪಸಂತಾಪಯುಕ್ತನಾಗಿ—ಹಗಲಿರುಳುಗಳಲ್ಲೂ ಹಗೆಯನ್ನು ಹೊಗಳಿಕೊಂಡು ಅವನ ಬಾಯ್ದಂಬುಲಕ್ಕೆ ಕೈಯಾತುಕೊಂಡಿರುವುದಕ್ಕೆ ಅಧಮನಾದ ಒಬ್ಬ ತಮ್ಮನು ಸಾಲದೆ ಮಿಕ್ಕ ರಾಗಿಯನ್ನು ಬೀಸುವುದಕ್ಕೆ ನೀನೊಬ್ಬ ತಮ್ಮನು ಬಂದಿಯಾ? ಬಲು ಚೆನ್ನಾಯಿತು! ನೀನು ತಿರುಕನಂತೆ ವೈರಿಯ ಬಿರುದಾವಳಿಯನ್ನು ಹೊಗಳಿಕೊಂಡು ಅವನ ಪಾಳಯವನ್ನು ಕುರಿತು ಹೋಗುವವನೋ? ಕತ್ತಿಯ ಮೊನೆಯಲ್ಲಿ ಹೋಗತಕ್ಕವನೋ? ಎದುರಾಳಿನೊಡನೆ ಕಾಳೆಗಕ್ಕಂಜಿ ನುಸುಳುಗಂಡಿಯಲ್ಲಿ ತೂರುವವನೋ? ನಿನ್ನ ಒಗೆಯಾವುದು? ಅದನ್ನು ಬೇಗ ತಿಳಿಸು ಅಂದನು.

ಅದಕ್ಕೆ ಕುಂಭಕರ್ಣನು—ಎಲೈ ಅಣ್ಣಾ, ನಾನು ಎಂದಿಗೂ ಕಾದಲಂಜುವವನಲ್ಲ. ನಾನು ಕಾಳೆಗಕ್ಕೆ ಹಿಂದೆಗೆದರೆ ಕೀರ್ತಿಲತೆಯು ಬಾಡೀತು. ಮುಕ್ತಿಯ ದಾರಿಯು ಮಾಸೀತು. ನೀನು ಸೀತೆಯನ್ನು ತಂದಾಗಲೇ ನಮ್ಮ ಆಯುಷ್ಯದ ಅವಧಿಯು ತೀರಿತು. ಹಗೆಯೊಡನೆ ಕಾದಿ ಗೆಲ್ಲುವುದು ಅಸಾಧ್ಯವು. ಈ ವಿಷಯವನ್ನು ನೀನೇ ನಿನ್ನಲ್ಲಿ ಯೋಚಿಸಿ ನೋಡು ಎನ್ನಲು; ರಾವಣನು—ಎಲವೋ! ನೀನು ಈ ಸಂಗ್ರಾಮವನ್ನು ಜಯಿಸುವಿ ಎಂದು ತಿಳಿದು ಎಬ್ಬಿಸಿದರೆ ಹೆದರಿ ಕಲಹಕ್ಕೆ ಹೋಗದೆ ನನ್ನೆದುರಿನಲ್ಲಿ ಶುಷ್ಕನೀತಿಗಳನ್ನು ಓದುತ್ತ ಕಾಲಹರಣವನ್ನು ಮಾಡುತ್ತಿರುವಿ. ಹೇಡಿಯೂ ನಿದ್ರಾಜಾಡ್ಯನಿಗೃಹೀತನೂ ಆದ ನಿನ್ನನ್ನು ತಿಳಿಯದೆ ಮಹಾವೀರನೆಂದು ಭಾವಿಸಿ ಎದುರಿನಲ್ಲಿ ನಿಲ್ಲಿಸಿಕೊಂಡು ನುಡಿದುದೇ ತಪ್ಪು! ಮೊದಲಂತೆಯೇ ನಿದ್ದೆಯಲ್ಲಿ ಬಿದ್ದು ಸಾಯಿ! ಹೋಗು! ಎಂದು ಕೋಪದಿಂದ ನುಡಿದನು.

ಆಗ ಕುಂಭಕರ್ಣನು—ಎಲಾ ಅಣ್ಣಾ, ವೀಳಯವನ್ನು ತಾ! ನನ್ನ ಕಾಳೆಗದ ಹೊಸದಾದ ಪರಿಯನ್ನು ನೋಡು! ನನ್ನೆದುರಿನಲ್ಲಿ ಶೂಲಿಯು ಅಡ್ಡಗಿಸಿ ಬಂದರೂ ಬಿಡದೆ ಕೊಲ್ಲುವೆನು. ಮಿಕ್ಕ ಜಾಳುಗಳ ಬಡಗೊಬ್ಬಿನ ಬಿಂಕವನ್ನು ಹೇಳದಿರು. ಲೋಕದಲ್ಲಿ ಮದನನಿಗೆ ಮನಸ್ಸನ್ನು ಮಾರಿದವರು ಬಯಲಾಗುವರು ಎಂದು ನಾನು ಹೇಳಿದರೆ ನಿನಗೆ ಇಷ್ಟು ಕೋಪವುಂಟಾಗಬಹುದೇ? ಎಂದನು.

ಆಗ ರಾವಣನು—ಎಲೇ ತಮ್ಮಾ, ನಾವಂತು ಕುಡುವಿಲ್ಲನ ಸರಳುರಿಗೆ ಸಿಕ್ಕಿ ಮೂರ್ಖರಾದವರು. ಆಗಲಿ. ಲೋಕವಿಖ್ಯಾತರಾದ ಶೂರರು ಮೂಢರಂತೆ ಮರಣಕ್ಕಂಜಿ ಹಿಂದೆಗೆದರೆ ಜಗತ್ತಿನಲ್ಲಿರುವ ಸಮಸ್ತ ಜನರೂ ಕೈಹೊಯ್ದು ನಗದಿರುವರೇ? ನಿಜಭುಜಾರ್ಜಿತನಾದ ನಿನ್ನ ಯಶಶ್ಚಂದ್ರನು ಪ್ರಸಿದ್ಧಚಂದ್ರನನ್ನೂ ಕೂಡ ತಿರಸ್ಕರಿಸುತ್ತಿರುವನಲ್ಲಾ! ನಿನ್ನ ಅತುಲಪ್ರತಾಪಾದಿತ್ಯನು ಈ ಸೂರ್ಯನನ್ನು ಅಲ್ಲಗಳೆಯುತ್ತಿರುವನಲ್ಲಾ! ಅಣುಪ್ರಾಯರಾದ ಅಲ್ಪಮನುಜರ ಕೊಬ್ಬನ್ನು ಗಣಿಸದೆ ನಿರ್ನಾಮ ಮಾಡಬಲ್ಲವನಾದ ನೀನು ವಿರೋಧಿಗೆದುರಾಗಿ ನಿಂತರೆ ಪ್ರತಿಭಟಿಸಿ ನಿಲ್ಲುವವರು ಲೋಕತ್ರಯದಲ್ಲುಂಟೇ? ಇಲ್ಲವು. ಅದುಕಾರಣ ಇಂಥಾ ನೀನು ಪ್ರಾಣಗಳ ಮೇಲಣ ಆಶೆಯನ್ನು ಬಿಟ್ಟು ವಿರೋಧಿವಕ್ಷಃಕಂಪನದಾಯಕವಾದ ಜಗಳವನ್ನು ಅಂಗೀ

ಕರಿಸು. ಯುದ್ಧದಿಂದ ಇಹಪರಗಳಲ್ಲಿ ಕೀರ್ತಿಮುಕ್ತಿಗಳುಂಟಾಗುವುವೆಂದು ನಿಶ್ಚಯಿಸು. ನನ್ನ ದೃಢನಿಶ್ಚಯವನ್ನು ಕೇಳು. ಇಹಪರ ಸುಖಸಂಪಾದನೆಗೆ ಹಿಂದಿರುಗದೆ ಮಾಡುವ ಜಗಳವೇ ಸಾಧನವು ಎಂದು ನಾನು ನಿರ್ಧರಿಸಿರುವೆನು. ನೀನೂ ಅದೇ ರೀತಿಯಲ್ಲಿ ನಿಶ್ಚಯಿಸಿಕೊಂಡು ವಿರೋಧಿಗಳ ಪಡೆಯನ್ನು ಹೊಡೆದು ಕೆಡಹೆಂದು ವೀರೋಚಿತ ತಾಂಬೂಲವನ್ನು ಕೊಟ್ಟು ಅಪ್ಪಣೆಯನ್ನಿತ್ತನು. ಆಗ ಕುಂಭಕರ್ಣಾಸುರನು ತಾಂಬೂಲವನ್ನು ತೆಗೆದುಕೊಂಡು ಎದ್ದು ನಮಸ್ಕರಿಸಿ ರಾವಣನನ್ನು ಕುರಿತು—ಎಲೇ ಅಣ್ಣಾ, ನನ್ನ ಮಾತನ್ನು ಕೇಳು. ಒಪ್ಪುತ್ತಿರುವ ಕಪಿಬಲಾಂಬುಧಿಯನ್ನು ಕುಡಿದು ಬರಿದುಮಾಡಿ ಆ ಕೋಡಗಗಳರಸನನ್ನು ಹಿಡಿದು ತಂದು ನಿನಗೊಪ್ಪಿಸುವೆನು. ಮೂರು ಲೋಕಗಳೂ ಮೆಚ್ಚಿ ಹೊಗಳುವಂತೆ ರಾಮನೊಡನೆ ಯುದ್ಧಮಾಡುವೆನು. ಮುಂದಾಗುವ ಜಯಾಪಜಯಗಳು ದೈವಾಧೀನವಾದುವುಗಳು. ಮತ್ತು ಅವು ನಿನ್ನ ಭಾಗ್ಯಾನುಸಾರವಾದುವುಗಳು ಎಂದು ಹೇಳಿ ಲೋಕವನ್ನೆಲ್ಲಾ ತೀರಿಸುವುದಕ್ಕಾಗಿ ಹೊರಟ ಅಂಜನಾಚಲದಂತಿಗುವ ತಮ್ಮನನ್ನು ನೋಡಿ ರಾವಣನು ಸಂತೋಷಸಂಭ್ರಮಯುಕ್ತನಾಗಿ ರತ್ನಖಚಿತವಾದ ವಿವಿಧಾಭರಣಗಳನ್ನು ತರಿಸಿ ತಾನೇ ತೊಡಿಸಿದನು. ಆ ಮೇಲೆ ಅಂಜನಗಿರಿಯು ಮಂದರಗಿರಿಯನ್ನು ಧರಿಸಿತೋ ಎಂಬಂತೆ ಕುಂಭಕರ್ಣನ ತಲೆಯಲ್ಲಿ ರತ್ನಕಿರೀಟವು ಝಗಝಗಿಸಿತು. ಕಾರ್ಮುಗಿಲೆಡೆಯಲ್ಲಿ ಇಂದ್ರಧನುಸ್ಸು ಮೂಡಿದಂತೆ ಖಳನ ಗಳದಲ್ಲಿ ಪಂಚರತ್ನಗಳ ಪದಕವು ಥಳಥಳಿಸಿತು. ಮೇರುಮಹೀಧರದ ಹಿಂದುಮುಂದೆಸೆಗಳಲ್ಲಿ ಪರಿಶೋಭಿಸುವ ನೈದಿಲ್ದಾವರೆಗಳ ಗೆಳೆಯರಂತೆ ಸುರವಿರೋಧಿಯ ಕಿವಿಗಳಲ್ಲಿ ಮಾಣಿಕ್ಯವಜ್ರಗಳ ಕಡುಕುಗಳು ಒಪ್ಪಿದುವು. ಸಮುದ್ರಮಥನಕಾಲದಲ್ಲಿ ಮಂದರಗಿರಿಗೆ ಸುತ್ತಿದ ವಾಸುಕಿಯನ್ನು ಪಳಿಯುತ್ತಿರುವ ಕಾಲ್ಗಡಗಗಳು ರಕ್ಕಸನ ಕಾಲುಗಳಲ್ಲಿ ಮೆರೆದುವು. ಬಾನ್ದಳದಲ್ಲಿ ಹೊಳೆಯುವ ಸಂಜೆಗೆಂಪಿನಂತೆ ಮೊಬ್ಬಿಗ ನುಡಿಯಲ್ಲಿ ಚಂದ್ರಗಾವಿಯ ವಸ್ತ್ರವು ಶೋಭಿಸಿತು.

ಆ ಬಳಿಕ ರಾವಣಾನುಜನು ಸಕಲ ವಾದ್ಯಗಳ ರಭಸದೊಡನೆ ಕೂಡಿ ರಾಜಾಲಯವನ್ನು ಬಿಟ್ಟು ಹೊರಡಲು ; ತತ್‌ಕ್ಷಣದಲ್ಲೇ ಅವನ ಮಹಾರಥವು ಬಂದು ಸಿದ್ಧವಾಗಿ ನಿಂತಿತು. ಅದಕ್ಕೆ ಕಬ್ಬಿಣದ ಹೊರಜೆಗಳೂ ಉಕ್ಕಿನ ಅಚ್ಚುಗಳೂ ಲೋಹದ ಗಾಲಿಗಳೂ ಅದ್ಭುತವಾದ ಧ್ವಜಪತಾಕೆಗಳೂ ಒಪ್ಪುತ್ತಿದ್ದುವು. ಅದರ ಸಂಗತಿಯನ್ನೆಲ್ಲಾ ವಿವರಿಸಿಹೇಳುವುದಕ್ಕೆ ಚತುರ್ಮುಖನೇ ಸಮರ್ಥನು. ಆ ರಥವನ್ನು ಎಳೆಯುವುದಕ್ಕಾಗಿ ಹದಿನೆಂಟುಸಾವಿರ ಮಹಾ ಗಜಗಳು ಕಟ್ಟಲ್ಪಟ್ಟಿದ್ದುವು. ಇಷ್ಟು ಹವಣಿಂದ ಬಂದು ನಿಂತಿರುವ ರಥವನ್ನು ನೋಡಿ ಕುಂಭಕರ್ಣನು ಸಂತೋಷಿಸಿ ಈ ರಥವನ್ನೇರಿದರೆ ಭೂಮಿಯು ನಡುಗಿ ನಗರದಲ್ಲಿ ವಿವಿಧವಾದ ಅಪಾಯಗಳುಂಟಾದಾವೆಂದು ತಾನು ರಥದೊಡನೆ ಕಾಲಿಂದ ನಡೆದು ಬರುತ್ತ ಪಟ್ಟಣದ ಏಳುಸುತ್ತಿನ ಕೋಟೆಯನ್ನು ದಾಟಿಬಂದು ಆ ರಥವನ್ನೇರಲು ; ಅದರ ತೊಂಭತ್ತಾರು ಗಾಲಿಗಳೂ ಚೀತ್ಕರಿಸುತ್ತಿದ್ದುವು. ಆಗ ಆ ಖಳನೊಡನೆ ಎರಡು ಕೋಟಿ ಬ್ರಹ್ಮರಾಕ್ಷಸರ ಬಳಗವೂ ಹತ್ತು ಕೋಟಿ ಶಾಕಿನೀಡಾಕಿನಿಯರ ತಿಂತಿಣಿಯೂ ಅಸಂಖ್ಯಾತ ರಾಕ್ಷಸರ ಸಾಲೂ ಆನೆಗಳ

ಹೊರಳಿಯೂ ತೇರುಗಳ ತೆರಳ್ಕೆಯೂ ಕುದುರೆಗಳ ಜಂಗುಳಿಯೂ ಕಾಲಾಳುಗಳ ಸಂದಣಿಯೂ ನೆಲವದುರುವಂತೆ ನುಗ್ಗಿಬಂದಿತು. ಆಗ ಆ ರಥದ ಉಭಯಪಾರ್ಶ್ವಗಳಲ್ಲೂ ವಂದಿಮಾಗದರು—ಧೀರುರೇ ! ಜೀಯಾ, ಸಾಯುವಾಧಾರೂ! ರಕ್ಕಸರರಸಾ! ಹಳು! ಹಳು ! ನೀತಿವನಕುಠಾರಾ! ಯಜ್ಞಾರಣ್ಯಾದವಾನಲಾ ! ಬಾಳು ! ಬಾಳು ! ಎಂದು ಹೊಗಳುತ್ತ ಬರುತ್ತಿದ್ದರು. ಅವರ ಮಸೆದ ಕೈಗತ್ತಿಯ ಡಾಳವು ಸೂರ್ಯನ ಬೆಳಕನ್ನು ಬೆದರಿಸಿತು. ಅವನ ಕೋರೆದಾಡೆಗಳ ಹೊಳಪು ಕಲ್ಪಾಂತಭೈರವನ ಅಟ್ಟಹಾಸದ ಸಿರಿಯನ್ನು ಅಣಕಿಸಿತು. ಅವನ ಮೈಗಪ್ಪು ಮಸಗಿ ಹಗಲು ಇರುಳಾಯಿತು.

ಆ ಕುಂಭಕರ್ಣನನ್ನು ನೋಡಿ ಸುಗ್ರೀವನು ಅಂಜಿದನು. ಹನುಮನ್ನೀಲರು ಮುಂದುಗೆಟ್ಟರು. ಜಾಂಬವತ್ಸುಷೇಣಗವಾಕ್ಷಾದಿ ಮಹಾ ಬಲಿಷ್ಠರ ಮೊಗದಾವರೆಗಳು ಕಂದಿದುವು. ಮಿಕ್ಕ ಕಪಿವೀರರ ದುರವಸ್ಥೆಯನ್ನು ಹೇಳತಕ್ಕುದೇನು ? ದೆಸೆದೆಸೆಗೆ ಮುರಿದೋಡುತ್ತಿರುವ ಕಪಿಗಳಲ್ಲಿ ಹಿಂದಕ್ಕಿಣಿಕಿನೋಡಿ ಓಡುವ ಕಪಿಯೇ ಧೈರ್ಯವುಳ್ಳುದು ಎಂದು ಹೇಳಿಸಿಕೊಂಡಿತು. ಆಗ ಧೀರೋದಾತ್ತನಾಯಕನಾದ ರಾಘವನು ರಕ್ಕಸನನ್ನು ನೋಡಿದುದರಿಂದಲೇ ನೆಗೆದೋಡುತ್ತಿರುವ ಕಪಿಗಳ ಮೊಗ್ಗರವನ್ನು ನೋಡಿ ನಗುತ್ತ ಸಮೀಪಸ್ಥನಾದ ವಿಭೀಷಣನನ್ನು ಕುರಿತು—ಇವನು ಯಾರು ? ಎಂದು ಬೆಸಗೊಳ್ಳಲು; ಅವನು—ಜೀಯಾ, ಲಾಲಿಸು. ಇವನು ದಶಕಂಠನ ತಮ್ಮನು. ನನ್ನ ಅಣ್ಣನು. ಪುಲಸ್ತ್ಯನ ಮೊಮ್ಮಗನು. ವಿಶ್ರವಸ್ಸಿನ ಮಗನು. ಇವನಿಗೆ ಕುಂಭಕರ್ಣನೆಂದು ಹೆಸರು. ಪೂರ್ವದಲ್ಲಿ ಇವನು ಮಾಡಿದ ಅದ್ಭುತ ಕೃತ್ಯಗಳನ್ನು ಕೇಳಿದರೆ ನಿಜವಾಗಿಯೂ ನೀನೂ ಬೆರಗಾಗುವಿ. ಹುಟ್ಟಿದ ಏಳನೆಯ ದಿನದಲ್ಲಿ ಈ ಜಗಜ್ಜೀವಿಗಳನ್ನು ಅಟ್ಟಿಯೋಡಿಸಿ ಹಿಡಿದು ತಿಂದನು. ಅದರಿಂದ ಬ್ರಹ್ಮನು ಇವನನ್ನು ಯಾವಾಗಲೂ ನಿದ್ರೆಯಲ್ಲಿರುವಂತೆ ಮಾಡಿ ಆರು ತಿಂಗಳಿಗೊಂದುಸಾರಿ ಎದ್ದು ಆಹಾರವನ್ನು ತೆಗೆದುಕೊಂಡು ಪುನಃ ಬಿದ್ದು ನಿದ್ರಿಸುವಂತೆಮಾಡಿ ಲೋಕತ್ರಯವನ್ನೂ ಕಾಪಾಡಿದನು. ಇವನು ಧುರದಲ್ಲಿ ಮೈದೋರಿ ಮಾರ್ಮಲೆತು ನಿಂತರೆ ಪ್ರಖ್ಯಾತರಾದ ನರನಿರ್ಜರೋರಗಭಟರೊಳಗೆ ಎದುರಿನಲ್ಲಿ ನಿಲ್ಲುವವರಾರನ್ನೂ ಕಾಣೆನು. ಇವನು ಪರಸ್ತ್ರೀಹರಣದ ಪಾಪದ ದೆಸೆಯಿಂದ ಸತ್ತರೆ ಸಾಯಬೇಕು. ಅದಿಲ್ಲವಾದರೆ ಇವನು ಸಾಯುವ ಕನ್ನವನ್ನು ಕಾಣೆನು. ಜೀಯಾ, ನಮ್ಮ ಬಲದ ಪಲಾಯನವನ್ನು ನೋಡು. ಮೇಲೆ ಆಕಾಶಮಂಡಲವನ್ನೀಕ್ಷಿಸು. ನೆರೆದಿದ್ದ ಬಿಡುಗಣ್ಣರಲ್ಲಿ ಒಬ್ಬರಾದರೂ ಕಾಣುವುದಿಲ್ಲ. ಅವರೆಲ್ಲರೂ ಇವನ ವಿಜೃಂಭಣೆಗೆ ಬೆದರಿ ಮರೆಯಾಗಿಹೋದರು. ಇವನು ಕಾಳೆಗದ ಕಣವನ್ನು ಹೊಗುವುದಕ್ಕೆ ಮೊದಲೇ ನಮ್ಮ ಬಲಕ್ಕೆ ಈ ಅವಸ್ಥೆಯಾಯಿತು. ಮುಂದೆ ಇವನಿರಿತದಿಂದ ನಾವೇನಾಗುವೆವೋ ತಿಳಿಯದು. ಎಲೈ ರಾಜೇಂದ್ರನೇ, ಅವಧರಿಸು. ನಮ್ಮವನ ಹೆಗಲಿನಲ್ಲಿರುವ ಶೂಲಾಯುಧದ ತೋರವನ್ನು ನೋಡು. ಅದು ಹಾಗಿರಲಿ. ಅದರ ಮೊನೆಯಲ್ಲಿ ಜವನೆದೆಯ ರಕ್ತವೂ ಎಳೆದೇರನ ಕೆಳೆಯನ ಮಾಂಸವೂ ಇತರ ದಿಕ್ಪತಿಗಳ ಮಜ್ಜೆಯೂ ಇವೆ. ಇವನೊಡನೆ ಈ ನೆರೆದ ಮರಗೈದುಗಳ ಮರ್ಕಟವೀರರು ಕಾದಿ ಮುಗಿಸಲಾರರು. ಅದುಕಾರಣ ನೀನೇ ಇವನೊಡನೆ ಕೊಳುಗುಳಕ್ಕೆ ನಿಲ್ಲ

ಬೇಕು ಎಂದು ಹೇಳುತ್ತಿರುವಲ್ಲಿ ಸುಗ್ರೀವನು ಹೋಗಿ ಕುಂಭಕರ್ಣನ ಎದುರಿನಲ್ಲಿ ನಿಂತನು. ಅವನ ಬೆಂಬಲಕ್ಕಾಗಿ ಹನುಮಂತ ನೀಲ ಅಂಗದ ಜಾಂಬವಂತ ಇವರೇ ಮುಖ್ಯರಾದ ಪ್ರಬಲ ಕಪಿನಾಯಕರು ಗಿರಿತರುಗಳನ್ನು ಸಂವರಿಸಿಕೊಂಡು ಬಂದು ನಿಂತರು. ಅನಂತರದಲ್ಲಿ ಕಪಿವೀರರು ಮೃತ್ಯುದೇವತೆಯನ್ನು ಕೆಣಕುವಂತೆ ಗಿರಿತರುಗಳನ್ನು ಕಿತ್ತು ತಂದು ಆ ಕುಂಭಕರ್ಣನ ನೆತ್ತಿಯ ಮೇಲೊಟ್ಟುತ್ತಿದ್ದರು. ಕುಂಭಕರ್ಣನು ಮಂದಹಾಸದಿಂದ ಕೂಡಿ ತನ್ನುಸಿಗಾರ್ಳಿಯಿಂದ ಆ ಕಪಿವೀರರನ್ನೂ ಅವರೆಸೆಯುವ ಗಿರಿತರುಗಳನ್ನು ಊದಿ ದಿಗಂತಕ್ಕೆ ಹಾರಿಸಿಬಿಟ್ಟನು. ನುಗ್ಗಿದಕಡೆಯಲ್ಲಿ ಕೋಟಿ ಸಂಖ್ಯೆಯ ವಾನರಗಳನ್ನು ಇಕ್ಕಿದನು. ನಾಲಿಗೆಯನ್ನು ಚಾಚಿ ಶತಕೋಟಿಸಂಖ್ಯೆಯ ವಾನರರನ್ನು ನೆಕ್ಕಿದನು. ಕೈಗಳಿಂದ ಬಾಚಿ ಬಾಚಿ ನ್ಯರ್ಬುದಸಂಖ್ಯೆಯ ಕೋತಿಗಳನ್ನು ಮುಕ್ಕಿದನು. ಮಹಾರ್ಬುದಸಂಖ್ಯೆಯ ಕೋಡಗಗಳನ್ನು ನುಂಗಿದನು. ಹೇಳತಕ್ಕುದೇನು? ಇದು ರಣರಂಗವಲ್ಲ. ಕುಂಭಕರ್ಣನ ಭೋಜನಶಾಲೆಯು. ಬಡಗೋತಿಗಳ ಬಾಳನ್ನು ಕೇಳುವವರಿಲ್ಲ. ಗಜನ ಮೋಹರವು ಮುಗಿದಿತು. ನೀಲನ ಬಲವು ನುಗ್ಗಾಯಿತು. ಜಾಂಬವಂತನ ಒಡ್ಡು ಒಡೆದಿತು. ಅಂಗದನ ಪಡೆಯು ಕೆಡದಿತು. ಹನುಮಂತನ ಸೇನೆಯು ಮಾಯವಾಯಿತು. ನಳನ ದಂಡು ಬಂಡಾಯಿತು. ಪೊಣರ್ಕೆಗಂಜಿ ಗಿಜಿಬಿಜಿಗುಟ್ಟುತ್ತಿರುವ ಉಳಿದ ಕೋಡಗಗಳ ಬಗೆಯುಬ್ಬಸವನ್ನು ಏನು ಹೇಳಲಿ! ಕ್ರುದ್ಧನಾದ ಯಮನ ಕೊಲೆಗೆಲಸವೋ? ಕಾಲಾಂತಕಪರ್ದಿಯ ಕಪರುವಿಕೆಯೋ? ಮಹಾ ಭೈರವನ ಕಾಲಾಟವೋ? ಕಲಿಕುಂಭಕರ್ಣನ ರಣಕೇಳಿಯೋ? ದೇವೇಂದ್ರನ ಪಟ್ಟಣದ ಸೂಳೆಗೇರಿಯು ಕಿಕ್ಕಿರಿದಿತು. ಯಮನ ಹೊಳಲಲ್ಲಿ ಹೊರಕೇರಿಯು ಕಟ್ಟಲ್ಪಟ್ಟಿತು. ಸಂಯಮನೀನಗರದ ಮಾರ್ಗಗಳೆರಡಾದುವು. ಸತ್ಯಲೋಕದ ಮಾರ್ಗವು ನುಗ್ಗಾದಿತು. ಈ ಲೋಭಿಯಾದ ಸುಗ್ರೀವನು ಸಾಯಲಿ! ತನ್ನಣ್ಣನನ್ನು ಕೊಂದುಕೊಟ್ಟ ರಾಜ್ಯಶ್ರೀಯ ಬಿಡಯಕ್ಕೆ ಆಶೆಪಟ್ಟು ನಮ್ಮೆಲ್ಲರನ್ನೂ ಕೆಡಿಸಿದನು. ಈ ರಾಮನು ಹೆಂಡಿರ ಮೋಹದಲ್ಲಿ ಮಣ್ಣುಕೂಡಿಹೋಗಲಿ! ಈ ಕೃಪಣರ ಹಂಗು ನಮಗೇಕೆ ಬೇಕು? ನಮಗೇನು ಸಂಬಳವೋ ಸನ್ಮಾನವೋ? ಕಾಡಿನಲ್ಲಿರುವ ಹಣ್ಣುಗುರೆಲೆಗಳನ್ನು ತಿಂದು ತೊರೆಕೆರೆಕಟ್ಟೆಗಳಲ್ಲಿರುವ ನೀರನ್ನು ಕುಡಿದು ಗಿರಿತರುಗುಹೆಗಳಲ್ಲಿ ವಾಸಮಾಡಿಕೊಂಡಿರುವ ನಾವು ಈ ಲೋಭಿಗಳಾದ ರಾಮಸುಗ್ರೀವರಿಗೋಸ್ಕರ ಈ ರಕ್ಕಸದೆವ್ವದ ಕೈಯಲ್ಲಿ ಸಿಕ್ಕಿ ಅನ್ಯಾಯವಾಗಿ ಪ್ರಾಣವನ್ನು ಬಿಡಬೇಕೆಂಬ ತೆವುಲೇನು? ಎಂದುಕೊಳ್ಳುತ್ತ ಕಪಿಜಾಲವೆಲ್ಲಾ ಕಂಡಕಂಡೆಡೆಗಳಿಗೆ ಸರಿದಿತು. ಆಗ ಹನುಮನ್ನೀಲಾಂಗದನಳ ಸುಷೇಣಗವಾಕ್ಷಾದ ಸೇನಾಪತಿಗಳು ತಾವು ಭಯಕಂಪಿತರಾದಾಗ್ಯೂ ಸುಗ್ರೀವನ ಮೇಲಣ ಅಭಿಮಾನದಿಂದ ಮತ್ತೆ ಗಿರಿತರುಗಳನ್ನು ಹೊತ್ತುಕೊಂಡು ಬಂದು ದೂರದಲ್ಲಿ ನಿಂತು ಕುಂಭಕರ್ಣನ ಮೇಲೆಸೆದರು. ಮಂಜಿಗೆ ಮಲೆಯಂಜುವುದೇ? ಅವುಗಳೆಲ್ಲಾ ಕುಂಭಕರ್ಣನ ಮೈಗೂದಲ್ಗಳಿಗೆ ತಗುಲಿ ಪುಡಿಪುಡಿಯಾಗಿ ನೆಲದಲ್ಲಿ ಬೀಳುತ್ತಿದ್ದುವು. ಸಿಡಿಲುಹೊಯ್ದರೆ ಸಿಗುರೇಳದ ಮಹಾಗಿರಿಯು ನುಗ್ಗೆಯ ದಡಿಯೇಟಿಗೆ ನಗ್ಗುವುದೇ? ಎನ್ನುತ್ತ ಕುಂಭಕರ್ಣ

ನು ಹೋರುತ್ತಿರುವ ಕಪಿಪತಿಗಳನ್ನು ತನ್ನ ನೀಟಾದ ಗದಾದಂಡದಿಂದ ಹೊಯ್ದು ರಕ್ತವನ್ನು ಕಾರಿಸಿದನು.

ಬಿಸುಗದಿರನಟ್ಟಿದ ಕತ್ತಲೆಯ ಮೊತ್ತದಂತೆ ಮತ್ತೆ ಕಪಿಕಟಕವು ಸುಗಿದು ಮುರಿಯಲು; ಕುಂಭಕರ್ಣನು ರಾಮನನ್ನು ಹುಡುಕುತ್ತ ಬರುತ್ತಿದ್ದನು. ಆಗ ಕಪಿಗಳ ಅರಸನಾದ ಸುಗ್ರೀವನು—ಎಲ್ಲಿಗೆ ಹೋಗುತ್ತಿರುವಿಯೋ? ಖೂಳನೇ, ಇತ್ತ ತಿರುಗೆಲೋ! ಎಂದು ಹೇಳುತ್ತ ಹೋಗಿ ಅವನ ಮುಂದೆಸೆಯಲ್ಲಿ ನಿಲ್ಲಲು; ಆಗ ಜಾಂಬವಂತನು—ಹೆದರದಿರಿ! ಕಾಳೆಗದೊಳು ಮಡಿದವರಿಗೆ ಬಹು ಭೋಗ್ಯವಸ್ತು ಸಮಗ್ರವಾದ ಸ್ವರ್ಗವು ಸಿಕ್ಕುವುದು. ಪ್ರಾಣಭೀತಿಯಿಂದ ಕೊಳುಗುಳವನ್ನು ಬಿಟ್ಟೋಡಿದರೆ ನಿಮ್ಮ ಪ್ರಾಣಗಳು ಬ್ರಹ್ಮಕಲ್ಪದ ಪರ್ಯಂತರವೂ ಇರುವುವೇ? ಹುಚ್ಚುತನವನ್ನು ಬಿಟ್ಟು ಹಿಮ್ಮೆಟ್ಟದೆ ಕಾದಿರಿ. ಸ್ವಾಮಿಕಾರ್ಯಹತಪ್ರಾಣರಾಗಿ ಧರ್ಮಕೀರ್ತಿಗಳನ್ನು ಗಳಿಸಿಕೊಳ್ಳಿರಿ ಎಂದು ಹೇಳುತ್ತಿರುವ ಮಾತುಗಳನ್ನು ಕೇಳಿ ತಿರುಗಿ ಕಪಿಸ್ತೋಮವು ಕೂಡಿ ಬಂದು ವಿಲಯಕಾಲದಲ್ಲಿ ಕಡಲುಬ್ಬಿ ಅಂಬರವನ್ನಡರುವಂತೆ ತರುಗಿರಿಗಳ ತಂಡದಿಂದ ಕುಂಭಕರ್ಣನನ್ನು ಹೂಳಲು; ಮಹಾದ್ರಿಯು ಗುಂಗುರಿನ ಊರಿಕೆಗೆ ಮೈಯ್ಯಾಳುಕುವುದೇ? ಮಂಜೇರಿದರೆ ನಡುವಗಲ ಮಾರ್ತಾಂಡ ಮಂಡಲವು ನಡುಗುವುದೇ? ಖಳನು ಮುನಿದು ಕಪಿವಾಹಿನಿಯನ್ನು ತೂರಿದನು. ಕೆದರಿದನು. ಬೀರಿದನು. ಕಚ್ಚಿದನು. ಕವರಿದನು. ಬಿಸುಟನು. ತುಳಿದನು. ಯಮಾಲಯಕ್ಕೆ ಹೊಗಿಸಿದನು. ಕಾಳೆಗಕ್ಕಳುಕದೆ ಕವಿಯುವವರನ್ನು ಬಡಿದು ಕಳವಳಕ್ಕೆ ಗುರಿಮಾಡಿದನು. ಹೊಂಚಿ ಹಳಚುವ ಭಟರನ್ನು ಹಿಡಿದುಹಿಡಿದು ಬಾಯೊಳಗಡಸಿದನು. ಆಗ ಕುಂಭಕರ್ಣನಿಂದ ನುಂಗಲ್ಪಟ್ಟ ಕಪಿಭಟರು ಅವನ ನವದ್ವಾರಮಾರ್ಗಗಳಿಂದಲೂ ಚಿಗಿಚಿಗಿದು ಹೊರಟು ಬರುತ್ತಿದ್ದರು. ಹಲ್ಲುಗಳಲ್ಲಿ ಸಿಕ್ಕಿ ಅಜಿಗಿಜಿಯಾದ ಸುಭಟರೂ ಹೆಜ್ಜೆ ಮೊಳಕಾಲ್ಮೊಣಕೈ ಮೊದಲಾದುವುಗಳ ಪೆಟ್ಟುಗಳಿಂದ ಮೃತರಾದ ವೀರರೂ ಇಷ್ಟಾದರೆಂಬ ಸಂಖ್ಯೆಯು ಗೊತ್ತಿಲ್ಲ.

ಏನು ಹೇಳುವುದು? ಕುರಿಹಿಂಡಿನೊಳಗೆ ಮುನಿದಾಡುವ ತೋಳನೋ? ಕರಿಘಟೆಗಳೊಡನೆ ಕಾದಾಡುವ ಮೃಗರಾಜನೋ? ಹುಲ್ಲೆಗುಂಪಿನೊಳಗಣ ಹೆಬ್ಬುಲಿಯೋ? ಸರ್ಪಗಳ ಬಳಗದಲ್ಲಿ ನುಗ್ಗಿದ ಗರುಡನೋ? ಎಂಬಂತೆ ಖಳನು ತೋರಿದ ಕಡೆಗೆ ನುಗ್ಗಿ ಕಪಿಗಳ ತಂಡವನ್ನು ಬಡಿದು ದಿಂಡುಗೆಡಹಿ ರಾಮನನ್ನು ಅರಸುತ್ತ ಮುಂದುವರಿದು ಬಂದು—ಹೆಂಡತಿಯನ್ನು ಕಳೆದುಕೊಂಡು ನಿರ್ಲಜ್ಜೆಯಿಂದ ಕಪಿಗಳನ್ನು ಕೊಲ್ಲಿಸುತ್ತಿರುವ ಮಾನಹೀನನಾದ ರಾಮನೆಂಬವನು ನೀನೆಯೋ? ಎಂದು ರಾಮನನ್ನು ಹಿಡಿಯುವುದಕ್ಕೆ ಬರುತ್ತಿರಲು; ಹಾ! ಕೆಲಸಕೆಟ್ಟಿತು. ಗತಿಯೇನೆಂದು ಕಳವಳದಿಂದ ಕೂಗುತ್ತಿರುವ ದೇವತೆಗಳ ಧ್ವನಿಯನ್ನು ಕೇಳಿ ಮಾರುತಿಯು ಕೋಪದಿಂದ ಕಿಡಿಗೆದರುತ್ತ ಓಡಿ ಬಂದು ಬೊಬ್ಬಿರಿದು ಖಳನು ತಿನುಕುವಂತೆ ತಿವಿದನು. ಕಲ್ಪಾಂತ ವಜ್ರಹತಿಯಿಂದ ತಲೆಗೊಡಹುವ ಕುಲಗಿರಿಯಂತೆ ಒಲೆದೊಲೆದು ಕಣ್ಣಿಗೆ ಕವಿಯುವ ಕತ್ತಲೆಯಿಂದ ಕಳವಳಿಸಿ ಕೋಪೋದ್ರಿಕ್ತನಾದ ಕುಂಭಕರ್ಣನು ತನ್ನ ಶೂಲಾಯುಧ

ದಿಂದ ಚಟುಲವಿಕ್ರಮನಾದ ವಾಯುಪುತ್ರನನ್ನು ತಿವಿಯಲು ; ಆಗ ಸಮರ ಸಮರ್ಥ
ನಾದ ಅನಿಲಸಂಭವನು ಶೂಲವನ್ನು ಕೆಡಸೂಕಿ ಬಾಯಿಯಲ್ಲಿ ಕೆನ್ನೀರ್ಸುರಿಯುವಂತೆ
ಖಳನೆದೆಯನ್ನು ತಿವಿದನು ಘೋರನಿಶಾಚರನು ಕಪಿಯ ಕೈಪೆಟ್ಟನ್ನು ಗಣಿಸುವನೇ ?
ಆ ಕ್ಷಣದಲ್ಲಿಯೇ ಭೀಕರಪರಿಘಾಯುಧದಿಂದ ಅಂಜನೆಯ ಮಗನನ್ನು ಅಪ್ಪಳಿಸಿ
ದನು. ಆಗ ಮರುನ್ನಂದನನು ಕ್ಷಣಮಾತ್ರ ಬಗೆಗುಂದಿ ಎದ್ದು ಕೋಪದಿಂದ ಆರ್ಭ
ಟಿಸಿ ತನ್ನ ವಜ್ರೋಪಮೇಯವಾದ ಮುಷ್ಟಿಯಿಂದ ಕುಂಭಕರ್ಣನ ಅಳ್ಳೆಯನ್ನು ತಿವಿ
ಯಲು ; ಮೊದಲು ತುಪ್ಪದಲ್ಲಿ ಅದ್ದಿಯದ್ದಿ ನುಂಗಿದ್ದ ಕೂಳಿನ ಮುದ್ದೆಗಳು ಖಳನ
ಬಾಯಿಯಿಂದ ಹೊರಟು ನೆಲದಲ್ಲಿ ಬಿದ್ದುವು. ಆಗ ಕುಂಭಕರ್ಣನು ನೋಡಿ—
ಅಹುದೋ ? ಕಪಿಗಳ ಗುಂಪಿನಲ್ಲಿ ನೀನೇ ಗಟ್ಟಿಗನು. ಪರಾಕ್ರಮದಲ್ಲಿ ನಮ್ಮ ಇಂದ್ರ
ಜಿತ್ತನ್ನು ಹೋಲುತ್ತಿರುವಿ. ಇನ್ನೊಂದು ಸಾರಿ ನನ್ನೊಡನೆ ಯುದ್ಧಕ್ಕೆ ನಿಂತರೆ
ನೀನೇ ಶೂರನು ಎಂದು ಅರಿಭಯಂಕರನನ್ನು ಆಯುಧದ ಬುಡದಿಂದ ತಿವಿದು ಹಾರಿ
ಸಲು ; ಆಂಜನೇಯನು ಆ ಸ್ಥಳಕ್ಕೆ ಐನೂರು ಕೋಲಳತೆಯಲ್ಲಿ ಬಿದ್ದನು.

ಹನುಮಂತನನ್ನು ಹೊಯ್ದು ಬಿರುಸಿಂದ ಕಾಲುಜಾರಿ ಭೂಮಿಯಲ್ಲಿ ಬಿದ್ದ
ಕುಂಭಕರ್ಣನು ಮೆಲ್ಲಗೆ ಕೈಯೂರಿಕೊಂಡೆದ್ದು ಮಾರುತಿಯ ಬಳಿಗೆ ಹೋಗುತ್ತಿ
ರಲು ; ಸುಗ್ರೀವನು ಅದನ್ನು ನೋಡಿ ಆ ಕುಂಭಕರ್ಣನ ಬಳಿಗೆ ಬಂದು ನಿಂತು
ಕಿಸುಗಣ್ಣಿ ಅವನಂತೆಯೇ ಬೆಳೆದು ವಿಮಾನಸ್ಥರಾದ ದೇವತೆಗಳು ಹೊಗಳುವಂತೆ ಗಿರಿ
ತರುಗಳಿಂದ ಹೊಯ್ದು ಬೊಬ್ಬಿರಿದನು. ಆಗ ನಿಶಾಚರನು—ರಣಕೇಳಿಯಲ್ಲಿ ವಾಲಿ
ಯೇ ಸಮರ್ಥನು. ಅವನ ತರುವಾಯ ನೀನೇ ಸುಭಟನು. ನಿಶ್ಚಯವೆಂದು ಬೆರಳನ್ನಾಡಿ
ಸುತ್ತ ತಲೆಯನ್ನು ತೂಗುತ್ತ ಹೊಗಳುತ್ತಿರಲು ; ಸುಗ್ರೀವನು—ಎಲಾ ಖಳನೇ,
ಕೇಳು. ನಾನು ಕಪಿರಾಜನೆಂಬುದನ್ನು ನೀನು ಕೇಳಲಿಲ್ಲವೇ ? ನಾನು ರಣಕೇಳಿಯಲ್ಲಿ
ಸೋತು ಹಿಮ್ಮೆಟ್ಟುವ ಭಟನೇ ? ಎನ್ನುತ್ತ ಸಿಡಿಲಿನಂತೆ ಗರ್ಜಿಸಿ ಬೀಳೆಂದು ಮುಷ್ಟಿ
ಯಿಂದ ತಿವಿಯಲು ; ಕುಂಭಕರ್ಣನು ತಲ್ಲಣಿಸಿ ತಲೆಕೆಳಗಾಗಿ ನೆಲಕ್ಕೆ ಬೀಳಲು ;
ಭೂಮಿಯು ನೂರು ಪುರುಷಪ್ರಮಾಣ ರಸಾತಲಕ್ಕಿಳಿದು ಹಳ್ಳವಾದಿತು. ಆಗ ರಾವ
ಣಾನುಜನು ಚೇತರಿಸಿಕೊಂಡೆದ್ದು ಕೋಪದಿಂದ ಮೊರೆದು—ಎಲವೋ ಕಪಿಯೇ,
ಕೇಳು. ನೀನು ನಮ್ಮ ಸಮರದಲ್ಲಿ ಈ ಮಹಾಯುಧದ ಅಲಗಿನಿಂದ ಸಾಯದೆ ಉಳಿದೆ
ಯಾದರೆ ನಾನು ಮೂಗುಹೋದವನು. ಅದುಕಾರಣ ಮೈಮರೆಯದೆ ಎಚ್ಚರಿಕೆ
ಯಿಂದಿರು ಎಂದು ಕ್ರೂರವಾಗಿ ನುಡಿದು ಅತಿವಿಷಮವಾದ ಮಹಾಶಕ್ತಿಯಿಂದ
ಹೊಡೆಯಲು ; ಆಗ ಕಪಿಕಟಕವು ತಲ್ಲಣಿಸಿ ಮುಂಗೆಟ್ಟು ಬಗೆಗುಂದಿತು. ವಾನರವೀರ
ರಲ್ಲಿ ಬಲ್ಲಿದನಾದ ಆಂಜನೇಯನ ಎಚ್ಚರಿಕೆಯೆಷ್ಟೋ ? ಮುಂದಣ ಆಲೋಚನೆಯ
ಹವಣೆಂತಿರುವುದೆಂದು ತಿಳಿದಿದ್ದವರಾರು ? ಭೂಮ್ಯಾಕಾಶಗಳನ್ನು ಒಂದೇ ಬಾರಿಗೆ
ನುಂಗಿಬಿಡುವಂತೆ ಸುಗ್ರೀವನ ಮೇಲೆ ಬರುತ್ತಿರುವ ಮಹಾಶಕ್ತಿಯನ್ನು ನೋಡಿ ನಿಮೇ
ಷಮಾತ್ರದಲ್ಲಿ ಪುಟನೆಗೆದು ಹಾರಿ ಮಧ್ಯಮಾರ್ಗದಲ್ಲಿಯೇ ಅದನ್ನು ಹಿಡಿದುಕೊಂಡು
ತಿರಿಗಿ ಅದನ್ನೇ ಕುಂಭಕರ್ಣನ ಮೇಲೆ ಹಾಕುವುದಕ್ಕೆ ಉದ್ಯುಕ್ತನಾಗುತ್ತಿರಲು ; ಆಗ

ವಿಭೀಷಣನು ಮೋಸವಾಯಿತೆಂದು ಆಂಜನೇಯನ ಬಳಿಗೋಡಿಬಂದು ಅವನ ಕೈಯನ್ನು ಹಿಡಿದುಕೊಂಡು—ಎಲೈ ವೀರಕುಲತಿಲಕನೇ, ನಿಲ್ಲು ; ನಿಲ್ಲು ; ಈ ಆಯುಧವನ್ನು ತಿರಿಗಿ ಅವನ ಮೇಲೆ ಹಾಕಿದವನ ತಲೆಯು ಭೂಮಿಗುರುಳಲಿ ಎಂದು ವರವುಂಟು. ಆದುದರಿಂದ ಅವನ ಮೇಲೆ ಇದನ್ನು ಪ್ರಯೋಗಿಸಬೇಡವೆನ್ನಲು ; ಮಾರುತಿಯು ತನ್ನ ಮಂಡಿಯನ್ನು ಕೊಟ್ಟು ಅದನ್ನು ತುಂಡುತುಂಡಾಗುವಂತೆ ಮುರಿದು ಸಮುದ್ರಮಧ್ಯದಲ್ಲಿ ಬೀಳುವಂತೆ ಎಸೆದುಬಿಟ್ಟನು. ಅದನ್ನುನೋಡಿ ಸೂರ್ಯನು—ಈ ಯುದ್ಧವಿದ್ಯಾವಿಶಾರದನಾದ ಆಂಜನೇಯನು ನನ್ನ ಮಗನಾದ ಸುಗ್ರೀವನನ್ನು ಕೊಂದುಹಾಕುವುದಕ್ಕೆ ಬರುತ್ತಿದ್ದ ಭಯಂಕರವಾದ ಶಕ್ತ್ಯಾಯುಧವನ್ನು ಮುರಿದು ಬಿಸುಟನಲ್ಲಾ ಎಂಬ ಸಂತೋಷಾತಿಶಯದಿಂದ ಅವನಿಗೆ ದಿವ್ಯರತ್ನಖಚಿತಗಳಾದ ಎರಡು ಕರ್ಣಕುಂಡಲಗಳನ್ನು ಕೊಟ್ಟು ಸನ್ಮಾನಿಸಿದನು.

ಆಗ ಕುಂಭಕರ್ಣನು—ಆಹಾ ! ಮಹಾತ್ರಿಶೂಲಾಯುಧವು ವ್ಯರ್ಥವಾಗಿ ಮುಗಿದುಹೋಯಿತೇ ? ಕಪಿವೀರನು ಉಳಿದನೇ ? ಇನ್ನು ಮುಂದೆ ಮಾಡಬೇಕಾದ ಕೆಲಸವೇನೆಂದು ಕ್ಷಣಕಾಲ ಯೋಚಿಸಿ ಕೂಡಲೆ ಕೋಟಿಸಂಖ್ಯಾತಗಳಾದ ಸಿಡಿಲುಗಳ ಆರ್ಭಟಕ್ಕೆ ಮಿಗಿಲೆನ್ನುವಂತೆ ಆರ್ಭಟಿಸಿ ಕಪಿಬಲವನ್ನೆಲ್ಲಾ ಭಯದ ಸಮುದ್ರದಲ್ಲಿ ತೇಲಿಸಿ ಮುಳುಗಿಸಿ ನೆಗೆದುಬಂದು ಸುಗ್ರೀವನನ್ನು ಹಿಡಿದುಕೊಂಡು—ಇವನಷ್ಟೇ ಕಪಿರಾಜನು ? ಇವನ ಸಹಾಯದಿಂದಲೇ ರಾಮಲಕ್ಷ್ಮಣರು ನಮ್ಮೊಡನೆ ಕೊಳುಗುಳಕ್ಕೆ ಬಂದರು. ಇವನನ್ನು ಕೊಲ್ಲದೆ ಸೆರೆಹಿಡಿದುಕೊಂಡು ಹೋದರೆ ಈ ನೆರೆದಿರುವ ಕೋಡಗಗಳೆಲ್ಲಾ ದೆಸದೆಸೆಗೋಡಿ ಹೋಗುವುವು. ಅನಂತರದಲ್ಲಿ ಉಳಿದ ಬಲಹೀನರಾದ ಮನುಜರಿಬ್ಬರನ್ನು ಕ್ಷಣಮಾತ್ರದಲ್ಲಿ ಜಯಿಸಿಬಿಡಬಹುದು ಎಂದು ಯೋಚಿಸುತ್ತ, ಕಪಿರಾಜನನ್ನು ಕಂಕುಳಲ್ಲಿರುಕಿಕೊಂಡು ಸಂತೋಷದಿಂದ ಲಂಕೆಗೆ ತಿರುಗಿದನು. ಆಗ ರಾಮನು ಕಳವಳಿಸಿ—ಅಹಹ ! ವಾನರಚಕ್ರವರ್ತಿಯು ಖಳನ ಕೈಗೆ ಸಿಕ್ಕಿದನೇ ? ಕಾರ್ಯವು ಕೆಟ್ಟಿತು ! ಎಂದು ಮಾರುತ ಪುತ್ರನ ಮುಖವನ್ನೂ ತಮ್ಮನಾದ ಲಕ್ಷ್ಮಣನ ಮುಖವನ್ನೂ ನೋಡಲು ; ಶೂರರಾದ ಅವರಿಬ್ಬರೂ ಶೀಘ್ರವಾಗಿ ಹೊರಟು ಯುದ್ಧಕ್ಕೆ ಬರುತ್ತಿರಲು ; ಸುಗ್ರೀವನು ಅವರನ್ನು ನೋಡಿ—ಬೇರೆ ಬವರದ ಬಲುಮೆಗಳನ್ನು ತೋರಿಸದಿರಿ. ನಾನು ಈ ಖಳನಿಗೆ ಸಿಕ್ಕಿ ಹೋದೆನೆಂದು ಬಗೆಯದಿರಿ. ಅರೆಗಳಿಗೆಯಲ್ಲಿ ಇವನ ಹಗರಣವನ್ನು ನಗೆಗಾರರಿಗೆ ತೋರಿಸುವೆನು ಎಂದು ಅವರಿಗೆ ಸಮಾಧಾನವನ್ನು ಹೇಳಿ ನಿಲ್ಲಿಸಿದನು. ಆ ಮೇಲೆ ಕುಂಭಕರ್ಣನು—ಇಂದಿನ ಸಮರದಲ್ಲಿ ನಾನು ಗೆದ್ದೆನು. ಕಪಿರಾಜನನ್ನು ಸೆರೆಹಿಡಿದೆನು. ಮುಂದಣ ಕಾರ್ಯವು ನಾಳಿನದು ಎಂದು ಯೋಚಿಸುತ್ತ ಹೊಳಲನ್ನು ಹೊಗಲು ; ಆಗ ಭೇರೀ ನಿಸ್ಸಾಳಾದಿ ವಿವಿಧವಾದ್ಯಗಳು ಮೊಳಗಿದುವು. ದೈತ್ಯಾಂಗನೆಯರು ದರ್ಪಣ ಕಲಶಾಳಿಗಳನ್ನು ಹಿಡಿದು ಒಗ್ಗಿನಿಂದ ಬಂದು ಕುಂಭಕರ್ಣನನ್ನು ಎದುರುಗೊಂಡರು. ಕೆಲವರು ಮುತ್ತೈದೆಯರು ಆರತಿ ಎತ್ತಿದರು. ಮತ್ತೆ ಕೆಲವರು ಗಂಧೋದಕಗಳನ್ನೂ ಪನ್ನೀರುಗಳನ್ನೂ ಕುಂಭಕರ್ಣನ ಮೇಲೆ ಸುರಿದರು. ಯುದ್ಧಶ್ರಮನಿವಾರಣಾರ್ಥವಾಗಿ

ಬಹುಮಾದಕಗಳಾದ ವಾರುಣಿ ಕಾದಂಬರಿಗಳೆಂಬ ಹೆಂಡಗಳನ್ನು ತಂದು ಕುಡಿಯು ವುದಕ್ಕೆ ಕೊಟ್ಟರು. ಆಗ ಕುಂಭಕರ್ಣನು ಮಹಾ ಗರ್ವಯುಕ್ತನಾಗಿ ಕೂತಿರಲು; ಜಯಜಯ ನೀತಿಲತಾಕುಠಾರಾ! ಅರಿಜಲಧರಜಂಝಾಮಾರುತಾ! ಅಧರ್ಮಸಂಸ್ಥಾಪನಾಚಾರ್ಯಾ! ಎಂದು ವಂದಿಮಾಗಧರು ಹೊಗಳುತ್ತಿರಲು; ಅವನು ಮದ್ಯಪಾನ ದಿಂದಾದ ಮತ್ತತೆಯೂ ಹೊಗಳುವಿಕೆಯಿಂದುಂಟಾದ ಗರ್ವವೂ ತಲೆಗೇರಿ ತಾನು ಯುದ್ಧರಂಗದಲ್ಲಿ ಹಿಡಿದುಕೊಂಡು ಬಂದಿರುವ ಕಪಿರಾಜನನ್ನು ಮರೆತು ಮೈತಿಳಿಯದೆ ದ್ವಿತೀಯನೀಲಭೂಧರದಂತೆ ಕುಳಿತನು. ಆ ವೇಳೆಯಲ್ಲಿ ಕಪೀಂದ್ರನು ಮೆಲ್ಲನೆ ಸಡಿಲ ವಾದ ಅವನ ಕಂಕುಳಿಂದ ಕೈಯೂರಿ ಹೊರಗೆ ಬಂದು ಹೆಗ್ಗತ್ತಿನಲ್ಲಿ ಕುಳಿತು ತನ್ನೆರಡು ಕೈಗಳಿಂದ ಆ ಖಳನ ಎರಡು ಕೊಡಗಿವಿಗಳನ್ನೂ ಹಲ್ಲುಗಳಿಂದ ಮೂಗನ್ನೂ ಕಿತ್ತು ತೆಗೆದುಕೊಂಡು ಗಗನ ಮಾರ್ಗಕ್ಕೆ ಹಾರಿಬಂದು ರಣಭೂಮಿಯಲ್ಲಿಳಿದನು. ಆಗ ಇವನನ್ನು ನೋಡಿದ ಲಕ್ಷ್ಮಣಾಂಜನೇಯರು ಪರಮ ಸಂತೋಷಭರಿತರಾಗಿ ನಡೆದ ಸಂಗತಿಯನ್ನೆಲ್ಲಾ ಕೇಳಿ ಪರಿಹಾಸ್ಯದಿಂದ ನಕ್ಕು ಸುಗ್ರೀವನನ್ನು ಹೊಗಳಿದರು. ಅನಂತರದಲ್ಲಿ ಕಪಿಸಾರ್ವಭೌಮನಾದ ಸುಗ್ರೀವನು ಅವರಿಬ್ಬರೊಡನೆ ಕೂಡಿ ರಘುಕುಲಾಂಬುಧಿ ಚಂದ್ರನಿರುವ ಸ್ಥಳಕ್ಕೆ ಬಂದು ಆತನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ವೃತ್ತಾಂತವನ್ನೆಲ್ಲಾ ತಿಳಿಸಿ ಸಂತೋಷಪಡಿಸಿದನು. ಅದನ್ನು ಕೇಳಿ ಕಪಿವಾಹಿನಿಯೆಲ್ಲವೂ ನಲಿದಾಡಿತು. ಇತ್ತಲಾ ಕುಂಭಕರ್ಣನು ಒಂದೆರಡು ಗಳಿಗೆಗಳ ವರೆಗೂ ಮತ್ತನಾಗಿದ್ದು ಅನಂತರದಲ್ಲಿ ಮೇಲೆದ್ದು ಸಂತೋಷದಿಂದ ಹೊರಟು ಅಣ್ಣನಾದ ದಶಗ್ರೀವನ ಓಲಗ ಚಾವಡಿಗೆ ಸರಸರನೆ ಬಂದು ಆತನಿಗೆ ನಮಸ್ಕರಿಸಿ—ಎಲೈ ಅಗ್ರಜಾತನೇ, ತೃಣಪ್ರಾಯರಾದ ಮನುಜರಿಗೆ ಸಹಾಯವನ್ನು ಮಾಡಿ ಅವರನ್ನು ನಮ್ಮೊಡನೆ ಜಗಳಕ್ಕೆ ಕರೆದುಕೊಂಡು ಬಂದ ಕಪಿರಾಜನನ್ನು ಹಿಡಿದು ತಂದಿದ್ದೇನೆ. ಇದೋ ನೋಡು! ಎಂದು ಕಂಕುಳನ್ನೆತ್ತಿ ಸುಗ್ರೀವನನ್ನೂ ಕಿವಿ ಮೂಗುಗಳಲ್ಲಿ ಬೆರಳಿಟ್ಟು ನೋಡಿ ಅವುಗಳನ್ನೂ ಕಾಣದೆ ರಕ್ತಲೇಪಿತವಾದ ಬೆರಳುಗಳನ್ನು ಮಾತ್ರ ಕಂಡು ಬಲು ನಾಚಿಕೆಯೆಂಬ ಕಡಲೊಳಗೆ ಮುಳುಗಿ ಕೋಪಸಂತಪ್ತಚಿತ್ತನಾಗಿ ಥಟ್ಟನೆ ಹಿಂದಿರುಗಿ—ಸುಡುಸುಡು! ಈ ಬದುಕು ಸಾಕು! ಎಲಾ! ನೀಚ ಕಪಿಯೇ, ಮಾನವನ್ನು ಭಂಗಿಸಿದಿಯಾ? ಇನ್ನು ಈ ಪ್ರಾಣಗಳನ್ನು ಹಿಡಿದಿರುವುದು ಬಹಳ ಅನುಚಿತವು! ಎಂದು ಅನಿವಾರ್ಯಕೋಪ ವಿಜೃಂಭಿತನಾಗಿ ಪುನಃ ಶೀಘ್ರವಾಗಿ ಜಗಳಕ್ಕೆ ಹೊರಟು ಯುದ್ಧಭೂಮಿಗೆ ಬಂದು ನಿಂತನು. ಆ ಕೂಡಲೆ ಕಪಿಸಮೂಹವೆಲ್ಲವೂ ಬಂದು ಮಹಾಗಜಕ್ಕೆ ಜೇನ್ನೊಣಗಳು ಕವಿದಂತೆ ಕವಿಯಲು; ಅವುಗಳನ್ನೆಲ್ಲಾ ಹೊಸಗಿ ಬಿಸುಟು ರಾಮನೆಡೆಗೆ ಬರುತ್ತಿದ್ದನು. ಆಗ ಶ್ರೀರಾಮನು ತಮ್ಮನಾದ ಲಕ್ಷ್ಮಣನನ್ನು ಕರೆದು—ನಮ್ಮ ಕಪಿಬಲವು ಈ ಕರಾಳಾಕಾರಿಯಾದ ಕುಂಭಕರ್ಣನನ್ನು ನೋಡಿ ಇದು ಗುಮ್ಮನೆಂದು ಬೆದರುತ್ತಿದೆ. ಆದುಕಾರಣ ಇವನೊಡನೆ ಯುದ್ಧದ ಕೆಲಸವು ನನ್ನ ಪಾಲಿಗಾಗಲಿ. ಈ ನಿಶಾಚರ ಮಾರಿಯೆದುರಿಗೆ ನೂಕಿ ಸುಮ್ಮನೆ ಕಪಿಭಟರನ್ನು ಬಳಲಿಸಬೇಡ. ಈ ಕುಂಭಕರ್ಣನ ಸಂಗಡ ಬಂದಿರುವ ನಿಶಾಚರವಾಹಿನಿಯೊಡನೆ ಕಾದುವುದಕ್ಕೆ ನೀನು ನಡೆ ಎಂದು

ಹೇಳಿ ಹನುಮಂತನನ್ನು ಕರೆದು—ನೀನು ಲಕ್ಷ್ಮಣನಿಗೆ ಸಹಾಯವಾಗಿ ಹೋಗು. ನನ್ನ ಅಂಗರಕ್ಷಣೆಗೆ ಸುಗ್ರೀವನೂ ವಿಭೀಷಣನೂ ಇರುವರು. ತಮ್ಮನ ಯುದ್ಧದ ಲೇಸೂ ಹೊಲ್ಲೆಹವೂ ನಿನ್ನನ್ನು ಸೇರಿತು ಎಂದು ಹೇಳಿ ಅವನನ್ನು ಲಕ್ಷ್ಮಣನೊಡನೆ ಕಳುಹಿಸಿ ಕೋದಂಡವನ್ನು ಮೊಣಕಾಲಿನಿಂದ ಬೊಗ್ಗಿಸಿ ಅದರ ಕೊನೆಗಳಿಗೆ ತಿರುವನ್ನು ಸಂಧಾನಿಸಿ ಹೊರಟು ಬಂದು ಕುಂಭಕರ್ಣನೆದುರಿನಲ್ಲಿ ನಿಂತು ಶಿಂಜನಿಯನ್ನು ಸೆಳೆದು ಬಿಟ್ಟು ಧನುಷ್ಟಾಂಕಾರಧ್ವನಿಯನ್ನು ಮಾಡಿ ನಿಶಾಚರಬಲವನ್ನು ಕಂಪನಗೊಳಿಸಿ ಕುಂಭಕರ್ಣನನ್ನು ಯುದ್ಧಕ್ಕೆ ಕರೆದನು. ಆಗ ರಾಮನ ಬಿಲ್ಲಿನ ಹೆದ್ದನಿಯು ಅರೆಮೂಗು ಕಿವಿಗಳ ಭಟನಿಗೆ ಸಿಡಿಲು ಹೊಯ್ದಂತಾಗಲು ; ಮಾ, ಮಾ, ರಾಮನೇ, ರಣಭೀಮನೇ, ಭಾಪು! ಎನ್ನುತ್ತ ತನ್ನ ಉಕ್ಕಿನ ಮಹಾರಥವನ್ನು ಮುಂದಕ್ಕೆ ನೂಕಿ ಬಾಣವನ್ನು ತುಡುಕಿ ಹೆದೆಗೆ ಸೇರಿಸಿ ರಾಮನನ್ನು ಕುರಿತು—ಎಲೈ ರಾಮನೇ, ನೀನೆಯೋ ಬನದಲ್ಲಿ ಭಾಮಿನಿಯನ್ನು ಕಳೆದುಕೊಂಡವನು ! ನೀನು ಬಹು ಪರಾಕ್ರಮಶಾಲಿಯಾಗಿದ್ದೀ ! ನೀನು ನಮ್ಮ ಕುಂದದ ರಣೋತ್ಸಾಹವನ್ನು ನೋಡು ಎಂದು ಗರ್ಜಿಸಿದನು.

ಆಗ ಶ್ರೀರಾಮನು—ಎಲೈ ಕುಂಭಕರ್ಣನೇ, ನೀವು ರಾಕ್ಷಸರಾಜಕುಲದವರು. ನಾವು ಮನುಜರಾಜಕುಲದವರು. ನಿಮಗೆ ದೇವಕುಲವು ಅಂಜುವುದು. ನಾವು ದೇವಕುಲಕ್ಕೆ ಅಂಜುವೆವು. ಹೀಗಿರುವಲ್ಲಿ ನಿಮಗೂ ನಮಗೂ ಸರಿಯೆಂದರೇನು ? ಆದಾಗ್ಯೂ ನೀನು ಮನುಜರಾದ ನಮ್ಮ ಯುದ್ಧಕ್ರಮವನ್ನೂ ಬಾಣಸಾರವನ್ನೂ ಸಂಭಾವಿಸಿ ನೋಡು ಎನ್ನುತ್ತ ಅಸಮಾನಶರವನ್ನು ಮೂಡಿಗೆಯಿಂದ ತೆಗೆದು ಶರಾಸನದಲ್ಲಿ ಹೂಡಿ ಪ್ರಯೋಗಿಸಲು ; ರಕ್ಕಸನದನ್ನು ಕಂಡು ಆ ಮಹಾಸ್ತ್ರವು ತನ್ನ ಬಳಿಗೆ ಬರುವುದಕ್ಕಿಂತಲೂ ಮೊದಲೇ ಅದರ ನಿವಾರಣಾರ್ಥವಾಗಿ ಎಷ್ಟು ಸರಳುಗಳನ್ನು ಪ್ರಯೋಗಿಸಿದಾಗ್ಯೂ ಅವುಗಳೊಂದನ್ನೂ ಗಣಿಸದೆ ನುಗ್ಗಿಬಂದು ಆ ರಾಮಬಾಣಗಳು ಖಳನ ಅವಯವಗಳಲ್ಲಿ ಹೊಕ್ಕು ಹೊರಟು ರಕ್ತವನ್ನು ಹೊರಡಿಸಿದುವು. ಆಗ ಕುಂಭಕರ್ಣನು ವಿವಿಧಬಾಣಪ್ರಯೋಗಗಳನ್ನು ಮಾಡಿ ರಾಮನ ಸರ್ವಾಂಗಗಳಲ್ಲೂ ದ್ವಿಗುಣವಾಗಿ ರಕ್ತಪ್ರವಾಹವನ್ನು ಹರಿಸಿದನು. ಬಿಲ್ಲುಗಳೋ ? ಶಚೀಪತಿಯ ಬಿಲ್ಲುಗಳೋ ? ಹೆದೆಗಳ ಧ್ವನಿಗಳೋ ? ಸಿಡಿಲುಗಳ ಧ್ವನಿಗಳೋ ? ತನುಗಳೋ ? ಕೆನ್ನೀರ್ದುಂಬಿದ ಬಲ್ಮುಗಿಲುಗಳೋ ? ಬಾಣಸಮೂಹಗಳೋ ? ಮಳೆವನಿಗಳ ಪರಂಪರೆಗಳೋ ? ಎಂಬ ಭ್ರಾಂತಿಯನ್ನು ಹುಟ್ಟಿಸುತ್ತ ರಾಮರಾವಣಾನುಜರಿಬ್ಬರ ಜಗಳವು ಜಗತ್ತನ್ನು ಮಳೆಗಾಲದಂತೆ ಮೋಹಗೊಳಿಸಿತು. ರಾಮನು ಸಿಂಗಾಡಿಯಲ್ಲಿ ಕೋಲನ್ನು ಸಂಧಾನಿಸಲು ; ಆ ಕಾಲದಲ್ಲಿ ಬೋಳೆಯರೋಜನಾದ ಬೃಹಸ್ಪತಿಯು ಶಹಬಾಸು ! ರಾಮಾ ! ಎಂದು ಹೊಗಳುತ್ತಿದ್ದನು. ಕುಂಭಕರ್ಣನು ಬಾಣಸಂಧಾನವನ್ನು ಮಾಡಲು ; ರಕ್ಕಸರೋಜನಾದ ಶುಕ್ರನು—ಭಾಪುರೇ ! ಕುಂಭಕರ್ಣಾ ! ಎಂದು ಕೊಂಡಾಡುತ್ತಿದ್ದನು. ಅವರಿಬ್ಬರ ಘೋರ ಯುದ್ಧ ಸಂದರ್ಭದಲ್ಲಿ ಉಭಯಪಕ್ಷವೀರಕರಮುಕ್ತಗಳಾದ ಬಾಣವ್ಯೂಹಗಳಿಂದ ರವಿಮಂಡಲವೆಲ್ಲಾ ತುಂಬಿ ಕತ್ತಲಾಯಿತು.

ಆಗ ಶ್ರೀರಾಮನು ಕುಂಭಕರ್ಣನನ್ನು ನೋಡಿ—ಎಲೈ ಅಸುರನೇ, ಕೇಳು. ನೀನು ಘೋರಖಳರಲ್ಲಿ ಹೆಸರುಹೊಂದಿದ ಶೂರಭಟನು. ನಿನ್ನಂಥ ವೀರಾಗ್ರೇಸರನು ಲೋಕ ತ್ರಯದಲ್ಲೂ ಇಲ್ಲ. ನೀನು ನಮ್ಮಲ್ಲಿ ಹಗೆತನವನ್ನು ಮಾಡಿದವನಲ್ಲ. ಆದುದರಿಂದ ನಾನು ನಿನ್ನನ್ನು ಕೊಲ್ಲುವುದಕ್ಕೆ ಕಾರಣವಿಲ್ಲ. ನಮ್ಮ ಈ ಅಮೋಘವಾದ ಮಹಾ ಸ್ತ್ರಕ್ಕೆ ಗುರಿಯಾಗತಕ್ಕವನು ಅಪರಾಧಿಯಾದ ನಿನ್ನಣ್ಣನು. ಅವನನ್ನು ಕಳುಹಿಸು. ಹೋಗು. ನೀನು ನಮ್ಮೊಡನೆ ಬಳಲಿ ವ್ಯರ್ಥವಾಗಿ ನಾಶವನ್ನು ಹೊಂದಬೇಡ. ನಮ್ಮ ಆಹವದಲ್ಲಿ ನಿನ್ನಣ್ಣನು ಅಳಿದುಹೋದ ಮೇಲೆ ನಿನ್ನ ತಮ್ಮನಾದ ವಿಭೀಷಣನಂತೆ ನೀನೂ ಸುಖದಿಂದ ಬದುಕುವುದು ಲೇಸು. ಸತ್ತು ಸೇರುವ ಸ್ವರ್ಗಕ್ಕಿಂತಲೂ ಬದುಕಿ ಹೊಂದಿರುವ ನರಕವು ಲೇಸೆಂಬ ಲೋಗರ ಮಾತನ್ನು ಕೇಳಲಿಯಾ? ಈ ಸಂಗತಿ ಯನ್ನು ನಿನ್ನ ಮನಸ್ಸಿನಲ್ಲಿ ಚೆನ್ನಾಗಿ ಯೋಚಿಸಿ ತಿಳಿದು ನೋಡು. ಮೂರ್ಖತನದಿಂದ ಕೆಟ್ಟುಹೋಗಬೇಡ ಎಂದು ಹೇಳಿದನು. ಆ ಮಾತುಗಳನ್ನು ಕೇಳಿ ಕುಂಭಕರ್ಣನು— ಎಲೈ ರಾಮನೇ, ನೀನು ಹೀಗೆ ಹೇಳಬಹುದೇ? ನಾವು ತಾಮಸರು. ಅದರ ಮೇಲೆ ನಮಗೆ ಆಸುರಕರ್ಮದ ಬಳಕೆಯು ಪರಹಿಂಸೆಯೇ ನಮ್ಮ ದೃಢವ್ರತವು. ನಾವು ಇಳೆಯ ಮೂರ್ಖರಿಗೆಲ್ಲಾ ಗುರುಗಳು. ತಲೆಹೋದರೂ ಆಟ್ಟೆಯಿಂದ ಕಾದುವರೆಂಬು ದನ್ನು ನೀನು ತಿಳಿದಿಲ್ಲವೇ? ನೀವು ಸಾತ್ವಿಕರು. ಕರುಣಾಶಾಲಿಗಳು. ಇದು ಸಿಷ್ಟ ಯುವು. ನಿನ್ನ ಕೋಮಲಹೃದಯವನ್ನು ನನ್ನ ತಮ್ಮನಾದ ವಿಭೀಷಣನೊಬ್ಬನಲ್ಲಿಟ್ಟಿರು ವುದೇ ಸಾಕು. ನನ್ನಲ್ಲಿ ಕಠಿಣ ಹೃದಯವೇ ಇರಲಿ. ಯುದ್ಧರಂಗದಲ್ಲಿ ಕರುಣದ ಮಾತೇಕೆ? ನಮ್ಮ ಸರಳಿನ ಸಾರವನ್ನು ನೋಡೆಂದು ಹೇಳಿ ತಿರುವಿನಲ್ಲಿ ಬಾಣವನ್ನು ಹೂಡಿ ರಾಮನನ್ನು ಹೊಡೆದು ಬೊಬ್ಬಿರಿದನು.

ರಾಮನು ಮೊದಲು ವಿಶ್ವಾಮಿತ್ರ ಮಹರ್ಷಿಯು ತನಗೆ ಕೊಟ್ಟಿದ್ದ ಮಂತ್ರ ಕವಚದ ಬಲದಿಂದಲೂ ತಾನು ಲಕ್ಷ್ಮೀಪತಿಯಾದುದರಿಂದಲೂ ಆ ಬಾಣದ ಮಹಾ ಘಾತವನ್ನು ತಾಳಿ ಬದುಕಿದನಲ್ಲದೆ ತ್ರಿಲೋಕಗಳಲ್ಲಿರುವ ಸುರನರೋರಗ ಮಹಾ ವೀರಾಗ್ರೇಸರರಲ್ಲಿ ಯಾರಾದರೂ ಎದುರಾಗಿ ನಿಂತು ಬದುಕಬಲ್ಲವರುಂಟೇ? ಎಂದು ಗಗನಮಾರ್ಗದಲ್ಲಿದ್ದುಕೊಂಡು ದೇವತೆಗಳು ಹೇಳುತ್ತಿರಲು; ಆ ಮೇಲೆ ಶ್ರೀರಾಮನು ಅನೇಕ ಬಾಣಗಳನ್ನು ಪ್ರಯೋಗಿಸಿ ಅವನ ಸರಳುಗಳನ್ನೆಲ್ಲಾ ತರಿದೊಟ್ಟಿ ಒಂದು ಮಹಾ ಸ್ತ್ರವನ್ನು ತಿರುವಿನಲ್ಲಿ ಹೂಡಿ ಸಿಂಹನಾದವನ್ನು ಮಾಡಿ ಆಕರ್ಣಾಂತವಾಗಿ ಸೆಳೆದು ಪ್ರಯೋಗಿಸಿ ಆ ಖಳನ ಧನುಸ್ಸನ್ನು ಎರಡು ತುಂಡಾಗುವಂತೆ ಕತ್ತರಿಸಿದನು. ಆಗ ಮಹಾ ಕೋಪತಾಮ್ರಾಕ್ಷನಾದ ಕುಂಭಕರ್ಣಾಸುರನು ಮೊದಲು ಸರೋಜಸಂಭ ವನು ತನಗೆ ಕೊಟ್ಟಿದ್ದ ಶಕ್ತಿಯನ್ನು ಮೂಡಿಗೆಯಿಂದ ತೆಗೆಯಲು; ಯುದ್ಧವನ್ನು ನೋಡುವುದಕ್ಕೆ ಬಂದು ಗಗನಾಂತರಾಳದಲ್ಲಿ ನೆರೆದಿದ್ದ ದೇವತೆಗಳ ನೆರವಿಯೆಲ್ಲಾ ಭಯಭ್ರಾಂತವಾಗಿ ತೋರಿದ ಕಡೆಗೆ ಓಡಿಹೋಯಿತು. ಕೇಸುರಿಯು ಗಗನ ಮಂಡಲ ವನ್ನೂ ಸರ್ವ ದಿಕ್ಕುಗಳನ್ನೂ ವ್ಯಾಪಿಸಿತು. ಕುಂಭಕರ್ಣನು ಅಂಥ ಅದ್ಭುತಶಕ್ತ್ಯಾ ಯುಧವನ್ನು ಕೈಯಲ್ಲಿ ಹಿಡಿದುಕೊಂಡು ರಾಮನನ್ನು ನೋಡಿ—ಎಲೈ ರಾಮನೇ,

ಈ ಮಹಾ ಶಕ್ತಿಯು ಹರಿಹರ ಬ್ರಹ್ಮಾದಿ ಪ್ರಚಂಡವೀರರ ಎದೆಗಳನ್ನು ಗಡಗಡನೆ ನಡುಗಿಸುವಂಥದು. ಇದರ ಮಹಾ ಘಾತದಲ್ಲಿ ನೀನು ಸಾಯದೆ ಉಳಿಯುವಿಯಾದರೆ ದಶವದನನು ತಂದ ಹೆಣ್ಣಿನ ಮುಂದಣ ಮದುವೆಯು ನಿನಗೆ. ಮತ್ತು ತ್ರಿಲೋಕಗಳಲ್ಲೂ ನಿನ್ನನ್ನು ಹೋಲುವ ಸುಭಟರಿಲ್ಲ ಎಂದನು. ಆಗ ವಿಭೀಷಣನು ಮನಸ್ಸಿನಲ್ಲಿ—ಆಹಾ! ರಾಮಚಂದ್ರನ ಕೀರ್ತಿಲತೆಯು ಕೀಳಲ್ಪಡುವುದೇ! ಪಾಪವೆಂಬ ಮುಳ್ಳುಗಿಡವು ಬೆಳೆಯುವುದಕ್ಕೆ ಅವಕಾಶವುಂಟಾಗಿರುವುದೇ? ಮುಂದೇನುಗತಿ? ಈ ಪ್ರಳಯ ಮಹಾ ಶಕ್ತಿಯನ್ನು ತಡೆಯುವವರಾರು? ಎಂದು ಯೋಚಿಸಿ ಗಡಗಡನೆ ನಡುಗುತ್ತ ಶ್ರೀರಾಮನ ಬಳಿಗೆ ಓಡಿಬರುತ್ತಿರಲು; ರಾಮನು ವಿಭೀಷಣನ್ಹೆದರುವುದಕ್ಕೆ ಕಾರಣವನ್ನು ತಿಳಿದು ಕೂಡಲೆ ಮನಸ್ಸಿನಲ್ಲಿ ಬ್ರಹ್ಮನನ್ನು ಧ್ಯಾನಿಸುತ್ತ ಅತಿ ಶೀಘ್ರದಿಂದ ಬತ್ತಳಿಕೆಯಲ್ಲಿದ್ದ ವಾಯುವ್ಯಾಸ್ತ್ರವನ್ನು ತೆಗೆದು ಬಿಲ್ಲಿನಲ್ಲಿ ಹೂಡಿ ಕುಂಭಕರ್ಣನ ಕೈಯಲ್ಲಿರುವ ಶಕ್ತ್ಯಾಯುಧದ ಮೇಲೆ ಪ್ರಯೋಗಿಸಲು; ಅದು ನಿರ್ಭರಗಮನದಿಂದ ಹೋಗಿ ಆ ದನುಜನ ಶಕ್ತ್ಯಾಯುಧದ ಮೇಲೆ ಬಿದ್ದು ತಾಗಿ ಅದನ್ನು ಆಕಾಶಮಾರ್ಗಕ್ಕೆ ಹಾರಿಸಿತು. ಆ ಶಕ್ತಿಯು ಲಘುಗತಿಯಿಂದ ಹೋಗಿ ಆಕಾಶಗಂಗೆಯ ನೀರುಗಳನ್ನೆಲ್ಲಾ ಹೀರಿ ಅಲ್ಲಿಂದ ಹೊರಟು ಇಂದ್ರನೇ ಮೊದಲಾದ ಮಹಾ ದೇವತೆಗಳನ್ನೆಲ್ಲಾ ಮಹಾಜ್ವಾಲೆಯಿಂದ ಸುಟ್ಟು ಕಳವಳಪಡಿಸಿ ಬಾಯ್ಬಿಡಿಸಿ ಮುಂದೆ ಹೊರಟು ಮಹಾ ವೇಗದಿಂದ ಬರುತ್ತ ಸತ್ಯಲೋಕವನ್ನು ಪ್ರವೇಶಿಸಿ ಬ್ರಹ್ಮನ ಮೂಡಿಗೆಯನ್ನು ಹೊಕ್ಕು ಅಲ್ಲಿ ನಿಂತಿತು. ಆಗ ಕುಂಭಕರ್ಣನು ಆ ಬಲ್ಗೈದು ಕೈಮಾರಿಹೋದುದನ್ನು ಕಂಡು ಮನಸ್ಸಿನಲ್ಲಿ ರಾಮನ ಸುಕೃತವನ್ನು ಹೊಗಳಿ ತಾನು ಸ್ವಲ್ಪವಾದರೂ ಕಂಗೆಡದೆ ಪರಿಘಾಯುಧವನ್ನು ತೆಗೆದುಕೊಂಡು ಅದರಿಂದ ರಾಮನನ್ನು ಹೊಡೆಯಲು; ಆತನು ಹರಿತವುಳ್ಳ ಐದಂಬುಗಳನ್ನು ಪ್ರಯೋಗಿಸಿ ಅದನ್ನು ಕತ್ತರಿಸಿ ಕೆಡಹಿದನು. ಮತ್ತೆ ಕುಂಭಕರ್ಣನು ಕ್ರುದ್ಧನಾಗಿ ಮೇರುಪರ್ವತದಂತೆ ತೋರವಾದ ಗದಾಯುಧವನ್ನು ತೆಗೆದುಕೊಂಡು ಬೀಸಿ ರಾಮನ ಮೇಲೆ ಹಾಕಲು; ಅದು ಲೋಕಗಳನೆಲ್ಲಾ ಬೆದರಿಸುತ್ತ ಬರುತ್ತಿರುವುದನ್ನು ನೋಡಿ ಬಿಲ್ಲಾಳುಗಳ ಕಲ್ಲಾಯ್ತನಾದ ಶ್ರೀರಾಮನು—ಈ ಮಹಾಗದೆಯು ಈ ನಮ್ಮ ಯುದ್ಧಭೂಮಿಯಲ್ಲಿ ಬಿದ್ದರೆ ಕಪಿಕಟಕಕ್ಕೆಲ್ಲಾ ಸಂಪೂರ್ಣ ಹಾನಿಯುಂಟಾಗುವುದೆಂದು ಭಾವಿಸಿ ವಿರಾಮವಿಲ್ಲದೆ ಐವತ್ತು ಬಾಣಗಳನ್ನು ಪ್ರಯೋಗಿಸಿ ಅದನ್ನು ಕಡಿದು ಹಾರಿಸಿ ಲಂಕೆಯಲ್ಲಿ ಬೀಳುವಂತೆ ಮಾಡಲು; ಆ ತುಂಡುಗಳು ಮಹಾ ತ್ವರಿತಗತಿಯಿಂದ ಹೋಗಿ ಲಂಕಾದುರ್ಗ ಮಧ್ಯದಲ್ಲಿ ಬಿದ್ದು ರಾಕ್ಷಸರ ಹಸ್ತ್ಯಶ್ವರಥಪದಾತಿರೂಪವಾದ ಚತುರಂಗಬಲವನ್ನು ಬಹಳವಾಗಿ ಕೊಂದು ಹಾಹಾಕಾರವನ್ನುಂಟುಮಾಡಿದುವು.

ಅನಂತರದಲ್ಲಿ ಮೊಬ್ಬಿಗರೊಡೆಯನ ತಮ್ಮನಾದ ಕುಂಭಕರ್ಣನು ರಾಮನ ಸಮೀಪಕ್ಕೆ ತನ್ನ ತೇರನ್ನು ನೂಕಲು; ಶ್ರೀರಾಮನು ಕುಪಿತನಾಗಿ ಬಾಣಪ್ರಯೋಗವನ್ನು ಮಾಡಿ ಆ ತೇರನ್ನೆಳೆಯುವ ಮದಗಜಗಳನ್ನೆಲ್ಲಾ ಸವರಿ ಸಾರಥಿಯ ತಲೆಗಡಿದನು. ಅಷ್ಟಾದಾಗ್ಯೂ ಖಳನು ಸ್ವಲ್ಪವಾದರೂ ಕಂಗೆಡದೆ ಕೈಯಲ್ಲಿ ಖಡ್ಗಾಯುಧ

ವನ್ನು ತೆಗೆದುಕೊಂಡು ಬೊಬ್ಬಿರಿಯುತ್ತ ರಾಮನ ಮೇಲೆ ಬಿದ್ದು ಹೊಡೆಯುವುದಕ್ಕೆ ಬರುತ್ತಿರಲು ; ಆತನು ಶೀಘ್ರದಿಂದ ದಿವ್ಯಾಸ್ತ್ರವನ್ನು ತೊಟ್ಟು ಪ್ರಯೋಗಿಸಿ ಅವನ ಹಸ್ತವನ್ನು ಛೇದಿಸಿದನು. ಆ ಮೇಲೆ ಕುಂಭಕರ್ಣನು ತನ್ನ ಉಕ್ಕಿನ ರಥದ ಗಾಲಿಯನ್ನು ಕಳಚಿಕೊಂಡು ಮೋಟುಕೈಗೆ ಸಿಕ್ಕಿಸಿಕೊಂಡು ತಿರುವಿ ರಾಮನನ್ನು ಹೊಡೆಯುವುದಕ್ಕೆ ಉದ್ಯುಕ್ತನಾಗಲು ; ರಾಮನು ದಿವ್ಯಾಸ್ತ್ರಪ್ರಯೋಗದಿಂದ ಅವನ ತೋಳನ್ನು ಕತ್ತರಿಸಿ ಹಾರಿಸಿ ಅದು ಸಮುದ್ರದಲ್ಲಿ ಬೀಳುವಂತೆ ಮಾಡಿದನು. ಆಹಾ ! ರಾವಣ ಸಹೋದರನ ಎದೆಗೆಚ್ಚನ್ನು ಬಣ್ಣಿಸುವವರಾರು ? ಅವನು ಅದರಿಂದಲೂ ಧೈರ್ಯಹೀನನಾಗದೆ ಎಡದೋಳಿನಿಂದ ರಾಮನನ್ನು ಅಪ್ಪಳಿಸಿ ಕೆಡಹುವೆನೆಂದು ಓಡಿಬರುತ್ತಿರಲು ; ಶ್ರೀರಾಮನು ಅಸ್ತ್ರಪ್ರಯೋಗದಿಂದ ಅದನ್ನೂ ಕಡಿದು ಸಮುದ್ರದಲ್ಲಿ ಹಾಕಿಸಿದನು. ಪುನಃ ಖಳನು ಒಗೆಗುಂದದೆ ರಾಮನ ಮೇಲೆ ಬಿದ್ದು ಕೊಲ್ಲುವೆನೆಂದು ಮುಂದೈತರುತ್ತಿರಲು ; ಕೌಸಲ್ಯಾತನಯನು ವೈಷ್ಣವಾಸ್ತ್ರವನ್ನು ಪ್ರಯೋಗಿಸಿ ಅವನ ತಲೆಯನ್ನು ಕೆಡಹಿದನು. ಆ ಕೂಡಲೆ ದೇವತೆಗಳೆಲ್ಲಾ ಜಯಜಯವೆಂದು ಶ್ರೀರಾಮನನ್ನು ಹೊಗಳಿದರು. ದೇವದುಂದುಭಿಗಳನ್ನು ಬಾರಿಸಿದರು. ಶ್ರೀರಾಮನ ಮೇಲೆ ಪೂಮಳೆಗರೆದರು. ಅಪ್ಸರಸ್ತ್ರೀಯರು ನರ್ತಿಸಿ ಹಾಡುಗಳಿಂದ ಶ್ರೀರಾಮನ ಕೀರ್ತಿಯನ್ನು ಸ್ತುತಿಸಿದರು. ಜಗತ್ತಿನ ಪಾಪವು ಬೆಚ್ಚಿತು. ಅನ್ಯಾಯವು ಕಂಪಿಸಿತು. ದುರ್ನೀತಿಯು ನಡುಗಿತು. ಪರಹಿಂಸೆಯು ತಲೆಬೊಗ್ಗಿಸಿತು. ಲೋಕದ ಭೀತಿಯು ಜಡವಾಯಿತು. ಸುಳ್ಳಿನದೊಂದು ಕಣ್ಣು ಹೋಯಿತು. ಚೌರ್ಯದ ಕಾಲು ಮುರಿದಿತು. ಆಸುರಕರ್ಮಕ್ಕೆ ಎದೆನಡುಗು ಹುಟ್ಟಿತು. ತಮೋಗುಣದ ಕಿರೀಟವು ಕಳಚಿಬಿದ್ದಿತು ದುರ್ಗರ್ವದ ರತ್ನಸಿಂಹಾಸನವು ತಲೆಕೆಳಗಾಯಿತು. ಯಜ್ಞವಿಘ್ನತೆಗೆ ಮೇಲುಸಿರು ಕಂಡಿತು. ತಪೋಭಂಗದ ಲಲಾಟಲಿಪಿಯು ಅಳಿಸಲ್ಪಟ್ಟಿತು. ಹೇಳುವುದೇನು ! ರಾಕ್ಷಸಕುಲದ ಪರಿತಾಪಬೀಜವು ಮೊಳೆತುದು. ರಾಕ್ಷಸಕಟಕದಲ್ಲಿ ದುಃಖಧ್ವನಿಯೆದ್ದಿತು. ನಮ್ಮನ್ನು ನುಂಗಿಬಿಡುವುದಕ್ಕೆ ಬಂದಿದ್ದ ಒಂದು ಮಹಾಮೃತ್ಯುವಿನ ನಾಮವು ನಿರ್ನಾಮವಾಯಿತೆಂದು ಸಂತೋಷದಿಂದ ಕಪಿಕಟಕವು ಮೈಯುಬ್ಬಿ ಮೊರೆದಿತು. ನೀತಿಲತಾಕಂದನಾದ ರಘುನಂದನನು ಲೋಕಕಂಟಕನಾದ ಕುಂಭಕರ್ಣನ ಮರಣದಿಂದ ಜಗಜ್ಜನರ ಅರ್ಧಭಯವು ನಿವಾರಿತವಾಯಿತೆಂದು ಸಂತೋಷಯುಕ್ತನಾಗಿ ರಣಾಂಗಣದಿಂದ ಹಿಂದಿರುಗಿ ಸುಗ್ರೀವ ವಿಭೀಷಣಾದಿಗಳಿಂದ ಸ್ತುತಿಸಲ್ಪಡುತ್ತಿರುವವನಾಗಿ ತನ್ನ ಬೀಡಾರವನ್ನು ಕುರಿತು ತೆರಳಿದನು. ಇತ್ತ ಲಕ್ಷ್ಮಣಾಂಜನೇಯರು ಎದುರಾದ ರಾಕ್ಷಸ ಸೇನೆಗಳನ್ನೆಲ್ಲಾ ಸಂಹರಿಸಿ ರಾಮನ ಬಳಿಗೆ ಬಂದು ನಮಸ್ಕರಿಸಲು ; ಶ್ರೀರಾಮನು ಅವರನ್ನು ನೋಡಿ ಸಂತೋಷಸಾಗರದಲ್ಲಿ ಮುಳುಗಿ ಅವರಿಬ್ಬರನ್ನೂ ಬರಸೆಳೆದು ತೆಗೆದು ಆಲಿಂಗಿಸಿ ಮುದ್ದಿಸಿದನು. ಆ ಮೇಲೆ ಕಪಿವೀರರನ್ನೆಲ್ಲಾ ಸನ್ಮಾನಿಸಿ ಸಭಾಮಧ್ಯದಲ್ಲಿ ಕುಳಿತು ಪ್ರಮುಖರೊಡನೆ ಮುಂದಣ ಕಾರ್ಯಾಲೋಚನೆಯನ್ನು ಮಾಡುತ್ತಿದ್ದನು.

---

## 8. THE BATTLE OF LANKA; DEATH OF INDRAJITU.

## ೮. ಇಂದ್ರಜಿತ್ಸಂಹಾರ.

ಇತ್ತ ಲಂಕಾದುರ್ಗದಲ್ಲಿ ನಕ್ತಂಚರ ಚಕ್ರೇಶ್ವರನಾದ ರಾವಣನು ತನ್ನ ಪ್ರಿಯ ಸಹೋದರನೂ ಅಸಹಾಯಶೂರನೂ ಆದ ಕುಂಭಕರ್ಣನು ಯುದ್ಧರಂಗದಲ್ಲಿ ಮಡಿದು ಹೋದನೆಂಬ ಸುದ್ದಿಯನ್ನು ಕೇಳಿ ಅನಿವಾರ್ಯ ದುಃಖದಿಂದ ಕೂಡಿ ಹಾಸಿಗೆಯ ಮೇಲೆ ಬಿದ್ದು ಹೊರಳುತ್ತ ಚಿಂತೋದಧಿಯಲ್ಲಿ ಬಿದ್ದು ದಡವನ್ನು ಕಾಣದೆ ಕಂಗೆಟ್ಟು ಪರವಶಂಗೊಂಡನು. ಆ ಕಾಲದಲ್ಲಿ ಶೂರನಾದ ಇಂದ್ರಜಿತ್ತೇ ಮೊದಲಾದ ರಾಕ್ಷಸ ನಾಯಕರು ಬಂದು ನೋಡಿ ವ್ಯಸನಾಗ್ನಿತಪ್ತರಾದರೂ ಮುಂಗೆಡದೆ ರಾವಣನಿಗೆ ಶೈತ್ಯೋಪಚಾರವನ್ನು ಮಾಡಿದುದರಿಂದ ಅವನು ಮೂರ್ಛೆತಿಳಿದೆದ್ದು ಕುಳಿತು—ಹಾ! ಕುಂಭಕರ್ಣನೇ, ನನ್ನ ಮದಿಸಿದ ಪಟ್ಟದಾನೆಯೇ! ಸಾಮಾನ್ಯರಾದ ನರರಿಗೂ ಕಪಿಭಟರಿಗೂ ಸೋತು ಮಡಿದುಹೋದೆಯಾ! ಈ ನಿಶಾಚರ ಚಕ್ರವು ಸಲಗನಿಲ್ಲದ ಆನೆಗಳ ತಂಡದಂತಾಯಿತು. ವಿಭೀಷಣನು ಶತ್ರುಪಕ್ಷವನ್ನು ವಹಿಸಿದಾಗಲೇ ನನ್ನೆಡದ ಭುಜಬಲವು ಬಯಲಾಯಿತೆಂದು ತಿಳಿದಿದ್ದರೂ ನಿನ್ನ ತ್ರಿಲೋಕಾದ್ಭುತ ಬಲಾತಿಶಯವನ್ನು ನೆನಸಿ ಧೈರ್ಯಗೊಂಡಿದ್ದೆನು. ದುರ್ವಿಧಿಯು ನಿನ್ನನ್ನೂ ಮುರಿದುಹಾಕಿತೇ! ನಿನ್ನ ಬಲದಿಂದ ಲೋಕತ್ರಯದ ವೀರರನ್ನೂ ತೃಣಕ್ಕೆಣೆಯಾಗಿ ತಿಳಿದಿದ್ದೆನಲ್ಲಾ! ಈ ಲಂಕಾನಗರದ ಅರಮನೆಯಲ್ಲಿ ನೀನು ಮಲಗಿದ್ದುದರಿಂದ ಸುರನರೋರಗನಾಯಕರೆಲ್ಲರೂ ಲಂಕೆಯೆಂಬ ಹೆಸರನ್ನು ಕೇಳಿದ ಮಾತ್ರದಿಂದಲೇ ಬೆಚ್ಚಿ ಬಿದ್ದು ಮೂರ್ಛೆಹೊಂದುತ್ತಿದ್ದರಲ್ಲಾ! ಲಂಕಾನಗರದ ಒಡೆಯತನದ ಬಲವು ಬಯಲಾದಂತೆ ನೀನು ಮಡಿದು ಮಾಯವಾದಿಯಾ! ಅಯ್ಯೋ! ನನ್ನ ಭುಜಬಲವೇ, ನಿನಗೆ ಅಂತ್ಯಕಾಲವು ಒದಗಿತೇ! ಇದು ವರೆಗೂ ಯುದ್ಧರಂಗದಲ್ಲಿ ನಿನಗೆದುರಾಗಿ ಹಿಂದಿರುಗಿದ ವೀರರಿಲ್ಲವಲ್ಲಾ! ಆ ವೀರರು ನಿನ್ನನ್ನು ಸ್ವಪ್ನದಲ್ಲಿ ನೋಡಿ ಆರ್ತಧ್ವನಿಯಿಂದ ಮೃತಿಹೊಂದುತ್ತಿದ್ದರಲ್ಲಾ! ನಮ್ಮ ಕುಲವಿರೋಧಿಗಳಾದ ದೇವತೆಗಳಿಗೆ ತೃಪ್ತಿಕರವಾದ ಯಜ್ಞಕ್ರಿಯೆಗಳು ರಾಕ್ಷಸಕುಲೋದ್ಧಾರಕನಾದ ನಿನ್ನಿಂದ ಪ್ರಳಯವನ್ನು ಹೊಂದಿದ್ದವಲ್ಲಾ! ಹಾ! ವೀರಭ್ರಾತೃವಿಹೀನನಾದೆನೇ! ಎಂದು ಪುನಃ ಮೂರ್ಛೆ ಹೊಂದಿದನು. ಆ ಮೇಲೆ ಸ್ವಲ್ಪ ಹೊತ್ತಿನ ಮೇಲೆ ಮೂರ್ಛೆತಿಳಿದೆದ್ದು ಕುಂಭಕರ್ಣನನ್ನು ನೆನೆನೆನೆದು ಮರುಗಿ ಹಂಬಲಿಸುತ್ತಿರುವ ತಂದೆಯ ಬಳಿಗೆ ಬಂದು ಇಂದ್ರಜಿತ್ತು—ಎಲೈ ತಂದೆಯೇ, ಲಾಲಿಸು. ಲೋಕದ ಜೀವಿಗಳಿಗೆ ಜನನವು ಹೇಗೆ ಸ್ವಭಾವವೋ ಹಾಗೇ ಮರಣವೂ ಸ್ವಭಾವವಾದುದು. ಇಷ್ಟು ಮಾತ್ರಕ್ಕಾಗಿ ಸರ್ವವಿದ್ಯಾವಿಶಾರದನಾದ ನೀನು ಮರುಗುವುದುಚಿತವೇ? ಆದರಲ್ಲಿ ನಮ್ಮ ರಾಕ್ಷಸಕುಲದವರು ಇರುವ ವರೆಗೂ ಜಗದ್ಭೀಕರತೆಯಿಂದ ಬದುಕಿ ವೀರರೊಡನೆ ಕಾದಿ ಮಡಿಯುವುದು ಶ್ರೇಯಸ್ಕರವು. ಅದರಂತೆ ನನ್ನ ಚಿಕ್ಕಪ್ಪನಾದ ಕುಂಭಕರ್ಣನು ಅಸಂಖ್ಯಾತರಾದ ಅರಿಭಟರನ್ನು ಬಡಿದುರುಳಿಸಿ ಹಿಂದೆಗೆಯದೆ ಕಾದಿ ಶತ್ರುಕುಲದವರ ಎದೆಗುಬ್ಬಸವನ್ನುಂಟುಮಾಡಿ ಮಡಿದುಹೋದನು. ಇದಕ್ಕೆ ನೀನು ವ್ಯಸನಪಡುವುದರಿಂದ

ಪ್ರಯೋಜನವೇನು? ಏನೂ ಇಲ್ಲವು. ಅದುಕಾರಣ ಕುಂಭಕರ್ಣನ ವಿಷಯಕವಾದ ವ್ಯಸನವನ್ನು ಬಿಟ್ಟು ಈಗ ನಾನು ಹೇಳುವ ಮಾತುಗಳನ್ನು ಕೇಳು. ನಾನು ನಾಳಿನ ಉದಯಮುಖದಲ್ಲಿ ಶತ್ರುಸೈನ್ಯವನ್ನು ಪ್ರವೇಶಿಸಿ ರಾಮಲಕ್ಷ್ಮಣರ ಮಾಂಸಗಳಿಂದಲೂ ಸುಗ್ರೀವಾದಿ ಕಪಿಗಳ ಮಾಂಸಗಳಿಂದಲೂ ಔತಣವನ್ನು ಮಾಡಿಸಿ ಭೂತಪ್ರೇತಪಿಶಾಚಾದಿಗಳ ಬಳಗವನ್ನು ದಣಿಸದಿದ್ದರೆ ನಿನ್ನಿಂದ ಮಂಡೋದರಿಯಲ್ಲಿ ಹುಟ್ಟಿದ ಮಗನಲ್ಲ. ಈ ನನ್ನ ಪ್ರತಿಜ್ಞೆಯು ಸಾಗದಿದ್ದರೆ ಮಹಾಗ್ನಿಕುಂಡದಲ್ಲಿ ಬಿದ್ದು ಪ್ರಾಣಗಳನ್ನು ಕಳೆದುಕೊಳ್ಳುವೆನು. ಮನಸ್ಸಿನ ದುಗುಡವನ್ನು ಬಿಡು. ನನಗೆ ಅಪ್ಪಣೆಯನ್ನು ಕೊಡು ಎಂದು ಹೇಳಿ--ನನ್ನ ಕದನಕ್ಕೆ ಇದೇ ಕಡೆಯೆಂದು ಭಾಷೆಯನ್ನಿತ್ತು ರಥಾರೂಢನಾಗಿ ರಿಪುಮಾರಣಮಂತ್ರಜ್ಞರಾದ ರಾಕ್ಷಸ ಪುರೋಹಿತರೊಡನೆ ಆ ರಾತ್ರಿಯಲ್ಲೇ ಹೊರಟು ಶೀಘ್ರವಾಗಿ ನಿಕುಂಭಿಳೆಗೆ ಬಂದು ಪ್ರಶಸ್ತಸ್ಥಾನದಲ್ಲಿ ಅಗ್ನಿಯನ್ನು ಪ್ರತಿಷ್ಠಿಸಿ ಆಸುರಹೋಮವನ್ನು ಮಾಡಲುಜ್ಜುಗಿಸಿ ಮಾಂಸದ ಚುರುವನ್ನೂ ರಕ್ತದ ಆಜ್ಯಧಾರೆಗಳನ್ನೂ ನರದ ದರ್ಭೆಗಳನ್ನೂ ಬೆರಳ ಸಮಿತ್ತುಗಳನ್ನೂ ಮಂತ್ರಪೂರ್ವಕವಾಗಿ ಹೋಮಮಾಡಿ ಪೂರ್ಣಾಹುತಿಯನ್ನು ಕೊಡಲು ; ಆಗ ಸಂತುಷ್ಟನಾದ ಬ್ರಹ್ಮನು ಪ್ರತ್ಯಕ್ಷನಾಗಿ ಬಂದು ಇಂದ್ರಜಿತ್ತಿಗೆ ಬ್ರಹ್ಮಾಸ್ತ್ರವನ್ನು ಕೊಟ್ಟು ನಾಳಿನ ಕಾಳೆಗದಲ್ಲಿ ನಿನಗೆ ಜಯವಾಗುವುದೆಂದು ವರವನ್ನಿತ್ತು ಸತ್ಯಲೋಕವನ್ನು ಕುರಿತು ತೆರಳಿದನು. ಅನಂತರದಲ್ಲಿ ಇಂದ್ರಜಿತ್ತು ಅಗ್ನಿಕುಂಡದಿಂದ ಉತ್ಪನ್ನವಾದ ದಿವ್ಯರಥ ರಥಾಶ್ವಧನುರ್ಬಾಣಗಳನ್ನು ತೆಗೆದುಕೊಂಡು ಸಂತೋಷಯುಕ್ತನಾಗಿ ಅಲ್ಲಿಂದ ಹೊರಟು ತಂದೆಯ ಬಳಿಗೆ ಬಂದು ನಮಸ್ಕರಿಸಿ—ಎಲೈ ಜನಕನೇ, ಈ ವರೆಗೂ ನಿನಗಾಗಿರುವ ಅಪಜಯವೆಂಬ ಸಸಿಯನ್ನು ಕಿತ್ತು ರಾಮನ ಹೊಟ್ಟೆ ಎಂಬ ಗದ್ದೆಯಲ್ಲಿ ನೆಡುವೆನು. ಅದಕ್ಕೆ ಲಕ್ಷ್ಮಣನ ರಕ್ತವೆಂಬ ನೀರನ್ನು ಹೊಯ್ದು ಬೆಳಿಸುವೆನು. ಅದರ ಫಲವನ್ನು ಸುಗ್ರೀವಾದಿ ಕಪಿಗಳಿಗೆ ತಿನ್ನಿಸುವೆನು ಮತ್ತು ಈ ವರೆಗೂ ಸತ್ತುಹೋಗಿರುವ ಕುಂಭಕರ್ಣನೇ ಮೊದಲಾದ ಸುಭಟರನ್ನು ಬದುಕಿಸಿ ಕರೆದುಕೊಂಡು ಬಂದು ನಿನ್ನ ಓಲಗದ ಚಾವಡಿಯಲ್ಲಿ ನಿಲ್ಲಿಸುವೆನು. ಅದು ಸಾಧ್ಯವಲ್ಲದಿದ್ದರೆ ಯಮನ ಹೊಟ್ಟೆಯಲ್ಲ ಕಲ್ಮುಳ್ಳುಗಳನ್ನು ತುಂಬುವೆನು ಎಂದು ಹೇಳಿ ತಂದೆಯಾದ ರಾವಣನಿಂದ ವೀಳಯವನ್ನು ತೆಗೆದುಕೊಂಡು ಅಲ್ಲಿಂದ ಹೊರಟು ಕ್ಷಣಕಾಲದಲ್ಲಿ ಚತುರಂಗ ಬಲಸಮೇತನಾಗಿ ಯುದ್ಧಭೂಮಿಗೆ ಬಂದು ನಿಂತನು. ಆ ಕೂಡಲೆ ಕಪಿಸೈನ್ಯದಲ್ಲಿ ಕಪಿವೀರರ ಕಣ್ಣುಗಳು ತೂಕಡಿಕೆಯಿಂದ ಜೋಂಪಿಸಿದುವು. ಕೈಗಳಲ್ಲಿದ್ದ ಗಿರಿತರುಗಳು ಜಾರಿ ಕೆಳಗೆ ಬಿದ್ದುವು. ಸುಗ್ರೀವಾದಿ ನಾಯಕರ ಎದೆಯು ಕಂಪಿಸಿತು. ರಾಮಲಕ್ಷ್ಮಣರ ವಾಮಭುಜಗಳು ನಡುಗಿದುವು.

ಶ್ರೀರಾಮನು ಆ ವೇಳೆಯುಲ್ಲಾದ ಅಪಶಕುನಪರಂಪರೆಗಳನ್ನು ನೋಡಿ ಮನಸ್ಸಿನಲ್ಲಿ ವ್ಯಸನವುಳ್ಳವನಾಗಿ ಜಾಂಬವಂತನನ್ನು ಕುರಿತು--ಎನ್ನೈ ಸೇನಾಪತಿಯೇ, ಈ ದಿವಸದಲ್ಲಿ ಇಂಥಾ ಭಯಂಕರವಾದ ಉತ್ಪಾತಗಳು ಉಂಟಾಗುತ್ತಿವೆಯಲ್ಲಾ! ನೀನು ಮುಂದಣ ಲೇಸು ಹೊಲ್ಲೆಹಗಳನ್ನು ಕುರಿತು ಏನು ಯೋಚಿಸುತ್ತಿರುವಿ ? ಎಂದು ಕೇಳಲು

ಆತನೆದ್ದು ಕೈಮುಗಿದು ನಿಂತು—ಜೀಯಾ, ನಾನು ಏನು ಹೇಳಲಿ? ಈ ದಿವಸ ಯುದ್ಧದಲ್ಲಿ ನಮಗೆ ಜಯವುಂಟಾಗುವುದೆಂದು ಹೇಳುವುದಕ್ಕಾಗುವುದಿಲ್ಲ. ನಮ್ಮ ಬಲಕ್ಕೆ ಮರಣವು ತಪ್ಪದು ಎಂದು ಹೇಳಿ ಸುಗ್ರೀವನನ್ನು ಕರೆದು ಏಕಾಂತದಲ್ಲಿ—ಈ ದಿವಸ ನಮಗೆ ಅಪಜಯವೂ ಮರಣವೂ ಬಾರದೆ ಇರಲಾರದು. ಅದು ಕಾರಣ ಈ ಅಪಾಯ ನಿವಾರಣೆಗೆ ಸಾಧ್ಯವಾದ ಪ್ರಯತ್ನವನ್ನು ಮಾಡು ಎಂದು ಹೇಳಿದನು. ಸುಗ್ರೀವನು ಆ ಮಾತುಗಳನ್ನು ಕೇಳಿ ಯುಕ್ತವೆಂದು ಭಾವಿಸಿ ಕೂಡಲೆ ರಾಮನ ಸಮೀಪದಲ್ಲಿ ಸುಷೇಣಾಂಜನೇಯರನ್ನು ಇರಿಸಿ ಕಪಿಗಳ ಪಡೆಯ ಒಡ್ಡಿನ ಮೂಡಣ ಕಡೆಯಲ್ಲಿ ಶತಬಲಿವಿಭೀಷಣರನ್ನು ನೇಮಿಸಿ, ಗವಾಕ್ಷಶರಭಮೈಂಧದ್ವಿವಿದರನ್ನು ಬಲದ ಪಶ್ಚಿಮಭಾಗದ ಕಾವಲಿಗೆ ನಿಲ್ಲಿಸಿ ತಾನು ಯುದ್ಧಕ್ಕೆ ಸನ್ನದ್ಧನಾಗಿ ನಿಂತು ನೀಲನನ್ನು ಕರೆದು—ಕಪಿವೀರ ಪರಿವಾರವೆಲ್ಲವೂ ಯುದ್ಧಕ್ಕೆ ನಡೆಯಲಿ ಎಂದು ತಿಳಿಸಲು ; ಆ ಕೂಡಲೆ ಸರ್ವಸೇನಾನಾಯಕನಾದ ನೀಲನ ಆಜ್ಞಾನುಸಾರವಾಗಿ ಕಪಿವಾಹಿನೀಪತಿಗಳು ತಮ್ಮ ತಮ್ಮ ಬಲದೊಡನೆ ಗಿರಿತರುಶಿಲಾದ್ಯಾಯುಧಗಳನ್ನು ತೆಗೆದುಕೊಂಡು ದಿಗ್ಭಿತ್ತಿಗಳೊಡೆಯುವಂತೆ ಆರ್ಭಟಿಸುತ್ತ ಕಾಳೆಗದ ಕಣದಲ್ಲಿ ಬಂದು ನಿಂತರು. ಆ ಮೇಲೆ ಪ್ರಳಯಕಾಲದಲ್ಲಿ ಮಹಾಸಾಗರಗಳು ಬಂದು ಒಂದ ನ್ನೊಂದು ತಾಗಿ ಅಪ್ಪಳಿಸಿ ಬೆರೆಯುವಂತೆ ವಾನರ ನಿಶಾಚರ ಬಲಗಳ ಚೂಣಿಗಾಳೆ ಗವು ಕಂಗೊಳಿಸಿತು. ಕಪಿರಾಕ್ಷಸರ ಬಡಿದಾಟದಲ್ಲಿ ಎಸೆಯುವ ಗಿರಿತರುಗಳಿಂದಲೂ ಪ್ರಯೋಗಿಸುವ ಬಾಣಗಳಿಂದಲೂ ಅಂಬರತಳವು ಮುಚ್ಚಿ ಸೂರ್ಯರಶ್ಮಿಯ ಸಂಚಾ ರಕ್ಕೆ ತಡೆಯಾಯಿತು. ಕಪಿವೀರರು ರಾಕ್ಷಸವೀರರನ್ನು ತಿರಸ್ಕರಿಸಿ ಎಸೆದರು. ರಾಕ್ಷಸ ವೀರರು ಕಪಿವೀರರನ್ನು ಬೀಳ್ಬಡಿದು ಬೊಬ್ಬಿರಿದರು. ಕಡೆಗೆ ಕಪಿವಾಹಿನಿಯ ಪರಾಕ್ರ ಮಾಗ್ನಿಯು ಕಲ್ಪಾಂತ ಕಾಲಾಗ್ನಿಯನ್ನು ಪಳಿದು ನಿಶಾಚರವ್ಯೂಹವನ್ನು ದಹಿಸುತ್ತಿ ರಲು ; ಆಗ ವೀರರಸತರಂಗಿತತಾಮ್ರಾಕ್ಷನಾದ ಇಂದ್ರಜಿತ್ತು ಮಾಯಾಶಕ್ತಿಯನ್ನವ ಲಂಬಿಸಿ ವಾನರವ್ಯೂಹದೊಳಗೆ ಮೈದೋರಿ ಸಂಹಾರೋದ್ಯುಕ್ತನಾಗಲು ; ಆ ಮೇಲೆ ಮಾಯಾ ವಿದ್ಯಾಪ್ರಚಾರದಲ್ಲಿ ಪ್ರಸಿದ್ಧನಾದ ಶಂಬರನೋ? ಮಾರೀಚನೋ? ವಿದ್ಯು ಜ್ಜಿಹ್ವನೋ? ಪ್ರಳಯಕಾಲದಲ್ಲಿ ಮುನಿದು ಅಖಿಲಭುವನಾವಳಿಯ ಕೊಲೆಗೆಲಸಕ್ಕೆ ನುಗ್ಗಿದ ಫಾಲಾಂಬಕನೋ? ಎಂಬ ಭ್ರಾಂತಿಯುಂಟಾಯಿತು. ಪಾಕಶಾಸನ ವೈರಿಯು ಮಹಾಶಾಂಬರಿಯನ್ನು ಬೆಳಸಿ ಪುಂಖಾನುಪುಂಖವಾಗಿ ಪ್ರಯೋಗಿಸುತ್ತಿರುವ ಬಾಣ ಗಳು ಕಣೆಗಳು ಗರಗಸಗಳು ಝೊಂಕಣೆಗಳು ಪರಿಘಗಳು ಪರಶುಗಳು ಮುಸುಂಡಿ ಗಳು ಕುಂತಗಳು ಖಡ್ಗಗಳು ಅಡಾಯುಧಗಳು ಗದೆಗಳು ಎಂಬ ಈ ಮೊದಲಾದ ನಾನಾ ವಿಧಾಯುಧಗಳ ರೂಪವನ್ನು ಧರಿಸಿ ಬಂದು ಕಪಿಬಲವನ್ನು ಹೊಕ್ಕು ಸವರಿ ದುವು. ಕೊಚ್ಚಿದುವು. ಚುಚ್ಚಿದುವು ನುಗ್ಗಿದುವು. ಕಡಿದುವು. ಮೇಲೆ ಬಿದ್ದುವು. ಕೆತ್ತಿ ದುವು. ಕೊರೆದುವು. ಹಾರಿಸಿದುವು. ಹೋಳುಮಾಡಿದುವು. ಬೀಳಿಸಿದುವು. ಮೈಮರಸಿ ದುವು. ಮತ್ತು ಕೆಲವು ಮಹಾ ಪರ್ವತಗಳಾಗಿ ಬಿದ್ದು ವಾನರವೀರರನ್ನು ಭೂಗತಮಾ ಡಿದುವು. ಇನ್ನು ಕೆಲವು ಹುಲಿಗಳಾಗಿ ಬಂದು ಕುತ್ತಿಗೆಗಳನ್ನು ಹಿಡಿದು ರಕ್ತಗಳನ್ನು

ಹೀರಿ ಕೆಡಹಿದುವು. ಸಿಂಹಗಳಾಗಿ ಬಂದು ಕೋರೆದಾಡೆಗಳಿಂದ ತಿವಿದು ಮಲಗಿಸಿದುವು. ಹಾವುಗಳಾಗಿ ಬಂದು ವಿವಿಧ ವಿಷಜ್ವಾಲೆಗಳಿಂದ ಸುಟ್ಟುರುಳಿಸಿದುವು. ಆ ಘೋರಸಂಹಾರಸಮಯದಲ್ಲಿ ಭಯದಿಂದ ಬಾರಿಸಲ್ಪಟ್ಟು ದೆಸೆಗೆಟ್ಟೋಡುತ್ತಿರುವ ಕಪಿಬಲಾಂಬುಧಿಯನ್ನು ನೋಡಿ ನೀಲನು—ಎಲೈ ಕಪಿನಾಯಕರೇ, ಅಂಜಬೇಡಿರಿ. ಎಂದಾದರೂ ವಿನಾಶವಾಗಿಹೋಗುವ ಈ ಜಡದೇಹಗಳನ್ನು ಸ್ವಾಮಿಕಾರ್ಯಕ್ಕೊಪ್ಪಿಸಿ ಇಹಪರಗಳಲ್ಲಿ ಕೀರ್ತಿ ಸುಕೃತಗಳನ್ನು ಪಡೆದು ಧನ್ಯರಾಗುವದಕ್ಕೆ ಇದೇ ಸಮಯವು. ಓಡಿಹೋಗಬೇಡಿರಿ ಎಂದು ಕೂಗಿ ಹೇಳಲು ; ಆ ಮಾತನ್ನು ಕೇಳಿ ಸಮಸ್ತ ಕಪೀಶ್ವರರೂ ತಿರುಗಿ ಬಂದು ಗಿರಿತರುಗಳ ತಂಡದಿಂದ ಹಗೆಯನ್ನು ಮುಚ್ಚಿದರು.

ಮತ್ತೆ ಅಮಿತವಿಕ್ರಮನಾದ ಇಂದ್ರಜಿತ್ತು ಕಪಿಕಟಕವು ಕವಿಸಿದ ಗಿರಿತರುಜಾಲವನ್ನೆಲ್ಲಾ ಕ್ಷಣಮಾತ್ರದಲ್ಲಿ ಜೀಳಹೊಯ್ದು ಮಾಯೆಯನ್ನವಲಂಬಿಸಿ ಟಗರಾಗಿ ಬಂದು ಕೆಲವರನ್ನು ತಾಗಿದನು. ಕಾರ್ಬೊಗೆಯಾಗಿ ಬಂದು ಕವಿದು ಕೆಲರನ್ನು ಕೊಂದನು. ಹರಿಯಾಗಿ ಬಂದು ಹೊಯ್ದುಡಗಿಸಿದನು. ಸಮುದ್ರವಾಗಿ ಬಂದು ಕೆಲರನ್ನು ತೇಲಿಸಿ ಮುಳುಗಿಸಿದನು. ಕಾಲಭೈರವನಾಗಿ ಬಂದು ಕೆಲರನ್ನು ಮೆಟ್ಟಿ ಮೆದೆಗೆಡಹಿದನು. ಬಲ್ಬೆಟ್ಟವಾಗಿ ಬಂದು ಬಿದ್ದು ಹೊರಳಿ ಕೆಲರನ್ನು ತೀರಿಸಿದನು. ಮಹಾವಿಷಜ್ವಾಲೆಯಾಗಿ ಬಂದು ಕೆಲರನ್ನು ಹೊಯ್ದು ಬೆಯ್ಸಿದನು. ಸಿಡಿಲಾಗಿ ಒಂದೆರಗಿ ಕೆಲರನ್ನು ಮಲಗಿಸಿದನು. ಬೆಂಕಿಯಾಗಿ ಬಂದುರುಬಿದನು. ಭೇರುಂಡನಾಗಿ ತುಂಡಿಸಿದನು. ಕಾಡಾನೆಯಾಗಿ ಸೀಳಿದನು. ರಕ್ಕಸಗುವರನ ಕಾಳ್ಗೈತವನ್ನು ಒಣ್ಣಿಸುವವರಾರು ? ಈ ರೀತಿಯಾಗಿ ವಿವಿಧಾಕಾರಗಳನ್ನು ಹೊಂದಿ ಒಂದು ಕೋಟ್ಯಂತರ ಕಪಿಗಳನ್ನು ಕೊಲ್ಲುತ್ತಿರಲು ; ಆ ಮಾಯಾಸಮರದಲ್ಲಿ ನಿಲ್ಲಲಾರದೆ ರವಿತನುಜನ ಒಡ್ಡುಗಳೆಲ್ಲಾ ಒಡೆದುಹೋಗಿ ರಾಮನ ಮರೆಹೊಕ್ಕುವು. ಉಳಿದ ಮಾತುಗಳಿಂದೇನು ಫಲ ? ದ್ವಿತೀಯಸಂಹಾರರುದ್ರನಂತಿರುವ ರಾವಣಿಯು ಹೊರಟು ಬಂದು ರಾಮನೆದುರಿನಲ್ಲಿ ನಿಂತು ಚಿನ್ನದ ಗರಿಗಳಿಂದ ಪ್ರಕಾಶಿಸುತ್ತಿರುವ ಹೊಸಮಸೆಯ ಸರಳುಗಳನ್ನು ಕಾರ್ಮುಗಿಲು ಮಳೆಗಳನ್ನು ಕರೆವಂತೆ ಕರೆದನು. ತತ್‌ಕ್ಷಣದಲ್ಲಿಯೇ ರಾಮನೂ ಧನುಸ್ಸನ್ನು ಝೇಂಕರಿಸಿ ಬಾಣವರ್ಷಗಳಿಂದ ಇಂದ್ರಜಿತ್ತನ್ನು ಕವಿಸಿ ಅನೇಕ ಕೋಟಿ ರಾಕ್ಷಸವೀರರನ್ನು ಕೊಂದು ಮಲಗಿಸಿದನು. ಅದನ್ನು ನೋಡಿ ಇಂದ್ರಜಿತ್ತು—ಈ ರಾಮನು ಸತ್ಯಯುದ್ಧದಲ್ಲಿ ಸೋಲುವುದಿಲ್ಲವೆಂದು ಯೋಚಿಸಿ ಮಾಯಾಶಕ್ತಿಯಿಂದ ಕಪಟಯುದ್ಧವನ್ನು ಮಾಡಲುಜ್ಜುಗಿಸಿ ಕಗ್ಗತ್ತಲೆಯನ್ನು ನಿರ್ಮಿಸಿ ಸ್ಮೃತಿಮಾತ್ರದಲ್ಲಿ ಸಿದ್ಧವಾದ ಬ್ರಹ್ಮದತ್ತರಥವನ್ನೇರಿ ಆಕಾಶಮಾರ್ಗಕ್ಕೆ ಹಾರಿ ಸರೋಜಸಂಭವಲಬ್ಧವಾದ ಕಾರ್ಮುಕವನ್ನು ಕೈಯಲ್ಲಿ ತೆಗೆದುಕೊಂಡು ಹೆದೆಯನ್ನು ಏರಿಸಿ ಝೇವಡೆಯಲು ; ಕಪಿಗಳ ತಂಡವು ಬೆದರಿ ನೆಗೆದು ಭೂಮಿಯಲ್ಲಿ ಬಿದ್ದಿತು. ಆಗ ಕೆಲಕಪಿವೀರರು ಬಿದ್ದುಕೊಂಡೇ ಒದೆದಾಡಿದುವು. ಕೆಲವು ಮೈಮರೆತುವು. ಕೆಲವು ಬಾಲಗಳನ್ನು ಮುದುರಿಕೊಂಡು ಎದ್ದೋಡಿದುವು. ಕೆಲವು ಮೊಗಮಡಿಯಾಗಿ ಬಿದ್ದಿದ್ದುವು. ಕೆಲವು ಮೆಲ್ಲನೆ ತಮ್ಮ ಬಾಲಗಳನ್ನೆಳೆದು ಎದೆಯಲ್ಲಿ

ಸೇರಿಸಿಕೊಂಡು ಪಲ್ಗಿರಿದು ಹೆಣಗಳ ಮರೆಯಲ್ಲಿ ಅಡಗಿಕೊಂಡು ತಾವೂ ಹೆಣಗಳೋ ಎಂಬಂತೆ ತೋರಿಸಿಕೊಂಡುವು. ಕೆಲವು ಒದೆದಾಡುತ್ತಿರುವಂತೆ ಮೆಲ್ಲಮೆಲ್ಲನೆ ಸರಿದು ಹೋಗಿ ಗಿಡಮರಗಳನ್ನೇರಿ ಬದುಕಿದೆವೆಂದು ಹೇಳಿಕೊಂಡುವು ಎಂಬ ಕಪಿಬಲದ ವಿದ್ಯಮಾನಮಾತ್ರವೇ ಆಶ್ಚರ್ಯವಲ್ಲ. ಅಮರಾವತಿಯಲ್ಲಿ ತ್ರಿದಶರೊಡೆಯನು ಬೆದರಿದನು. ಅಂತಕನು ನೆಗೆದು ಬಿದ್ದು ಮೈತಿಳಿಯದೆ ಕನವರಿಸಿದನು. ಅಗ್ನಿಯು ಹಾಯ್ದನು. ವರುಣನು ಸರಿದೋಡಿದನು. ಕುಬೇರನು ಅಡಗಿಕೊಂಡನು. ವಾಯುವು ಗುಹೆಯಲ್ಲಿ ಸೇರಿದನು. ಈಶಾನನು ಅದೃಶ್ಯನಾದನು. ನಿರುತಿಯು ಸಿಕ್ಕಿದ ಕಡೆಗೋಡಿ ದಿಕ್ಕುಗೆಟ್ಟು ಬಂದು ರಾವಣಿಯನ್ನೇ ಮರೆಹೊಕ್ಕನು. ವಿಲಯಕಾಲದ ನೀಲಾಂಬುದಕಾಂತಿಯೋ ? ರಕ್ಕಸಗುವರನ ಮೈಬಣ್ಣವೋ ? ಗುಡುಗುಗಳೋ ? ಅವನ ಆರ್ಭಟಗಳೋ ? ಹೊಳೆಯುತ್ತಿರುವ ವಿದ್ಯುಜ್ಜಾಲವೋ ? ಥಳಥಳಿಸುತ್ತಿರುವ ಬಲ್ದೇರಿನ ಡಾಳವೋ ? ಹೊಡೆಯುತ್ತಿರುವ ಮುಂಗಾರ್ಸಿಡಿಲ್ತಂಡವೋ ? ಬಾಣಪರಂಪರಾಘಾತವೋ ? ಎಂಬುದನ್ನು ಯಾರು ವಿವೇಚಿಸಿ ತಿಳಿದು ಹೇಳಬಲ್ಲವರು ? ಆ ಕೊಳುಗುಳದ ಚಿತ್ರವಧೆಯ ವೈಚಿತ್ರ್ಯವನ್ನು ನೋಡಿ ದಣಿಯುವುದಕ್ಕೆ ಎರಡು ಕಣ್ಗಳು ಸಾಲವು. ಯೋಚಿಸುವುದಕ್ಕೆ ಮನಸ್ಸಿನ ವಿಶಾಲತೆಯು ಸಂಕೋಚವು. ನೋಡುವುದಕ್ಕೆ ಇಂದ್ರನು, ಹೇಳುವುದಕ್ಕೆ ಆದಿಶೇಷನು ಬಂದು ಧೈರ್ಯದಿಂದ ನಿಂತರೆಂತಾಗುವುದೋ ತಿಳಿಯದು. ಶಿವ, ಶಿವಾ ! ಮಾರಿಮುಳಿದಂತಾಯಿತು. ನೆತ್ತರಿನ ತೊರೆಯಲ್ಲಿ ತೇಲಿಕೊಂಡು ಹೋಗುತ್ತಿರುವ ಕಪಿಗಳಿಗೆ ಗಣನೆಯೇ ಇಲ್ಲವು. ಕೋಡಗಗಳಲ್ಲಿ ಅಳಿದುಳಿದ ಹಲವು ಕೆಲವು ಹೆಣಗಳನ್ನು ಒಗೆದು ಬಗೆದು ಹೊಕ್ಕು ಹುದುಗಿಕೊಂಡುವು. ಕೆಲವು ಬೆಟ್ಟಗಳ ಇರುಬನಲ್ಲಿ ಹುದುಗಿದುವು. ಕೆಲವು ಹರಿಯುತ್ತಿರುವ ರಕ್ತನದೀಪ್ರವಾಹದಲ್ಲಿ ನೆಗೆದುಬಿದ್ದು ಮುಳುಗಿ ಮಾಯವಾದುವು. ಬಡಗೋತಿಗಳ ಸುದ್ದಿಯಂತಿರಲಿ. ಮಹಾಗಿರಿಗಳನ್ನು ತಮ್ಮ ತಲೆಗಳ ಮೇಲೆ ಕೊಡೆಯಂತೆ ಹಿಡಿದುಕೊಂಡು ಪುಟಚಂಡಿನಂತೆ ಸ್ಥಳದಿಂದ ಸ್ಥಳಕ್ಕೆ ನೆಗೆಯುತ್ತ ಬಾಲವನ್ನೆತ್ತಿಕೊಂಡು ಅಂಬರತಳದಲ್ಲಿ ಹಾರಿಯಾಡುತ್ತಿರುವ ನಳನೇ ಮೊದಲಾದ ಪ್ರಖ್ಯಾತವಾನರ ವೀರರ ಸರ್ವಾವಯವಗಳಲ್ಲೂ ಅಂಬುಗಳು ನೆಟ್ಟುಕೊಂಡುವು. ಮತ್ತು ಅಮಿತ ಶಕ್ತನಾದ ರಾವಣಿಯು ಯುದ್ಧಾಂಗಣವೆಂಬ ಕಣದಲ್ಲಿ ಕಪಿವೀರಶಿರಸ್ಸುಗಳೆಂಬ ತೆನೆಗಳನ್ನು ಕೊಯ್ದೊಟ್ಟಿದನು. ವಿಶೇಷವೇಕೆ ? ಆ ರಣಭೂಮಿಯು ಹರಿಯುತ್ತಿರುವ ರಕ್ತದಿಂದಲೂ ಬಿದ್ದಿರುವ ತಲೆಬುರುಡೆಗಳಿಂದಲೂ ಹೊರಳಿಯಾಡುತ್ತಿರುವ ಕಬಂಧಗಳಿಂದಲೂ ಹೊರಟಿರುವ ಕರುಳುಗಳಿಂದಲೂ ಕುಣಿಕುಣಿದಾಡುತ್ತಿರುವ ಬಾಲಗಳಿಂದಲೂ ತುಂಡುತುಂಡಾದ ತೊಡೆತೋಳುಗಳಿಂದಲೂ ಸೀಳಿ ಹೋಳಾದ ಶರೀರಗಳಿಂದಲೂ ಹೊರಗೆ ಬಂದು ನೇಲುತ್ತಿರುವ ಕಣ್ಣುಗುಡ್ಡುಗಳಿಂದಲೂ ಕತ್ತರಿಸಲ್ಪಟ್ಟು ಬಿದ್ದಿರುವ ಪಾದಗಳಿಂದಲೂ ಬಾಯ್ಗಳನ್ನು ಕಿಸಿದು ಹಲ್ಲುಗಳನ್ನು ತೋರಿಸುತ್ತ ಬಿದ್ದಿರುವ ಕಪಿರಾಕ್ಷಸ ಶವಗಳಿಂದಲೂ ಕೂಡಿ ನೋಡುವವರಿಗೆ ಹೇಸಿಕೆಯನ್ನೂ ಭಯವನ್ನೂ ಹುಟ್ಟಿಸುತ್ತಿದ್ದಿತು. ಈ ರೀತಿಯಾಗಿ ಭಯದಿಂದಲೂ ಬಾಧೆಯಿಂದಲೂ ಮೃತಿಯಿಂದಲೂ ಕಪಿವೀರರೆಲ್ಲಾ ಭೂಮಿಯಲ್ಲಿ ಬಿದ್ದೊರಗಿದರು.

ಅನಂತರದಲ್ಲಿ ರಾವಣಾತ್ಮಜನಾದ ಇಂದ್ರಜಿತ್ತು ಅಮೋಘವಾದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಹನುಮಂತನನ್ನು ಕಟ್ಟಿದನು. ಜಾಂಬವಂತನನ್ನು ಬಿಗಿದನು. ಸುಗ್ರೀವನನ್ನು ಸುತ್ತಿ ಕೆಡಹಿದನು. ಉಳಿದ ಸಮಸ್ತಕಪಿಸೇನಾಪತಿಗಳನ್ನು ಹೊಡೆದು ಭೂಮಿಯಲ್ಲಿ ಮಲಗಿಸಿದನು. ಆ ಬಳಿಕ ರಾಮಲಕ್ಷ್ಮಣರ ಬಳಿಗೆ ಬಂದು—ಹೆಂಡತಿಯನ್ನು ಕಳೆದುಕೊಂಡ ಅಳಲಿನಿಂದ ಮರುಳಾಗಿ ತಮ್ಮನೊಡನೆ ಕಪಿಗಳ ಬಳಗವನ್ನು ಕೊಲ್ಲಿಸಿದ ಕಲಿಯು ನೀನೆಯೋ? ಎಂದು ನೆಲನದುರುವಂತೆ ಸಿಂಹಗರ್ಜನೆಯನ್ನು ಮಾಡಿ ಅಸ್ತ್ರಗಳನ್ನು ಪ್ರಯೋಗಿಸಿ ರಾಮಲಕ್ಷ್ಮಣರನ್ನು ನೆಲದಲ್ಲಿ ಒರಗಿಸಿ ಜಯಭೇರಿಯನ್ನು ಹೊಡಿಸುತ್ತ ಉಳಿದ ರಾಕ್ಷಸ ಸೇನಾಸಮೇತನಾಗಿ ಹೊರಟು ಲಂಕಾನಗರಕ್ಕೆ ಬರುತ್ತ ಮುಂಚಿತವಾಗಿ ತಂದೆಗೆ ಒಸಗೆಯನ್ನು ಹೇಳಿಕಳುಹಿಸಲು; ರಾವಣನು ಆ ಮಾತುಗಳನ್ನು ಕೇಳಿ ಸಂತೋಷದಿಂದ ಹಿಗ್ಗಿದವನಾಗಿ ಮಂತ್ರಿ ಸೇನಾಪತಿ ಪುರೋಹಿತ ಪರಿಜನ ಪುರಜನರೊಡನೆ ಕೂಡಿ ಸಕಲವಾದ್ಯಗಳ ಜಯಧ್ವನಿಯನ್ನು ಮಾಡಿಸುತ್ತ ಅರಮನೆಯಿಂದ ಹೊರಟು ಮಗನೆದುರಿಗೆ ಬಂದು ಅವನನ್ನು ಬಾಚಿ ತಬ್ಬಿಕೊಂಡು—ಎಲೈ ಮಗನೇ, ನನ್ನ ಕುಲರತ್ನವೇ, ರಾಕ್ಷಸ ಕುಲಾಂಬುಜ ಮಿತ್ರನೇ, ಅಸುರವೈರಿವ್ರಾತಜಲದ ಜಂಝಾಮಾರುತನೇ ಎಂದು ಆನಂದಬಾಷ್ಪವನ್ನು ಸುರಿಸಿದನು. ಮತ್ತು ಮಗನ ಮೈದಡವಿ—ಎಲೈ ಕುಮಾರನೇ, ನೀನು ಮೊದಲು ನನ್ನೊಡನೆ ಆಡಿದ ಪ್ರತಿಜ್ಞೋಕ್ತಿಗಳನ್ನು ಮರೆಯದೆ ವಿರೋಧಿ ವೀರರ ತಲೆಗಳನ್ನು ಚಂಡಾಡಿ ವಿಜಯಶೀಲನಾಗಿ ಬಂದೆಯಾ? ಎಂದು ಪರಮಾನಂದಭರಿತನಾಗಿ ಮಗನೊಡನೆ ಕೂಡಿ ಪುರಪ್ರವೇಶವನ್ನು ಮಾಡಲು; ಆಗ ಇಂದ್ರಜಿತ್ತಿನ ಮೇಲೆ ಪುರನಾರಿಯರು ಪೂಮಳೆಗರೆದರು. ಬತ್ತದ ಅರಳುಗಳು ಎರಚಲ್ಪಟ್ಟುವು. ಅರಮನೆಯ ಬಾಗಿಲಲ್ಲಿ ದೈತ್ಯಸುಮಂಗಲೆಯರು ಮುಕ್ತಾರತ್ನಗಳ ಆರತಿಗಳನ್ನು ತಂದು ನೀರಾಜಿಸಿದರು. ಅನಂತರದಲ್ಲಿ ರಾವಣನು ತನ್ನ ಮಗನಿಗೆ ದಿವ್ಯತೈಲಾಭ್ಯಂಗವನ್ನು ಮಾಡಿಸಿ ಪರಿಮಳೋದಕದಿಂದ ಸ್ನಾನಂಗೆಯ್ಸಿ ಅಮೂಲ್ಯಾಂಬರಾಭರಣಗಳನ್ನು ಧರಿಸಿ ಅವನೊಡನೆ ಮೃಷ್ಟಾನ್ನಭೋಜನವನ್ನು ಮಾಡಿ ಗಂಧ ಪುಷ್ಪ ತಾಂಬೂಲಗಳನ್ನು ಕೊಡಿಸಿ ಮನ್ನಿಸಿ ಅವನನ್ನು ಮನೆಗೆ ಕಳುಹಿಸಿ ತಾನು ತನ್ನ ಅಂತಃಪುರವನ್ನು ಪ್ರವೇಶಿಸಿ ಪಟ್ಟದರಸಿಯಾದ ಮಂಡೋದರಿಯೊಡನೆ ಮಗನ ವಿಜಯವಾರ್ತಾಪ್ರಸಂಗವನ್ನು ಮಾಡಿ ಸಂತೋಷಿಸಿ ಆ ರಾತ್ರಿಯಲ್ಲಿ ಸುಖದಿಂದ ನಿದ್ರಿಸಿದನು.

ಇತ್ತ ರಣಭೂಮಿಯೆಲ್ಲವೂ ನಿಶ್ಯಬ್ದವಾಗಿರುವುದನ್ನು ಕಂಡು ವಿಭೀಷಣನು ದಾರುಣವ್ಯಥಾಪರಿತಪ್ತನಾಗಿ ಕಣ್ಣೀರುಗಳನ್ನು ಸುರಿಸುತ್ತ ಪಾಪಿಯ ಮಾಯಾಯುದ್ಧದಲ್ಲಿ ರಾಘವೇಶ್ವರನ ಕಪಿಬಲಾಂಬುಧಿಯು ಬತ್ತಿತಲ್ಲಾ! ಸುಗ್ರೀವ ನೀಲಜಾಂಬವತ್ಸುಷೇಣ ನಳ ಹನುಮದಾದಿಗಳು ಏನಾಗಿರುವರೋ? ರಾಮಲಕ್ಷ್ಮಣರು ಹೇಗಿರುವರೋ? ಎಂದು ಹೊರಟು ರಣರಂಗದಲ್ಲಿ ಹುಡುಕುತ್ತ ಬರುತ್ತಿರಲು; ಅಲ್ಲಿ ಹೆಣಗಳನ್ನು ತಿಂದು ನೊರೆ ನೆತ್ತರಗಳನ್ನು ಕುಡಿದು ಕುಣಿಯುತ್ತಿರುವ ಪಿಶಾಚಾದಿಗಳನ್ನು ನೋಡಿದನು. ಅವುಗಳಲ್ಲಿ ಕೆಲವು ಪಿಶಾಚಗಳು ಆನೆಯ ಕುಂಭಸ್ಥಳಗಳೆಂಬ

ಮದ್ದಲೆಗಳನ್ನು ಬಾರಿಸಿಕೊಂಡು ಹಾಡುತ್ತಿದ್ದುವು. ಇನ್ನು ಕೆಲವು ಆನೆಗಳ ಸೊಂಡಿಲುಗಳನ್ನು ತೆಗೆದು ಕೊಂಬೂದಿಕೊಂಡು ಮೆರೆಯುತ್ತಿದ್ದುವು. ಮತ್ತು ಕೆಲವು ಕುದುರೆಗಳ ಕಾಲ್ಗೊರಸುಗಳನ್ನು ತೆಗೆದುಕೊಂಡು ತಾಳವನ್ನು ಹೊಡೆಯುತ್ತಿದ್ದುವು. ಕೆಲವು ಹಾಡುಗಳನ್ನು ಹಾಡಿ ನಲಿಯುತ್ತಿದ್ದುವು. ಮತ್ತೆ ಕೆಲವು ಕುಣಿದು ಕುಪ್ಪಳಿಸುತ್ತ ರಾವಣಿಯನ್ನು ಹರಸುತ್ತಿದ್ದುವು. ಬ್ರಹ್ಮರಕ್ಷಸ್ಸುಗಳು ಕಪಿಬಾಲಗಳನ್ನು ತೆಗೆದುಕೊಂಡು ಉಡಿದಾರಗಳನ್ನು ಕಟ್ಟಿಕೊಂಡು ನಿಡುಗರುಳ್ಗಳ ಯಜ್ಞಸೂತ್ರಗಳನ್ನು ಧರಿಸಿ ತಲೆಬುರಡೆಗಳ ಮಾಲೆಗಳನ್ನು ಕತ್ತುಗಳಿಗೆ ಹಾಕಿಕೊಂಡು ಕೈಗಳಲ್ಲಿ ತಲೆಯೋಡುಗಳನ್ನು ಹಿಡಿದು ರಣಾಂಗಣದಲ್ಲೆಲ್ಲಾ ತಿರುಗುತ್ತ--ಲೋಕದಲ್ಲಿ ವೈರವು ಪ್ರಬಲಿಸಲಿ; ಯುದ್ಧವು ಹೆಚ್ಚಲಿ; ಪ್ರಾಣಿಜಾಲವು ಮಡಿಯಲಿ ಎಂದು ಹರಸುತ್ತ ಬರುತ್ತಿದ್ದುವು. ವಿಭೀಷಣನು ಅದನ್ನೆಲ್ಲಾ ನೋಡುತ್ತ ಎಲ್ಲಿ ನೋಡಿದರೂ ಮಜ್ಜ ಮಾಂಸ ನೆಣ ನರ ಎಲುವು ಕೊಬ್ಬು ರಕ್ತ ಇವುಗಳಿಂದ ಕೆಸರಾಗಿದ್ದುದರಿಂದ ಭೂಮಿಯಲ್ಲಿ ಕಾಲಿಕ್ಕಿದ ಕೂಡಲೆ ಸೊಂಟದ ವರೆಗೂ ಹೂತುಹೋಯಿತು. ಗದೆಯನ್ನೂರಿಕೊಂಡು ಮೆಲ್ಲನೆ ಮೇಲೆದ್ದು ಎಚ್ಚರಿಕೆಯಿಂದಲೂ ಪ್ರಯಾಸದಿಂದಲೂ ಹೆಜ್ಜೆಯಿಡುತ್ತ ಬಂದು ರಾಮಲಕ್ಷ್ಮಣರ ಇರುವಿಕೆಯನ್ನು ನೋಡಿ ಅಗಾಧವಾದ ಶೋಕಾಂಬುಧಿಯಲ್ಲಿ ಒಡಲನ್ನೀಡಾಡಿ—ವನಜನಾಭನೇ, ಮುಕುಂದನೇ, ಅಪಾರ ಮಹಿಮಾರಾಜಿತನೇ, ಭೃತ್ಯನಾದ ನನಗೆ ತಿಳಿಸದೆ ಈ ವಿಧವಾದ ದುರವಸ್ಥೆಗೊಳಗಾಗಬಹುದೇ? ಯಾವಾಗಲೂ ಮಾಯೆಯು ನಿನ್ನಧೀನವಲ್ಲವೇ ? ಇಂಥ ಮರವೆಯು ನಿನಗೆ ಹೇಗೆ ಬಂದಿತು ? ನಿಜದಾಸನಾದ ನನಗೆ ಕೊಟ್ಟ ಭಾಷೆಯನ್ನು ಮರೆತು ಅನಾಥನಾದ ನನ್ನನ್ನು ಬಿಟ್ಟು ವೈಕುಂಠಲೋಕಕ್ಕೆ ತೆರಳಬಹುದೇ ? ನೀನು ಈ ವಿಧವಾಗಿ ನರನಾಟಕವನ್ನು ನಟಿಸಿ ಪ್ರಾಣಗಳನ್ನು ಬಿಟ್ಟರೆ ಇನ್ನು ದೀನನಾದ ನಾನು ಯಾರನ್ನು ಮರೆಹೊಗಬಲ್ಲೆನು ? ಒಡೆಯನಾದ ನೀನಿಂತಾದುದರಿಂದ ನಾನು ನಡುಗಾಡಿನಲ್ಲಿ ಕಣ್ಣು ಕಟ್ಟಿಬಿಡಲ್ಪಟ್ಟವನಂತೆ ನಿರಾಶ್ರಯನಾಗಿ ಹೋದೆನಲ್ಲಾ! ನಾನು ಬದುಕುವ ಬಟ್ಟೆಯಾವುದು ? ಹೇಳೈ, ಕರುಣಾರಸತರಂಗಿತ ಕಟಾಕ್ಷನೇ, ಶರಣಾಗತರಕ್ಷಕನೆಂಬ ಅಸಾಧಾರಣವಾದ ಬಿರುದು ನಿನಗಿರುವುದಷ್ಟೆ? ನೀನು ಬಿಜಯಮಾಡುವ ಸಮಯದಲ್ಲಿ ನನ್ನನ್ನು ಎಚ್ಚರಿಸದೆ ಇರಬಹುದೇ ? ಇನ್ನು ಮೇಲೆ ನಾನು ಕೃಪಣನಾಗಿ ಈ ಪ್ರಾಣಗಳನ್ನು ಹಿಡಿದಿರುವುದರಿಂದ ಪ್ರಯೋಜನವೇನು ? ಎಂದು ಬಹು ವಿಧವಾಗಿ ಹಂಬಲಿಸಿ ಎದೆಹೊಯ್ದು ಬಾಯ್ಬಿಡಿದು ಅತ್ತು ಮೂರ್ಛಿತನಾಗಿ ಸ್ವಲ್ಪ ಕಾಲದಲ್ಲಿ ಚೇತರಿಸಿಕೊಂಡೆದ್ದು ವಿಚಾರದಿಂದ ಧೈರ್ಯವನ್ನು ತಂದುಕೊಂಡು–ಆಗಲಿ, ಮುಂದೆ ಹನುಮಂತನ ಆಗುಹೋಗುಗಳು ಏನಾಗಿರುವುವೋ ನೋಡಬೇಕು. ಆತನು ಬ್ರಹ್ಮಾಸ್ತ್ರಕ್ಕೆ ಒಳಗಾಗತಕ್ಕವನಲ್ಲ; ಅತಿಬಲಿಷ್ಠನು ; ವಜ್ರದೇಹಿಯು ಮತ್ತು ಹರಿಭೃತ್ಯನು ಎಂದು ಅರಸುತ್ತ ಬರುತ್ತಿರುವಾಗ್ಗೆ ಮಿಡುಕಾಡುತ್ತಿರುವ ಜೀವವುಳ್ಳ ಜಾಂಬವಂತನನ್ನು ಕಂಡು ನಮಸ್ಕರಿಸಲು; ಆ ಜಾಂಬವಂತನು ಮೆಲ್ಲನೆ—ಎಲೈ ವಿಭೀಷಣನೇ, ಹತ್ತಿರಕ್ಕೆ ಬಾ ಎಂದು ಕರೆದು ಕುಳ್ಳಿರಿಸಿಕೊಂಡು—ರಣದಲ್ಲಿ ಯಾರು ಯಾರು

ಮೃತರಾದರು ? ಯಾರು ಯಾರು ಉಳಿದಿದ್ದಾರೆ ? ಯಾರ ಯಾರ ಸ್ಥಿತಿಯು ಎಂತೆಂತಿರುವುದು ? ಎಂದು ಬೆಸಗೊಳ್ಳಲು; ಆಗ ವಿಭೀಷಣನು—ರಾಮಲಕ್ಷ್ಮಣರು ಮೊದಲಾಗಿ ಸಮಸ್ತ ಕಪಿಸೇನೆಗಳೂ ಸತ್ತಿವೆ. ಹನುಮಂತನು ಮಾತ್ರ ಏನಾಗಿರುವನೋ ? ತಿಳಿಯದು. ಇನ್ನೂ ನೋಡಲಿಲ್ಲ ಎಂದು ಹೇಳಿದನು.

ಅಷ್ಟರಲ್ಲಿಯೇ ಆಂಜನೇಯನು ಬಂದು ಅತ್ಯಂತ ವ್ಯಸನಾಕ್ರಾಂತನಾಗಿ ಜಾಂಬವದ್ವಿಭೀಷಣರನ್ನು ಕಾಣಿಸಿಕೊಳ್ಳಲು ; ಜಾಂಬವಂತನು ಅವನನ್ನು ನೋಡಿ ವಿಭೀಷಣನನ್ನು ಕುರಿತು—ಎಲೈ ರಾಕ್ಷಸರಾಜನೇ, ಅಸಹಾಯಶೂರನಾದ ಈ ಹನುಮಂತನೊಬ್ಬನು ಉಳಿದಿರುವುದರಿಂದ ರಾಮಲಕ್ಷ್ಮಣ ಸುಗ್ರೀವಾಂಗದಾದಿ ಸಮಸ್ತರೂ ಬದುಕಿದರೆಂದು ಚೆನ್ನಾಗಿ ತಿಳಿದುಕೋ. ನೀನು ಇನ್ನು ಮೇಲೆ ಸ್ವಲ್ಪವಾದರೂ ದುಃಖಿಸಬೇಡ, ವ್ಯಸನವನ್ನು ಬಿಡು ಎಂದನು. ಆ ಮಾತುಗಳನ್ನು ಕೇಳಿ ಆಂಜನೇಯನು—ಮೃತರಾಗಿರುವ ಸರ್ವರೂ ಈ ಮಹಾತ್ಮರಾದ ಜಾಂಬವಂತರಿಂದಲೇ ಬದುಕಬೇಕಲ್ಲದೆ ಸಾಮಾನ್ಯನಾದ ನನ್ನಿಂದಾಗುವ ಪ್ರಯೋಜನವಾವುದು ? ಈ ಸಮಸ್ತರೂ ಬದುಕುವಂತೆ ಈ ಮಹನೀಯರು ಕಾಲಿನಿಂದ ತೋರಿಸಿದ ಕಾರ್ಯವನ್ನು ಶಿರಸ್ಸಿನಿಂದ ಮಾಡುವೆನು. ಈ ಮಹಾವಿಪನ್ನಿವಾರಣೆಗಾಗಿ ಯಾವ ಯುಕ್ತಿಯನ್ನು ನೆನೆದು ನನಗೆ ನೇಮಿಸುವರೋ ಅದು ಎಂಥ ಅಸಾಧ್ಯವಾದುದಾದಾಗ್ಯೂ ಮಾಡಿ ನಿರ್ವಹಿಸುವೆನು ಎಂದು ಹೇಳಲು ; ಆಗ ಜಾಂಬವಂತನು—ಕೇಳೈ, ಅಪ್ರತಿಮವೀರನಾದ ಆಂಜನೇಯನೇ, ಸೂರ್ಯೋದಯವಾದ ಮೇಲೆ ಇವರೊಬ್ಬರೂ ಬದುಕುವುದಿಲ್ಲ. ಬೆಳಗಾಗುವುದಕ್ಕೆ ಇನ್ನೂ ಏಳುಗಳಿಗೆಗಳು ಕಳೆಯಬೇಕಾಗಿದೆ. ಅಷ್ಟರೊಳಗೆ ನೀನು ಸಾಹಸಮಾಡಿದರೆ ನೀನೇ ರಾವಣನನ್ನು ಕೊಂದವನು, ಸೀತೆಯನ್ನು ತಂದವನು, ಸರ್ವಕಪಿವಾಹಿನೀ ಸಹಿತವಾಗಿ ಶ್ರೀರಾಮಲಕ್ಷ್ಮಣರನ್ನು ಬದುಕಿಸಿದವನು ಅಂದನು.

ಆ ಮಾತುಗಳನ್ನು ಕೇಳಿ ಆಂಜನೇಯನು ಪ್ರಯಾಣೋನ್ಮುಖನಾಗಿ –ಅದೇನು ಸ್ವಾಮಿ, ಶೀಘ್ರವಾಗಿ ಹೇಳಿರಿ ಎನ್ನಲು ; ಆಗ ಜಾಂಬವಂತನು—ಚಂದ್ರದ್ರೋಣ ಪರ್ವತದಲ್ಲಿ ಸಂಧಾನಕರಣಿ ವಿಶಲ್ಯಕರಣಿ ಸೌವರ್ಣಕರಣಿ ಮೃತಸಂಜೀವಿನಿ ಎಂಬ ನಾಲ್ಕು ವಿಧವಾದ ಸಿದ್ಧೌಷಧಿಗಳಿರುವುವು. ನೀನು ಹೋಗಿ ಬೆಳಗಾಗುವಷ್ಟರಲ್ಲಿಯೇ ಅವುಗಳನ್ನು ತೆಗೆದುಕೊಂಡು ಇಲ್ಲಿಗೆ ಬರುವವನಾಗು ಎಂದು ಹೇಳಲು ; ಅವನು—ಅಗತ್ಯವಾಗಿ ತಮ್ಮಿಂದ ನಿಷ್ಕರ್ಷಿತವಾದ ಕಾಲಕ್ಕೆ ಮೊದಲೇ ತೆಗೆದುಕೊಂಡು ಬರುವೆನು. ಆದರೆ ಆ ಚಂದ್ರದ್ರೋಣಪರ್ವತವೆಲ್ಲಿರುವುದು ? ಆ ದಿಕ್ಕನ್ನು ಮಾತ್ರ ತಿಳಿಸುವವರಾಗಿರಿ ಎಂದು ಕೇಳಲು ; ಇಲ್ಲಿಂದ ನೆಟ್ಟಗೆ ಹಿಮಾಚಲಕ್ಕೆ ಹೋಗಿ ಅದನ್ನು ದಾಟಿ ಮುಂದೆ ಹೋದರೆ ಅಲ್ಲಿ ಋಷಭವೆಂಬ ಪರ್ವತವಿರುವುದು. ಅದರ ಆಚೆಗೆ ಕೈಲಾಸನಗವಿರುವುದು. ಆ ಎರಡು ಪರ್ವತಗಳ ಮಧ್ಯದಲ್ಲಿ ಚಂದ್ರದ್ರೋಣವೆಂಬ ಓಷಧಿ ಭೂಧರವಿರುವುದು. ಅದರ ಶಿಖರದಲ್ಲಿ ನಾನು ಹೇಳಿದ ಔಷಧಿಗಳಿರುವುವು ಎಂದು ಹೇಳಿದನು

ಆ ಕೂಡಲೆ ಆಂಜನೇಯನು ಮಹಾ ಪರ್ವತದಂತಿರುವ ಶರೀರವನ್ನು ಧರಿಸಿ ಜಾಂಬವಂತನಿಗೆ ನಮಸ್ಕಾರವನ್ನು ಮಾಡಿ ವಿಭೀಷಣನನ್ನು ಆಲಿಂಗಿಸಿ ಆಕಾಶಮಾರ್ಗಕ್ಕೆ ಹಾರಿ ಅಸಂಖ್ಯಾತ ಕಲ್ಪಾಂತ ಘನಗರ್ಜಿತಗಳನ್ನು ಮೀರುವಂತೆ ಸಿಂಹನಾದವನ್ನು ಮಾಡಿದನು. ಆತನ ಮಹಾ ಧ್ವನಿಯನ್ನು ಕೇಳಿದ ಕೂಡಲೆ ಲಂಕಾಪಟ್ಟಣವೆಲ್ಲಾ ಬೆದರಿ ಕಂಪಿಸಿತು. ಅನಂತರದಲ್ಲಿ ಆಕಾಶಮಾರ್ಗದಲ್ಲೇ ಹೋಗುತ್ತ ನಾನಾ ದೇಶ, ಗಿರಿ, ನದೀ, ದುರ್ಗ, ವನಾದಿಗಳನ್ನು ಕಳೆದು ಬಂದು ಹಿಮವತ್ಪರ್ವತವನ್ನು ಸೇರಿ ಅದನ್ನು ದಾಟಿ ಓಷಧಿ ಪರ್ವತಕ್ಕೆ ಬಂದು ಅದರ ಶಿಖರದಲ್ಲಿ ಎಷ್ಟು ಪ್ರಯಾಸಪಟ್ಟು ಹುಡುಕಿದಾಗ್ಯೂ ಆ ಓಷಧಿಗಳು ಸಿಕ್ಕದಿರಲು ; ಇವುಗಳನ್ನು ಹುಡುಕುತ್ತ ಸಾವಕಾಶ ಮಾಡುವುದಕ್ಕೆ ಇದು ವೇಳೆಯಲ್ಲ, ಆದುಕಾರಣ ಇದರ ಶಿಖರವನ್ನೇ ಕಿತ್ತು ಕೊಂಡು ಹೋಗಿ ಜಾಂಬವಂತನ ಮುಂದಿಳುಹುವೆನು. ಎಲ್ಲಿದ್ದರೂ ಅವನೇ ಹುಡುಕಿ ಕೊಳ್ಳಲಿ ಎಂದು ನಿಶ್ಚಯಿಸಿ ಆ ಪರ್ವತಶಿಖರವನ್ನು ಕಿತ್ತೆತ್ತಿ ಹೊತ್ತುಕೊಂಡು ಎರಡನೆಯ ಸೂರ್ಯನಂತೆ ಗಗನಮಾರ್ಗದಲ್ಲಿ ಬಂದು ಕಪಿವಾಹಿನಿಯ ಮಧ್ಯದಲ್ಲಿಳಿಯುತ್ತಿರಲು ; ಆ ಶಿಖರಸ್ಥವಾದ ಓಷಧಿಗಳ ಸಂಸ್ಪರ್ಶದಿಂದ ಬಂದ ವಾಯುವನ್ನು ಆಘ್ರಾಣಿಸಿದ ಮಾತ್ರದಿಂದಲೇ ಮಲಗಿದ್ದವರೆದ್ದಂತೆ ರಾಮಲಕ್ಷ್ಮಣಾದಿ ಸರ್ವರೂ ಎದ್ದರು. ಆಗ ಸುರಲೋಕದಲ್ಲಿ ಸುರದುಂದುಭಿಗಳು ಮೊಳಗಿದುವು. ಸುರರೆಲ್ಲರೂ ಕಪಿಸೇನೆಯ ಮೇಲೆ ಪೂಮಳೆಗರೆದು ಹರಸಿದರು. ಆಗ ವೀರಾಗ್ರೇಸರನಾದ ಸುಗ್ರೀವನು ವಿಲಯಕಾಲದ ರುದ್ರನಂತೆ ಅಸಮಾನ ಕೋಪವಿಜೃಂಭಿತನಾಗಿ ಹೊರಟು ಲಂಕಾನಗರಕ್ಕೆ ಲಗ್ಗೆ ಹತ್ತಿದನು. ಈ ಸಂಗತಿಯನ್ನು ರಾವಣನು ಕೇಳಿ--ಅಯ್ಯೋ ! ಇಂದ್ರಜಿತ್ತಿನ ಬ್ರಹ್ಮಾಸ್ತ್ರವೂ ಕೂಡ ವ್ಯರ್ಥವಾಗಿ ಹೋಯಿತಲ್ಲಾ ? ಅದರಿಂದಲೂ ವಿರೋಧಿಗಳಿಗೆ ವಿನಾಶವು ಸಂಭವಿಸದಿದ್ದ ಮೇಲೆ ಯಾರಿಂದೇನಾಗುವುದು ? ಆ ಅಸ್ತ್ರದ ಮಹಾಶಕ್ತಿಯನ್ನು ನಂಬಿ ಹಗೆಗಳನ್ನು ಗಣಿಸದೇ ಇದ್ದೆವಲ್ಲಾ ? ಇನ್ನು ಈ ಪ್ರಚಂಡ ಕಪಿಬಲವನ್ನು ಜಯಿಸುವ ಬಗೆ ಯಾವುದು ? ಇದಕ್ಕೆ ಉಪಾಯವು ತೋರುವುದಿಲ್ಲವಲ್ಲಾ ! ಎಂದು ಬಹುವಾಗಿ ಚಿಂತಿಸುತ್ತಿರಲು ; ಈ ಸಂಗತಿಯನ್ನು ತಿಳಿದು ಇಂದ್ರಜಿತ್ತು ತ್ವರಿತದಿಂದ ತಂದೆಯ ಬಳಿಗೆ ಬಂದು ನಮಸ್ಕರಿಸಿ—ಜೀಯಾ, ಹಗೆಗಳ ಪಡೆಗೆ ಯಮನಾದ ನಾನಿರುವಲ್ಲಿ ನೀನು ಚಿಂತಿಸುವುದು ಉಚಿತವೇ ? ಎಂದು ಹೇಳಿ ಆತನ ಅಪ್ಪಣೆಯನ್ನು ತೆಗೆದುಕೊಳ್ಳದೆಯೇ ಹೊರಟು ಸೇನೆಯನ್ನೊಡಗೊಂಡು ರಥಾರೂಢನಾಗಿ ಬರುತ್ತಿರಲು ; ಅವನ ತೇರ್ಗಾಲಿಗಳ ಧ್ವನಿಯನ್ನು ಕೇಳಿ—ಹೋ ! ದುಷ್ಟನಾದ ಇಂದ್ರಜಿತ್ತು ಮತ್ತೆ ಕಾಳೆಗಕ್ಕೆ ಬಂದನೆಂದು ನಿಶ್ಚಯಿಸಿ ಸುಗ್ರೀವನು—ಲಂಕಾದುರ್ಗದ ಪಡುವಣ ಬಾಗಿಲಿಗೆ ಹನುಮಂತನನ್ನೂ ಅವನ ಸಹಾಯಕ್ಕೆ ಅನೇಕ ಬಲವನ್ನೂ ತೆಂಕಣ ದೆಸೆಗೆ ಸೇನೆ ಸಹಿತ ಯುವರಾಜನಾದ ಅಂಗದನನ್ನೂ ಮೂಡಣ ಕಡೆಗೆ ಸೇನೆಯೊಡನೆ ನೀಲನನ್ನೂ ಎಚ್ಚರಿಕೆಯಿಂದ ಕಾದುವಂತೆ ನೇಮಿಸಿ ತಾನು ರಾಮಲಕ್ಷ್ಮಣರೊಡನೆ ನಿಂತು ಮಧ್ಯದಲ್ಲಿ ವಿಭೀಷಣನನ್ನಿಟ್ಟು ಗಿರಿತರುಗಳನ್ನು ತೆಗೆದುಕೊಂಡು ರಾವಣನೆಯನ್ನು ಅಟ್ಟಿಕೊಂಡು ಹೋಗುತ್ತಿರಲು ; ಆಗ ಶ್ರೀರಾಮ

ಚಂದ್ರನು ಸುಗ್ರೀವನನ್ನು ಸಮಾಧಾನಪಡಿಸಿ ನಿಲ್ಲಿಸಿ ತಾನೇ ಧನುರ್ಬಾಣಗಳನ್ನು ತೆಗೆದುಕೊಂಡು ಪ್ರಳಯಾಂತಕನಂತೆ ಮಹಾ ಕೋಪವುಳ್ಳವನಾಗಿ ಕಣ್ಣುಗಳಲ್ಲಿ ಕಿಡಿಗಳನ್ನುದುರಿಸುತ್ತ ಕೋದಂಡದಲ್ಲಿ ಅಕ್ಷಯಾಸ್ತ್ರವನ್ನು ಹೂಡಿ ರಾವಣಿಯ ಮೇಲೆ ಪ್ರಯೋಗಿಸಲು ; ಆ ಬಾಣಗಳು ಪಾರಂಪರ್ಯವಾಗಿ ಹೋಗಿ ಅವನ ರಥ ರಥಾಶ್ವಸಾರಥಿ ಧ್ವಜ ಬಿಲ್ಲುಬತ್ತಳಿಕೆ ಪತಾಕೆ ಇವುಗಳನ್ನೆಲ್ಲಾ ಕ್ಷಣಕಾಲದಲ್ಲಿ ತರಿದೊಟ್ಟಿದುವು.

ಆಗ ಉಪಾಯದಲ್ಲಿ ಬಲ್ಲಿದನಾದ ಇಂದ್ರಜಿತ್ತು ರಾಮನಿರುವ ಬಡಗಣ ಬಾಗಿಲನ್ನು ಬಿಟ್ಟು ಶೀಘ್ರದಿಂದ ಲಂಕೆಯನ್ನು ಹೊಕ್ಕು ಹನುಮಂತನಿರುವ ಪಡುವಣ ಬಾಗಿಲಿಗೆ ಬಂದು ಅವನ ಸಹಾಯಕ್ಕಾಗಿ ಬಂದಿರುವ ವಾನರಬಲವನ್ನೆಲ್ಲಾ ಮಾಯಾಶಕ್ತಿಯಿಂದ ಸಂಹರಿಸಿದನು. ಉಳಿದ ಕಪಿಗಳೆಲ್ಲಾ ಅವನೊಡನೆ ಕಾಳೆಗಕ್ಕೆ ಅಂತು ನಿಲ್ಲಲಾರದೆ ಬೆಂಗೊಟ್ಟೋಡಿದುವು. ಆಗ ಧೀರನಾದ ಆಂಜನೇಯನೊಬ್ಬನೇ ಮಹಾ ಕೋಪದಿಂದ ಕಿಡಿಕಿಡಿಯಾಗಿ ಇಂದ್ರಜಿತ್ತಿನ ತೇರು ಬಿಲ್ಲು ಸರಳು ಕುದುರೆಗಳ ಸಪ್ಪಳನ್ನು ಕಿವಿಗೊಟ್ಟು ಕೇಳಿ ಜಾಡನ್ನು ಹಿಡಿದು ಹೋಗಿ ಅಟ್ಟಿ ಹೊಡೆಯುತ್ತ ಅಸಂಖ್ಯಾತಗಳಾದ ತೇರಾನೆ ಕುದುರೆಯಾಳುಗಳನ್ನು ಸಂಹರಿಸುತ್ತ ಹಿಂದೆಗೆಯದೆ ಸೂರ್ಯಾಸ್ತಮಾನದ ವರೆಗೂ ಭಯಂಕರವಾಗಿ ಜಗಳವಾಡುತ್ತಿರಲು; ಆಗ ಕಾಪಟ್ಯವಿದ್ಯಾನಿಪುಣನಾದ ರಾಕ್ಷಸಪುತ್ರನು ತನ್ನ ಮಾಯಾಶಕ್ತಿಯಿಂದ ಕಪಟ ಸೀತೆಯನ್ನು ನಿರ್ಮಿಸಿ ತನ್ನ ರಥದ ಮೇಲಿಟ್ಟುಕೊಂಡು ಮೇಲೆತ್ತಿ ಹನುಮಂತನಿಗೆ ತೋರಿಸಲು ; ಆಗಳಾಮಾಯೆಯು ಅಂಜನಾತ್ಮಜನನ್ನು ನೋಡಿ—ಅಯ್ಯಾ, ಸ್ವಾಮಿಕಾರ್ಯಧುರಂಧರನೂ ಸತ್ಯಸಂಧನೂ ಆದ ಆಂಜನೇಯನೇ, ಅಕಟಕಟಾ ! ಈ ದಾರುಣವಾದ ಹಿಂಸೆಯನ್ನು ಹೇಗೆ ಸಹಿಸಲಿ ? ನನ್ನನ್ನು ಕಾಪಾಡುವವರಾರೂ ಇಲ್ಲವಲ್ಲಾ! ಹಾ ! ವಿಧಿಯೇ, ಅಯ್ಯೋ ! ಕೆಟ್ಟೆನಲ್ಲಾ ಎಂದು ಗಿಳಿಮರಿಯಂತೆ ಬಾಯ್ಬಿಡುತ್ತಿದ್ದಿತು. ಆಗ ಅಂಜನೆಯ ಮಗನು—ತಾನು ಮೊದಲು ಶಿಂಶುಪ ವೃಕ್ಷದ ಕೆಳಗೆ ನೋಡಿದ್ದ ಸೀತೆಯಂತಿರುವ ಆ ಮಾಯೆಯನ್ನೂ ಅದರ ಕತ್ತಿಗೆ ತಗುಲಿಸಿರುವ ಇಂದ್ರಜಿತ್ತಿನ ಕತ್ತಿಯನ್ನೂ ನೋಡಿ ಮನಸ್ಸಿನಲ್ಲಿ ಮಹಾತಂಕಯುಕ್ತನಾಗಿ ದುಃಖದಿಂದ ಕಣ್ಣೀರುಗಳನ್ನು ಸುರಿಸುತ್ತಿರಲು ; ತಿರಿಗಿ ಆ ಮಾಯೆಯು ಮಾರುತಿಯನ್ನು ನೋಡಿ—ಅಯ್ಯಾ, ಮಗನೇ, ಮಾರುತಿಯೇ, ನಾನು ನಿನ್ನೊಡೆಯನಾದ ಶ್ರೀರಾಮನ ಪ್ರಾಣಪ್ರಿಯೆಯಲ್ಲವೇ ? ಅನಾಥಳಾಗಿ ಈ ಪಾಪಿಯ ಕೈಗತ್ತಿಗೆ ತನುವನ್ನು ತೆತ್ತಿರುವ ನನ್ನಲ್ಲಿ ಕರುಣವನ್ನಿಡಬಾರದೇ? ಹಾ ! ಸತ್ಯವೇ, ನಿನಗೆ ದಿಕ್ಕಿಲ್ಲವೇ ! ಎಲೈ ನೀತಿದೇವತೆಯೇ ! ನೀನು ಅನಾಥೆಯಾದೆಯಾ ! ಎಂದು ದುಃಖಿಸುತ್ತ—ಅಪ್ಪಾ! ಮಗನೇ, ಈ ಪಾಪಕಾರಿಣಿಯಾದ ನನಗೋಸ್ಕರ ಅನ್ಯಾಯವಾಗಿ ನೀನೇಕೆ ಕಷ್ಟವನ್ನನುಭವಿಸುತ್ತಿರುವಿ ? ಈ ಹಾಳಾದ ರಾಜಕಾರ್ಯಸ್ಥಿತಿಯನ್ನು ಶ್ರೀರಾಮನಿಗೆ ತಿಳಿಸು ಹೋಗು. ಕ್ಷಣಕಾಲವೂ ಸಾವಕಾಶಮಾಡಬೇಡ. ಇನ್ನು ಶ್ರೀರಾಮಚಂದ್ರನು ಯಾರಿಗಾಗಿ ಯುದ್ಧಮಾಡಬೇಕು ? ನೀವೆಲ್ಲರೂ ಏತಕ್ಕೆ ವೃಥಾ ಶ್ರಮಪಡಬೇಕು ? ಈ ಪಾಪಾತ್ಮಳಾದ ನಾನು ಶ್ರೀರಾ

ಮನಿಗೆ ಅಪಮಾನವನ್ನೂ ನಿಮ್ಮೆಲ್ಲರಿಗೂ ಅಪಾರಶ್ರಮವನ್ನೂ ಉಂಟುಮಾಡಿ ಈಗ ಮೃತ್ಯುವಿನ ಬಾಯನ್ನು ಪ್ರವೇಶಿಸುತ್ತಿದ್ದೇನೆ. ಇನ್ನು ನೀವು ಯಾರಿಗಾಗಿ ಯುದ್ಧ ಮಾಡುವಿರಿ ? ಈ ಕಾಳ್ಗ್ಗ್ರತದ ಖಳನ ಕೈಯಲ್ಲಿ ಸಿಕ್ಕಿ ನನ್ನ ಬಾಳು ಹಾಳಾಯಿತು. ಪೂರ್ವದಲ್ಲಿ ನನ್ನ ಪತಿಯೂ ಅತ್ತೆಯೂ ಹಿತಚಿಂತಕರಾದ ಇನ್ನೂ ಇತರರೂ ಕಾಡಿಗೆ ಹೋಗಬೇಡವೆಂದು ಎಷ್ಟು ವಿಧವಾಗಿ ಹೇಳಿದರೂ ಅವರ ಮಾತುಗಳೊಂದನ್ನೂ ಕೇಳದೆ ಮೂರ್ಖಳಾದ ನಾನು ನನ್ನಿಂದಲೇ ಕೆಟ್ಟೆನು. ಅಯ್ಯೋ ! ಶ್ರೀರಾಮನ ಕೋಮಲ ಬಾಹುಗಳ ಆಲಿಂಗನದಿಂದ ಉಬ್ಬುತ್ತಿದ್ದ ದೇಹವೇ, ಈ ಪಾಪಿಯ ಕೈಗತ್ತಿಗೆ ಗುರಿಯಾದಿಯಾ ! ಮಹಾತ್ಮನಾದ ಜನಕರಾಜನ ಕುಲದಲ್ಲಿ ಹುಟ್ಟಿ ಸೂರ್ಯವಂಶದಲ್ಲಿ ಲೋಕರಕ್ಷಣಾರ್ಥವಾಗಿ ಅವತರಿಸಿದ ಶ್ರೀರಾಮನನ್ನು ಕೈಹಿಡಿದು ಕಡೆಗೆ ನನಗಿಂಥ ದುರವಸ್ಥೆಯು ಅನುಭವಕ್ಕೆ ಬಂದಿತು ! ನೋಡಯ್ಯಾ, ಮಾರುತಿಯೇ, ಇದು ನನ್ನ ಹಿಂದಣ ಯಾವ ಜನ್ಮದ ದುರಿತತತಿಯೋ ? ಮಹಾತ್ಮರಾದ ಯಾವ ದಂಪತಿಗಳ ಸಂತೋಷಾನುಭವಕ್ಕೆ ಕಂಟಕಳಾಗಿದ್ದೆನೋ ? ಆ ದುಷ್ಕೃತ ಫಲವು ಈಗ ನನಗೆ ಅನುಭವಾಭಿಮುಖವಾಯಿತು. ನೀನು ಇನ್ನಿಲ್ಲಿ ನಿಲ್ಲದೆ ನನ್ನ ಆಶೆಯನ್ನು ತೊರೆದು ಲಕ್ಷ್ಮಣಸಹಿತವಾಗಿ ಶ್ರೀರಾಮಚಂದ್ರನನ್ನು ಅಯೋಧ್ಯಾ ನಗರಕ್ಕೆ ಹೋಗಿ ಸುಖವಾಗಿ ಬದುಕಹೇಳು. ಈ ನೀಚನ ಕೈಗತ್ತಿಯಿಂದ ಕಡಿಯಲ್ಪಟ್ಟು ತುಂಡಾದ ನನ್ನ ದೇಹವನ್ನು ತೆಗೆದುಕೊಂಡು ಹೋಗಿ ಶ್ರೀರಾಮಚಂದ್ರನಿಗೆ ತೋರಿಸು. ಈ ವಿಧವಾದ ನನ್ನ ಮಾತುಗಳನ್ನು ಅಣುಮಾತ್ರವಾದರೂ ವಿಾರಿ ನಡೆಯದಿರು. ಈ ನಿಶಾಚರರು ಮಹಾ ಮಾಯಿಗಳು. ಈಗ ಅನ್ಯಾಯವಾಗಿ ನನ್ನ ಪ್ರಾಣಗಳಿಗೆ ಮುನಿದ ಹಾಗೆ ಏನಾದರೂ ಉಪಾಯದಿಂದ ಲೋಕರಕ್ಷಕನಾದ ಶ್ರೀರಾಮನ ಪ್ರಾಣಗಳಿಗೂ ಮುನಿದಾರು, ಎಚ್ಚರಿಕೆಯಿಂದಿರಿ ! ಎಂದು ಹೇಳುತ್ತಿರಲು ; ಇಂದ್ರಜಿತ್ತು—ಹನುಮಂತನು ನೋಡುತ್ತಿರುವಾಗಲೇ ಆ ಮಾಯಾಸೀತೆಯ ತಲೆಯನ್ನು ಕಡಿದು ರುಂಡಮುಂಡಗಳನ್ನು ರಥದಿಂದ ಕೆಳಗೆ ಬೀಸಾಡಿಬಿಟ್ಟನು. ಆಗ ಆಂಜನೇಯನು ಕೋಪಸಂತಾಪಾಶ್ಚರ್ಯಮಿಶ್ರವಾದ ಭಾವಯುಕ್ತನಾಗಿ ವೇಗದಿಂದ ಹೋಗಿ ಆ ರಾವಣಿಯ ರಥವನ್ನು ಒದೆಯಲು ; ಅದು ಪುಡಿಪುಡಿಯಾಯಿತು ಕಪಟಿಯಾದ ಇಂದ್ರಜಿತ್ತು ಮಾಯಾಬಲದಿಂದ ತನ್ನನ್ನು ಮರಿಸಿಕೊಂಡು ಓಡಿಹೋಗಿ ಲಂಕೆಯನ್ನು ಸೇರಿದನು. ಅನಂತರದಲ್ಲಿ ಆಂಜನೇಯನು ಇತಿಕರ್ತವ್ಯತಾಜ್ಞಾನವಿಲ್ಲದವನಾಗಿ ಹಿಂದಿರುಗಿ ಬಂದು ಆ ಮಾಯಾ ಭೂಮಿಜೆಯ ಕಡಿಯಲ್ಪಟ್ಟು ಬಿದ್ದಿರುವ ತಲೆಯಟ್ಟೆಗಳನ್ನು ನೋಡಿ—ಹಾ ! ಜನಕರಾಜನಂದಿನೀ ! ಎಂದು ಹಂಬಲಿಸಿ ಹಮ್ಮಡಗಿ ಮೂರ್ಛಿತನಾಗಿ ನೆಲದಲ್ಲಿ ಬಿದ್ದಿರಲು ;

ಇತ್ತ ಶ್ರೀರಾಮಚಂದ್ರನು—ಈ ಲಂಕಾನಗರದ ಪಶ್ಚಿಮದಿಗ್ದ್ವಾರದಲ್ಲಿ ಧೀರನಾದ ವಾಯುಕುಮಾರನ ಸಿಂಹನಾದವು ಈ ವರೆಗೂ ಕೇಳಿಸುತ್ತಿದ್ದಿತು. ಈಗ ಅದು ಅಡಗಿದೆ. ಎಲ್ಲಿ ನೋಡಿದರೂ ರಾಕ್ಷಸರ ಬಿರುಗೂಗುಗಳೇ ತುಂಬಿವೆ. ಇದಕ್ಕೆ ಕಾರಣವೇನಿರುವುದೋ ತಿಳಿಯುವುದಿಲ್ಲ. ಅದುಕಾರಣ ಅಯ್ಯಾ ಜಾಂಬವಂತರೇ,

ನೀವು ತ್ವರಿತದಿಂದ ಆಂಜನೇಯನ ಬಳಿಗೆ ಹೋಗಿರಿ ಎಂದು ಕಳುಹಿಸಿ ಅಂಗದನಿಗೆ ಲಕ್ಷ್ಮಣನನ್ನೂ ನೀಲನಿಗೆ ವಿಭೀಷಣನನ್ನೂ ಬೆಂಬಲವಾಗಿ ಕಳುಹಿಸಿದನು. ಅನಂತರ ದಲ್ಲಿ ಜಾಂಬವಂತನು ತ್ವರಿತಗತಿಯಿಂದ ಬಂದು ಮೂರ್ಛಿತನಾಗಿ ಬಿದ್ದಿರುವ ಆಂಜನೇ ಯನನ್ನೂ ಅವನ ಸಮೀಪದಲ್ಲಿ ಕಡಿಯಲ್ಪಟ್ಟು ಬಿದ್ದಿರುವ ಸೀತೆಯ ದೇಹವನ್ನೂ ನೋಡಿ ಇದು ಭಯಭ್ರಾಂತರಾದ ನೀಚರಾಕ್ಷಸರ ಕೆಲಸವೆಂದು ಯೋಚಿಸಿ ದುಃಖ ವೆಂಬ ಬಲ್ಗಡಲಲ್ಲಿ ಬಿದ್ದು ಎಚ್ಚೆತ್ತು ಆಂಜನೇಯನಿಗೆ ಶೈತ್ಯೋಪಚಾರವನ್ನು ಮಾಡಿ ಎಬ್ಬಿಸಲು; ಅವನು ಮೊದಲಿಂದಲೂ ನಡೆದ ಕಾರ್ಯಸ್ಥಿತಿಯನ್ನೆಲ್ಲಾ ಹೇಳಿದನು. ಆ ಮೇಲೆ ಆ ಮಾಯಾಭೂಮಿಜೆಯ ತಲೆಯಟ್ಟೆಗಳನ್ನು ತೆಗೆದುಕೊಂಡು ಬಂದು ರಾಮನ ಮುಂದಿಳುಹಿದನು. ಆಗ ರಾಮನಿಗೆ ಹೊಟ್ಟೆಯ ತುಂಬ ಹೊಸ ಸುಣ್ಣ ವನ್ನು ತುಂಬಿ ನೀರು ಹೊಯ್ದಂತಾಗಿ ಭೂಮಿಯಲ್ಲಿ ಬಿದ್ದನು. ಸುಗ್ರೀವನು ಧಾರಾ ಸಂಪಾತವಾಗಿ ಹರಿಯುತ್ತಿರುವ ಕಣ್ಣೀರುಗಳಿಂದ ಕೂಡಿ ಜಡನಾಗಿ ನಿಂತನು. ಕಪಿವಾಹಿನಿಯೆಲ್ಲಾ ದುಃಖಸಮುದ್ರದಲ್ಲಿ ಮುಳುಗಿತು. ಆಗ ಆಂಜನೇಯನು— ಇದಕ್ಕಾಗಿ ದುಃಖಿಸುವುದೇಕೆ? ನೀವೆಲ್ಲರೂ ಏನೂ ತಿಳಿಯದವರಂತೆ ಮರುಗುತ್ತಿರು ವುದೇಕೆ? ಈ ಕ್ಷಣದಲ್ಲಿ ಓಷಧಿಯನ್ನು ತಂದು ಸೀತೆಯನ್ನು ಎಬ್ಬಿಸುವೆನು ಎಂದು ಸಮಾಧಾನಮಾಡುತ್ತಿದ್ದನು. ರಾಮನು ಕಪಿವೀರರು ಮಾಡಿದ ಶೈತ್ಯೋಪಚಾರದಿಂದ ಎಚ್ಚರವನ್ನು ಹೊಂದಿ ತಲೆಯನ್ನು ಬೊಗ್ಗಿಸಿಕೊಂಡು—ಅಯ್ಯಾ, ವಾನರ ವೀರರೇ, ಈಗ ನಮ್ಮ ಯುದ್ಧಕ್ಕೆ ಅಂತ್ಯವು ಸಂಭವಿಸಿತೇ! ಈ ವರೆಗೂ ಅನುಭವಿಸಿದ ಕಷ್ಟ ನಷ್ಟಗಳೆಲ್ಲಾ ಮರಳಲ್ಲಿ ಹೊಯ್ದ ಎಣ್ಣೆಯಂತೆ ನಿಷ್ಫಲವಾದುವೇ! ಎಂದು ಸುಮ್ಮನಿದ್ದು ಆ ಮೇಲೆ ಆ ಮಾಯಾ ಸೀತಾ ದೇಹವನ್ನು ನೋಡಿ—ಅಕಟಕಟಾ! ನೃಪಸಂತತಿ ಯೊಳಗೆಲ್ಲಾ ಮಹಾತ್ಮನಾದ ಜನಕರಾಜನ ಕುಮಾರಿಯೇ! ಸುಕುಮಾರಾಂಗಿಯೇ! ದುರ್ವಿಧಿಯು ನಿನಗೆ ಇಂಥ ಹೇಸಿಕೆಯ ಸಾವನ್ನು ತಂದೊದಗಿಸಿತೇ! ಎಂದು ಕಣ್ಣೀ ರುಗಳನ್ನು ಹರಿಸುತ್ತ ಆ ತುಂಡುಗಳ ಮೇಲೆ ಬಿದ್ದು ಹೊರಳಾಡುತ್ತ—ಅಯ್ಯೋ, ಮನ್ಮನೋರಮೆಯೇ! ನಿನ್ನ ಹಿತಮಿತ ಮೃದುವಚನಗಳನ್ನು ಮರೆಯುವುದೆಂದಿಗೆ! ಪ್ರಿಯೆಯೇ, ವನಕ್ಕೆ ಬರಬೇಡ ಎಂದು ಅಯೋಧ್ಯೆಯಲ್ಲಿ ಎಷ್ಟು ವಿಧವಾಗಿ ಹೇಳಿದರೂ ಕೇಳದೆ ನನ್ನ ಮೇಲಣ ಮೋಹದಿಂದ ವನಕ್ಕೆ ಬಂದವಳಾದೆ! ಅಹೋರಾತ್ರಿಗಳ ಲ್ಲಿಯೂ ನನ್ನಲ್ಲಿಯೇ ಪ್ರಾಣಗಳನ್ನಿಟ್ಟುಕೊಂಡು ಜೀವಿಸುತ್ತಿದ್ದ ನಿನಗೆ ನನ್ನಗಲುವಿಕೆ ಯಿಂದಲೇ ಮೂರ್ಛಾಮೃತಿಗಳು ಸಂಭವಿಸುವುವೆಂದು ಹೇಳುವಲ್ಲಿ ಮೇಲೆ ಪಾಪಾತ್ಮ ರಾದ ರಾಕ್ಷಸರ ಬಾಧೆಯುಂಟಾದರೆ ನೀನು ಜೀವಧಾರಣೆಯನ್ನು ಮಾಡುವುದುಂಟೇ! ನಾನು ಅಯೋಧ್ಯೆಗೆ ಏತಕ್ಕಾಗಿ ಹೋಗಲಿ? ದನುಜರಿಂದ ನಿನ್ನನ್ನು ಕೊಲ್ಲಿಸಿದೆನೆಂದು ಹೇಳುವುದಕ್ಕಾಗಿ ಹೋಗಬೇಕೇ? ನಾನು ಅಯೋಧ್ಯಾನಗರಕ್ಕೆ ಹೋದ ಮೇಲೆ ನಿನ್ನ ತಂದೆಯಾದ ಜನಕರಾಜನು ಬಂದು ನನ್ನ ಪುತ್ರಿಯು ಎಲ್ಲಿರುವಳೆಂದು ಕೇಳಿದರೆ ಅದಕ್ಕೆ ನಾನು ಏನು ಹೇಳುವೆನು? ನಾನು ಬಂದನೆಂಬ ವರ್ತಮಾನವನ್ನು ಕೇಳಿ ಸಂತೋಷದಿಂದ ಬರುವ ನನ್ನ ತಾಯಂದಿರಿಗೆ ಏನು ಉತ್ತರವನ್ನು ಹೇಳಲಿ? ಭರತ

ಶತ್ರುಘ್ನಾದ್ಯರಿಗೂ ಪುರಜನರಿಗೂ ನಾನು ಹೇಳತಕ್ಕ ಮಾತಾವುದು ? ರಾಕ್ಷಸರಣ ದೇವತೆಗೆ ನಿನ್ನನ್ನು ಒಪ್ಪಿಸಿ ನಿರ್ಭಾಗ್ಯನಾದೆನೆಂದು ಹೇಳಲೇ ? ಇನ್ನುಮೇಲೆ ನಾನು ಮಾಡಬೇಕಾದ ಯೋಚನೆ ಯಾವುದು ? ಇನ್ನುಮೇಲೆ ನಾನು ಈ ಹಗೆಗಳನ್ನು ಕೊಂದು ಫಲವೇನು ? ಈ ಕಪಿವೀರರನ್ನು ಏಕೆ ವೃಥಾ ದಣಿಸಬೇಕು ? ಅರ್ಧಾಂಗಿ ಯಾದ ನೀನು ಸತ್ತ ಮೇಲೆ ಈ ನನ್ನ ಕೆಟ್ಟಬಾಳಿನಿಂದ ಏನೂ ಗುಣವಿಲ್ಲ. ಸೇವೆ ಯಲ್ಲಿ ದಾಸಿಯಂತೆಯೂ ಆಲೋಚನೆಯಲ್ಲಿ ಮಂತ್ರಿಯಂತೆಯೂ ನನ್ನ ದೇಹಪೋಷಣೆ ಯಲ್ಲಿ ತಾಯಂತೆಯೂ ಕ್ಷಮೆಯಲ್ಲಿ ಭೂಮಿಯಂತೆಯೂ ಇದ್ದ ನಿನ್ನನ್ನು ತೀರಿಸಿ ಕೊಂಡು ನಿನ್ನ ಸಚ್ಚರಿತ್ರೆಯನ್ನೆಲ್ಲಾ ಮರೆತು ಕೃಪಣನಾಗಿ ನಾನು ಬಾಳುವುದಕ್ಕಿಂ ತಲೂ ಅಪಹಾಸ್ಯಕರವಾದ ಸ್ಥಿತಿಯು ಯಾವುದೂ ಇಲ್ಲವು ಎಂದು ವಿವಿಧವಾಗಿ ಹೇಳಿಕೊಳ್ಳುತ್ತ ಹಂಬಲಿಸುತ್ತಿರಲು ;

ಆ ಸಮಯದಲ್ಲಿ ಗದಾದಂಡವನ್ನು ಧರಿಸಿಕೊಂಡು ವಿಭೀಷಣನು ಯುದ್ಧ ಭೂಮಿಯಿಂದ ಬಂದು ಆ ಸ್ಥಿತಿಯನ್ನು ನೋಡಿ ಸಾಂಗೋಪಾಂಗವಾಗಿ ತಿಳಿದು ಶ್ರೀರಾಮನನ್ನು ಕುರಿತು—ಎಲೈ ದೇವನೇ, ನೀನು ಲೋಕದವರಂತೆ ನರನೇ ? ಸೀತಾ ದೇವಿಯು ಜಗತ್ತಿನ ಹೆಣ್ಣುಗಳಂತೆ ಮಾನವಿಯೇ ? ಇಂಥ ಮಾಯೆ ವಿಲಾಸಕ್ಕೆ ಮನಸ್ಸನ್ನು ಮಾರಿ ಮರುಗುವುದುಚಿತವೇ ? ಜನಕಜೆಯು ಲೋಕಮಾತೃವಾದ ಲಕ್ಷ್ಮೀದೇವಿಯಲ್ಲವೇ ? ಸುರಾಸುರನರೋರಗರೊಳಗೆ ಆಕೆಯ ಮೈಮೇಲೆ ಕೈಯಿಟ್ಟು ಬದುಕುವವರುಂಟೇ ? ಆಕೆಯು ಕುಪಿತಳಾಗಿ ಶಪಿಸಿದರೆ ಕ್ಷಣಕಾಲದಲ್ಲಿ ಲೋಕವೆ ಲ್ಲವೂ ಭಸ್ಮೀಕೃತವಾಗದಿರುವುದೇ ? ಈ ಅಲ್ಪ ಜೀವಿಯಾದ ರಾವಣಾತ್ಮಜನು ಆಕೆಯನ್ನು ಕೊಲ್ಲುವುದುಂಟೇ ? ಎಂದಿಗೂ ಇಲ್ಲವು. ಸರ್ವಜ್ಞನೂ ಸರ್ವಾಂತ ರ್ಯಾಮಿಯೂ ಆದ ನಿನಗೆ ಅಲ್ಪಜ್ಞನಾದ ನಾನು ವಿಶೇಷವಾಗಿ ವಿಜ್ಞಾಪಿಸತಕ್ಕು ದೇನಿದೆ ? ಇದೆಲ್ಲವೂ ಮಾಯಾವಿಯಾದ ಇಂದ್ರಜಿತ್ತಿನ ಕಾಪಟ್ಯವು. ಅವನು ಅಪಜ ಯಶಂಕಿತನಾಗಿ ನಿನಗೂ ನಿನ್ನ ವೀರಪರಿವಾರಕ್ಕೂ ದುಃಖವನ್ನು ಹುಟ್ಟಿಸಬೇಕೆಂಬ ಯೋಚನೆಯಿಂದ ಮಾಡಿದ ಕುಕೃತ್ಯವು. ಇದು ನಿಜವಲ್ಲ. ಇದಕ್ಕಾಗಿ ಅಣುಮಾತ್ರ ವಾದರೂ ಚಿಂತಿಸಬೇಡ. ಈಗಲೇ ಈ ಮಾರುತಾತ್ಮಜನನ್ನು ಕಳುಹಿಸು. ಆತನ ಸಂಗಡ ನನ್ನ ಮಂತ್ರಿಗಳಲ್ಲಿ ಒಬ್ಬನನ್ನು ಕಳುಹಿಸುವೆನು. ಅಲ್ಲಿ ಸೀತಾದೇವಿಯು ಇಲ್ಲದಿದ್ದರೆ ಸತ್ಯವಾಗಿ ನಾನು ನಿನ್ನಡಿಗಳ ಸೇವಕನಲ್ಲ ಎಂದು ಹೇಳಲು ; ರಾಮನು ಆ ಮಾತುಗಳನ್ನು ಕೇಳಿ ಆಶ್ಚರ್ಯಮನಸ್ಕನಾಗಿ ಕರಸಂಜ್ಞೆಯಿಂದ ಆಂಜನೇಯನಿಗೆ ಅಪ್ಪಣೆಯನ್ನು ಕೊಡಲು; ಆಗ ಅಂಜನೆಯ ಮಗನು ಅಲ್ಲಿಂದ ಲಂಘಿಸಿ ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ಅಶೋಕವನಕ್ಕೆ ಹೋಗಿ ಪೂರ್ವದಂತೆ ರಾಮಧ್ಯಾನಪರಾ ಯಣಳಾಗಿರುವ ಸೀತೆಯನ್ನು ಕಂಡು ಸಂತುಷ್ಟಚಿತ್ತನಾಗಿ ತಿರಿಗಿ ಬಂದು ರಾಮನ ಸನ್ನಿಧಿಯಲ್ಲಿ—ದೇವಾ, ನಿನ್ನರಸಿಯಾದ ಸೀತೆಯು ನಿನ್ನಡಿದಾವರೆಗಳ ನೆನಹೆಂಬ ಅಮೃತವನ್ನು ಪಾನಮಾಡುತ್ತ ಸುಖವಾಗಿರುವಳು ಎಂದು ಹೇಳಲು ; ಆಗ ಶ್ರೀರಾ ಮನ ಹೃದಯದಲ್ಲಿ ಉತ್ಪನ್ನವಾದ ಸಂತೋಷಕ್ಕೆ ಉಪಮಾನವೇ ಇಲ್ಲ. ಜಾಂಬವ

ದಾದಿಗಳು ವಿಭೀಷಣನನ್ನು ಅಪಾರವಾಗಿ ಹೊಗಳಿದರು. ಕಪಿಕಟಕವೆಲ್ಲಾ ಸಂತೋಷಾತಿಶಯದಿಂದ ಮೈಯುಬ್ಬಿ ನಲಿದಾಡಿತು. ಆಗ ವಿಭೀಷಣನು ಶ್ರೀರಾಮಚಂದ್ರನಿಗೆ ದೀರ್ಘದಂಡನಮಸ್ಕಾರವನ್ನು ಮಾಡಿ ಎದ್ದು ನಿಂತು ಕೈಮುಗಿದು—ಎಲೈ, ಸತ್ಯಾರಾಮನಾದ ಶ್ರೀರಾಮಚಂದ್ರನೇ, ಮಾಯಾಶಕ್ತಿಯಿಂದ ದುಷ್ಕಾರ್ಯದಕ್ಷನಾದ ರಾವಣಿಯು ಮೊದಲು ತನ್ನ ತಂದೆಯ ಬಳಿಯಲ್ಲಿ—ನಿನ್ನನ್ನು ಜಯಿಸುವೆನೆಂದು ಸಭಾಜನರೆದುರಿಗೆ ಬಹು ಅಟ್ಟಹಾಸದಿಂದ ಪ್ರತಿಜ್ಞೆಯನ್ನು ಮಾಡಿ ಭಾಷೆಕೊಟ್ಟು ಮಹಾಗರ್ವದಿಂದ ಬಂದು ಯುದ್ಧಕ್ಕೆ ತೊಡಗಿದನು. ಯುದ್ಧಕಾರ್ಯನಿರ್ವಾಹವು ತನಗೆ ಅಸಾಧ್ಯವಾದುದರಿಂದ ಗರ್ವಹೀನನಾಗಿ ನಾಚಿಕೊಂಡು ಮಾಯೆಯನ್ನವಲಂಬಿಸಿ ಈ ಕಪಟ ಸೀತೆಯನ್ನು ಮಾಡಿಕೊಂಡು ಕಡಿದು ಬಿಸುಟು ನಿಮ್ಮೆಲ್ಲರನ್ನೂ ದುಃಖಸಾಗರದಲ್ಲಿ ಮುಳುಗಿಸಿ ಬಾಹ್ಯವ್ಯಾಪಾರವನ್ನು ಮರಿಸಿ ತಾನು ತಪ್ಪಿಸಿಕೊಂಡು ಓಡಿಹೋಗಿ ನಮ್ಮ ಕುಲದೇವತೆಯಿರುವ ನಿಕುಂಭಿಳಾವನದಲ್ಲಿ ಶತ್ರುವಿನಾಶಾರ್ಥವಾಗಿ ಮಾರಣಯಜ್ಞವನ್ನು ಮಾಡುವುದಕ್ಕೆ ಪ್ರಾರಂಭಿಸಿದ್ದಾನೆ. ಆ ಯಜ್ಞವು ನಿರ್ವಿಘ್ನವಾಗಿ ಮುಗಿದರೆ ಅನಂತರದಲ್ಲಿ ಹಗೆಯನ್ನು ಜಯಿಸುವುದು ಅಸಾಧ್ಯವು. ಅದು ಈ ರಾತ್ರಿಯಲ್ಲೇ ಮುಗಿಯುತ್ತದೆ. ನಾವು ಈಗಲೇ ಹೋಗಿ ಅದು ಸಾಂಗವಾಗಿ ಸಾಗದಂತೆ ಭಂಗಪಡಿಸಿಬಿಡಬೇಕು. ಅದುಕಾರಣ ಲಕ್ಷ್ಮಣನನ್ನೂ ಆಂಜನೇಯಾದಿ ಶೂರ ಕಪಿಭಟರನ್ನೂ ಶೀಘ್ರವಾಗಿ ನನ್ನ ಸಂಗಡ ಕಳುಹಿಸಿಕೊಡು. ನಾನು ಈಗಲೇ ಹೋಗಿ ಅವನ ಯಜ್ಞವನ್ನೆಲ್ಲಾ ಕೆಡಿಸಿ ಹಾಳುಮಾಡಿ ಅವನನ್ನು ಯಮಾಲಯಕ್ಕೆ ಅತಿಥಿಯನ್ನಾಗಿ ಮಾಡಿ ನಿನ್ನ ಸನ್ನಿಧಿಗೆ ಬರುವೆನು. ತಡಮಾಡದೆ ಬೇಗನೆ ಅಪ್ಪಣೆಯನ್ನು ಕೊಡು ಎನ್ನಲು ; ಆಗ ಶ್ರೀರಾಮನು ಇಂದ್ರಜಿತ್ತಿನ ಅತುಲಪರಾಕ್ರಮವನ್ನು ನೆನೆದು ತನ್ನ ಬಹಿಃಪ್ರಾಣಪ್ರಾಯನಾದ ಸುಮಿತ್ರಾತ್ಮಜಾತನನ್ನು ಇಂದ್ರಜಿತ್ತಿನೊಡನೆ ಯುದ್ಧಕ್ಕೆ ಕಳುಹಿಸುವುದಕ್ಕಾಗಿ ಶಂಕಾತಂಕಿತ ಚಿತ್ತವೃತ್ತಿಯುಳ್ಳವನಾಗಿ ಯೋಚಿಸುತ್ತಿರಲು ; ಆಗ ಅರಿಭಯಂಕರನಾದ ಲಕ್ಷ್ಮಣನು ಉಕ್ಕಿನ ಕವಚವನ್ನು ತೊಟ್ಟು ಉಡುವಿನ ತೊಗಲಿನ ಕೈಯುಂಗಿಯನ್ನು ಹಾಕಿಕೊಂಡು ತಲೆಗೆ ಸೀಸಕವನ್ನಳವಡಿಸಿಕೊಂಡು ಬೆನ್ನಿಗೆ ಅಕ್ಷಯ ನಿಷಂಗವನ್ನು ಬಿಗಿದು ಬಿಲ್ಲುರಳುಗಳನ್ನು ತೆಗೆದುಕೊಂಡು ಬಂದು ರಾಮನ ಪಾದಗಳಿಗೆ ನಮಸ್ಕರಿಸಿ—ಎಲೈ, ಮಹಾತ್ಮನಾದ ಅಣ್ಣನೇ, ಪೂಜ್ಯನಾದ ನಿನ್ನ ಅನುಗ್ರಹವಿರುವಲ್ಲಿ ನನಗೆ ಈ ಹಗೆಗಳ ಜಯವು ಎಷ್ಟು ಮಾತ್ರವು? ಕಪಟಿಯೂ ಮಾನಹೀನನೂ ಆದ ಆ ರಕ್ಕಸಗುವರನ ತಲೆಗಡಿದು ಅವನ ಸರ್ವಾಂಗಗಳನ್ನೂ ಖಂಡಿಸಿ ಮರುಳ್ಗಳ ಬಳಗಕ್ಕೆ ಉಣಬಡಿಸುವೆನು. ನನಗೆ ಶೀಘ್ರವಾಗಿ ಅನುಜ್ಞೆಯನ್ನು ದಯೆಪಾಲಿಸು ಎಂದು ಕೇಳಿಕೊಂಡನು. ಆಗ ಶ್ರೀರಾಮನು ಅಂಜುತ್ತ ತಮ್ಮನ ಬೆಂಬಲಕ್ಕೆ ಅಂಗದ ಆಂಜನೇಯ ಅಗ್ನಿನಂದನ ಅಜಕುಮಾರಾದಿಗಳನ್ನೂ ಅಪರಿಮಿತ ಕಪಿವಾಹಿನಿಯನ್ನೂ ಕಳುಹಿಸಿಕೊಟ್ಟು ಯುದ್ಧದಲ್ಲಿ ಶತ್ರುವನ್ನು ಜಯಿಸಿ ವಿಜಯಸಂಪನ್ನನಾಗಿ ಬರುವವನಾಗು ಎಂದು ಆಶೀರ್ವಾದವನ್ನು ಮಾಡಿ ಅಪ್ಪಣೆಕೊಟ್ಟು ಕಳುಹಿಸಿದನು.

ಆಗ ವಿಭೀಷಣನು ಅಸಮಾನಗದಾದಂಡಧರನಾಗಿ ಅವರನ್ನೆಲ್ಲಾ ಹಿಂದೆ ಕರೆದುಕೊಂಡು ಹೊರಟುಬಂದು ನಿಕುಂಭಿಳಾ ದೇವಾಲಯವನ್ನು ಹೊಕ್ಕು ನೋಡಲು; ಅಲ್ಲಿ ಇನ್ನೂರೇಳು ಅಕ್ಷೋಹಿಣೀ ಸಂಖ್ಯಾಕವಾದ ರಾಕ್ಷಸಚತುರ್ಬಲವು ಸಕಲಾಯುಧಗಳನ್ನೂ ಧರಿಸಿಕೊಂಡು ಇರುವೆ ನೊಣಗಳಾದರೂ ಒಳಗೆ ಪ್ರವೇಶಿಸದಂತೆ ಬಹು ಜಾಗರೂಕತೆಯಿಂದಿದ್ದಿತು. ಆ ಭೀಕರನಿಶಾಚರ ಬಲದೊಳಗೆ ಪ್ರವೇಶಿಸುವುದು ಬ್ರಹ್ಮೇಂದ್ರಾದಿಗಳಿಗೂ ಅಸಾಧ್ಯವಾಗಿದ್ದಿತು. ಹೀಗಿರುವಲ್ಲಿ ಹಗೆಗಳಾದವರು ಆ ಯಾಗಶಾಲೆಯನ್ನು ಪ್ರವೇಶಿಸುವುದು ಹೇಗೆ? ಆದರೂ ನಿಶಾಚರಕುಲಾರಣ್ಯದವಾನಲಪ್ರಾಯರಾದ ಆಂಜನೇಯಾದಿ ಕಪಿಸುಭಟರು ಸ್ವಲ್ಪವಾದರೂ ಅಂಜದೆ ಗಿರಿತರುಗಳನ್ನು ತೆಗೆದುಕೊಂಡು ಬಂದು ಚತುರ್ದಿಕ್ಕುಗಳಲ್ಲಿಯೂ ಕವಿದು ಒಳಹೊಕ್ಕು ಎದುರಾದವರನ್ನು ಹೊಯ್ದು ತಿವಿದು ಕುಟ್ಟಿ ಕಚ್ಚಿ ಕವಂ ಪರಚಿ ಇರಿದು ಒದೆದು ತಲೆಕೆಳಗಾಗುವಂತೆ ಬಿಸುಟು ರಾಕ್ಷಸರ ಚತುರ್ವಿಧ ಬಲವನ್ನು ಪುಡಿಪುಡಿಮಾಡಿದರು. ಆಹಾ! ವಾನರಚಕ್ರೇಶ್ವರನಾದ ಸುಗ್ರೀವನ ಆಜ್ಞಾಮಂತ್ರಶಕ್ತಿಯ ಅಮೋಘತೆಯನ್ನು ಬಣ್ಣಿಸುವುದಕ್ಕೆ ಯಾರಿಗೆ ಸಾಧ್ಯವು? ಬಹುಮಾನವಾಗಿ ಅಪಾರದ್ರವ್ಯವನ್ನೂ ವಿವಿಧವಾದ ದಿವ್ಯಾಂಬರಗಳನ್ನೂ ಅಮೂಲ್ಯಾಭರಣಗಳನ್ನೂ ತಿಂಗಳುಗಟ್ಟಳೆಯಾಗಿ ಸಂಬಳಗಳನ್ನೂ ಕೊಟ್ಟು ಪ್ರೀತಿಸುತ್ತ ಆದರಿಸಿದಾಗ್ಯೂ ಈ ವಾನರವೀರರಂತೆ ಕವಲಿಲ್ಲದ ಮನಸ್ಸುಳ್ಳವರಾಗಿ ಸ್ವಾಮಿಕಾರ್ಯವನ್ನು ನಿರ್ವಹಿಸುವ ಸತ್ಯಸಂಧರು ಲೋಕದಲ್ಲಿ ದುರ್ಲಭರು. ಇಂಥ ಮರ್ಕಟವೀರಬಲವು ಕ್ಷಣಕಾಲದಲ್ಲಿ ಎದುರಾದ ರಾಕ್ಷಸಬಲವನ್ನೆಲ್ಲಾ ಬರಿಗೈದು ಇಂದ್ರಜಿತ್ತಿನ ಯಜ್ಞಮಂಟಪದ ಒಳಿಗೆ ಹೋಗಿ ನೋಡಲು; ಆಗ ಇಂದ್ರಜಿತ್ತು ವೀರಬಾಹುವೇ ಮೊದಲಾದ ತನ್ನ ಶೂರನಿಶಾಚರಪರಿವಾರದಿಂದ ಕೂಡಿ ಯಜ್ಞದೀಕ್ಷೆಯನ್ನು ಹೊಂದಿ ತದುಚಿತಕರ್ಮಗಳನ್ನು ನಡಿಸುತ್ತ ತದೇಕಚಿತ್ತನಾಗಿದ್ದನು. ಆ ಯಜ್ಞರಕ್ಷಣಾರ್ಥವಾಗಿ ಅಲ್ಲಿಟ್ಟಿದ್ದ ರಾಕ್ಷಸ ಚತುರ್ಬಲವನ್ನು ಎಣಿಸಬಲ್ಲವರಾರು? ಅಷ್ಟು ಬಲಗಳೂ ಒಮ್ಮೊಗವಾಗಿ ಏಕಕಾಲದಲ್ಲಿ ಹೊರಟುಬಂದು ಲಕ್ಷ್ಮಣಾದಿಗಳನ್ನು ಮುತ್ತಲು; ಆಗ ಆಂಜನೇಯಾದಿ ವಾನರವಾಹಿನೀಪತಿಗಳು ಸನ್ನದ್ಧರಾಗಿ ನಿಂತು ಸಂಹಾರಕ್ಕುಪಕ್ರಮಿಸಿ ಆ ದೈತ್ಯರನ್ನು ಎಷ್ಟು ವಿಧದಿಂದ ಕೊಂದುಕೆಡಹುತ್ತಿದ್ದರೂ ಮತ್ತು ಮತ್ತು ಬಂದು ನೀಲಮೇಘಗಳಂತೆ ಮುತ್ತುತ್ತ ಕಾದುತ್ತ ಮುಂದಕ್ಕೆ ದಾರಿಗೊಡದಿರಲು; ಆಗ ಧೀರನಾದ ವಿಭೀಷಣನು ನೋಡಿ ಇವರೊಡನೆ ಹೀಗೆ ಜಗಳವಾಡುತ್ತ ನಿಂತರೆ ಸಾವಕಾಶವಾಗುವುದು. ಇನ್ನು ಸೂರ್ಯೋದಯಕ್ಕೆ ಒಂದು ಯಾಮಮಾತ್ರ ಇದೆ. ಅಷ್ಟರಲ್ಲಿ ಇವನ ಯಜ್ಞವು ನೆರವೇರಿಹೋಗುವುದು ಎಂದು ಯೋಚಿಸಿ ತನ್ನ ಅಪ್ರತಿಮಗದಾಯುಧವನ್ನು ತೆಗೆದುಕೊಂಡು ಲಕ್ಷ್ಮಣನನ್ನು ನೋಡಿ—ನಾನು ನಿನಗೆ ದಾರಿಯನ್ನು ಮಾಡಿಕೊಡುತ್ತ ಮುಂದೆ ಹೋಗುತ್ತೇನೆ. ನೀನು ನನ್ನ ಬೆಂಬಿಡದೆ ಬರುವವನಾಗು. ಅಂಗದಾದಿಗಳು ಈ ರಕ್ಕಸಬಲದೊಡನೆ ಕಾದುತ್ತಿರಲಿ ಎಂದು ಹೇಳಿ ಎದುರಾದ ರಾಕ್ಷಸವೀರರನ್ನು ತನ್ನ ಗದಾದಂಡದಿಂದ ಮುರಿಬಡಿದು ಹೊರಬೀಳಿಸುತ್ತ ಯಮನ ನಗರಿಗೆ ಕಳುಹಿಸುತ್ತ ಹೋಗುತ್ತಿರಲು;

ಆಗ ಅಮಿತವಿಕ್ರಮನಾದ ಲಕ್ಷ್ಮಣನು ಬೆಂಬಲವನ್ನು ಅಪೇಕ್ಷಿಸದೆ ಹೆದೆಯಲ್ಲಿ ಅಸಂಖ್ಯಾತಬಾಣಗಳನ್ನು ಸಂಧಾನಿಸುತ್ತ ಆಕರ್ಣಾಂತವಾಗಿ ಎಳೆದು ಪ್ರಯೋಗಿಸುತ್ತ ಅಪರಿಮಿತ ರಾಕ್ಷಸರ ತಲೆಗಳನ್ನು ನೆಲಕ್ಕುರುಳಿಸುತ್ತ ಒತ್ತಿಬಂದ ನಿಶಾಚರ ಪತಾಕಿನಿಯನ್ನು ಬರಿಗೆಯ್ಯುತ್ತ ವಿಭೀಷಣನ ಹಿಂದೆಯೇ ನಡೆದನು.

ಆಗ ಲೋಕಾದ್ಭುತ ಬಲಗರ್ವಿತನಾದ ಆಂಜನೇಯನು ಲಕ್ಷ್ಮಣನ ಹಿಂಗಡೆಯಲ್ಲಿ ಹೊರಟುಬರುತ್ತ ಆತನ ಮೇಲೆ ಬೀಳುವುದಕ್ಕೆ ಬರುತ್ತಿರುವ ರಾಕ್ಷಸರನ್ನು ಬಡಿದೆಸೆಯುತ್ತ ಬಂದನು. ಆಂಜನೇಯನು ಒಂದುಸಾರಿ ಅನೇಕ ರಾಕ್ಷಸರ ಗುಂಪನ್ನು ತನ್ನ ನಿಡುದೋಳುಗಳಿಂದ ಬಾಚಿ ತಬ್ಬಿ ಬಿಸುಡಲು ; ಅವರೆಲ್ಲರೂ ಪುಣ್ಯಕ್ಷಯವಾಗಿ ಸ್ವರ್ಗದಿಂದ ಬೀಳುತ್ತಿರುವ ಮೃತದೇಹಗಳೋ ಎಂಬಂತೆ ಆಕಾಶದಿಂದ ಸರ್ವದಿಕ್ಕುಗಳಲ್ಲೂ ಬಿದ್ದು ಸಾಯುತ್ತಿದ್ದರು. ಈ ರೀತಿಯಾಗಿ ಮೂವರೂ ಕ್ಷಣಕಾಲದಲ್ಲಿ ಇಂದ್ರಜಿತ್ತಿನ ಬಳಿಗೆ ಬಂದು ನಿಂತರು. ಆಗ ವಿಭೀಷಣನು ಲಕ್ಷ್ಮಣನನ್ನು ಕುರಿತು–ಇದೋ, ಇವನೇ ಮಾಯಾಸೀತೆಯನ್ನು ನಿರ್ಮಿಸಿ ಕಡಿದುರುಳಿಸಿ ನಮ್ಮೆಲ್ಲರನ್ನೂ ಅಂಜಿಸಿದ ಮಹಾಪಾಪಿಯು. ಇತ್ತನೋಡು ! ಆಕಾಶಮಾರ್ಗದಿಂದ ಅಕ್ಷಯವಾದ ಬತ್ತಳಿಕೆಯೂ ಅಮೋಘವಾದ ಧನುಸ್ಸೂ ಅತಿ ವೇಗಶಾಲಿಗಳಾದ ಅಶ್ವಗಳೂ ಅಭೇದ್ಯವಾದ ಮಹಾರಥವೂ ಇಳಿದುಬರುತ್ತಿವೆ. ಇವು ಇವನ ಕೈಸೇರಿದ ಕ್ಷಣದಲ್ಲೇ ನಮ್ಮೆಲ್ಲರಿಗೂ ಅಂತ್ಯಕಾಲವು ಸಂಭವಿಸಿತೆಂದು ತಿಳಿದುಕೋ ! ಅದುಕಾರಣ ಅತಿ ಶೀಘ್ರವಾಗಿ ಸಾಹಸವನ್ನು ಮಾಡು ಎನ್ನಲು ; ಆಗ ಅಪಾರಶಕ್ತಿಸಂಪನ್ನನೂ ವೈರಿಗಳ ಗರ್ವವೆಂಬ ಗಿರಿಗೆ ಕುಲಿಶಸಮಾನನೂ ಆದ ಮಾರುತಿಯು ನೆಗೆದುಹೋಗಿ ಯಾಗದೀಕ್ಷಿತನಾಗಿದ್ದ ಇಂದ್ರಜಿತ್ತನ್ನು ಕಾಲಿಂದ ಒದೆದುರುಳಿಸಿ ಅವನ ಯಜ್ಞದ ಸಮಸ್ತ ಸಾಮಗ್ರಿಗಳನ್ನೂ ತುಳಿದು ದಿಕ್ಕುದಿಕ್ಕುಗಳಿಗೆಸೆದು ಯಾಗಾಗ್ನಿಗೆ ನೀರುಗಳನ್ನು ಸುರಿದು ಆರಿಸಿ ಹಾಳುಮಾಡಿದನು.

ಆ ಕ್ಷಣದಲ್ಲಿಯೇ ಸರೋಜಸಂಭವನಿಂದ ಕಳುಹಿಸಲ್ಪಟ್ಟು ಬರುತ್ತಿದ್ದ ಮಹಾರಥವು ಅಶ್ವಾದಿಗಳೊಡನೆ ಮಧ್ಯಮಾರ್ಗದಿಂದ ಹಿಂದಿರುಗಿ ಹೋಯಿತು. ಆಗ ಇಂದ್ರಜಿತ್ತು ಕಣ್ತೆರೆದು ಮಹಾ ರೋಷದಿಂದ ನೋಡಲು ; ಆಗ ಧೀರನಾದ ಮಾರುತಿಯು–ಎಲಾ ದೇವದ್ರೋಹಿಯೇ, ನೀಚನೇ, ಸುಜನನಿಂದಕನೇ, ಸನ್ಮಾರ್ಗವಿರೋಧಿಯೇ, ತ್ವರಿತದಿಂದ ಯುದ್ಧಕ್ಕೆ ಬಾರೆಲಾ ! ನಿನಗೆ ಅಂತ್ಯಕಾಲವು ಸಮೀಪಿಸಿದೆ. ನಿಷ್ಫಲವಾದ ಈ ಕಾರ್ಯಕಲಾಪದಿಂದ ನಿನಗೇನಾಗುವುದು ? ವಿಸದ್ಗತನಾದ ನಿನಗೆ ಸತ್ಕರ್ಮವೂ ಕೂಡ ವಿಪರೀತ ಫಲವನ್ನು ಕೊಡದಿರುವುದೇ ? ವೃಥಾ ಸಾವಕಾಶವೇಕೆ ? ಕಾಳಗವನ್ನು ಕೊಡು ! ಎದುರಿಗೆ ನಿಲ್ಲು ಬಾ ! ನಿಜಾಯುಧವನ್ನು ಹಿಡಿ ! ನಿನ್ನ ಕಾಪಟ್ಯವನ್ನು ಗಂಟು ಕಟ್ಟಿ ಮೂಲೆಗೆ ಬಿಸುಡು ! ಇನ್ನೇಳು ! ಎನ್ನುತ್ತ ಮತ್ತೆ ಹತ್ತಿರಕ್ಕೆ ಬಂದು ಹಲ್ಲುದುರುವಂತೆ ಅವನ ಕಟವಾಯಿನ ಮೇಲೆ ಘಳೀರೆಂದು ಬಡಿದನು. ಆಗ ರಾವಣಿಯು ನೆಲ್ಲುಹುಲ್ಲಿನ ಬಣಬೆಗೆ ಕಾಡ್ಗಿಚ್ಚು ಹತ್ತಿದ ಹಾಗಾಗಿ ಬಾಯ್ಕಣ್ಮೊಗುಗಳಲ್ಲಿ ಕೋಪಾಗ್ನಿಜ್ವಾಲೆಯು ಹೊರಡುತ್ತಿರಲು ; ಕ್ಷಣಮಾತ್ರದಲ್ಲಿ ಧನುರ್ಬಾಣಗಳನ್ನು

ತೆಗೆದುಕೊಂಡು ರಥಾರೂಢನಾಗಿ ಬಂದು ಲಕ್ಷ್ಮಣನೆದುರಿಗೆ ನಿಂತು—ಎಲೋ, ಮೂಢನಾದ ಲಕ್ಷ್ಮಣಾ, ಈ ವಿಭೀಷಣನೆಂಬ ಸೋಂಬರಕ್ಕಸನು ನಿನ್ನನ್ನು ಕರೆದುಕೊಂಡು ಬಂದನೇ? ಇವನನ್ನು ರಕ್ತಬೀಳುವಂತೆ ಹಿಂಡಿ ನಿಸ್ಸಾರಮಾಡಿ ನಿನ್ನ ಶೌರ್ಯವೆಂಬ ಬೆಂಕಿಯನ್ನು ಆರಿಸಿ ನಿಶ್ಶೇಷಮಾಡಿ ಕಪಿಬಲದ ಕರುಳುಗಳನ್ನು ಕಿತ್ತು ತಿನ್ನುವೆನು. ಪರೀಕ್ಷಿಸಿ ನೋಡು! ತಡವೇಕೆ? ಕೋದಂಡವನ್ನು ಹಿಡಿ! ಬಾಣಗಳನ್ನು ತೊಡು! ಪ್ರಯೋಗಿಸು! ನಾನು ಯುದ್ಧಮುಖದಲ್ಲಿ ಹೆದರಿ ಹಿಂದೆಗೆಯುವ ವೀರನೇ? ಎನ್ನುತ್ತ ಗುರಿಗಟ್ಟಿ ಬಾಣಗಳಿಂದ ಲಕ್ಷ್ಮಣನನ್ನು ಹೊಡೆದನು. ಆಗ ಧನುರ್ವಿದ್ಯಾನಿಪುಣನಾದ ಸುಮಿತ್ರಾತನುಜನು ಅಸಂಖ್ಯಾತಬಾಣಗಳನ್ನು ಪ್ರಯೋಗಿಸಿ ಮಹಾವೇಗದಿಂದ ಬರುತ್ತಿರುವ ಅರಿಶರ ಪರಂಪರೆಯನ್ನು ನಡುದಾರಿಯಲ್ಲೇ ಕೊಚ್ಚಿ ಕೆಡಹಿ ಪುನಃ ಪುನಃ ದಿವ್ಯಮಾರ್ಗಣಗಳನ್ನು ಪ್ರಯೋಗಿಸಿ ಇಂದ್ರಜಿತ್ತನ್ನು ಕವಿಸಿದನು. ಆಗ ಲಕ್ಷ್ಮಣನು ಎಸೆದ ಬಾಣಗಳು ಆಕಾಶಾಂತರಾಳದಲ್ಲೆಲ್ಲಾ ತುಂಬಿಕೊಂಡು ಮತ್ತಷ್ಟು ಕತ್ತಲೆಯಾಗಿ ಈ ರಾತ್ರಿಯು ಇಂದ್ರಜಿತ್ತಿನ ಕಾಳರಾತ್ರಿಯೆಂಬಂತೆ ಮಹಾ ವೀರರ ಹೃದಯದಲ್ಲೂ ಭಯದ ಬೀಜವನ್ನು ಬಿತ್ತುತ್ತಿದ್ದಿತು.

ಆಗ ಮತ್ತೊಂದು ಕಡೆಯಲ್ಲಿ ಕಪಿಬಲಕ್ಕೂ ರಾಕ್ಷಸಬಲಕ್ಕೂ ಘೋರ ಯುದ್ಧವು ಸಂಪ್ರಾಪ್ತವಾಗಿ ನಡೆಯುತ್ತಿದ್ದಿತು. ಅನಂತರದಲ್ಲಿ ಬಿಲ್ಲಾಳುಗಳಲ್ಲಿ ಬಲ್ಲಿದನಾದ ಸುಮಿತ್ರಾನಂದನನು ಒಂದೇ ಬಾಣದ ಎಸುಗೆಯಿಂದ ಹಗೆಯ ರಥದ ನಾಲ್ಕು ಕುದುರೆಗಳನ್ನೂ ರಥವನ್ನೂ ಸಾರಥಿಯನ್ನೂ ತರಿದು ನೆಲಕ್ಕುರುಳಿಸಿ—ಎಲೋ ನೀಚನಾದ ರಾವಣಿಯೇ, ಕತ್ತಲೆಯಲ್ಲಿ ಕಾಪಟ್ಯವನ್ನು ಒಡ್ಡಿ ಹೆದರಿ ಗಗನಸ್ಥಳಕ್ಕೆ ಓಡಿಹೋಗಿ ಹೇಡಿಯಂತೆ ಮೈಮರಿಸಿಕೊಂಡು ಎಸೆಯುತ್ತಿದ್ದ ನಿನ್ನ ಉಬ್ಬಾಳುತನವು ಇಂದು ಮಾಯವಾದೀತೇ? ಲೋಕದಲ್ಲಿ ಕಲಿಗಳಾದವರು ಎದುರಾಳಿನೆದುರಿಗೆ ನಿಂತು ತಮ್ಮ ಪರಾಕ್ರಮವನ್ನು ತೋರಿಸುವುದು ಸರ್ವಸಮ್ಮತವು. ದುರ್ಬಲರಾದ ಮೈಗಳ್ಳರಿಗೆ ಮರೆಯಲ್ಲಿದ್ದುಕೊಂಡು ಮೋಸದಿಂದ ಜಗಳವಾಡುವುದು ಸ್ವಭಾವವು. ಕಪಟಿಯಾದ ನೀನು ಇನ್ನು ಮೇಲೆ ಒಡಲನ್ನು ಬಚ್ಚಿಡುವ ಆಶೆಯನ್ನು ತೊರೆದು ನಿಂತು ಏಕಚಿತ್ತದಿಂದ ಯುದ್ಧಮಾಡು! ಇದು ನಮ್ಮಿಬ್ಬರಿಗೂ ಸರಿಯಾದ ಕಲಹ ಸಮಯವು. ಇಂಥ ಸಂದರ್ಭದಲ್ಲಿ ನಿನ್ನಂಥ ವೀರನು ಮಾಯೆಯನ್ನು ಮರೆಹೊಗುವುದು ಅನುಚಿತವು. ಮತ್ತು ಅಪಹಾಸ್ಯಕರವು. ನಮ್ಮಿಬ್ಬರ ಕಲಿತನದ ನ್ಯೂನಾತಿರಿಕ್ತಗಳನ್ನು ಕಪಿರಾಕ್ಷಸೋಭಯ ಕಟಕದ ಸುಭಟರು ನೋಡುತ್ತಿರಲಿ! ಮೇಲೆ ಅಮರರು ನೋಡಿ ಸಂತೋಷಿಸಲಿ! ಎಂದು ಹೀಯಾಳಿಸಿ ನುಡಿದು ಅಮೋಘ ಬಾಣಪ್ರಯೋಗವನ್ನು ಮಾಡಿ ಇಂದ್ರಾರಿಯು ಹಿಡಿದಿದ್ದ ಬಿಲ್ಲನ್ನು ಇಕ್ಕಡಿಗೆಯ್ದು ಬೊಬ್ಬಿರಿದನು.

ಆಗ ಪರಮಸಂತೋಷಯುಕ್ತನಾದ ವಿಭೀಷಣನು—ಪೂತುರೇ! ಲಕ್ಷ್ಮಣಾ! ಈ ನಿನ್ನ ಬಿಲ್ಲಾಳುತನವೂ ಧನುರ್ವಿದ್ಯಾ ಕೌಶಲ್ಯವೂ ಭೂತನಾಥನಿಗೂ ಇಲ್ಲ. ಮಜಭಾಪು! ರಾಮನಿಗೆ ಸರಿಯಾದ ತಮ್ಮನು! ಎಂದು ಹೊಗಳಿದನು. ಬಳಿಕ ಲಕ್ಷ್ಮಣನು ಇಂದ್ರಜಿತ್ತನ್ನು ನೋಡಿ—ಎಲೈ ಕಪಟವೀರನೇ, ಈಗ ನಾನು ನಿನ್ನ

ಮೇಲೆ ಬಾಣಪ್ರಯೋಗವನ್ನು ಮಾಡುವುದಕ್ಕೆ ನಿನ್ನ ಕೈಯಲ್ಲಿ ಬಿಲ್ಲಿಲ್ಲ. ಹತ್ತುವುದಕ್ಕೆ ತೇರಿಲ್ಲ. ರಥಾಶ್ವಸಾರಥಿಗಳಿಲ್ಲ. ಹೀಗೆ ಸಹಾಯಹೀನನಾಗಿರುವ ನಿನ್ನನ್ನು ನಾನು ಕೊಲ್ಲುವುದಿಲ್ಲ. ಶೀಘ್ರವಾಗಿ ಬುದ್ಧಿವಂತನಾದ ಸಾರಥಿಯನ್ನೂ ಧನುಸ್ಸನ್ನೂ ರಥರಥಾಶ್ವಗಳನ್ನೂ ಸಿದ್ಧಮಾಡಿಕೊಂಡು ಯುದ್ಧಕ್ಕೆ ನಿಲ್ಲುವವನಾಗು! ಸಾವಕಾಶ ವೇಕೆ? ನಿನ್ನನ್ನು ನುಂಗುವ ಮೃತ್ಯುವು ತವಕಪಡುತ್ತಿರುವುದು ಎಂದು ನಸುನಗುತ್ತ ಹೇಳುತ್ತಿರಲು; ಆಗ ಮಹಾ ಕೋಪಕಂಪಿತಾಧರನಾದ ರಾವಣಕುಮಾರನು ನಿಮೇಷ ಕಾಲದಲ್ಲಿ ಸಿದ್ಧವಾದ ಮತ್ತೊಂದು ರಥವನ್ನೇರಿ ನೂತನ ಕೋದಂಡವನ್ನು ಹಿಡಿದು ಲಕ್ಷ್ಮಣನ ಮೇಲೆ ಅಸಂಖ್ಯಾತ ಬಾಣ ಪರಂಪರಾವೃಷ್ಟಿಯನ್ನು ಸುರಿಸಿ ಆತನನ್ನು ಕುರಿತು—ಎಲೈ ವಿವೇಕಹೀನನಾದ ಲಕ್ಷ್ಮಣನೇ, ಅಹೋರಾತ್ರಿಗಳಲ್ಲೂ ನಮಗೆ ಶ್ರೇಯಸ್ಸುಂಟಾಗುವಂತೆ ಹರಸುತ್ತಿರುವ ಬ್ರಾಹ್ಮಣನೇ ಬ್ರಹ್ಮನು. ಯಮನು ನಮ್ಮ ಕಿಂಕರನು, ಶಿವನು ನಮ್ಮ ಮನೆಯ ಭಿಕ್ಷುಕನು. ಮೃತ್ಯು ಮಾರಿ ಮಸಣಿ ಇವರು ಗಳು ನಮ್ಮ ಹೆಂಡಿರ ತೊತ್ತುಗಳು. ನೀನು ಈ ವರೆಗೂ ಅಪೇಕ್ಷಿಸುತ್ತಿದ್ದಂತೆ ಇನ್ನು ಮೇಲೆ ಜಯವನ್ನು ಬಯಸದಿರು. ಈ ದಿನದ ಕದನದ ಸ್ಥಿತಿಯು ಬೇರೆ. ಅದು ಬಹು ಭಯಂಕರವಾದುದು. ಎಚ್ಚರವಾಗಿರು ಎಂದು ಬೊಬ್ಬಿರಿದನು.

ಅದನ್ನು ಕೇಳಿ ಅಮಿತವಿಕ್ರಮನಾದ ರಾಮಾನುಜನು ಮಂದಹಾಸಯುಕ್ತ ನಾಗಿ ಅವನ ಬಾಣಗಳನ್ನೆಲ್ಲಾ ಕಡಿದುರುಳಿಸಿ ಅವನನ್ನು ಕುರಿತು—ಎಲಾ ಮೂರ್ಖ ಶ್ರೇಷ್ಠನೇ, ನಿನಗೆ ಆಶೀರ್ವಾದವನ್ನು ಮಾಡಿಕೊಂಡಿರುವ ಬ್ರಹ್ಮನು ನಿನ್ನತ್ತೆಯ ಮೂಳಗಿವಿಯನ್ನೂ ಹರಕುಮೂಗನ್ನೂ ಈ ವರೆಗೂ ಏಕೆ ಬೆಳಿಸಲಿಲ್ಲ? ಮತ್ತು ನಿನಗೆ ಕಿಂಕರನಾದ ಯಮನು ಮೃತರಾದ ನಿನ್ನ ಚಿಕ್ಕಪ್ಪ ತಮ್ಮ ಮಾವಂದಿರೇ ಮೊದಲಾದ ವರ ಪ್ರಾಣಗಳನ್ನು ಏಕೆ ತಂದುಕೊಡಲಿಲ್ಲ? ಹೀಗೆ ಪೂರ್ವಾಪರ ವಿಚಾರವಿಲ್ಲದೆ ಹೆಮ್ಮೆಯಿಂದ ಹುಚ್ಚನಂತೆ ಹರಟುತ್ತಿರುವ ನಿನ್ನನ್ನು ನೋಡಿ ಬಲ್ಲವರು ದೊಡ್ಡ ಹೇಸರಗತ್ತೆ ಎಂದು ಹೇಳುವರು. ಹೀಗೆ ನೀನು ಶುಷ್ಕವಚನಗಳನ್ನು ಕೊಚ್ಚಿಕೊಳ್ಳು ವುದರಿಂದ ಪ್ರಯೋಜನವೇನು? ನಮ್ಮ ಸರಳುಗಳ ಸಾರವನ್ನು ನೋಡು ಎಂದು ಹೊಸಮಸೆಯ ಕೂರಲಗಿನ ಬಾಣಗಳನ್ನು ಇಂದ್ರಜಿತ್ತಿನ ಮೇಲೆ ಸುರಿಸಿದನು. ಕೂಡಲೆ ಇಂದ್ರಜಿತ್ತು ಅವನ ಬಾಣಗಳನ್ನೆಲ್ಲಾ ಕಡಿದುರುಳಿಸಿ--ಎಲಾ ಅಲ್ಪನಾದ ಲಕ್ಷ್ಮಣಾ, ನೀನು ಮೊದಲೇ ದೇಶಭ್ರಷ್ಟನಾಗಿ ಕಾಡಿನಲ್ಲಿ ತಿರುಗುತ್ತಿರುವಿ. ಈಗ ನಿನಗೆ ಪ್ರಾಣ ಗಳನ್ನು ಕಳೆದುಕೊಳ್ಳುವ ದುರವಸ್ಥೆಯು ಬಂದೊದಗಿದೆ. ಇನ್ನು ಗರ್ವದಿಂದ ಹೆಚ್ಚು ಗಳಹಿದರೆ ನಿಮೇಷಮಾತ್ರದಲ್ಲಿ ನಿನ್ನ ತಲೆಯನ್ನು ತರಿದುರುಳಿಸುವೆನು. ನಿರ್ಭಾಗ್ಯ ರಾದ ನಿಮಗೊದಗಿರುವ ದುರವಸ್ಥೆಯಿಂದ ಹುಚ್ಚರಾಗಿರುವಿರಿ! ಮತ್ತು ಮುಂದರಿ ಯದ ಮೂಢತ್ವವು ನಿಮ್ಮನ್ನು ಕವಿದಿರುವುದು. ಈ ಕಪಟಿಯಾದ ವಿಭೀಷಣನೆಂಬ ಹೇಡಿಯನ್ನು ನಂಬಿ ನಮ್ಮ ವಿರೋಧವನ್ನು ಸಂಪಾದಿಸಿಕೊಂಡು ಕೆಟ್ಟಿರಿ. ಮೊದಲು ನಮ್ಮನ್ನು ನಿಮ್ಮ ಕೈಯಿಂದ ಕೊಲ್ಲಿಸಿ ನಿಮಗೆ ಗೆಲುವನ್ನು ತೋರಿಸಿ ಆ ಮೇಲೆ ನಿಮ್ಮನ್ನು ಕೊಂದು ನಿಮ್ಮ ಧರಣಿಯನ್ನೂ ನಮ್ಮ ಧರಣಿಯನ್ನೂ ಸೀತೆಯನ್ನೂ ತನ್ನ

ಅಧೀನಮಾಡಿಕೊಳ್ಳಬೇಕೆಂಬ ಕೊನೆಮುಟ್ಟದ ದುರಾಲೋಚನೆಯನ್ನು ಮಾಡಿಕೊಂಡು ನಮ್ಮನ್ನು ಬಿಟ್ಟು ಬಂದು ನಿಮ್ಮನ್ನು ಸೇರಿದ್ದಾನೆ ಲೋಕದಲ್ಲಿ ಹಸುವಿಗೂ ಹುಲಿಗೂ, ಹಾವಿಗೂ ಗರುಡನಿಗೂ ಮಿತ್ರತ್ವವು ಸಂಭವಿಸುವುದುಂಟೇ? ಎಂದಿಗೂ ಇಲ್ಲವು. ನಿಮ್ಮ ಗತಿಯು ಕಡೆಗೇನಾಗುವುದು ನೋಡಿಕೋ ಎಂದನು.

ಆ ಮಾತುಗಳನ್ನು ಕೇಳಿ ಲಕ್ಷ್ಮಣನು—ಎಲಾ ನೀಚನೇ, ಈ ರಣರಂಗದಲ್ಲಿ ಎದುರಾಗಿ ನಿಂತು ಕಾದಲಾರದೆ ಕಪಟ ತಂತ್ರದ ಮಾತುಗಳ ಬಳಕೆಯಿಂದ ಬೆದರಿಸಿದರೆ ಬೆದರುವರೆಂದು ಮನಸ್ಸಿನಲ್ಲಿ ಬಗೆದಿಯಾ? ನೀನು ಶುದ್ಧ ಮೂಢಾತ್ಮನೇ ಸರಿ! ಕೊಳಕಾದ ಕಪ್ಪೆಚಿಪ್ಪಿನಲ್ಲಿ ಹುಟ್ಟಿದುದಾದರೂ ಮುತ್ತಿಗೆ ಆ ಕೊಳಕಿನ ಸಂಪರ್ಕವುಂಟೇ? ಹಾಗೆ ದುರಾತ್ಮರೂ ಪಾಪಪಂಕಲೇಪಿತರೂ ಆದ ನಿಮ್ಮೊಡನೆ ಹುಟ್ಟಿದವನಾದರೂ ಮಹಾತ್ಮನಾದ ಈ ವಿಭೀಷಣನು ನಿರ್ಮಲಾತ್ಮನೆಂಬುದನ್ನು ನಾವು ತಿಳಿಯೆವೇ? ಸಾಕು! ಇನ್ನು ಹೀಗೆ ಹುಚ್ಚು ಮಾತುಗಳನ್ನು ಬೊಗುಳದಿರು! ಕುದುರೆಗಳನ್ನು ಹೊಡಿ! ರಥವನ್ನು ಮುಂದಕ್ಕೆ ನೂಕು! ಕಣೆಗಳನ್ನು ಪ್ರಯೋಗಿಸು! ನಿಷ್ಫಲವಾದ ಮಾಯಾ ಪಾಂಡಿತ್ಯವನ್ನು ಆಶ್ರಯಿಸಿಕೊಂಡು ನಮ್ಮೆದುರಿಗೆ ಮೆರೆದು ಮೊಂಕಾಗಬೇಡ ಎಂದು ಹೊಸ ಸಾಣೆಯ ಕೂರಲಗುಗಳನ್ನು ಶಿಂಜಿನಿಯಲ್ಲಿ ಹೂಡಿ ಲಕ್ಷೀಕರಿಸಿ ಇಂದ್ರಜಿತ್ತನ್ನು ಹೊಡೆದನು. ಆಗ ರಾವಣಿಯು ತನ್ನನ್ನು ಕೊಲ್ಲುವುದಕ್ಕೆ ಬರುತ್ತಿರುವ ಲಕ್ಷ್ಮಣನ ಕೂರಲಗುಗಳನ್ನು ಮಾರ್ಗಣಗಳಿಂದ ನಡುದಾರಿಯಲ್ಲೇ ಕಡಿದು ಬೀಳಿಸಿ ಬಿಲ್ಲಿನಲ್ಲಿ ನೈರುತಾಸ್ತ್ರವನ್ನು ಹೂಡಿ ಗುರಿಗಟ್ಟಿ ಲಕ್ಷ್ಮಣನೆದೆಗೆಸೆಯಲು; ಆ ಬಾಣಗಳು ಪ್ರತ್ಯಸ್ತ್ರಹತಿಗಂಜದೆ ನುಗ್ಗಿಬಂದು ಲಕ್ಷ್ಮಣನಿಗೆ ತಗುಲಲು; ಆಗ ರಕ್ತಸುರಿದು ಕಳವಳಗೊಂಡು ಕೈಯಾಡದೆ ನಿಂತಿರುವ ಲಕ್ಷ್ಮಣನನ್ನು ನೋಡಿ ಕಪಿವೀರರು ಕೋಪೋದ್ರೇಕದಿಂದ ಕೂಡಿ ಬಂದು ರಾವಣಿಯನ್ನು ಕವಿದರು. ಆಗ ಶೂರನಾದ ರಾವಣಾತ್ಮಜನು ಕವಿಯುವುದಕ್ಕೆ ಬಂದ ನೀಲನನ್ನು ಇಕ್ಕಿ ಮಲಗಿಸಿದನು. ಅಂಗದನನ್ನು ನೆಲಕ್ಕುರುಳಿಸಿದನು. ಜಾಂಬವಂತನನ್ನು ತಲೆನಡುಗುವಂತೆ ತೆಗೆದಿಟ್ಟನು. ಗವಾಕ್ಷನನ್ನು ಉಸಿರಡಗಿತೋ ಎಂಬಂತೆ ಹೊಡೆದನು. ನಳನನ್ನು ಓಡಿಸಿಕೊಂಡು ಹೋಗಿ ಬಡಿದನು. ಸುಷೇಣನನ್ನು ಹಲ್ಗಿರಿಯುವಂತೆ ತಿವಿದನು. ನಿದಾಕ್ಷಿಣ್ಯದಿಂದ ಹೊಯ್ದು ಗಜಗವಯರನ್ನು ಮೂರ್ಛೆಗೊಳಿಸಿದನು. ಎದುರಾದ ಆಂಜನೇಯನನ್ನು ಬಾಣಾಂಬುಧಿಯಲ್ಲಿ ಹೂಳಿ ವಿಭೀಷಣನನ್ನು ಜಗಳಕ್ಕೆ ಬಾಗೆಂದು ಕೆಣಕಿದನು. ಮುನಿದರೆ ವಿಭೀಷಣನು ಯುದ್ಧಕ್ಕಂಜುವ ವೀರನೇ? ಕೋಪಿಸಿ ನಿಂತರೆ ಲಂಕಾದುರ್ಗವನ್ನು ನಿರ್ನಾಮಮಾಡದಿರುವನೇ? ಆಗ ವಿಭೀಷಣನು ತನ್ನ ಮಹಾ ಗದಾಯುಧವನ್ನು ತೆಗೆದುಕೊಂಡು ಅಣ್ಣನ ಮಗನ ರಥವನ್ನು ಹೊಯ್ದನು. ಇಂದ್ರಜಿತ್ತು ಚಿಕ್ಕಪ್ಪನ ಗದೆಯ ಹೊಯ್ಲಿನ ಮಹಾ ಘಾತವನ್ನು ತಿಳಿದಿದ್ದವನಾದುದರಿಂದ ಕೂಡಲೆ ಪಕ್ಷಿಯಂತೆ ಮತ್ತೊಂದು ರಥಕ್ಕೆ ಹಾರಿ ಬದುಕಿದನು. ಮೊದಲ ರಥವು ಅಶ್ವಸಾರಥಿಗಳೊಡನೆ ನುಚ್ಚುನುರಿಯಾಗಿ ಮಣ್ಣಿನಲ್ಲಿ ಬೆರೆದು ನಿಶ್ಶೇಷವಾಯಿತು. ಆಗ ದೇವತೆಗಳು ವಿಭೀಷಣನನ್ನು ಹೊಗಳಿದರು. ಕಪಿಕಟಕವೆಲ್ಲವೂ ಹರ್ಷಧ್ವನಿಯನ್ನು ಮಾಡಿತು. ಆ ಮೇಲೆ ವಿಭೀಷಣನು ತೋರಿದ ಕಡೆಗೆ ನುಗ್ಗಿ ರಾಕ್ಷಸ ಸೇನೆಗಳನ್ನು ಸವರುತ್ತ ಯಮಲೋಕವನ್ನು ಕಾಣಿಸುತ್ತಿದ್ದನು.

ಅಷ್ಟರಲ್ಲಿಯೇ ಧೀರನಾದ ಸುಮಿತ್ರಾತ್ರನಯನು ಜಾಗರತೆಯನ್ನು ಹೊಂದಿದವನಾಗಿ ಬ್ರಹ್ಮಾಂಡ ಮಂಡಲವು ಜಡೀಭಾವವನ್ನು ಹೊಂದುವ ಹಾಗೆ ತನ್ನ ಬಿಲ್ದೆಬ್ಬಿನ ಒಲ್ದನಿಯನ್ನು ಮಾಡಿದನು. ಆಗ ಅಂಜನೆಯ ಮಗನು ಬೊಬ್ಬಿರಿದನು. ನೀಲಾಂಗದಾದಿ ಕಪಿ ಸೇನಾನಾಯಕರು ಮಹಾ ಗಿರಿತರುಗಳನ್ನು ತೆಗೆದುಕೊಂಡು ಬಂದು ಇಂದ್ರವಿರೋಧಿಯನ್ನು ಸಂಹರಿಸುವುದಕ್ಕೆ ನಾನು ಮುಂದು ತಾನು ಮುಂದೆಂದು ಮೊನೆಗಾರಿಕೆಯಿಂದ ನಿಂತರು. ತಿರಿಗಿ ಇಂದ್ರಜಿತ್ತೂ ಲಕ್ಷ್ಮಣನೂ ಮಹಾರಣ್ಯಮಧ್ಯದಲ್ಲಿ ಮುನಿದು ಮಲತು ನಿಲ್ಲುವ ಮದಗಜಗಳಂತೆ ನಿಂತು ಸುರರು ಹೊಗಳುವ ಹಾಗೆ ವಿವಿಧಾಸ್ತ್ರಗಳಿಂದೆಚ್ಚಾಡುತ್ತಿದ್ದರು. ಆಗ ಇಂದ್ರಜಿತ್ತಿನ ಧನುರ್ವಿದ್ಯಾಪಾಂಡಿತ್ಯವನ್ನು ರಾಕ್ಷಸ ಕಟಕವೂ ಸುಮಿತ್ರಾಪುತ್ರನ ಕೋದಂಡಾಗಮ ಪಾರಗತೆಯನ್ನು ಕಪಿಕಟಕವೂ ಹೊಗಳುತ್ತಿದ್ದಿತು. ಸುರಪಥದಲ್ಲಿ ಶುಕ್ರಾಚಾರ್ಯನೊಂದುಸಾರಿ—ಭಲರೇ! ರಾಕ್ಷಸ ರಾಜಕುಮಾರಾ! ಎನ್ನುತ್ತಿದ್ದನು. ಬೃಹಸ್ಪತ್ಯಾಚಾರ್ಯನೊಂದು ಸಾರಿ—ಮಜಭಾಪು! ದಶರಥನಂದನಾ! ಜಾಗು! ಜಾಗು! ಎನ್ನುತ್ತಿದ್ದನು. ಆ ಕದನದ ಭಯಾದ್ಭುತಸ್ಥಿತಿಯನ್ನು ಬಣ್ಣಿಸುವವರಾರು? ಸೋರಿ ನಿಂತಿರುವ ನೆತ್ತರಿನಲ್ಲಿ ಜೋಡುಗಳು ಮುಣುಗಿದುವು. ಇಬ್ಬರ ಮೈಗಳಲ್ಲೂ ಸರಳುಗಳು ನೆಟ್ಟುವು. ಒಬ್ಬರನ್ನೊಬ್ಬರು ತಿರಸ್ಕರಿಸಿ ನುಡಿಯುತ್ತಿದ್ದ ಪಂಥದ ಮೋಡಿಯು ಮುರಿದಿತು. ಭುವನದಲ್ಲಿ ರಾಕ್ಷಸರು ನಿಜವಾಗಿಯೂ ತಾಮಸರು. ಕ್ಷಾತ್ರ ತಾಮಸವು ಸಮರ ಕಾಲದಲ್ಲಲ್ಲದೆ ಇತರ ಕಾಲಗಳಲ್ಲಿ ವಿವೇಕಕ್ಕೆ ಸ್ಥಳವನ್ನು ಕೊಡತಕ್ಕುದು. ಆದುದರಿಂದ ಅದರ ಬಲವೇ ಹೆಚ್ಚು ಎಂದು ಹಿರಿಯರಾಡುವ ನುಡಿಯ ನಿಜಾಂಶವು ಸ್ಥಿರಪಡುವುದಕ್ಕೆ ಈ ಮಹಾ ವೀರರ ಯುದ್ಧಾಂತ್ಯ ಫಲವೇ ತ್ರಿಲೋಕಗಳಿಗೂ ಆಧಾರ ಭೂತವಾಗಿರುವುದು ಎಂದುಕೊಳ್ಳುತ್ತ ಸುರರು ಓರೆಯಾಗದೆ ಈಕ್ಷಿಸುತ್ತಿದ್ದರು. ಅನಂತರದಲ್ಲಿ ಉಭಯವೀರರೂ ಮರವೆಯಿಂದ ಭೂಮಿಯಲ್ಲಿ ಮಲಗಿದರು. ಆಗ ಅವರಿಬ್ಬರ ಪಕ್ಷದ ಆಪ್ತರು ಸಮೀಪಕ್ಕೆ ಬಂದು ಮೈಮರೆಯುವಿಕೆಯನ್ನು ಶೈತ್ಯೋಪಚಾರಗಳಿಂದ ತಪ್ಪಿಸಿ ರಕ್ತಗಳನ್ನು ತೊಳೆದು ಗಾಯಗಳಲ್ಲಿ ಮದ್ದುಗಳನ್ನು ಮೆತ್ತಿ ದಿವ್ಯವಸ್ತ್ರಗಳನ್ನುಡಿಸಿ ಕಸ್ತೂರಿ, ಕರ್ಪೂರ ಕೇಸರಿಗಳಿಂದ ಮಿಶ್ರವಾದ ಸುಗಂಧಗಳನ್ನು ಮೈಗೆ ಲೇಪಿಸಿ ಕಬಳಗಳನ್ನು ತಿನ್ನಿಸಿ ಕರ್ಪೂರ ತಾಂಬೂಲವನ್ನು ಕೊಟ್ಟು ಮತ್ತೆ ಹುರಿಗೊಳಿಸಿ ಕಲಿಮಾಡಿದರು. ಅನಂತರದಲ್ಲಿ ಅವರೀರ್ವರೂ ಬೊಬ್ಬಿರಿದೆದ್ದು ವೀರಪಳಿಗಳನ್ನು ಬಿಗಿದುಟ್ಟು ಬಿಲ್ಲುಗಳ ಕೊಪ್ಪುಗಳನ್ನಾರೈಯ್ದು ತೆಬ್ಬುಗಳನ್ನು ಕಟ್ಟಿ ಕ್ರೂರ ವಿಷಮಬಾಣಗಳನ್ನು ಸಂಧಾನಿಸಿ ಒಬ್ಬನನ್ನೊಬ್ಬನು ಹೊಡೆದನು. ಆಗ ಅವರೆಸೆದ ಬಾಣಗಳು ಅಂಬರತಲದಲ್ಲೆಲ್ಲಾ ತುಂಬಿಕೊಂಡುವು. ಆಗ ಕೆಮ್ಮುಗಿಲ ತಿಂತಿಣಿಗೆ ಉಬ್ಬುವ ಮಹಾಂಬುಧಿಯಂತೆ ಕದನದ ಕೊಬ್ಬಿನಿಂದ ಕಲಿಯೇರಿದ ಇಂದ್ರಾರಿಯು ರಾಮಾನುಜನನ್ನು ಕುರಿತು—ಎಲೈ ಮೂಢನಾದ ಲಕ್ಷ್ಮಣನೇ, ಶೀಘ್ರವಾಗಿ ನಿಮ್ಮಣ್ಣನನ್ನು ಕರಿಸಿಕೋ. ಅವನು ಈ ಸಮಯದಲ್ಲಿ ನಿನ್ನ ಹತ್ತಿರದಲ್ಲಿಯೇ ಇರಲಿ. ನೀನು ಬದುಕಿರುವಾಗಲೇ ಭರತಶತ್ರುಘ್ನರಿಗೆ ಓಲೆಯನ್ನು ಬರೆಯು

ವಂತೆ ನಿಮ್ಮಣ್ಣನಿಗೆ ಹೇಳು. ನಮ್ಮೆಲ್ಲರನ್ನೂ ಕೊಂದು ತಾನೊಬ್ಬನೇ ಬದುಕಬೇಕೆಂಬ ವ್ಯರ್ಥವಾದ ದುರಾಶೆಯಿಂದ ಓಡಿಬಂದು ನಿಮ್ಮನ್ನು ಮರೆಹೊಕ್ಕಿರುವ ಭ್ರಾತೃ ದ್ರೋಹಿಯೂ ಕುಲದ್ರೋಹಿಯೂ ಆದ ಈ ದುರಾತ್ಮನಾದ ವಿಭೀಷಣನನ್ನು ಶೀಘ್ರ ವಾಗಿ ದೇಶಾಂತರಕ್ಕೆ ಓಡಿಸು. ನಿನಗೆ ಪರಲೋಕದಲ್ಲಿ ಸದ್ಗತಿಯು ದೊರೆಯುವುದ ಕ್ಕಾಗಿ ಚಿತ್ತೈಕಾಗ್ರತೆಯಿಂದ ನಿನ್ನ ಇಷ್ಟ ದೇವತೆಯನ್ನು ನೆನೆ! ಧೈರ್ಯಹೀನನಾಗ ಬೇಡ. ಎಚ್ಚರಿಕೆಯಿಂದಿರು ಎಂದು ಸಿಂಹನಾದವನ್ನು ಮಾಡುತ್ತ ಅಸಂಖ್ಯಾತ ಬಾಣ ಗಳಿಂದ ಲಕ್ಷ್ಮಣನನ್ನು ಹೊಡೆದನು. ಆಗ ಲಕ್ಷ್ಮಣನು ಪ್ರತಿ ಶರ ಪ್ರಯೋಗದಿಂದ ಅವನ ಬಾಣಗಳನ್ನೆಲ್ಲಾ ಕಡಿದು ಭೂಮಿಯಲ್ಲಿ ಕೆಡಹಿ ಧನುಸ್ಸನ್ನು ಎಡದ ಹಸ್ತದಲ್ಲಿ ಹಿಡಿದು ತೂಗುತ್ತ ವೀರಮಣಿಯಾದ ಲಕ್ಷ್ಮಣನು—ಎಲಾ ಬರಿಗೊಬ್ಬಿನ ಖೂಳ ರಕ್ಕಸನೇ, ಕೇಳು. ಇನ್ನರೆಗಳಿಗೆಯಲ್ಲಿ ನಿನ್ನ ನಾಮವು ನಿರ್ನಾಮವಾಗುವುದು. ಅದಿರಲಿ. ಹತ್ತು ತಲೆಯ ದುಷ್ಟ ಕ್ರಿಮಿಯಂತೆ ಲೋಕಕಂಟಕನಾದ ನಿನ್ನ ತಂದೆ ಯನ್ನು ಕೊಲ್ಲಿಸುವುದಕ್ಕಾಗಿ ನಮ್ಮಣ್ಣನನ್ನು ಕರಿಸುವೆನು. ನಮ್ಮ ವಿಜಯವಾರ್ತೆ ಯನ್ನು ತಿಳಿಸುವುದಕ್ಕಾಗಿ ಅಯೋಧ್ಯೆಗೆ ಓಲೆಯನ್ನು ಬರಸುವೆನು. ನಮ್ಮ ಮರೆ ಹೊಕ್ಕ ವಿಭೀಷಣನನ್ನು ಲಂಕಾನಗರದ ಶಾಶ್ವತವಾದ ಅರಸುತನಕ್ಕೆ ಕಳುಹಿಸುವೆನು. ಎಲಾ ಖಳನೇ, ಬರಿಯ ಬಾಯ್ಗೊಬ್ಬಿನ ಜಳ್ಳು ನುಡಿಗಳನ್ನಾಡುತ್ತಿರುವ ನಿನ್ನ ನಾಲಿಗೆ ಯನ್ನು ಛೇದಿಸುವೆನೆಂದು ಹೇಳಿ ಗರ್ಜಿಸಿ ಅಗಣ್ಯಾಶರಪರಂಪರೆಯನ್ನು ಪ್ರಯೋಗಿಸಿ ನಿಮೇಷಮಾತ್ರದಲ್ಲಿ ಸುರವಿರೋಧಿಯ ರಥರಥಾಶ್ವಸಾರಥಿಗಳನ್ನು ಕಡಿದುರುಳಿಸಿ ಭೂಗತಮಾಡಿದನು.

ಆ ಕ್ಷಣದಲ್ಲಿಯೇ ಇಂದ್ರಜಿತ್ತನ ಮಾತಾಮಹನಾದ ಮಯನು ದಿವ್ಯ ರಥ ವನ್ನೂ ಕುಶಲನಾದ ಸಾರಥಿಯನ್ನೂ ತ್ವರಿತಗತಿಪ್ರಯುಕ್ತಗಳಾದ ಕುದುರೆಗಳನ್ನೂ ಅಕ್ಷಯವಾದ ಬಾಣಸಮೂಹದಿಂದ ತುಂಬಲ್ಪಟ್ಟ ಬತ್ತಳಿಕೆಗಳನ್ನೂ ಭಯಂಕರವಾದ ಬಿಲ್ಲನ್ನೂ ಕಳುಹಿಸಿಕೊಟ್ಟನು. ಇಂದ್ರಜಿತ್ತು ಶೀಘ್ರವಾಗಿ ಅವುಗಳನ್ನು ಅಂಗೀಕರಿಸಿ ಲಕ್ಷ್ಮಣನನ್ನು ಕುರಿತು—ಇದುಕೋ! ಮಹಾ ಬಾಣವು ಬರುತ್ತಿದೆ! ಇದನ್ನು ಮಧ್ಯದಲ್ಲಿ ಸಡಿಲಿಸುವ ಶಕ್ತಿಯಿದ್ದರೆ ಬೇಗ ಧನುಸ್ಸಿನಲ್ಲಿ ಶ್ರೇಷ್ಠವಾದ ಬಾಣವನ್ನು ಹೂಡು ಎಂದು ಹೊಡೆಯಲು; ಲಕ್ಷ್ಮಣನು ಅದನ್ನು ವಜ್ರಾಸ್ತ್ರದಿಂದ ಕತ್ತರಿಸಿ ಇಂದ್ರಜಿತ್ತಿನ ಮಹಾ ರಥವು ಹದಿನಾರು ಯೋಜನಗಳಷ್ಟು ದೂರ ಹಿಂದಕ್ಕೆ ಹೋಗುವಂತೆ ಬಾಣವನ್ನು ಪ್ರಯೋಗಿಸಿದನು. ಇಂದ್ರಜಿತ್ತು ಆ ಮಹಾ ಘಾತವನ್ನು ಸುಧಾರಿಸಿಕೊಂಡು ಸಾರಥಿಯನ್ನು ಮೈದಡವಿ ಕುದುರೆಗಳ ಬೆನ್ನುಗಳನ್ನು ತಟ್ಟಿ ಮೈಸವರಿ ಲಕ್ಷ್ಮಣನನ್ನು ಹೊಗಳುತ್ತ ಸಮೀಪಕ್ಕೆ ಬಂದು ಮತ್ತೆ ಲಕ್ಷ್ಮಣನ ಮೇಲೆ ಬಾಣಗಳನ್ನು ಪ್ರಯೋಗಿಸುತ್ತಿದ್ದನು. ಹೀಗೆ ಉಭಯಪಕ್ಷದ ವೀರಾಗ್ರಗಣ್ಯರಿಗೂ ನಾಲ್ಕು ಅಹೋರಾತ್ರಿಗಳ ವರೆಗೂ ಲೋಕಭಯಂಕರವಾದ ಯುದ್ಧವು ನಡೆದಿತು. ಐದನೆಯ ದಿನದಲ್ಲಿ ಲಕ್ಷ್ಮಣನು ಮನಸ್ಸಿನಲ್ಲಿ ತ್ರಿಮೂರ್ತಿಗಳನ್ನು ಧ್ಯಾನಿಸಿ ಅಣ್ಣನಾದ ಶ್ರೀರಾಮನ ಅಡಿದಾವರೆಗಳನ್ನು ಸ್ತುತಿಸಿ ಶಸ್ತ್ರವಿದ್ಯಾಚಾರ್ಯರಾದ ವಿಶ್ವಾಮಿತ್ರರಿಗೆ

ವಂದಿಸಿ ಮಹಾಚಲಸದೃಶ ಧೈರ್ಯಸಂಪನ್ನನಾಗಿ ಕೋದಂಡದಲ್ಲಿ ಬ್ರಹ್ಮಾಸ್ತ್ರವನ್ನು ಹೂಡಿ ಪ್ರಯೋಗಿಸಲು ; ಅದು ಮಹಾ ವೇಗದಿಂದ ಹೊರಟು ಎದುರಿಗೆ ಬರುತ್ತಿರುವ ಇಂದ್ರಜಿದ್ಬಾಣ ಪರಂಪರೆಯನ್ನು ಮೊದಲು ಕಡಿದು ಬೀಳಿಸಿ ಮುಂದೆ ಹೋಗಿ ಇಂದ್ರಜಿತ್ತನ ಶಿರಸ್ಸನ್ನು ಕಡಿದು ಆಕಾಶಕ್ಕೆ ಹಾರಿಸಿತು. ಆಗ ಪಾಕಶಾಸನನು ತಾನೇ ಸುರದುಂದುಭಿಯನ್ನು ಯಥೇಚ್ಛವಾಗಿ ಬಾರಿಸಿದನು. ಅನಂತರದಲ್ಲಿ ಇಂದ್ರಜಿತ್ತನ ಶಿರಸ್ಸು ದಶಕಂಠನ ಭುಜಕೀರ್ತಿಯು ಭೂಮಿಗೆ ಬೀಳುವಂತೆ ಬಿದ್ದಿತು. ಇನ್ನೇನು ಹೇಳತಕ್ಕುದು ? ನಿಶಾಚರ ರಾಜ್ಯಲಕ್ಷ್ಮಿಯು ಅಪುತ್ರವತಿಯಾದಳು. ರಾವಣನ ಧೈರ್ಯಲಕ್ಷ್ಮಿಯ ಕಣ್ಣುಗಳು ಹೋದುವು. ನಕ್ತಂಚರ ಸಾರ್ವಭೌಮನ ವೀರಲಕ್ಷ್ಮಿಯ ತಲೆಯು ಬೋಳಿಸಲ್ಪಟ್ಟಿತು. ರಾಕ್ಷಸರ ಗರ್ವಾದ್ರಿಯು ಕುಸಿದು ಬಿದ್ದಿತು. ದುರ್ವೃತ್ತಿಯು ಮೂರ್ಛೆಹೋಯಿತು. ಸತ್ಕರ್ಮವು ಮೂರ್ಛೆ ತಿಳಿದೆದ್ದು ಕುಳಿತಿತು. ಧರ್ಮಾಭಿಮಾನ ದೇವತೆಯ ಹೃದಯದಲ್ಲಿ ವಿಕಾಸವುಂಟಾಯಿತು. ಪರಹಿಂಸೆಯ ತಲೆಯು ಕಳಚಿತು. ರಾವಣನ ಸಿರಿಯು ಮೂಗಿಲ್ಲದಾನನವಾಯಿತು. ರಾವಣನ ವಾಮಭ್ರೂಭುಜಗಳು ಹಾರಿದುವು. ನಿಶಾಚರ ಚಕ್ರವರ್ತಿಯ ಕೀರ್ತಿಕಾಂತೆಯ ಮುಂದಲೆಯು ವಿರೋಧಿಗಳ ಕೈಗೆ ಸಿಕ್ಕಿತು. ಅಪಜಯವು ಲಂಕಾದುರ್ಗ ದ್ವಾರ ಪ್ರವೇಶವನ್ನು ಮಾಡಿತು. ಹಾ ! ಹಾ ! ಅಯ್ಯೋ ! ಪರಭೀಕರವಾದ ಲಂಕಾ ರಾಜಧಾನಿಯೇ, ನಿನ್ನ ಅಂತಸ್ಸಾರವು ಬರಿದಾಯಿತೇ ? ಎಂದು ನಿಶಾಚರ ಬಃದಲ್ಲಿ ದುಃಖ ಧ್ವನಿಯು ಗದ್ದಲವೆದ್ದಿತು. ವಿಭೀಷಣನು ಶೀಘ್ರವಾಗಿ ಹೋಗಿ ಎರಡು ಕೈಗಳಿಂದಲೂ ಆ ತಲೆಯನ್ನೆತ್ತಿಕೊಂಡು ಅಪ್ಪಿ ಮುಂಡಾಡಿ ದುಃಖಿಸುತ್ತ—ಹಾ ! ಮಕ್ಕಳ ಮಾಣಿಕ್ಯವೇ ? ಅಯ್ಯೋ ರಾಕ್ಷಸ ಕುಲಕಂದಾ ! ದಶಗಳನ ಕಂದಾ ! ಮಡಿದುಹೋದಿಯಾ ? ಪಾಪಿಯಾದ ನಿನ್ನ ತಂದೆಯ ಪಾಪಕೃತ್ಯವು ನಿನಗೆ ಈ ಸ್ಥಿತಿಯನ್ನು ಕೊಟ್ಟಿತಲ್ಲದೆ ಲೋಕತ್ರಯದಲ್ಲೂ ನಿನ್ನನ್ನು ಜಯಿಸುವ ವೀರರುಂಟೇ ? ಇಂಥ ಕುಲದೀಪಕನಾದ ಪುತ್ರನನ್ನು ಕಳೆದುಕೊಂಡು ಬಾಳುವ ನಮ್ಮ ದುಸ್ಸ್ಥಿತಿಗಿಂತಲೂ ಹೇಯವಾದುದು ಯಾವುದುಂಟು ? ಪುತ್ರ ಮಿತ್ರ ಭ್ರಾತೃವಧೆಗಳನ್ನು ಕಣ್ಣಾರ ಕಂಡೆನೇ ? ಹಾ ! ಮಗನೇ, ಹಗೆರಾಯಗಂಡನೇ, ಅರಿಗಳ ಶಿರಸ್ಸುಗಳನ್ನು ತರಿದೊಟ್ಟುವೆನೆಂದು ನನ್ನನ್ನು ಬೈಯ್ದಟ್ಟಿದಿಯಲ್ಲಾ ? ನೀನಾದರೂ ಬಾಳಿದಿಯಾ ? ಹಾ ! ರಾಕ್ಷಸರಾಜ್ಯಾಂಬುಧಿ ಪೂರ್ಣಚಂದ್ರನೇ, ಶೂರನಾದ ನೀನು ಬಾಲ್ಯದಲ್ಲೇ ಇಂದ್ರನನ್ನು ಜಯಿಸಿದಿ. ಯಮನನ್ನು ಬಡಿದಿ. ಮರುತ್ಕುಬೇರಾದ್ಯರನ್ನು ಹೊಡೆದು ಮೂರ್ಛೆಗೊಳಿಸಿದಿ. ಎಲೈ ನನ್ನ ಸಿಡಿಲ್ಮರಿಯೇ, ನನ್ನ ಜಿಂಕೆಯ ಎಳೆಮರಿಯೇ, ಎಲೈ ನನ್ನ ಮುಗುಳ್ನಗೆಯ ಮುದ್ದು ಮೊಗದ ರನ್ನದ ಬೊಂಬೆಯೇ, ಅರಿಶರಕ್ಕೆ ಶಿರಸ್ಸನ್ನಿತ್ತು ಸತ್ತು ಎತ್ತಹೋದಿ ? ಎಲೈ ಪುತ್ರಚಿಂತಾರತ್ನವೇ, ಶ್ರೀರಾಮನನ್ನು ಹೊಗಳುತ್ತಿರುವ ನನ್ನನ್ನು ಬೈಯ್ದು ಹೊಡೆಯದೆ ಏಕೆ ಸುಮ್ಮನಿರುವಿ ? ವೀರಾಗ್ರಗಣ್ಯನಾದ ನಿನಗಿದು ಭೂಷಣವೇ? ಶಿವಶಿವಾ! ಮಹಾದೇವಾ ! ಇಂಥ ಘೋರಕರ್ಮವನ್ನು ಕಂಡೆನೇ ? ಎಂದು ದುಃಖನೆಂಬ ಕಡಲಿನಲ್ಲಿ ಬಿದ್ದು ಕಡೆಗಾಣದೆ ತೇಲಿ ಮುಳುಗಿ ಮೂರ್ಛೆಹೋದನು. ಆಗ ಲಕ್ಷ್ಮಣ

ಜಾಂಬವನ್ನೀಲಾಂಜನೇಯಾದಿಗಳು ಶೀಘ್ರವಾಗಿ ಅವನ ಸಮೀಪಕ್ಕೆ ಬಂದು ಶೈತ್ಯೋಪಚಾರಗಳನ್ನು ಮಾಡಿ ಎಬ್ಬಿಸಿ ಅಸ್ಥಿರವಾದ ಭೌತಿಕ ವಸ್ತುಗಳಲ್ಲಿ ಮಮತೆಯನ್ನು ಸಂಪಾದಿಸಿಕೊಳ್ಳುವುದರಿಂದುಂಟಾಗುವ ಹಾನಿಯು ವಿಷಯವಾಗಿ ಬೋಧಿಸಿ ಸಮಾಧಾನಪಡಿಸಿ ಅಲ್ಲಿಂದ ಸರ್ವರೂ ಹೊರಟು ಶ್ರೀರಾಮನ ಬಳಿಗೆ ಬಂದು ವಿದ್ಯಮಾನವನ್ನೆಲ್ಲಾ ತಿಳಿಸಿದರು. ಆಗ ಶ್ರೀರಾಮನು ಸಂತುಷ್ಟಾಂತರಂಗನಾಗಿ ಲಕ್ಷ್ಮಣನನ್ನು ಆಲಿಂಗಿಸಿ ಮುದ್ದಿಸಿ ವಿಭೀಷಣನನ್ನೂ ಕಪಿವೀರರನ್ನೂ ವಿಶೇಷವಾಗಿ ಸನ್ಮಾನಿಸಿದನು.

---

## 9. THE BATTLE OF LANKA—DEATH OF RAVANA.

## ೯. ರಾವಣನ ಮರಣವು.

ಇತ್ತ ಲಂಕಾ ರಾಜಧಾನಿಯಲ್ಲಿ ರಾವಣನು ತನ್ನ ಪ್ರೇಮಪುತ್ರನಾದ ಇಂದ್ರಜಿತ್ತಿನ ದಾರುಣವಾದ ಮರಣವಾರ್ತೆಯನ್ನು ಕೇಳಿ ತತ್‌ಕ್ಷಣದಲ್ಲೇ ಎದೆಯಲ್ಲಿ ನೆಟ್ಟಲಗು ಬೆನ್ನಿನಲ್ಲಿ ಹೊರಟಂತೆಯೂ ಕೆಂಪಗೆ ಕಾಯ್ದು ಕ್ಕಿನ ಶಲಾಕೆಗಳಿಂದ ಕಿವಿಯಲ್ಲಿರಿಯಲ್ಪಟ್ಟಂತೆಯೂ ಆಗಿ—ಹಾ! ಯುವರಾಜರತ್ನವೇ ಎಂದು ಕಳವಳಿಸಿ ನೆಲದಲ್ಲಿ ಬಿದ್ದು ಮೂರ್ಛೆಹೊಂದಿದನು. ಆ ಮೇಲೆ ಪರಿಜನರು ಮಾಡಿದ ಶೈತ್ಯೋಪಚಾರಗಳಿಂದ ಚೇತರಿಸಿಕೊಂಡು ಮೆಲ್ಲನೆದ್ದು ಕುಳಿತು—ಓ ಮಗನೇ, ನಿನ್ನಿಂದ ಸುರನಗರವು ನನಗೆ ಸುಲಭವಾಗಿ ಕೈಸೇರಿತು. ದೇವತೆಗಳೆಲ್ಲಾ ಸೇವಕರಾದರು. ನೀನು ಬಾಲ್ಯದಲ್ಲೇ ಇಂದ್ರಾದ್ಯಾದಿತೇಯರ ಗಂಡನೆಂಬ ಅಸದೃಶವಾದ ಬಿರುದನ್ನು ಸಂಪಾದಿಸಿದಿ! ದುರ್ನಿವಾರ್ಯವಾದ ನಿನ್ನ ಭುಜವಿಕ್ರಮಾತಿಶಯದಿಂದ ನನ್ನ ಕೀರ್ತಿಪ್ರತಾಪಗಳ ಹೊಗಳಿಕೆಯೆಂಬ ಲತೆಯು ನಿರರ್ಗಳವಾಗಿ ಬೆಳೆದು ಮೂರು ಲೋಕಗಳಲ್ಲೂ ಹರಹಿಕೊಂಡಿತು. ನಿನ್ನ ವಿಕ್ರಮಾಗ್ನಿತಪ್ತರಾದ ಮುನಿಜನಗಳು ಬಂದು ಭಯಭಕ್ತಿಯಿಂದ ನನ್ನನ್ನು ಪೂಜಿಸುತ್ತಿದ್ದರು. ಅರಿರಾಜರೆಲ್ಲರೂ ಭಯಭರಿತ ಭಕ್ತಿಯುಕ್ತರಾಗಿ ಅಹೋರಾತ್ರಿಗಳಲ್ಲೂ ನನ್ನ ಯಶಃಪ್ರತಾಪಗಳನ್ನು ಹೊಗಳಿ ನನ್ನನ್ನು ಮೆಚ್ಚಿಸುತ್ತಿದ್ದರು. ಹಾ! ಕುಮಾರ ಕಂಠೀರವನೇ! ನೀನು ಮಡಿದುದರಿಂದ ನನ್ನ ವಂಶವೃಕ್ಷದ ಬೇರು ಕೀಳಲ್ಪಟ್ಟಂತಾಯಿತು. ಲಂಕಾ ರಾಜ್ಯಲಕ್ಷ್ಮಿಯು ತಲೆಯಿಲ್ಲದ ಮುಂಡದಂತಾದಳು. ಲಂಕಾ ರಾಜಧಾನಿಯು ವಿಷವಿಲ್ಲದ ಘಟಸರ್ಪದಂತೆ ಅರಿತಿರಸ್ಕಾರಕ್ಕೆ ಗುರಿಯಾಯಿತು. ಅಸುರಕುಲ ವಿರೋಧಿಗಳಾದ ದೇವತೆಗಳ ಹರ್ಷಲತೆಯು ಬೆಳೆಯುವ ಕಾಲವು ಕಾಲಿಟ್ಟಿತು. ನೀನಿಲ್ಲದ ಮೇಲೆ ನನಗೆ ಜಯವೂ ಉಲ್ಲಾಸವೂ ಎತ್ತಣಿಂದ ಬರುವುವು? ನನಗಿರುವ ಆಧಿಪತ್ಯವೂ ಅತುಲಸಂಪತ್ತೂ ನನಗೇ ವಿರೋಧವಾಗಿ ದುಷ್ಫಲಗಳನ್ನು ಕೊಡುವ ವಿಷಮಕಾಲವು ಬಂದೊದಗಿತು. ಬಲಹೀನನಾದ ನನಗೆ ಈ ಸಿರಿಯೇಕೆ? ಇನ್ನೀಲೋಕತ್ರಯದ ಅರಸುತನದ ದಂದುಗವೇಕೆ? ಎಲೈ ತಂದೆಯೇ, ಇಂದ್ರಜಿತ್ತೇ, ನೀನಿಲ್ಲದ ಮೇಲೆ ಈ ನನ್ನ ಪ್ರಾಣಗಳಿಂದ ಪ್ರಯೋಜನವೇನು?

ಂದು ಮಾತಾಡೈ ಮಗನೇ! ಶೂರನಾದ ನಿನ್ನನ್ನು ಕಳೆದುಕೊಂಡು ದೀನನಾದ ನ್ನ ಪರಾಕ್ರಮವು ಉಷ್ಣತೆಯಿಲ್ಲದ ಅಗ್ನಿಯಂತೆ ಸುಗಮವಾಯಿತು. ಸುಕುಮಾ ನೇ, ಬೇಗ ಬಂದು ಮುಂದೆ ಮಾಡಬೇಕಾದುದನ್ನು ನನಗೆ ನೇಮಿಸು. ನಾನು ಾಯಲೋ? ಬದುಕಿರಲೋ? ಶೀಘ್ರವಾಗಿ ಉತ್ತರವನ್ನು ಹೇಳೈ! ನನ್ನ ಮುದ್ದು ಮಗನೇ, ಅಯ್ಯೋ, ಕುಮಾರನೇ, ಹಸುಳೆಯೇ, ಇಂದ್ರಜಿತ್ತೇ, ಈಗ ನಿನ್ನ ಶೌರ್ಯ ್ಯರ್ಯ ಪರಾಕ್ರಮಗಳನ್ನು ಹೊಗಳುತ್ತಿರುವ ನನ್ನ ನಾಲಿಗೆಗೆ ಮುಳ್ಳು ಮುರಿದಿತು. ಾನೇ ವಂಚಕನು! ನಿರ್ಭಾಗ್ಯನು! ಮೂಢನು! ಮತ್ತು ಪರಮಪಾಪಿಯು! ೀರನಾದ ನಿನ್ನಲ್ಲಿ ಯಾವ ಕೊರತೆಯುಂಟು? ಆಹವದಲ್ಲಿ ನಿಂತು ಭುಜಂಗಮಾಸ್ತ್ರ ಂದ ಅರಿಬಲಕ್ಕೆ ಅಪಾರ ಹಾನಿಯನ್ನುಂಟುಮಾಡಿದೆ. ಅದಲ್ಲದೆ ಬ್ರಹ್ಮಾಸ್ತ್ರದಿಂದ ಣರಂಗದಲ್ಲಿ ವೈರಿವ್ಯೂಹವನ್ನು ಕೆಡಹಿ ಅಪ್ರತಿಮವೀರನೆಂಬ ವಿಖ್ಯಾತಿಯನ್ನು ಹೊಂದಿದಿ! ಲೋಕೋತ್ತಮಗಳಾದ ನಿನ್ನ ಸಾಹಸ ಪರಾಕ್ರಮಾದಿಗಳನ್ನು ಹೊಗಳು ದಕ್ಕೆ ನನಗೆ ಶಕ್ತಿಯಿಲ್ಲ. ದುಷ್ಟನಾದ ನಾನು ಮದನಾತುರನಾಗಿ ಮಕ್ಕಳು ರಿಗಳನ್ನೆಲ್ಲಾ ಮೃತ್ಯುವಿನ ಬಾಯಿಯಲ್ಲಿಕ್ಕಿ ಅನಾಥನಾದೆನು. ನನ್ನ ಪಟ್ಟವರ್ಧನನಂ ದ್ದ ನಿನ್ನನ್ನು ಕಳೆದುಕೊಂಡ ಮೇಲೆ ನನಗೆ ಸಂತೋಷವೆತ್ತಣದು? ಯುದ್ಧರಂಗ ಲ್ಲಿ ನನಗೆ ಜಯವಂದರೇನು? ಅಥವಾ ಜಯದಿಂದ ನನಗಾಗುವ ಫಲವೆಷ್ಟರದು? ಭುವನ ವಿಖ್ಯಾತವಾದ ಲಂಕಾ ರಾಜಧಾನಿಯ ಅರಮನೆಯಲ್ಲಿ ನಿರ್ಗತಿಕನಾದ ಾನೊಬ್ಬನೇ ಮೋಟುಮರದಂತೆ ನಿಂತೆನು. ನನ್ನ ಹೃದಯವು ಚಿಂತೆಗೆ ತವರ್ಮನೆ ಯೂ ದುಃಖದ ತೊಂಬೆಯೂ ದುರೂಹೆಯ ಚಾವಡಿಯೂ ಅರಿಷಡ್ವರ್ಗಗಳ ವಿಹಾ ೀದ್ಯಾನವೂ ತಾಪತ್ರಯಗಳ ಮಲಗುವ ಮನೆಯೂ ಪರಿತಾಪದ ಜನ್ಮಭೂಮಿ ಯೂ ಆಗಿ ಹೋಯಿತು. ಇನ್ನು ನನ್ನ ಸ್ಥಿತಿಯು ನನ್ನ ಮಹಾ ದುಃಖಾನುತಾಪಗಳ ಭಿವೃದ್ಧಿಗೆ ಹೇತುವಾದುದರಿಂದ ಅದನ್ನು ಪರಿಹರಿಸಿಕೊಳ್ಳುವುದೇ ಲೇಸು ಎಂದು ರುಗಿ ಕಳವಳಿಸಿ ಮುಂಗಾಣದೆ ತಿರಿಗಿ ಹರವಸಂಗೊಂಡನು.

ಇತ್ತ ಅಂತಃಪುರದಲ್ಲಿದ್ದ ದಶಕಂಠನ ಪಟ್ಟದರಸಿಯಾದ ಮಂಡೋದರಿಯು ಯು ಪುತ್ರನಾದ ಇಂದ್ರಜಿತ್ತಿನ ಮರಣವಾರ್ತೆಯನ್ನು ಕೇಳಿ ತತ್‌ಕ್ಷಣದಲ್ಲೇ ಂಚಪ್ರಾಣಗಳೂ ಏಕಕಾಲದಲ್ಲಿ ಹಾರಿಹೋದುವೋ ಎಂಬಂತೆ ಬಿದ್ದು ಮೂರ್ಛಿತ ಾದಳು. ಆ ಕೂಡಲೆ ರಾವಣನ ಭಾಗ್ಯಕೋಶವು ಅಕಾಲದಲ್ಲಿ ಸೂರೆ ಹೋಯಿತೋ ಂಬಂತೆ ಅಂತಃಪುರದಲ್ಲೆಲ್ಲಾ ಮಹಾ ಭಯ ಪರಿತಾಪಗಳನ್ನುಂಟುಮಾಡುವ ದುಃಖ ನಿಯೆದ್ದಿತು. ಅನಂತರದಲ್ಲಿ ಸಖೀಜನರಿಂದ ಮಾಡಲ್ಪಟ್ಟ ಶೈತ್ಯೋಪಚಾರವು ಂಡೋದರಿಗೆ ತಿಳಿವನ್ನುಂಟುಮಾಡಿತು. ಆ ಮೇಲೆ ಸೊಸೆಯರೊಡನೆ ಕೂಡಿ ಹಾ ದುಃಖದಿಂದ ಮೈತಿಳಿಯದೆ ಬಿದ್ದು ಒದೆದಾಡಿ ಅಸವಳಿದು ತಲೆಗೂದಲುಗಳ ದರಿಕೆಯಿಂದಲೂ ಬಸಿರುಗಳ ಬಡಿಯುವಿಕೆಯಿಂದಲೂ ಓಡಿಯೋಡಿ ಬಂದು ಚಾವ ಯ ಬರಿನೆಲದಲ್ಲಿ ಬಿದ್ದು ಧೂಳಿಯಲ್ಲಿ ಹೊರಳಾಡುತ್ತ—ನನ್ನ ರತ್ನದ ಕಲಶವನ್ನು ೆದುಕೊಂಡರೋ! ನನ್ನ ಕಂಠಮಾಲಿಕೆಯಲ್ಲಿದ್ದ ನಾಯಕರತ್ನವನ್ನು ಅಪಹರಿಸಿ

ದರೋ! ನನ್ನ ಕೈಗನ್ನಡಿಯನ್ನು ಒಡೆದುಹಾಕಿದರೋ! ನನ್ನ ಚಿಂತಾಮಣಿಯನ್ನು ಸೂರೆಮಾಡಿದರೋ! ಈ ಸಮಸ್ತವೀರ ಪರಿವಾರವೆಲ್ಲವೂ ಎಲ್ಲಿ ಹೋಗಿದ್ದಿತು? ನನ್ನ ಮರಿಯಾನೆಯ ಕತ್ತನ್ನು ಕೊಯ್ಯುತ್ತಿದ್ದಾಗ ಈ ಲಂಕಾ ದುರ್ಗವು ಉರಿದುಹೋಗಿದ್ದಿತೆ! ಒಬ್ಬರೂ ಇರಲಿಲ್ಲವೇ! ಇಷ್ಟು ಜನರಿದ್ದು ನನ್ನ ಸಂತೋಷಲತೆಯ ಮೂಲವನ್ನು ವಿರೋಧಿಗಳಿಂದ ಕೀಳಿಸಿ ಹಾಕಿದರಲ್ಲಾ! ಈ ರಾಕ್ಷಸ ರಾಜ್ಯದ ಸಂಪತ್ತನ್ನೆಲ್ಲಾ ನನ್ನರಗಿಣಿಮರಿಯೊಂದೇ ಉಂಡು ಮುಗಿಸುತ್ತಿದ್ದಿತೇ! ಮಾರಿಯ ಬಳಗದಂತೆಯೂ ಯಮನ ಕೋಣಗಳಂತೆಯೂ ತುಂಬಿರುವ ಈ ರಾಕ್ಷಸ ಬಲವು ನನ್ನ ಚಿನ್ನದ ರನ್ನದ ಮುದ್ದಿನ ಬೊಂಬೆಯನ್ನು ಅರಿಗಳೆದುರಿಗೆ ನೂಕಿ ನೋಟ ನೋಡುತ್ತಿದ್ದರೇ! ಹಾ! ಪಾಪಿಯಾದ ನನ್ನ ಹೃದಯವೇ! ನಿನಗೆ ದುಃಖದ ಮುಳ್ಳು ಹೊಕ್ಕಿತು. ತಾಪದ ಶಲಾಕೆಯು ನೆಟ್ಟಿತು. ಭಯದ ಬಾಣವು ನಾಟಿತು. ವ್ಯಥೆಯ ವಿಷಲತೆಯು ಮುಚ್ಚಿಕೊಂಡಿತು. ಇನ್ನು ಮುಂದೆ ನಿನಗೆ ಸಂತೋಷದ ವಾರ್ತೆಯೂ ಕೂಡ ದುರ್ಲಭವು. ಇಂದಿಗೆ ನಾನು ಅನಾಥಳಾದೆನು. ಯಾರೂ ನನಗೆ ದಿಕ್ಕಿಲ್ಲ. ಈ ನನ್ನ ಬಂಡಬಾಳನ್ನು ಇನ್ನಾದರೂ ವಿನಾಶಮಾಡದಿರುವ ದುರ್ವಿಧಿಗೆ ಕಾಲ್ಮುರಿದು ಹೋದುವೋ! ತಡಮಾಡುವ ಮರಣಕ್ಕೆ ಕಣ್ಣು ಹೋದುವೋ! ಅಯ್ಯಾ ಸಭಾಸದರೇ, ಅನಾಥಳಾದ ನನ್ನ ಮೊರೆಯನ್ನು ಯಾರೂ ವಿಚಾರಿಸುವುದಿಲ್ಲವೇ? ನೀವರಸುಗಳಲ್ಲವೇ? ಹೀಗಿರುವುದು ನಿಮಗೆ ಮಹಾ ಪಾಪವಲ್ಲವೇ? ಇಷ್ಟು ಕಠಿಣ ಹೃದಯರಾದ ನೀವೇ ನನ್ನ ಕಂದನನ್ನು ಕೊಲೆಗೊಡ್ಡಿ ಕರಿದೆವ್ವಗಳಂತೆ ಕೂತು ಕಾಲಹರಣ ಮಾಡಿದಿರಿ ಲೇಸು ಮಾಡಿಕೊಂಡಿರಿ! ಇನ್ನೀರಾಜ್ಯವನ್ನು ನೀವೇ ಪಾಲಿಸಿಕೊಳ್ಳಿರಿ ಎಂದು ದಿಕ್ಕುದಿಕ್ಕುಗಳನ್ನು ನೋಡಿ ಮೊರೆಯಿಡುತ್ತ—ಹಗೆಗಳ ಕೊಲೆಗೆ ನನ್ನ ಮಗನ ತಲೆಯನ್ನೊಡ್ಡಿ ವಿಪತ್ತನ್ನು ತಪ್ಪಿಸಿಕೊಂಡು ಕ್ಷೇಮದಿಂದ ಬಂದಿರಾ! ರಣದೇವತೆಗೆ ನನ್ನ ಮುದ್ದುಗುವರನನ್ನು ಬಲಿಗೊಟ್ಟು ಸಂತೋಷದಿಂದ ಬಂದಿರಾ! ನನ್ನ ಪುತ್ರರತ್ನವನ್ನು ಘೋರಮೃತ್ಯುವಿನ ಬಾಯಿಗೆ ನೂಕಿ ನಿರ್ವ್ಯಸನವಾಗಿ ಬಂದಿರಾ! ಹಾ! ದುರ್ವಿಧಿಯೇ! ಪರಮಪಾಪಿನಿಯಾದ ನನ್ನೊಬ್ಬಳಿಗೇ ಕೇಡೊದಗಿತಲ್ಲಾ! ನಿಮ್ಮನ್ನು ಕಷ್ಟಪಡಿಸುತ್ತಿದ್ದವನು ಹೋದನು. ಇನ್ನು ನಿಮಗೆ ನಿಷ್ಕಂಟಕವಾಯಿತು. ಸಂತೋಷದಿಂದ ಬದುಕಿರಿ! ಅಯ್ಯೋ, ನನ್ನ ಕಂದನೇ! ಸೋದರತ್ತೆಯಾದ ಶೂರ್ಪನಖಿಯು ನಿನಗೆ ಮೃತ್ಯುದೇವತೆಯಾಗಿ ಪರಿಣಮಿಸಿದಳೇ! ಅವಳು ತನ್ನಣ್ಣನಿಗೆ ದುರ್ಬೋಧನೆಯನ್ನು ಬೋಧಿಸಿ ನನ್ನ ಕುಲಕಲ್ಪಲತೆಯ ಬೇರನ್ನು ಕಿತ್ತು ಬಿಸುಟಳೇ! ಹೆತ್ತೊಡಲು ಬಲ್ಬೇಗೆಯಿಂದ ಬೆಂದು ಬೂದಿಯಾಗುತ್ತಿರುವುದಲ್ಲಾ! ಈ ಬೇಗೆಗೆ ಪ್ರತೀಕಾರವೇನುಂಟು? ಮರಣವೇ ಪ್ರತೀಕಾರವೋ? ಈ ಕ್ಷಣದಲ್ಲಿಯೇ ಅದೊದಗಿದರೆ ನಾನೇ ಧನ್ಯಳು. ಕೂಡಲೆ ನನ್ನ ಮಗನನ್ನು ಸೇರಿ ಬದುಕುವೆನು. ಪಾಪಿನಿಯಾದ ನನ್ನ ಬಸಿರು ಬೆಂಡಾಯಿತು. ನನ್ನ ಮರಿಯಂಚೆಯನ್ನು ಎತ್ತಿ ಸಾಕಿದ ತೋಳುಗಳು ನೆರೆಮುರಿದುವು, ಕಂಡಿರೇ? ಎನ್ನುತ್ತ ಸೊಸೆಯರ ಕೊರಳುಗಳನ್ನು ತಬ್ಬಿಕೊಂಡು ರೋದಿಸುತ್ತ ಬಳಲಿ ಬಾಯಾರಿ ಬೆಂಡಾಗಿ ಹಾಗೇ ಮೂರ್ಛೆಹೊಂದಿ ಭೂಮಿಯಲ್ಲಿ ಬಿದ್ದಳು.

ಅನಂತರದಲ್ಲಿ ರಾವಣನು ಮೂರ್ಛೆ ತಿಳಿದೆದ್ದು ಶೀಘ್ರವಾಗಿ ಚಾವಡಿಗೆ ಬಂದು ಶೈತ್ಯೋಪಚಾರಗಳನ್ನು ಮಾಡಿ ಸೊಸೆಯರೊಡನೆ ಮಂಡೋದರಿಯನ್ನೆಬ್ಬಿಸಿ ಸಮಯೋಚಿತ ವಚನಗಳಿಂದ ಸಮಾಧಾನಪಡಿಸಿ ಅತಿ ಶೀಘ್ರತೆಯಿಂದ ರಣದೀಕ್ಷೆಯನ್ನು ಅಂಗೀಕರಿಸಿ ಕ್ರೂರ ಪ್ರತಿಜ್ಞಾವಚನಗಳನ್ನಾಡುತ್ತ ಯುದ್ಧಭೂಮಿಗೆ ಹೊರಡುವುದಕ್ಕೆ ಸನ್ನದ್ಧನಾಗಲು ; ಆ ಕ್ಷಣದಲ್ಲಿಯೇ ಭೇರೀಭಾಂಕರಣಾದಿ ನಾನಾವಿಧ ವಾದ್ಯಗಳ ಮಹಾ ಧ್ವನಿಯು ಮಹಾ ವಿಲಯ ಘನಗರ್ಜಿತದಂತೆ ದಿಗಂತಗಳಲ್ಲಿ ಪ್ರತಿಧ್ವನಿಯನ್ನುಂಟುಮಾಡಿತು. ಆಗ ಸುರಲೋಕವು ತಲ್ಲಣಿಸಿತು. ಬ್ರಹ್ಮಾಂಡ ಮಂಡಲವು ಕಿವುಡಾಯಿತು. ನಿಮೇಷಮಾತ್ರದಲ್ಲಿ ಕುಶಲನಾದ ಸಾರಥಿಯು ಅಭೇದ್ಯವಾದ ರಾವಣನ ದಿವ್ಯರಥಕ್ಕೆ ಉತ್ತಮಾಶ್ವಗಳನ್ನು ಕಟ್ಟಿ ಧ್ವಜಸ್ತಂಭವನ್ನು ಎತ್ತಿ ನಿಲ್ಲಿಸಿ ಯುದ್ಧೋಚಿತವಾದ ಸಮಸ್ತ ಸಾಮಗ್ರಿಗಳನ್ನೂ ತುಂಬಿ ಅದನ್ನು ತೆಗೆದುಕೊಂಡು ಬಂದು ಅರಮನೆಯ ದ್ವಾರದಲ್ಲಿ ನಿಲ್ಲಿಸಲು; ಧೀರನಾದ ರಾವಣನು ದ್ವಿತೀಯ ಮೇರುಭೂಧರದಂತಿರುವ ಆ ತೇರನ್ನು ನೋಡಿ ಸಮಸ್ತ ಮಂಗಳವಾದ್ಯಗಳೊಡನೆ ಬಂದೇರಿದನು. ಕೂಡಲೆ ಹಸ್ತ್ಯಶ್ವರಥಪದಾತಿಗಳೆಂಬ ಚತುರ್ವಿಧ ಬಲವು ಅರಿಗಳೆದೆಯಲ್ಲಿ ಕಂಪನವನ್ನು ಹುಟ್ಟಿಸುತ್ತ ಮುಂದೆ ಹೊರಟಿತು. ಆಗ ಆ ಸೇನಾಸಮುದ್ರದ ಮುಂದೆಸೆಯಲ್ಲಿ ಮೊರೆಯುತ್ತಿರುವ ಹೆಗ್ಗಾಳೆಗಳು—ಎಲೈ ಬಣಗುಹಗೆಗಳೇ, ಕಲ್ಪಾಂತ ಭೈರವನಲ್ಲಿ ಕಾಳಗವು ಬೇಡ! ರಿಪುಕುಲಾಂಬುದ ಜಂಝಾಮಾರುತನೊಡನೆ ತೋಟಿಯೇಕೆ? ಎಂದು ಹೇಳುತ್ತಿವೆಯೋ ಎಂಬಂತೆ ಒಪ್ಪುತ್ತಿದ್ದುವು. ಆಗ ವಿರೋಧಿಗಳ ಬಲಜಲಧಿಗೆ ಬಡಬಾನಲಪ್ರಾಯನಾದ ರಾವಣನು ತನ್ನೆಡಪಕ್ಕದ ಹತ್ತು ಕೈಗಳಿಂದ ಹತ್ತು ಬಿಲ್ಲುಗಳನ್ನು ಹಿಡಿದು ಬಲಗಡೆಯ ಹತ್ತು ಕೈಗಳಿಂದ ಕ್ರೂರಬಾಣಗಳನ್ನು ತೆಗೆದು ಸಂಧಾನಿಸಿ ಪ್ರಯೋಗಿಸುತ್ತ ಬರಲು; ಒಂದೊಂದು ಬಾಣದ ಹತಿಯಿಂದ ಹತ್ತು ನೂರು ಸಾವಿರ ಹತ್ತು ಸಾವಿರ ಸಂಖ್ಯೆಯುಳ್ಳ ಕಪಿಗಳ ತಲೆಗಳು ಕತ್ತರಿಸಲ್ಪಟ್ಟು ಭೂಮಿಯಲ್ಲಿ ಬೀಳುತ್ತಿದ್ದುವು. ಆಗ ಬಹು ಕೋಪವಿಜೃಂಭಿತರಾದ ಕೋಡಗಪಡೆವಳ್ಳರು ರಾವಣನೊಡನೆ ಯುದ್ಧಮಾಡುವುದಕ್ಕೆ ತೊಡಗಿ ಕಾದಿ ಗವಯನು ನೊಂದನು. ಗಜನು ಅರಚಿಗೊಂಡನು. ವಿನತನ ಪ್ರಾಣಗಳು ಕಂಠದೇಶಕ್ಕೆ ಬಂದುವು. ಜಾಂಬವಂತನು ನರಳುತ್ತ ಹಿಂದಿರುಗಿದನು. ಶರಭನು ಬಿದ್ದು ಒದೆದುಕೊಂಡನು. ಬಾಣಪ್ರವೇಶದಿಂದ ಗಂಧಮಾದನನ ಎದೆಯಿಂದ ರಕ್ತವು ಜಾರಿತು. ಹೆಸರ್ಗೊಂಡ ಉಳಿದ ಕಪಿವೀರರನ್ನು ರಾವಣನ ಮುಂಗಡೆಯಲ್ಲಿ ಕಾಣೆನು. ಎರಡನೆಯ ಕಾಲರುದ್ರನಂತಿರುವ ರಾವಣನು ಯುದ್ಧರಂಗದಲ್ಲಿ ಮುನಿದು ನಿಂತರೆ ಅವನೆದುರಿಗೆ ಸುಮ್ಮನೆ ನಿಂತು ನೋಡುವವರೇ ಮಹಾ ವೀರರು. ಮತ್ತು ಅವರೇ ಮಾರಿಯ ಮುಂದಲೆಯನ್ನು ಹಿಡಿದು ಕೊಯ್ದು ತಂದವರು. ಮೂರು ಲೋಕಗಳ ಗಂಡನಾದ ದಶಕಂಠನ ಬಾಣಗಳ ಬಲ್ಗಿಚ್ಚಿನ ಬೇಗೆಯೆದುರಿಗೆ ನಿಂತು ಸಹಿಸುವವರಾರು ? ರಾವಣನ ಬಾಣ ಪರಂಪರಾ ಹತಿಯಿಂದ ಸತ್ತೊರಗಿದ ಕಪಿಸಂದೋಹಕ್ಕೆ ಯಮಲೋಕದಲ್ಲಿ ನಿಲ್ದಾಣವು ಕಿಷ್ಕಿಂಧವಾಯಿತು. ಉಳಿದ ಕಪಿಗಳು ಸುಗ್ರೀವನ ಆಜ್ಞೆಯನ್ನು

ಗಣಿಸದೆ ರಾವಣನನ್ನು ನೋಡಿ ಹಲ್ಗಿರಿದು ಖೋ ಎಂದು ಕೂಗಿ ಬಾಲಗಳನ್ನು ಮುದುರಿಕೊಂಡು ತೋರಿದ ಕಡೆಗೆ ಓಡಿಹೋದುವು. ಕಾಡ್ಗಿಚ್ಚು ಹೊತ್ತಿ ವ್ಯಾಪಿಸಿಕೊಂಡು ಉರಿಯುತ್ತಿರುವಲ್ಲಿ ಒಣಗಿದ ತೃಣಜಾಲವು ಅದನ್ನು ಅಡ್ಡಗಿಸಿ ಬಿಡಬಲ್ಲುದೇ? ಆಗ ಕಪಿಸಮ್ರಾಜನಾದ ಸುಗ್ರೀವನು ತನ್ನ ಸಮೀಪದಲ್ಲಿ ರಕ್ಕಸನ ವಿಚಿತ್ರ ಯುದ್ಧವನ್ನು ನೋಡಿ ಕೋಪಾಟೋಪದ ಉಬ್ಬಿನಿಂದ ಕೂಡಿ ಅವನೆದುರಿಗೆ ಬಂದು ನಿಂತು—ಇದೇನೈ, ರಾಕ್ಷಸರಾಜೇಂದ್ರನೇ, ನೀನೇ ದಯೆಮಾಡಿಸೋಣವಾಯಿತು. ನಿನ್ನ ಪರಿವಾರದಲ್ಲಿ ಇತರ ಶೂರರಾರೂ ಇಲ್ಲವೇ? ನಿನ್ನ ಬರುವಿಕೆಯು ಧೈರ್ಯದಿಂದ ಕಾದುವುದಕ್ಕೋ? ಅಥವಾ ಭಯದಿಂದ ಮರೆಹೊಗುವುದಕ್ಕೋ? ಈ ಸಂಗತಿಯನ್ನು ಸ್ವಲ್ಪವಾಗಿ ತಿಳಿಸು. ಚೆನ್ನಾಗಿ ತಿಳಿದುಕೊಳ್ಳಬೇಕಾಗಿದೆ. ಏಕೆಂದರೆ ನೀನು ನಮ್ಮಣ್ಣನಾದ ವಾಲಿಗೆ ಪರಮಮಿತ್ರನು ಎಂದು ಹೇಳಲು;

ಆಗ ರಾವಣನು—ಎಲಾ ಮೂಢಕಪಿಯೇ. ಹೊಯ್ಲುಗಲ್ಲದ ಮರೆಹೊಗುವಿಕೆಯೆಂಬ ಭ್ರಮೆಯೇಕೆ? ನಿಜಭುಜಬಲಾರ್ಜಿತವಾದ ತ್ರಿಲೋಕಾಧಿಪತ್ಯವುಳ್ಳ ನಮ್ಮೊಡನೆ ವ್ಯರ್ಥವಾದ ಕುಚೇಷ್ಟೆಯ ಹರಟೆಯು ಕಪಿಯಾದುದರಿಂದ ನಿನಗೆ ಸ್ವಭಾವವೇ. ಕೊಳುಗುಳದಲ್ಲಿ ಬ್ರಹ್ಮರುದ್ರೇಂದ್ರಾದಿಗಳನ್ನು ಬಡಿದಳಲಿಸಿದ ಈ ನಮ್ಮ ಭುಜವಿಕ್ರಮದೊಡನೆ ಅಲ್ಪರಾದ ನರಾಧಮರ ಬಲವು ಪಾಸಟಿಯೇ? ನೀನು ನಮ್ಮ ಮಿತ್ರನ ತಮ್ಮನಾದುದರಿಂದ ದಾರಿಯನ್ನು ಬಿಟ್ಟು ಕೆಲಸಾರಿ ಬದುಕಿಕೋ? ಹೋಗು ಎನ್ನುತ್ತ ಸುಗ್ರೀವನನ್ನು ಬಾಣದಿಂದೆಚ್ಚನು. ಆಗ ಅರಿವೀರಭೀಕರ ಪರಾಕ್ರಮಯುಕ್ತನಾದ ಸುಗ್ರೀವನು ಅವನೆಸೆದ ಬಾಣಗಳಿಗೆದುರಾಗಿ ತನ್ನ ಬಾಹುದಂಡವನ್ನೊಡ್ಡಿ ತಡೆದು ಕೆಡಹಿ ಬಿಡುಗಣ್ಣರು ಬೆಚ್ಚುವಂತೆ ಬೊಬ್ಬಿರಿದು ಒಂದು ಮಹಾ ಭೂಧರದ ಶಿಖರವನ್ನೆತ್ತಿ ರಾವಣನ ಮೇಲೆ ಹಾಕಲು; ಅವನ ತೇರಿನಚ್ಚು ಮುರಿದು ಹೋಯಿತು. ಕೂಡಲೆ ರಾವಣನು ಮತ್ತೊಂದು ರಥಕ್ಕೆ ಹಾರಿ ಕೋಪದಿಂದ ಬೊಬ್ಬಿರಿದು ಸುಗ್ರೀವನ ಮೇಲೆ ವಿಷಮಬಾಣವೃಷ್ಟಿಯನ್ನು ಕರೆಯಲು, ಆಗ ಧೀರೋತ್ತಮನಾದ ಸುಗ್ರೀವನು ತನ್ನ ತೋಳಿನ ಬಲ್ಗಾಳಿಯಿಂದ ಆ ಬಾಣಸಮೂಹವನ್ನೆಲ್ಲಾ ಹಾರಿಸಿ ಕಡುಹಿನಿಂದ ಮುಂದೆ ನುಗ್ಗಿ ಬಂದು ಮೊರೆದು ಮೇಲೆ ಬಿದ್ದು ರಾವಣನ ಕಿರೀಟಗಳಿಗೆರಗಲು ಆ ಕಿರೀಟಖಚಿತದಿವ್ಯರತ್ನಗಳು ದೆಸೆದೆಸೆಗಳಲ್ಲಿಟ್ಟಾಡಿದುವು. ತಿರಿಗಿ ಸುಗ್ರೀವನು—ಎಲಾ ಖೂಳನೇ, ಮೊದಲು ನಾನು ನಿನಗೆ ಮಾಡಿದ ಕಿರೀಟಭಂಗವನ್ನು ಮರೆತು ಹೋದಿಯಾ? ನೀನು ನಿರ್ಲಜ್ಜನಾದ ಮೈಹರುಕನು. ನಾವು ಕಾಡಿನ ಕಪಿಗಳಂತೆ ಸಾಧಾರಣ ಕಪಿಗಳೆಂದು ಬಗೆದಿಯಾ? ದೈವ ಬಲಹೀನನಾದ ನಿನ್ನ ಮೂಢತ್ವವು ಬಲಿತುಹೋಗಿರುವುದು. ಅವಿಚಾರದಿಂದ ಹುಚ್ಚನಂತೆ ಗಳಹುತ್ತಿರುವಿಯಲ್ಲಾ? ಎಂದು ಮಹಾ ಕೋಪದಿಂದ ಮೈಯುಬ್ಬಿ ನೆಗೆದು ಹಲ್ಲುಗಳು ಕಳಚಿ ಬೀಳುವಂತೆ ರಾವಣನ ಕಪೋಲಗಳನ್ನು ಹೊಯ್ದುಬ್ಬರಿಸಿದನು.

ರಾವಣನು ವಜ್ರಹತಿಗೆ ಸಮಾನವಾದ ಸುಗ್ರೀವನ ಮಹಾ ಮುಷ್ಟಿಘಾತವನ್ನು ತಡೆಯಲಾರದೆ ಬಲಹೀನನಾಗಿ ಕಿವಿ ಮೂಗು ಬಾಯಿಗಳಲ್ಲಿ ಸುರಿಯುತ್ತಿರುವ

ರಕ್ತಧಾರೆಗಳುಳ್ಳವನಾಗಿ ರಥದಿಂದ ಕೆಳಗೆ ಬಿದ್ದು ಮೂರ್ಛಾಗತನಾಗಲು; ಆಗ ಭಯದಿಂದ ಓಡಿಹೋಗಿದ್ದ ಕಪಿಗಳೆಲ್ಲಾ ಒಟ್ಟುಗೂಡಿ ಆರ್ಭಟವನ್ನು ಮಾಡುತ್ತ ಬಿದ್ದಿರುವ ರಾವಣನ ಬಳಿಗೆ ಬಂದು ನಾತಿದೂರದಲ್ಲಿ ಮುಂಗೈಗಳನ್ನು ನೆಲಕ್ಕೂರಿ ಗದ್ದವನ್ನು ನೆಲದ ಮಟ್ಟಿಗೂ ಬೊಗ್ಗಿಸಿ ಪಲ್ಗಿರಿದು ಖೋ ಎಂದು ಕೂಗುತ್ತ ಕೂಡಲೆ ಹಿಂದಕ್ಕೆ ಹಾರುತ್ತ ಸಂತೋಷದಿಂದ ನೆಗೆದಾಡಿದುವು. ಅನಂತರದಲ್ಲಿ ಅತಿ ವೀರನಾದ ಸುಗ್ರೀವನು—ಅಹಹ! ಮೋಸವಾಯಿತೇ! ಈ ಖೂಳನು ರಾಘವನ ಬಾಣಕ್ಕೆ ಆಹಾರವಾಗತಕ್ಕವನು ಅದುಕಾರಣ ನಾನು ಇವನನ್ನು ಕೊಲ್ಲಬಾರದಾಗಿದ್ದಿತು. ರಾಮನು ಈ ಸಂಗತಿಯನ್ನು ಕೇಳಿ ಹೇಗಾದರೂ ವೈರಿನಾಶವು ಕ್ಷೇಮಕರವಾದುದು ಎನ್ನುವನೋ? ಅಥವಾ ನೀನು ನನ್ನ ಕೀರ್ತಿಯನ್ನು ಅಪಹರಿಸಿಕೊಂಡಿ ಎಂದು ಹೇಳುವನೋ? ಎಂಬ ಶಂಕಾತಂಕಿತ ಮನಸ್ಕನಾಗಿದ್ದನು.

ಅಷ್ಟರಲ್ಲಿ ರಾವಣನ ಸಾರಥಿಯು ಅತಿಶೀಘ್ರವಾಗಿ ಬಂದು ಅವನ ಶರೀರದಲ್ಲಿ ಜೀವಚಿಹ್ನೆಗಳನ್ನಾರೈಯ್ದು ಮೂಗಿನ ರಂಧ್ರದಲ್ಲಿ ಉಸಿರು ಹೊರಡುತ್ತಿರುವುದನ್ನು ತಿಳಿದು ತಡಮಾಡದೆ ಅತಿ ಜಾಗರೂಕತೆಯಿಂದ ಶೈತ್ಯೋಪಚಾರಗಳನ್ನು ಮಾಡಲು; ಆಗ ರಾವಣನು—ಉಸ್ಸ್ ಎಂದು ಮೆಲ್ಲನೆದ್ದು ಸಾರಥಿಯಿಂದ ಹೂಜೆಯಲ್ಲಿ ನೀರನ್ನು ತರಿಸಿಕೊಂಡು ಕೈಕಾಲು ಮೈಮೊಗಗಳ ರಕ್ತಗಳನ್ನು ತೊಳೆದುಕೊಂಡು ಬಾಯ್ಮುಕ್ಕಳಿಸಿ ಮದ್ದಿನ ಗುಳಿಗೆಗಳನ್ನು ನುಂಗಿ ಸುಗಂಧವನ್ನು ಪೂಸಿ ದಿವ್ಯವಸ್ತ್ರಾಭರಣಗಳನ್ನು ಧರಿಸಿ ಸ್ವಲ್ಪವಾಗಿ ಆಹಾರವನ್ನು ತೆಗೆದುಕೊಂಡು ಕರ್ಪೂರ ತಾಂಬೂಲವನ್ನು ಸವಿದು ಕೂಡಲೆ ರಥಾರೂಢನಾಗಿ ಸುಗ್ರೀವನೆದುರಿಗೆ ಬಂದು ನಿಂತು—ಎಲೈ ಕಪಿರಾಜನೇ, ಈ ವರೆಗೂ ನನ್ನೊಡನೆ ಯುದ್ಧಮಾಡಿದ ವೀರರಲ್ಲಿ ನನಗಿಂಥ ನೋವನ್ನುಂಟುಮಾಡಿದವರೊಬ್ಬರೂ ಇಲ್ಲ. ನೀನು ಮಹಾ ವೀರನಾದ ವಾಲಿಗೆ ಸರಿಯಾದ ತಮ್ಮನು! ಮತ್ತು ಸುಭಟನು. ಶಹಬಾಸ್ ಎಂದು ಕೊಂಡಾಡಿ ಧನುಸ್ಸನ್ನು ತೆಗೆದುಕೊಂಡು ಬ್ರಹ್ಮದೇವತಾಕವಾದ ಮಂತ್ರದಿಂದ ಬಾಣಾಗ್ರ ಪ್ರದೇಶವನ್ನು ಮಂತ್ರಿಸಿ ಬೊಬ್ಬಿರಿದು ತೆಬ್ಬಿನ ಹೆದ್ದನಿಯುವನ್ನು ತೋರಿಸಿ ಬಾಣವನ್ನು ಸಂಧಾನಿಸಿ ಕಿವಿವರೆಗೆಳೆದು ಸುಗ್ರೀವನಿಗೆ ಗುರಿಗಟ್ಟಿ—ಇದೋ, ಈ ಬಾಣಘಾತವನ್ನು ಸಹಿಸಿಕೋ ಎಂದು ಎಚ್ಚರಿಸಿ ಹೇಳಿ ಅವನೆದೆಗೆಸೆದನು. ಆ ಬಾಣಹತಿಯಿಂದ ಸುಗ್ರೀವನು ತಿಳಿವಡಗಿ ಭೂಮಿಗೊರಗಿದನು. ಆ ಕೂಡಲೆ ಸಮಸ್ತ ಕಪಿಸೇನಾಪತಿಗಳೂ ಕಲ್ಮರ ಬೆಟ್ಟ ಗುಂಡುಗಳನ್ನು ತೆಗೆದುಕೊಂಡು ಬಂದು ದಶದಿಕ್ಕುಗಳಲ್ಲೂ ರಾವಣನನ್ನು ಕವಿದು ಆರ್ಭಟಿಸುತ್ತ ಹೊಯ್ಯುತ್ತಿರಲು; ಆಗ ಕಲ್ಲು ಗುಂಡೇ ಮೊದಲಾದುವುಗಳಿಂದ ತನ್ನನ್ನು ತರುಬುತ್ತಿರುವ ಕಪಿಪರಿವಾರವನ್ನೆಲ್ಲಾ ತರಿದು ಕೆಡಹಿ ತನ್ನ ರಥವನ್ನು ಮುಂದಕ್ಕೆ ಹರಿಸಿ ರಾಮನನ್ನು ಹುಡುಕುತ್ತ ಬರುತ್ತಿರಲು; ಆಗ ಸರ್ವಸೇನಾಪತಿಯಾದ ನೀಲನು ಪ್ರಲಯಕಾಲದ ಕಾಲನಂತೆ ಪರಭೀಕರ ಕೋಪಯುಕ್ತನಾಗಿ ಹಲ್ಮುರಿಯ ಕಚ್ಚುತ್ತ ಬಂದು ದೊಡ್ಡ ಬೆಟ್ಟವನ್ನು ಕೈಯಲ್ಲಿ ತೆಗೆದುಕೊಂಡು ಸೀತಾಚೋರನ ಎದುರಿಗೆ ಬಂದು ನಿಂತು—ಎಲ್ಲಿಗೆಲಾ! ಖಳನೇ, ಹೋಗುತ್ತಿರುವಿ? ನಿನ್ನ ದುರ್ಗರ್ವದ ಬಲು

ಮೆಯನ್ನು ಯಾರಲ್ಲಿ ನಡಿಸಬೇಕೆಂದು ಯೋಚಿಸಿರುವಿ? ನಿಲ್ಲು! ನಿಲ್ಲು! ನಾನು ಯಾರು ನೋಡು! ನಿನ್ನ ಅಭಿಮುಖವಾಗಿ ನಿಂತಿದ್ದರೂ ನೋಡಿ ಭಯಪಡದೆ ಹುಚ್ಚನಂತೆ ಹೋಗುತ್ತಿರುವಿ! ನಾನು ನಿನಗೆ ಕಾಲಮೃತ್ಯು ಪ್ರಾಯನಾದ ನೀಲನಲ್ಲವೋ? ಸುಮ್ಮನೆ ನಿಂತು ನನ್ನೊಡನೆ ಯುದ್ಧವನ್ನು ಮಾಡು. ಹಾಗೆ ಮಾಡದೆ ಮುಂದೆ ಸಾಗುವುದಕ್ಕೆ ಯತ್ನಿಸಿದಿಯಾದರೆ ನಿನ್ನ ತಲೆಗಳೆಲ್ಲಾ ಉದುರುವಂತೆ ಹೊಯ್ವೆನು ಅಂದನು.

ಆ ಮಾತುಗಳನ್ನು ಕೇಳಿ ರಾವಣನು—ಅಹುದಹುದು! ನಾವು ಬಲ್ಲೆವು. ನೀನು ಕೋತಿಗಳ ದಂಡಿನಲ್ಲಿ ಘೋರಪರಾಕ್ರಮಿಯು. ನಾನು ನಿನಗೆ ಹೆದರುವೆನು. ನೀನು ನನಗೆ ಉಬ್ಬಸವನ್ನುಂಟುಮಾಡದೆ ಬಿಡುವ ಭಟನಲ್ಲ. ಎಲಾ, ಬಡ ಮುದಿಗೋಡಗನೇ! ಮದಿಸಿರುವ ಮಹಾಜಗದ ಕುಂಭಸ್ಥಳವನ್ನು ಭೇದಿಸುತ್ತಿರುವ ಮೃಗರಾಜನನ್ನು ಗುಳ್ಳೇನರಿಯು ಹೆದರಿಸಿ ಜೀವಿಸಿದುದುಂಟೇ? ವಿಷಗ್ರೀವನಿಗೆ ಸಮಬಲನಾದ ಸುಗ್ರೀವನನ್ನು ತಿಂದು ಮುಂದೆ ಬರುತ್ತಿರುವ ನನಗೆ ಅಲ್ಪನಾದ ನೀನೆದುರೇ? ದೇವಾಸುರನರೋರಗರಲ್ಲಿ ನನ್ನ ಸಂಗಡ ವಿರೋಧ ಭಾವದಿಂದ ನಿಂತು ಬದುಕಿದವರು ಈ ವರೆಗೂ ಯಾರೂ ಇಲ್ಲ. ಮಿಕ್ಕ ಹುಲ್ಮಿಗಮಾನಿಸರು ನನಗೆ ಗಣ್ಯವೇ? ದಾರಿಯನ್ನು ಬಿಟ್ಟು ಉಸಿರುಳಿಸಿಕೋ ಎಂದನು.

ಆಗ ನೀಲನು—ಎಲಾ, ಶುಂಠನೇ! ಕಳ್ಳರ ಮಾತು ತಳವಾರರ ಕೇರಿಯಲ್ಲಿ ನಡೆವುದಲ್ಲದೆ ಪ್ರಸಿದ್ಧ ಸಭಾಮಧ್ಯದಲ್ಲಿ ಮೆರೆಯಬಲ್ಲುದೇ? ಇಲ್ಲವಷ್ಟೆ. ಹಾಗೆ ವೀರರಾದ ನಮ್ಮಲ್ಲಿ ಈ ನಿನ್ನ ಆತ್ಮಸ್ತುತಿಯು ಶೋಭಿಸುವುದೇ? ಏಕೆ ಸುಮ್ಮನೆ ಜಳ್ಳು ನುಡಿಗಳನ್ನು ಹರಟುತ್ತಿರುವಿ? ಶ್ರೀರಾಮನ ದೂತರಿಗೆ ಲೋಕತ್ರಯದಲ್ಲೂ ಎಲ್ಲಾದರೂ ಎಂದಿಗಾದರೂ ಭಯವುಂಟಾಗುವುದೇ? ನಿನ್ನ ಬಾಯಿಬಡುಕತನದ ಮಾತುಗಳನ್ನು ನಿನ್ನೂರಿನ ಬಡ ರಕ್ಕಸರೊಡನೆ ಹರಟು. ವೀರರಾದ ನಮ್ಮೊಡನೆ ಹರಟಿದರೆ ನಿನ್ನ ಹತ್ತು ತಲೆಗಳನ್ನೂ ಕಿತ್ತು ಚಂಡಾಡಿಬಿಡುವೆನು. ನಮ್ಮ ಯಜಮಾನನಾದ ರಾಘವನಿಂದ ನಿನ್ನ ಪ್ರಾಣಗಳ ಮೇಲಣ ಅಧಿಕಾರವನ್ನು ಹೊಂದಿ ಬಂದಿದ್ದೇನೆ. ನಿನ್ನಂಥ ನೂರು ಜನ ರಾವಣರು ಬಂದಾಗ್ಯೂ ನಾನು ಲಕ್ಷ್ಯಮಾಡುವುದಿಲ್ಲ. ಲೋಕದಲ್ಲಿ ಕೆಲವು ಕಳ್ಳತನಗಳು ದಕ್ಕಿದರೂ ದಕ್ಕಬಹುದು. ಕಡೆಯಲ್ಲಿ ಕಳ್ಳರಿಗೆ ಕಳ್ಳತನಗಳೇ ಮೃತ್ಯುವಾಗಿ ಪರಿಣಮಿಸುತ್ತವೆ. ಹಾಗೆ ದೈವಬಲಹೀನನಾದ ನೀನು ಒಂದು ವೇಳೆ ಮಾಯೆಯಿಂದ ಕೆಲವರನ್ನು ಜಯಿಸಿದ ಮಾತ್ರಕ್ಕೆ ಈಗಲೂ ಅಂಥ ಜಯವು ಉಂಟಾಗುವುದೆಂದು ಬಗೆದು ಬಂದಿಯಾ? ಇದರಿಂದ ನಿನ್ನಂಥ ಉನ್ಮತ್ತನು ಭೂಮಂಡಲದಲ್ಲಿ ಎಲ್ಲೂ ಇಲ್ಲವೆಂದು ಯೋಚಿಸಬೇಕಾಗುತ್ತಿದೆ. ನಾನು ನಿನ್ನನ್ನು ವಿಧ್ವಂಸಮಾಡಿಬಿಡುವುದಕ್ಕೆ ಸಿದ್ಧನಾಗಿ ನಿಂತಿದ್ದೇನೆ ನೋಡು ಎಂದು ಹೇಳಿದನು.

ಆಗ ರಾವಣನು ನಸುನಗುತ್ತ—ಎಲೈ ಮುದಿಗೋಡಗವೇ? ನೀನು ಕಪಿಯು. ನಿನ್ನ ಸ್ವಭಾವವು ಚಪಲವುಳ್ಳುದು. ಕಪಿಗಳು ಸ್ವಭಾವವಾಗಿ ಮಾಡುವ ಚೇಷ್ಟೆಗಳೆಲ್ಲಾ ಹಾಸ್ಯಕ್ಕೆ ಗುರಿಯಾಗುವುವು. ಈಗ ಪ್ರಯತ್ನಪೂರ್ವಕವಾಗಿ ಮಾಡುತ್ತಿರುವ ನಿನ್ನ ಚೇಷ್ಟೆಯನ್ನು ಕುರಿತು ಹೇಳತಕ್ಕುದೇನು? ಬರಿಯ ಎದೆಗೆಚ್ಚಿನ ಜಳ್ಮಾತುಗಳಿಂದ

ನಮ್ಮನ್ನು ತಿರಿಸ್ಕರಿಸಿ ನುಡಿಯುತ್ತಿರುವಿ? ಆಗಲಿ. ಹಾಗಾದರೆ ನಾವು ನಿನ್ನ ಪರಾಕ್ರಮವನ್ನು ನೋಡಬೇಕು! ಎಂದು ಬಿಲ್ಲಿನ ತೆಬ್ಬಿನಲ್ಲಿ ಬಾಣವನ್ನು ಹೂಡಿ ಗುರಿಗಟ್ಟಿ ನೀಲನನ್ನು ಹೊಡೆದನು. ಆಗ ನೀಲನು—ಎಲಾ ಬಡಾಳೇ, ಈ ಬಾಣದಿಂದ ಶತ್ರುವು ಸಾಯುವನು. ಆ ಮೇಲೆ ನಾನು ಸುಖವಾಗಿ ಬಾಳುವೆನೆಂದು ನಿರ್ಧರಿಸಿದ್ದೀಯಾ? ಛೀ! ನೀಚನೇ, ಹೋಗು. ಲೋಕದಲ್ಲಿ ಒಣಸೌದೆಗಳಿಂದ ಮಹಾಗ್ನಿಗೆ ಹಾನಿಯುಂಟಾದೀತೇ? ಖಡ್ಗಹತಿಯಿಂದ ಆಕಾಶವು ಅಂಜುವುದೇ? ಅದರಂತೆ ನಿನ್ನ ಬಾಣಹತಿಯಿಂದ ನನಗೆ ಬಾಧೆಯಾಗುವುದುಂಟೇ ಎಂದು ಹೇಳಿ ಬೊಬ್ಬಿರಿದು ಬಿಡುಗಣ್ಣರ ಸಂದಣಿಯು ಮಜಭಾಪು! ಎಂದು ಹೊಗಳುತ್ತಿರಲು ರಾವಣನನ್ನು ತಿವಿದನು. ಅನಂತರದಲ್ಲಿ ರಾವಣನು ಆ ಪೆಟ್ಟನ್ನು ಸಹಿಸಿಕೊಂಡು ಕೋಪದಿಂದ ನೀಲನನ್ನು ಹೊಡೆದನು. ಈ ರೀತಿಯಾಗಿ ಸೋಲುಗೆಲುವುಗಳಿಲ್ಲದೆ ಪುರತ್ರಯದಹನಾರಂಭಕಾಲದಲ್ಲಿ ನಂದೀಶ್ವರನೊಡನೆ ವಿದ್ಯುನ್ಮಾಲಿಗಾದಂತೆ ದಶಕಂಠನಿಗೆ ಅಗ್ನಿಪುತ್ರನೊಡನೆ ಯುದ್ಧವಾಗುತ್ತಿದ್ದಿತು. ಆಗ ನೀಲನು ರಾವಣನ ಮೇಲಿಡುವ ಗಿರಿತರು ಮೊದಲಾದವುಗಳಿಂದಲೂ ರಾವಣನು ನೀಲನ ಮೇಲೆ ಪ್ರಯೋಗಿಸುವ ಬಾಣಪರಂಪರೆಯಿಂದಲೂ ಭೂಮ್ಯಾಕಾಶ ಪ್ರದೇಶಗಳು ನಿರವಕಾಶವಾಗಿ ಹೋದುವು. ಹೀಗೆ ಉಭಯ ವೀರರಿಗೂ ಯುದ್ಧವಾಗುತ್ತಿರುವಲ್ಲಿ ಹಾಸ್ಯಪ್ರಿಯನಾದ ನೀಲನು ತನ್ನ ಬಾಲವನ್ನು ಉದ್ದವಾಗಿ ಬೆಳಿಸಿಕೊಂಡು ರಾವಣನ ಮೇಲೆ ನೆಗೆದು ಬಾಲದಿಂದ ಅವನನ್ನು ಸುತ್ತಿ ಅಲ್ಲಾಡದ ಹಾಗೆ ಬಿಗಿದು ತಾನು ಮೇರು ಪರ್ವತದಂತೆ ಬೆಳೆದು ರಾವಣನನ್ನು ಮೇಲೆತ್ತಿಕೊಂಡು—ಅಳದಿರೆನ್ನಯಕಂದಾ! ಎಂದು ತೂಗುತ್ತ ಜೋಗುಳವನ್ನು ಹಾಡುತ್ತಿದ್ದನು. ಆಗ ಅಂಬರದಲ್ಲಿ ಸುರನಿತಂಬಿನಿಯರು ಕೈಹೊಯ್ದುಕೊಂಡು ಗಹಗಹಿಸಿ ನಕ್ಕರು. ಅನಂತರದಲ್ಲಿ ನೀಲನು ರಾವಣನನ್ನು ಒಂದೆರಡು ಗಳಿಗೆಗಳ ವರೆಗೂ ಅಲ್ಲಾಡಿಸುತ್ತಿದ್ದು ಆ ಮೇಲೆ ಗರ್ರನೆ ತಿರುಗಿಸಿ ಅವನ ರಥದಲ್ಲಿಳಿಸಿ ತಾನು ಆ ರಥದ ಧ್ವಜಸ್ತಂಭದ ಮೇಲೆ ಕುಳಿತುಕೊಂಡು ರಾವಣನನ್ನು ಕುರಿತು—ಎಲಾ, ನಿರ್ಲಜ್ಜನಾದ ರಕ್ಕಸನೇ, ನಾವು ಯುದ್ಧದಲ್ಲಿ ಅತಿಬಲರೋ, ಹೀನಬಲರೋ? ನೀನೇ ಹೇಳು. ಮೃಗಗಳೆಂದು ನಮ್ಮನ್ನು ಹೀಯಾಳಿಸಿದಿಯಲ್ಲಾ? ಎಲಾ, ನಾವು ಮರಗಳ ಮೇಲೆ ನೆಗೆದಾಡುವಂಥ ಕೋತಿಗಳೇ? ನಿನಗೆ ಪ್ರಳಯವನ್ನುಂಟುಮಾಡುವಂಥ ಕಪಿಗಳಲ್ಲವೇ? ನೀನು ರಾಕ್ಷಸರಾಜನೋ? ನಾಚಿಕೊಳ್ಳಬೇಡ. ಧೈರ್ಯದಿಂದ ಹೇಳು. ವಿಮಾನಸ್ಥರಾದ ಅಮರರೂ ಕೂಡ ಇನ್ನೂ ನಮ್ಮ ಕೆಲಸಗಳ ಹವಣನ್ನು ಕಾಣರು ಎಂಬಲ್ಲಿ ಮೂರ್ಖನಾದ ನೀನೇನು ಬಲ್ಲಿ! ಕಳ್ಳನಾದ ನಿನಗೆ ಲೋಕಮಾತೃವಾದ ಜಾನಕಿಯನ್ನು ಅಪಹರಿಸಿಕೊಂಡು ಬರುವಾಗ ಎಂಥ ಸಂತೋಷವಿದ್ದಿತು? ತೋರಿಸು, ನೋಡುವಣ. ಛೀ! ನಾಯಿಯೇ! ಪರಭಾಗ್ಯಾಪಹಾರಕನೇ! ಎಂದು ಮತ್ತೆ ರಾವಣನ ನಡುನೆತ್ತಿಯನ್ನು ತಿವಿದನು.

ಆಗ ರಾವಣನು ಮಹಾ ಕೋಪ ಕಂಪಿತಾಧರನಾಗಿ ತನ್ನ ಚಂದ್ರಹಾಸದಿಂದ ನೀಲನನ್ನು ಹೊಡೆಯಲು; ನೀಲನು ಆ ಪೆಟ್ಟನ್ನು ತಪ್ಪಿಸಿಕೊಂಡು ಮತ್ತೆ ವಜ್ರಮುಷ್ಟಿ

ಯಿಂದ ರಾವಣನನ್ನು ಹೊಯ್ದನು. ಆಗ ಲಂಕಾ ರಾಜನು ತನ್ನ ಕರಖಡ್ಗದಿಂದ ನೀಲನನ್ನು ತಿವಿದನು. ಹೀಗೆ ಯುದ್ಧವಾಗುತ್ತಿರಲು ; ಆ ಮೇಲೆ ರೋಷಕಷಾಯಿ ತಾಕ್ಷನಾದ ನಿಶಾಚರ ರಾಜನು ಶೀಘ್ರವಾಗಿ ತನ್ನ ರಥದಿಂದಿಳಿದು ಬಂದು ಶೂರನಾದ ನೀಲನನ್ನು ಒದೆದನು. ಆ ಪೆಟ್ಟಿಗೆ ರಾಮದೂತನ ಪ್ರಾಣಗಳು ಸ್ವಸ್ಥಾನವನ್ನು ಬಿಟ್ಟು ಚಲಿಸಲು; ಅವನು ನೊಂದು ಮೆಲ್ಲನೆ ನೆಲದಲ್ಲಿ ಮಲಗಿದನು. ಆ ವೇಳೆಯಲ್ಲಿ ಧೂರ್ತನಾದ ರಾವಣನು ರಥದ ಮೇಲೆ ಹತ್ತಿಕೊಂಡು—ರಾಮನ ಬಳಿಗೆ ಹೋಗು ವುದಕ್ಕೆ ಪ್ರಯತ್ನಿಸುತ್ತಿರಲು; ಕೂಡಲೆ ಮಹಾ ವೀರನಾದ ನೀಲನು ಎಚ್ಚತ್ತು ತನ್ನ ಬಾಲವನ್ನು ಬೆಳಿಸಿ ರಥದ ಕುದುರೆಗಳ ಕಾಲುಗಳನ್ನೆಲ್ಲಾ ಬಿಗಿದು ಸೇದಿಕಟ್ಟಲು; ಆ ಕುದುರೆಗಳು ಮುಗ್ಗುರಿಸಿ ತಡವರಿಸಿದುವು. ಅದನ್ನು ಕಂಡು ರಾವಣನು ಸಾರಥಿಯ ಮೇಲೆ ಕೋಪಿಸಿಕೊಳ್ಳಲು ; ಅವನು ಕುದುರೆಗಳ ಕಡಿವಾಣಗಳನ್ನು ಸೇದಿ ಹಿಡಿದು ಚಾಟಿಯಿಂದ ಹೊಡೆದು ಎಷ್ಟು ವಿಧವಾಗಿ ಅಬ್ಬರಿಸಿದಾಗ್ಯೂ ಕುದುರೆಗಳು ಕಾಲುಗ ಳನ್ನು ಕಿತ್ತು ಮುಂದಕ್ಕೆ ಇಡಲಾರದಿರಲು ; ಕೂಡಲೆ ರಾವಣನು ಕೆಳಕ್ಕೆ ಬೊಗ್ಗಿ ನೋಡಿ ದುಷ್ಟಕಪಿಯು ಬಾಲದಿಂದ ಕಟ್ಟಿರುವುದನ್ನು ಕಂಡು—ಈ ಕೋಡಗವು ಮಹಾ ದುಶ್ಚೇಷ್ಟೆಯುಳ್ಳದೆಂದು ತನ್ನ ಕೈಯಲ್ಲಿದ್ದ ಕತ್ತಿಯಿಂದ ನೀಲನನ್ನು ಹೊಡೆ ದನು. ನೀಲನು ಆ ಪೆಟ್ಟನ್ನು ತಪ್ಪಿಸಿಕೊಂಡು ಆ ರಾವಣನ ಹೆಗಲಿನ ಮೇಲಕ್ಕೆ ನೆಗೆದು ಅವನ ಎಲ್ಲಾ ತಲೆಗಳ ಕಿರೀಟಗಳನ್ನು ಒಂದೊಂದನ್ನಾಗಿ ತೆಗೆದು ತೆಗೆದು ನೆಲಕ್ಕೆ ಬೀಸಾಡಿ ರಥದ ಮೂಕಿಯ ಮರದ ಮೇಲಕ್ಕೆ ಹಾರಿ ತುದಿಗೆ ಹೋಗಿ ನೊಗ ದಲ್ಲಿ ಕಟ್ಟಿದ್ದ ಕುದುರೆಗಳ ಜತ್ತಿಗೆಗಳನ್ನು ಬಿಚ್ಚಿಹಾಕಿ ಕಿರ್ರೆಂದು ಕೂಗಿ ಕುದುರೆಗ ಳನ್ನೋಡಿಸಿ ಕೆನ್ನೆಗೆ ಹೊಡೆದು ಕಾಲಿನಿಂದೊದೆದು ಸಾರಥಿಯನ್ನು ಭೂಮಿಗೆ ಕೆಡಹಿ ಅಲ್ಲಿಂದ ರಾವಣನ ಬೆನ್ನಿಗೆ ಬಂದು ಅಮೋಘಾಸ್ತ್ರ ಸಮೂಹಪೂರಿತವಾದ ಬತ್ತಳಿಕೆ ಯನ್ನು ತೆಗೆದು ಬಿಸುಟು ಅವನ ಕೈಯಲ್ಲಿದ್ದ ಶಸ್ತ್ರವನ್ನು ಕಿತ್ತು ದೂರವಾಗಿ ಎಸೆದು ರಥ ಚಕ್ರಗಳನ್ನು ಕಳೆದು ದೂರವಾಗಿ ಹೋಗುವಂತೆ ಉರುಳಿಸಿ ಅಚ್ಚುಗಳನ್ನು ಮುರಿದು ರಾವಣನ ಮುಡುಹು ಮುಸುಡು ಎದೆ ಕೊರಳು ಕಂಕುಳು ಮೊದಲಾದ ಸ್ಥಳಗಳಲ್ಲಿ ಹಾರಿಯಾಡುತ್ತ ಅವನನ್ನು ಕುರಿತು—ಎಲಾ, ನೀನು ರಾಘವೇಂದ್ರನೊಡನೆ ಕಾದುವ ಪಟುಭಟನೇ ? ಛೀ ! ಖೂಳರ ಕುಲಗುರುವೇ, ಹೋಗೆಂದು ತನ್ನ ದೀರ್ಘ ವಾದ ತೋಳನ್ನೆತ್ತಿ ಮುಷ್ಟಿಯಿಂದ ರಾವಣನ ತಲೆಯ ಮೇಲೆ ಹೊಡೆದು ಮುಖದೆ ದುರಿಗೆ ಬಂದು ಬಾಯ್ಗಿಸಿದಣಕಿಸಿದನು.

ವಾಯುಮಾರ್ಗದಲ್ಲಿ ವಿಮಾನಾರೂಢರಾಗಿದ್ದುಕೊಂಡು ನೋಡುತ್ತಿದ್ದ ದೇವ ವಾರಾಂಗನೆಯರು ಈ ನೀಲನ ಬಲುಚೆಲ್ಲಾಟವನ್ನು ಕಂಡು ಘೊಳ್ಳೆಂದು ಬಲ್ನಗೆಯ ಕಡಲಲ್ಲಿ ಬಿದ್ದು ಕಪಿವೀರನಾದ ನೀಲನ ಕೆಲಸವು ಲೇಸು ಲೇಸು ಎಂದು ಕೈದೋರಿ ಕೊಂಡಾಡಿದರು. ಮತ್ತೆ ನೀಲನು ಅಳಿಲುಗಳು ಕೋಟೆ ತೆನೆಗಳ ಮೇಲೆ ಓಡಿಯಾಡು ವಂತೆ ರಾವಣನ ತಲೆಗಳ ಮೇಲೆ ಹತ್ತಿ ಓಡಿಯಾಡುತ್ತ ಅವನ ಮೊಗ ಕಿವಿ ಮೂಗು ಗಳನ್ನು ಪರಚುತ್ತ ಕೈಗೆ ಸಿಕ್ಕದೆ ಛೀ ! ಹೆಂಗಳ್ಳಾ ! ಬೀಳೆಂದು ರಾವಣನನ್ನು

ಒಡೆದನು. ಆಗ ಶೂರಪಕ್ಷಪಾತಿಯಾದ ರಾವಣನು ನೀಲನ ಪರಾಕ್ರಮಕ್ಕೆ ಮೆಚ್ಚಿ ಬಿಲ್ದೆಬ್ಬಿನಲ್ಲಿ ಅರಿಭೀಕರ ಹಾನಿದಾಯಕವಾದ ಆಗ್ನೇಯಾಸ್ತ್ರವನ್ನು ಹೂಡಿ ಅವನ ಮೇಲೆ ಬಿಡಲು; ಆಗ ಆ ನೀಲನು ಅಗ್ನಿಕುಮಾರನಾದುದರಿಂದ ಬದುಕಿದನಲ್ಲದೆ ಆ ಮಹಾಸ್ತ್ರಘಾತವನ್ನು ತಡೆದು ಬದುಕುವವರು ಮೂರು ಲೋಕಗಳಲ್ಲಿ ಎಲ್ಲಿಯಾದರೂ ಇರುವುದುಂಟೇ? ಆ ಮಹಾಸ್ತ್ರವು ಮಹಾವೀರರಿಗೆ ಎದೆನಡುಗನ್ನು ಹುಟ್ಟಿಸುತ್ತ ಕೇಸುರಿಯನ್ನು ಕಾರುತ್ತ ಮಹಾ ಶಬ್ದದಿಂದ ಹೊರಟುಬಂದು ಕಪಿವೀರನ ಎದೆಯಲ್ಲಿ ಹೊಕ್ಕು ಬೆನ್ನಿನಲ್ಲಿ ಮೂಡಲು; ಆಗ ಅವನು ಬಲಹೀನತೆಯನ್ನು ಹೊಂದಿ ಮೂರ್ಛಿತನಾಗಿ ನೆಲದಲ್ಲಿ ಬಿದ್ದನು.

ಆ ಸಮಯದಲ್ಲಿ ರಕ್ಕಸರರಸನು ತನ್ನ ರಥವನ್ನು ಮುಂದಕ್ಕೆ ನೂಕುತ್ತ ಎದುರಿಗೆ ಬಂದ ಕಪಿವೀರರನ್ನು ಸಂಹರಿಸುತ್ತ ಬರುತ್ತಿರಲು; ಆಗ ಪೆಟ್ಟುಗಳನ್ನು ತಿಂದು ಖೇದಗೊಂಡು ಕಪಿಬಲವೆಲ್ಲಾ ಜಯಾಪೇಕ್ಷೆಯನ್ನು ತೊರೆದು ರಾಮನನ್ನೇ ಸ್ಮರಿಸುತ್ತಿದ್ದರು. ಮೂರ್ಛೆಹೋಗಿದ್ದ ಸುಗ್ರೀವನು ಇನ್ನಾದರೂ ಎದ್ದು ಯುದ್ಧಕ್ಕೆ ಬರಲಿಲ್ಲ. ಕಪಿವಾಹಿನೀಪತಿಯಾದ ನೀಲನ ಪ್ರಾಣಗಳ ಹವಣು ಚೆನ್ನಾಗಿ ಗೊತ್ತಾಗಲಿಲ್ಲ. ಯುವರಾಜನಾದ ಅಂಗದನು ನೊಂದು ಕಳವಳಿಸಿದನು. ನಳನೆಂತಿರುವನೋ ತಿಳಿಯದು. ಉಳಿದ ವೀರರಲ್ಲಿ ಒಬ್ಬರಾದರೂ ಕಾಣುವುದಿಲ್ಲ. ಇನ್ನೀ ದುಷ್ಟನಾದ ರಾವಣನ ಶರಾಗ್ನಿಜ್ವಾಲೆಯೆದುರಿಗೆ ನಿಲ್ಲುವವರಾರು? ನಮ್ಮೆಲ್ಲರಿಗೂ ಅಕಾಲದಲ್ಲಿ ವಿಲಯವು ಸಂಪ್ರಾಪ್ತವಾಯಿತಲ್ಲಾ ಎಂದು ಕೂಗುತ್ತಾ ಕಪಿಸೇನೆಗಳೆಲ್ಲಾ ಬಾಯ್ಬಡಿದುಕೊಳ್ಳುತ್ತಿರಲು; ಆಗ ಕೋಪತಾಮ್ರಾಕ್ಷನಾದ ಆಂಜನೇಯನು ಪ್ರಳಯಕಾಲದ ರುದ್ರನಂತೆ ಅತ್ಯುಗ್ರತೆಯನ್ನು ಧರಿಸಿ—ಈ ಕಾರ್ಯದಿಂದ ನನಗೆ ಯಾವ ಕೊರತೆ ಬಂದರೂ ಬರಲಿ. ರಾಮನು ನನ್ನನ್ನು ತೊರೆದರೂ ತೊರೆಯಲಿ; ನನ್ನ ಪ್ರತಿಜ್ಞೆಯನ್ನು ಭಂಗಪಡಿಸಿದನು, ಅದುಕಾರಣ ಇವನು ಉನ್ಮತ್ತನೆಂದು ಹೇಳಿಕೊಂಡರೂ ಹೇಳಿಕೊಳ್ಳಲಿ! ಮುಂಗೆಲಸವನ್ನು ಆ ಮೇಲೆ ಯೋಚಿಸುವೆನು. ಈಗ ಈ ಖಳನನ್ನು ಹಿಡಿದು ಎಲುವುಗಳನ್ನು ಮುರಿದು ಇವನನ್ನು ಹಿಂಡಿ ರಕ್ತವನ್ನು ತೆಗೆದು ಹಿತವಾಗುವಂತೆ ಶಾಕಿನಿಯರ ಬಾಯ್ಗಳಲ್ಲಿ ಸುರಿಯುವೆನು. ಇವನು ಮಹಾ ರಣಮೂರ್ಖನು. ಬಲು ಕೊಬ್ಬುಳ್ಳವನು ಎಂದು ಯೋಚಿಸಿ ಶೀಘ್ರವಾಗಿ ರಾವಣನೆದುರಿಗೆ ಬಂದು ನಿಂತು—ಎನೆಲಾ, ನಿರ್ಲಜ್ಜನಾದ ದಶಕಂಠಾ! ಯಾರೊಡನೆ ನಿನಗೆ ರಣದ ಸನ್ಮಾನವು? ಈ ವರೆಗೂ ನಿನ್ನನ್ನು ಬೀಳ್ಬಡಿಯದೆ ಉಳಿಸಿದ ಮಾತ್ರಕ್ಕೆ ಗೆದ್ದೆನೆಂದು ಮೈಗೊಬ್ಬಿದಿಯೋ? ಎಂದು ಕೇಳಲು; ಆಗ ಅರಿಭಯಂಕರನಾದ ಮೊಬ್ಬಿಗರೊಡೆಯನು—ಎನೋ, ಮುಮ್ಮುಸುಡಿನ ಕೆಮ್ಮೋರೆಯ ಬಡಗೋಡಗನೇ, ಮೊದಲು ನಮ್ಮ ನಗರದಲ್ಲಿ ಹಳೆಯವಾದ ಚಿಂದಿಯರಿವೆಗಳನ್ನು ನಿನ್ನ ಬಾಲಕ್ಕೆ ಸುತ್ತಿಸಿ ಎಣ್ಣೆಯಲ್ಲದ್ದಿ ಬೆಂಕಿಯನ್ನು ಹೊತ್ತಿಸಿ ಬೀದಿಬೀದಿಗಳಲ್ಲಿ ತಿರುಗಿಸಿ ಬಾಯ್ಬಿಡಿಸಿದವನನ್ನು ಮರೆತಿಯೋ? ಇಷ್ಟು ದುರಹಂಕಾರ ವಚನಗಳನ್ನು ನಮ್ಮೊಡನೆ ಆಡಿ ಕೆಟ್ಟೆಯಲ್ಲಾ ಎನ್ನಲು; ಆಗ ವೀರನಾದ ಮಾರುತಿಯು ಹೌದು! ನೀನು ರಕ್ಕಸರೊಡೆಯನು! ಕೂಳಿನಾಸೆಗೆ ತಲೆಮರೆಸಿಕೊಂಡು ಕಾಲಹರಣ

ವನ್ನು ಮಾಡುತ್ತಿದ್ದ ಹುಲ್ರಕ್ಕಸರನ್ನು ಯುದ್ಧಕ್ಕೆ ಕಳುಹಿಸಿ ಕೊಲ್ಲಿಸಿ ಪ್ರಾಣಗಳನ್ನು ಉಳಿಸಿಕೊಂಡ ಗಟ್ಟಿಗನಲ್ಲವೇ ನೀನು? ಆದರೇನಾಯಿತು? ಆಗ ನೀನು ಜೀವವನ್ನು ಉಳಿಸಿಕೊಂಡುದರಿಂದ ಈಗ ನನಗೂ ನಿನಗೂ ದ್ವಂದ್ವಯುದ್ಧವು ಸಂಭವಿಸಿತು. ಆಗಲೇ ನೀನು ಮಡಿದುಹೋಗಿದ್ದರೆ ನಿನ್ನನ್ನು ಕೇಳುತ್ತಿದ್ದವರಾರು? ಈಗ ನನ್ನೊಡನೆ ಬಾಹುಯುದ್ಧಕ್ಕೆ ಶೀಘ್ರತೆಯಿಂದ ಸನ್ನದ್ಧನಾಗು ಕಾದಾಡಿ ನೋಡುವಣ. ಈ ಯುದ್ಧರಂಗಸ್ಥಳವು ನಮ್ಮಿಬ್ಬರ ಪರಾಕ್ರಮವನ್ನು ತೂಗುವ ತಕ್ಕಡಿಯಂತಿದೆ ಎಂದು ಹೇಳಿ ಮುಂದೈತಂದು ರಾವಣನ ಹೆಗ್ಗತ್ತನ್ನು ಹಿಡಿದೆತ್ತಿ ಮೊಗಮೇಲಾಗಿ ಬೀಳುವಂತೆ ನೆಲಕ್ಕೊಗೆದನು. ಮತ್ತು ಆವನ ಸಾರಥಿಯನ್ನು ನೋಡಿ—ಎಲವೋ, ಬಂಡನ ಬಂಡಿಯಾಳೇ, ನಮ್ಮ ಮಲ್ಲಯುದ್ಧದಲ್ಲಿ ನಿನ್ನೊಡೆಯನು ಬದುಕಿ ಬಂದರೆ ನೀನು ಅವನಿಗೆ ಇವುಗಳನ್ನು ಕೊಡು ಎಂದು ರಾವಣನ ಕೈಗಳಲ್ಲಿದ್ದ ಧನುರಾದ್ಯಾಯುಧಗಳನ್ನೆಲ್ಲಾ ಸೆಳೆದುಕೊಂಡು ಅವನ ಬಳಿಗೆ ಬಿಸುಟನು. ಅನಂತರದಲ್ಲಿ ನಿರಾಯುಧನಾದ ರಾವಣನನ್ನು ಕುರಿತು—ಎಲೋ, ಹತ್ತು ತಲೆಗಳ ವಿಕಾರರೂಪಿಯೇ, ಕೈದುಗಳನ್ನು ಕಿತ್ತು ಬಿಸುಟನೆಂದು ಭಯಪಟ್ಟು ಬಲಹೀನನಾಗಬೇಡ. ನಿನಗೆ ಮುಷ್ಟಿಯುದ್ಧವನ್ನು ಮಾಡುವುದಕ್ಕೆ ಬಲವಿದೆಯೋ ಇಲ್ಲವೋ? ತಡಮಾಡದೆ ಹೇಳು. ನಮ್ಮಿರ್ವರ ಮಲ್ಲಯುದ್ಧದ ವಿಚಿತ್ರಕ್ರಮವನ್ನು ಉಭಯ ಕಟಕದವರೂ ಗಗನಮಂಡಲದಲ್ಲಿ ದೇವಸಮೂಹವೂ ನೋಡಿ ಸಂತೋಷಿಸಲಿ ಎಂದು ನಿಶಾಚರ ಪತಾಕಿನಿಯು ಬೆದರಿ ಬೀಳುವಂತೆ ಗರ್ಜಿಸಿದನು.

ಆಗ ನಿಶಾಚರ ಚಕ್ರೇಶ್ವರನು—ಎಲಾ, ದುಷ್ಟಮರ್ಕಟವೇ, ಎಳೆಯದಾದ ಬಳ್ಳಿಯ ಕುಡಿಯನ್ನು ಚಿವುಟುವುದಕ್ಕೆ ಉಕ್ಕಿನ ದೊಡ್ಡ ಕೊಡಲಿಯನ್ನು ತೊಳಿಸಿಕೊಂಡು ಬರಬೇಕೇ? ಮಾರಿಯ ಪೂಜೆಗೆ ಅಶ್ವಮೇಧಯಾಗದ ಸಾಮಗ್ರಿಗಳನ್ನು ಒದಗಿಸಬೇಕೇ? ಕೋಳಿ ಪಿಳ್ಳೆಯನ್ನು ಕೊಲ್ಲುವುದಕ್ಕೆ ಚತುರಂಗಬಲವನ್ನು ತರಬೇಕೇ? ನಾನು ನಿನ್ನೊಡನೆ ಕಾದುವುದಕ್ಕೆ ಮಹಾಸ್ತ್ರ ಪರ್ಯಂತರವೂ ಯೋಚಿಸಬೇಕೇ? ಶಸ್ತ್ರವಿಲ್ಲದಿರುವ ನಿನಗೆ ನನ್ನ ಕರತಲದ ಪೆಟ್ಟೇ ಮಹಾಸ್ತ್ರಹತಿಯಲ್ಲವೇ? ಎಂದು ಹೇಳಲು; ಆಗ ಮರುನ್ನಂದನನು ಗಹಗಹಿಸಿ ನಕ್ಕು ರಾವಣನನ್ನು ಕುರಿತು—ಎಲಾ, ಖಳರಲ್ಲಿ ನೀನು ಗಟ್ಟಿಗನೇ ಸರಿ. ನಿನ್ನ ಕೊಬ್ಬಿನ ಮಾತುಗಳನ್ನು ನಾನು ಚೆನ್ನಾಗಿ ಮೆಚ್ಚಿದೆನು. ನಿನ್ನನ್ನು ಬಿಟ್ಟು ಹುಡುಕಿದರೆ ಮೂಢರು ಎಲ್ಲಿ ಸಿಕ್ಕುವರು? ಹಾಗೇ ಆಗಲಿ; ನಾವಿಬ್ಬರೂ ಮತ್ತಾವುದರಿಂದಲೂ ಯುದ್ಧಕ್ಕೆ ತೊಡಗಬಾರದು. ಒಬ್ಬೊಬ್ಬರು ಒಂದೊಂದು ಗುದ್ದನ್ನು ಹೊಡೆಯುತ್ತ ಹೀಗೆ ಮೂರು ಗುದ್ದುಗಳಾಗುವುದರಲ್ಲಿ ಮೊದಲು ಯಾರು ಸಾಯುವರೋ, ಯಾರು ಬದುಕುವರೋ? ನೋಡೋಣ ಎನ್ನಲು; ಆಗ ರಾವಣನು ಒಪ್ಪಿ—ಆದರೆಲವೋ, ಕಪಿಯೇ, ಮೊದಲು ನೀನು ನನ್ನನ್ನು ಗುದ್ದು. ನಿನ್ನೇಟಿನಿಂದ ನಾನು ಸಾಯದೆ ಬದುಕಿದರೆ ಆ ಮೇಲೆ ನಿನ್ನನ್ನು ಗುದ್ದುವೆನು ಎಂದು ಹಾಸ್ಯಮಾಡಿ ನುಡಿಯಲು; ಆಗ ಮಾರುತಿಯು ಗರ್ಜಿಸುತ್ತ ಕೋಪೋದ್ರೇಕದಿಂದ ಕಣ್ಗೆಡಿಗೆದರಿ ತನ್ನ ಬಾಹುವನ್ನು ಅತ್ಯುನ್ನತವಾಗಿ ಎತ್ತಿ—

ಎಲಾ ಖೂಳನೇ, ಈ ಘಾತವನ್ನು ಎಚ್ಚರಿಕೆಯಿಂದ ಆತುಕೋ. ಏಕೆಂದರೆ ನೀನು ರಣರಂಗದಲ್ಲಿ ನಿರ್ಭೀತನು. ಮತ್ತು ಮಹಾ ವೀರನು ಎಂದು ಲೋಕಗಳೆಲ್ಲಾ ಹೊಗಳುತ್ತಿರುವುವು. ಅಂಥ ಮಹಾ ಕೀರ್ತಿಯನ್ನು ಕಳೆದುಕೊಳ್ಳಬೇಡ. ನಾವು ಕೋತಿಗಳ ಕುಲದವರು ಎಂದು ನೆಗೆದಬ್ಬರಿಸಿ ಮುಷ್ಟಿಯಿಂದ ಒಂದು ಗುದ್ದನ್ನು ಗುದ್ದಲು ; ಆಗ ಲಂಕಾನಾಥನು ಸಿಡಿದು ಭೂಮಿಗೆ ಬಿದ್ದು ರಕ್ತವನ್ನು ಕಾರಿ ಕಾರಿ ಮೈಮೂಳೆಗಳು ಮುರಿದಂತಾಗಿ ಇಂದ್ರಿಯಗಳು ನಿರ್ಬಲತೆಯನ್ನು ಹೊಂದಿ ಕೈಕಾಲುಗಳನ್ನು ಒದರಿಕೊಳ್ಳುತ್ತಾ ಮೂರ್ಛಿತನಾಗಿ ಮಲಗಿದನು. ಆಗ ಸಂತುಷ್ಟರಾದ ಸುರರು ಕಪಿವೀರನ ಮೇಲೆ ಪೂಮಳೆಗರೆದರು. ದೇವದುಂದುಭಿಗಳನ್ನು ಬಾರಿಸಿದರು. ಮತ್ತು ವೀರಕುಲತಿಲಕನಾದ ಈ ಆಂಜನೇಯನದೊಂದು ಗುದ್ದಿಗೆ ಲೋಕಭೀಕರನಾದ ಈ ರಕ್ಕಸನ ಸ್ಥಿತಿಯು ಇಂಥಾಯಿತು. ಇನ್ನೂ ಎರಡು ಗುದ್ದುಗಳು ಉಳಿದಿರುವುವು. ಅವೆರಡೂ ಮುಗಿಯುವುದರೊಳಗಾಗಿ ಈ ನಿಶಾಚರರಾಜನ ಆಯುಷ್ಯವು ಮುಗಿಯದೆ ಇರುವುದೇ ಇಲ್ಲ. ಇದು ಸತ್ಯವು ಎಂದು ನಿಶ್ಚಯಿಸುತ್ತಿದ್ದರು.

ಆ ಬಳಿಕ ರಾವಣನ ಪ್ರಾಣಗಳು ರಾಮನ ಬಾಣಘಾತದಿಂದ ಹೋಗತಕ್ಕುವುಗಳಾದುದರಿಂದ ಅರೆಗಳಿಗೆಯಾದ ಮೇಲೆ ರಾವಣನು ಸಾರಥಿಯ ಶೈತ್ಯೋಪಚಾರಗಳಿಂದ ಚೇತರಿಸಿಕೊಂಡು ಮೆಲ್ಲನೆ ಕಣ್ದೆರೆದು ನೋಡಿ ಕೈಗಳನ್ನೂರಿಕೊಂಡೆದ್ದು ನಿಂತು ಹನುಮಂತನನ್ನು ಕುರಿತು—ಎಲೈ ಕಪಿವೀರನೇ, ನಿನಗೆ ಸಮಾನನಾದ ವೀರಾಗ್ರೇಸರನು ಮೂರು ಲೋಕಗಳಲ್ಲೂ ಯಾರೂ ಇಲ್ಲ. ನಾನು ಹುಟ್ಟಿದಂದಿನಿಂದ ಈ ವರೆಗೂ ಒಂದುವೇಳೆಯಲ್ಲಾದರೂ ಇಂಥ ಅಸದೃಶವಾದ ಪೆಟ್ಟನ್ನು ತಿಂದವನಲ್ಲ ಎಂದು ಹೊಗಳಲು; ಆಗ ಹನುಮಂತನು ರಾವಣನನ್ನು ಕುರಿತು—ನೀನು ನನ್ನನ್ನು ಹೊಗಳುವುದು ಯೋಗ್ಯವಾದುದಲ್ಲ. ಏಕೆಂದರೆ ನನ್ನಂಥ ಹೀನಬಲಿಗಳಾದವರು ನಮ್ಮ ಕಪಿಸೇನೆಯಲ್ಲಿ ಒಬ್ಬರೂ ಇಲ್ಲ. ಖೂಳನಾದ ನೀನು ನನ್ನ ಪೆಟ್ಟನ್ನು ತಿಂದು ಬದುಕಿದ ಮೇಲೆ ನನ್ನ ಗುದ್ದಿಗಿಂತಲೂ ಕೀಳಾದ ಗುದ್ದು ಒಬ್ಬರದೂ ಅಲ್ಲವೆಂದು ಯೋಚಿಸುತ್ತೇನೆ. ಅದುಕಾರಣ ನನ್ನ ಏಟನ್ನು ಹೊಗಳುವುದು ನಿನಗೆ ಅಣುಮಾತ್ರವಾದರೂ ಯುಕ್ತವಲ್ಲ. ಆ ವಿಷಯವು ಹಾಗಿರಲಿ. ಇದೋ, ಈಗ ನಿನ್ನ ಸರತಿಯು! ನಾನು ಸಿದ್ಧನಾಗಿ ನಿಂತಿದ್ದೇನೆ. ನಿನ್ನ ಶಕ್ತಿಯನ್ನು ನಿರ್ವಂಚನೆಯಿಂದ ನನ್ನ ಮೇಲೆ ತೋರಿಸು ; ತಡವೇಕೆ ಮಾಡುವಿ ಎಂದು ಹೇಳಲು ; ಆಗ ಕುಪಿತನಾದ ರಾವಣನು ತನ್ನ ವಜ್ರೋಪಮಾನಗಳಾದ ಹತ್ತು ಮುಷ್ಟಿಗಳನ್ನೂ ಮೇಲೆತ್ತಿ—ಎಲಾ, ನೀಚನಾದ ಹನುಮಂತನೇ, ನೀನು ಬಹುಗರ್ವದಿಂದ ದುರ್ವಾಕ್ಯಗಳನ್ನಾಡಿ ಅಪರಾಧಿಯಾಗಿರುವಿ. ಈ ನಮ್ಮ ಮುಷ್ಟಿಘಾತತ್ರಯದಲ್ಲಿ ನೀನು ಬದುಕಿದಿಯಾದರೆ ನೀನೇ ದಶರಥನ ಮಗನ ಬಂಟನು, ವೀರನಿಶಾಚರ ಬಲವನ್ನು ಸೂರೆಗೊಂಡವನು, ಮತ್ತು ಸೀತೆಯನ್ನು ಕರೆದುಕೊಂಡು ಹೋಗಿ ರಾಮನಿಗೆ ಕೊಟ್ಟವನು. ಈ ಮಾತುಗಳಲ್ಲಿ ಏನೂ ಸಂದೇಹವಿಲ್ಲ ಎಂದು ಹೇಳಿ ಆರ್ಭಟಿಸಿ ಹನುಮಂತನನ್ನು ಗುದ್ದಲು ; ಕಪಿವೀರನ ಗೋಣು ಕೊಕ್ಕರಿಸಿತು. ಗಂಟಲಿನಿಂದ ರಕ್ತವು ಹೊರಟು ಹೊರಬಿದ್ದಿತು. ಕೈಕಾಲು ಮೊದಲಾದ ಅಂಗೋಪಾಂಗಗಳಲ್ಲಿ ಸ್ವಾಧೀನತೆಯು ತಪ್ಪಿತು. ಕಣ್ಣುಗುಡ್ಡುಗಳು ತೇಲಿದುವು.

ಇಂದ್ರಿಯಗಳೆಲ್ಲಾ ವಿಷಯವ್ಯಾಪ್ತಿಯನ್ನು ಬಿಟ್ಟು ಶಾಂತಸ್ಥಿತಿಯನ್ನು ಹೊಂದಿದುವು. ಕೂಡಲೆ ರಾಮದೂತನು ಮೈಮರೆತು ನೆಲದಲ್ಲಿ ಮಲಗಿದನು. ಆಗ ರಾವಣನು ಭಯಾಶ್ಚರ್ಯಭಾವಗ್ರಸ್ತನಾಗಿ—ಈ ನಮ್ಮ ಮುಷ್ಟಿಘಾತಗಳಿಂದ ಮೇರುಮಂದ ರಾದಿ ಕುಲಾಚಲಗಳೂ ಕೂಡ ಪುಡಿಪುಡಿಯಾಗಿ ಹೋಗಬೇಕು. ಅಂಥದರಲ್ಲಿ ಅಪ್ರತಿ ಮಮಲ್ಲನಾದ ಈ ಆಂಜನೇಯನು ಮೂರ್ಛೆಯನ್ನು ಮಾತ್ರ ಹೊಂದಿದನಲ್ಲಾ! ಇವನು ಪುನಃ ಎಚ್ಚೆತ್ತು ಬಂದು ಕೋಪದಿಂದ ಗುದ್ದುವನಾದರೆ ಆ ಗುದ್ದಿನಿಂದಲೇ ನಮ್ಮ ಆಯುಃಕಾಲವು ಪರಿಪೂರ್ತಿಯನ್ನು ಹೊಂದುವುದು ಎಂದು ಯೋಚಿಸಿ ಸಾರಥಿಯನ್ನು ಕುರಿತು—ಇದೇ ಸಮಯದಲ್ಲಿ ಬೇಗ ಬೇಗ ರಥವನ್ನು ನಡಿಸಿಕೊಂಡು ಹೋಗಿ ರಾಮನೆದುರಿನಲ್ಲಿ ನಿಲ್ಲಿಸು ಎಂದು ಹೇಳಲು ;

ಆಗ ಸಾರಥಿಯು ಕುದುರೆಗಳನ್ನು ತೀವ್ರಗೊಳಿಸಿ ಅದೇ ಪ್ರಕಾರ ಮಾಡಲು; ತನ್ನೆದುರಿಗೆ ಅತಿ ಶೀಘ್ರತೆಯಿಂದ ಬರುತ್ತಿರುವ ರಥವನ್ನು ಕಂಡು ಶ್ರೀರಾಮನು ಅಷ್ಟರಲ್ಲಿ ಮೂರ್ಛೆ ತಿಳಿದೆದ್ದು ಬಂದಿದ್ದ ಸುಗ್ರೀವನನ್ನು ನೋಡಿ—ಎಲೈ ಪ್ರಿಯನಾದ ಕಪಿರಾಜನೇ, ಇನ್ನು ಮೇಲೆ ಈ ರಾವಣನೊಡನೆ ಯುದ್ಧಕ್ಕೆ ನಿಲ್ಲತಕ್ಕವನು ನಾನೇ. ಇವನು ನಮ್ಮ ಬಾಣಹತಿಯಿಂದಲೇ ಸಾಯತಕ್ಕವನು. ಆದುಕಾರಣ ಈ ಕಪಿನಾಯ ಕರನ್ನು ವ್ಯರ್ಥವಾಗಿ ದಣಿಸಬೇಡ. ನೀವೆಲ್ಲರೂ ನಮ್ಮ ಯುದ್ಧವನ್ನು ನೋಡುತ್ತಿರಿ. ಈ ರಾವಣನು ಅಪ್ರತಿಮಪರಾಕ್ರಮವಿಜೃಂಭಿತನಾದುದರಿಂದ ಲೋಕವಿಖ್ಯಾತವೀರ ನೆಂದು ಪ್ರಖ್ಯಾತಿಯನ್ನು ಹೊಂದಿರುವನು. ಆದುದರಿಂದ ಇವನ ಹಮ್ಮನ್ನು ಮುರಿದು ಇವನ ದೇಹವನ್ನು ತುಂಡುತುಂಡಾಗಿ ಕತ್ತರಿಸಿ ಭೂತಗಣಕ್ಕೆ ಔತಣವನ್ನು ಮಾಡಿಸು ವೆನು ಎಂದು ಹೇಳಿ ಕಪಿಸೇನೆಗಳನ್ನು ರಾವಣನೊಡನೆ ಯುದ್ಧಕ್ಕೆ ಹೋಗದಂತೆ ನಿಲ್ಲಿಸಿ ತನ್ನ ಉಟ್ಟ ನಾರ್ಮಡಿಯನ್ನು ತೆಗೆದು ವೀರಪಳಿಯನ್ನು ಬಿಗಿದುಟ್ಟು ಸೊಂಟ ದಲ್ಲಿ ಬಾಕನ್ನು ಸಿಕ್ಕಿಸಿ ಅಕ್ಷಯಬಾಣದ ಬತ್ತಳಿಕೆಗಳನ್ನು ಬೆನ್ನಿನಲ್ಲಳವಡಿಸಿ ಕೆದರಿ ರುವ ಜಡೆಗಳನ್ನು ಒಂದುಗೂಡಿಸಿ ಸುತ್ತಿ ಬಿಗಿದು ಕರಕೋದಂಡದ ಕೊಪ್ಪನಾರೈ ಯ್ದು ಶಿಂಜಿನಿಯನ್ನು ಕಟ್ಟಿ ಮಿಡಿದು ಝೇಂಕಾರಧ್ವನಿಯನ್ನು ಟುಮಾಡಲು ; ಆ ರಭಸವನ್ನು ಕೇಳಿ—ಇದು ದುಷ್ಟನಾದ ರಾವಣವಿನಾಶಸೂಚಕವಾದ ರಘುವೀರಾ ಗ್ರಗಣ್ಯನ ಬಿಲ್ದನಿಯು ಎಂದು ತಿಳಿದು ರಾವಣನ ಭಯವನ್ನು ಬಿಟ್ಟು ಅಷ್ಟದಿಕ್ಪಾಲ ಕರೂ ಏಕಾದಶರುದ್ರರೂ ದ್ವಾದಶಾದಿತ್ಯರೂ ಸಪ್ತಮರುತ್ತುಗಳೂ ಬ್ರಹ್ಮರುದ್ರರೂ ಸನಕನಾರದಾದಿ ಮಹರ್ಷಿಗಳೂ ಬಂದು ಆಕಾಶದಲ್ಲಿ ಕೂಡಿ ತಮ್ಮ ತಮ್ಮ ವಿಮಾನ ಗಳ ಮೇಲೆ ಕುಳಿತುಕೊಂಡು ಅತ್ಯಾದರದಿಂದ ನೋಡುತ್ತಿದ್ದರು ಆಗ ರಾವಣನ ತೇರಿನ ಕುದುರೆಗಳು ರಾಮನ ಎದುರಿನಲ್ಲಿ ನಿಂತು ನಲಿದಾಡುತ್ತಿರುವುದನ್ನೂ ರಾಮನು ರಥಹೀನನಾಗಿ ನೆಲದ ಮೇಲೆ ನಿಂತಿರುವುದನ್ನೂ ನೋಡಿ ಲಕ್ಷ್ಮಣನು ಅಸಹ್ಯಭಾವವು ಳ್ಳವನಾಗಿ—ಈ ಪಾಪಿಯಾದ ರಾವಣನ ರಥವನ್ನು ಹೊಡೆದು ಚೂರುಚೂರು ಮಾಡಿಬಿಡುವೆನೆಂದು ಧನುಸ್ಸಿನಲ್ಲಿ ಬಾಣವನ್ನು ತೊಟ್ಟನು. ಮತ್ತು ಆಗ ತಾನೇ ಮೂರ್ಛೆ ತಿಳಿದೆದ್ದು ಬಂದಿದ್ದ ಆಂಜನೇಯನು ಮಹಾ ಕೋಪತಾಪಿತ ಹೃದಯ

ನಾಗಿ—ಈ ವಂಚಕನ ತೇರನ್ನು ಹೊಯ್ದು ನುಚ್ಚುನುರಿಯಾಗಿ ಮಾಡಿಬಿಡುವೆನೆಂದು ಮುಷ್ಟಿಯನ್ನೆತ್ತಿದನು. ಶ್ರೀರಾಮಚಂದ್ರನು ಲಕ್ಷ್ಮಣಾಂಜನೇಯರ ಉದ್ಯೋಗವನ್ನು ನೋಡಿ—ಸಾಕು! ಸಾಕು! ಅನುಚಿತಕಾರ್ಯದಲ್ಲಿ ಉದ್ಭ್ರಮಿಸಬೇಡಿರಿ. ಪರರ ಉನ್ನತಿಯನ್ನು ನೋಡಿ ಅಸೂಯೆಪಡತಕ್ಕದು ಉತ್ತಮರಿಗೆ ಭೂಷಣವಲ್ಲ. ಇಂಥ ಹೆಚ್ಚು ಕಡಮೆಗಳನ್ನು ಯೋಚಿಸುವುದರಿಂದ ಪ್ರಯೋಜನವೇನು? ಯುದ್ಧದಿಂದ ಉಂಟಾಗುವ ಜಯಾಪಜಯಗಳಲ್ಲಿ ನ್ಯೂನಾಧಿಕಾಂಶಗಳನ್ನು ನೋಡುವುದರಲ್ಲಿ ಮನಸ್ಸಿಡಿರಿ ಎಂದು ಹೇಳಿ ಅವರಿಬ್ಬರನ್ನೂ ಸಮಾಧಾನಪಡಿಸಿ ನಿಲ್ಲಿಸಿದನು.

ಅನಂತರದಲ್ಲಿ ಲೋಕಾದ್ಭುತಯುದ್ಧ ನಿರೀಕ್ಷಣಾರ್ಥವಾಗಿ ಗಗನಮಂಡಲದಲ್ಲಿ ನೆರೆದಿದ್ದ ಸುರಸಮೂಹವು ನೊಸಲುಗಳಲ್ಲಿ ಅಂಜಲಿಗಳನ್ನಿಟ್ಟುಕೊಂಡು ನಿಂತು ಸ್ವಸ್ವಾಮಿಯಾದ ಪಾಕಶಾಸನನನ್ನು ಕುರಿತು ಮೃದುಮಧುರವಾದ ಮಾತುಗಳಿಂದ–ಎಲೈ, ಸುರಕಿರೀಟಖಚಿತರತ್ನರುಚಿನೀರಾಜಿತಚರಣಯುಗಳನೇ, ನೋಡು. ಸದ್ಧರ್ಮ ಸ್ಥಾಪಕನಾದ ಶ್ರೀರಾಮನು ನೆಲದ ಮೇಲೆ ನಿಂತಿದ್ದಾನೆ. ಅವನಿಗೆ ಪ್ರತಿಭಟನೂ ನೀಚನೂ ಆದ ರಾವಣನು ರಥಾರೂಢನಾಗಿ ಮೆರೆಯುತ್ತಿದ್ದಾನೆ. ಮಹಾತ್ಮನಾದ ನೀನು ಈ ಅಸಂಗತವನ್ನು ನೋಡುತ್ತ ಸುಮ್ಮನಿರುವುದುಚಿತವೇ ಎಂದು ಬಿನ್ನವಿಸಲು; ಇಂದ್ರನು ಆ ಮಾತುಗಳಿಗೊಪ್ಪಿ ಆ ವಿಷಯವನ್ನು ಬ್ರಹ್ಮರುದ್ರರಿಗೆ ತಿಳಿಸಿ ಅವರ ಸಮ್ಮತಿಯಿಂದ ತನ್ನ ಸಾರಥಿಯಾದ ಮಾತಲಿಯನ್ನು ಕರೆದು—ಎಲೈ ಮಾತಲಿಯೇ, ನನ್ನ ರಥವನ್ನು ಸಮಸ್ತ ಯುದ್ಧ ಸಾಮಗ್ರಿಗಳೊಡನೆ ಸಿದ್ಧಮಾಡಿ ತೆಗೆದುಕೊಂಡು ಹೋಗಿ ನೃಪಚೂಡಾಮಣಿಯಾದ ರಾಮನಿಗೊಪ್ಪಿಸಿ ನೀನು ಸಾರಥ್ಯವನ್ನು ಮಾಡು, ನಡೆ! ಎಂದು ಅಪ್ಪಣೆಯನ್ನಿತ್ತನು. ಆಗ ಮಾತಲಿಯು ದಿವ್ಯರಥಕ್ಕೆ ಉತ್ತಮಾಶ್ವಗಳನ್ನು ಕಟ್ಟಿ ಯುದ್ಧೋಚಿತ ಸಾಮಗ್ರಿಗಳನ್ನು ಅದರಲ್ಲಿ ಸಿದ್ಧಮಾಡಿಟ್ಟು ಮೇಲೇರಿಕೊಂಡು ಹೊರಟು ಶೀಘ್ರವಾಗಿ ರಣಭೂಮಿಗೆ ಬಂದು ಸರೋಜದಳನಯನನಾದ ಶ್ರೀರಾಮನಿಗೆ ನಮಸ್ಕರಿಸಿ—ಎಲೈ ರಾಜೇಂದ್ರನೇ, ಇದು ದೇವೇಂದ್ರನ ರಥವು. ನಿನ್ನ ಅಡಿದಾವರೆಗಳಿಂದ ಇದನ್ನು ಅಲಂಕರಿಸಬೇಕೆಂದು ಆತನು ಇದನ್ನು ನಿನಗಾಗಿ ಕಳುಹಿಸಿರುವನು. ಅದುಕಾರಣ ಈ ರಥದ ಮೇಲೆ ಬಿಜಯಮಾಡಬೇಕೆಂದು ಬಿನ್ನವಿಸಿದನು. ಆಗ ಶ್ರೀರಾಮನು ಮಾತಲಿಯನ್ನು ಕುರಿತು—ಎಲೈ ಇಂದ್ರಸಾರಥಿಯೇ, ವನವಾಸಿಗಳಾದ ನಾವು ಇಂದಿನ ವರೆಗೂ ಯಾವ ತೇರಿನ ಬಲದಿಂದಲೂ ವಿರೋಧಿಗಳನ್ನು ಜಯಿಸಲಿಲ್ಲ. ಈಗ ಮಾತ್ರ ನಿನ್ನೊಡೆಯನ ಹಂಗು ನಮಗೇಕೆಬೇಕು? ಆತನು ಮಾಡಿದ ಈ ಉಪಕಾರದಿಂದ ನಾವು ತುಂಬಾ ಸಂತುಷ್ಟರಾಗಿರುವೆವು. ಮತ್ತು ಕೃತಜ್ಞರಾಗಿರುವೆವು. ನಾನು ಬರಿಗಾಲಿನಿಂದಲೇ ನಿಂತು ನಿನ್ನೊಡೆಯನು ಮೆಚ್ಚುವ ಹಾಗೆ ಈ ಸುರವಿರೋಧಿಯೊಡನೆ ಕಾದಿ ಗೆಲ್ಲುವೆನು. ಅದುಕಾರಣ ನೀನು ಸುರಲೋಕವನ್ನು ಕುರಿತು ತೆರಳು. ಅಲ್ಲದಿದ್ದರೆ ನನ್ನ ಪಾರ್ಶ್ವದಲ್ಲಿದ್ದುಕೊಂಡು ನಮ್ಮ ಜಗಳದ ಕ್ರಮವನ್ನೆಲ್ಲಾ ನೋಡಿಕೊಂಡು ಹೋಗಿ ಇಂದ್ರಾದಿಗಳಿಗೆ ಚೆನ್ನಾಗಿ ತಿಳಿಸು ಎಂದು ಹೇಳಿದಷ್ಟರಲ್ಲೇ ನಾರದನು ಬಂದು—ಎಲೈ ದಿನಕರಕುಲತಿಲಕನಾದ

ನೃಪನೇ, ಮನಸ್ಕರಿಸು. ಇಂದ್ರಾದ್ಯಷ್ಟದಿಕ್ಪಾಲಕರೂ ನನ್ನನ್ನು ನಿನ್ನ ಬಳಿಗೆ ಕಳುಹಿಸಿದರು. ಈಗ ನಾವು ಸಂತೋಷದಿಂದ ಕಳುಹಿಸಿರುವ ರಥದ ಮೇಲೆ ನೀನು ಕುಳಿತುಕೊಂಡು ಯುದ್ಧಮಾಡುವುದನ್ನು ನೋಡಬೇಕೆಂಬ ಕುತೂಹಲವು ನಮ್ಮೆಲ್ಲರಿಗೂ ಬಹಳವಾಗಿದೆ. ಅದುಕಾರಣ ಈ ನಮ್ಮ ಕೋರಿಕೆಯನ್ನು ಕೃಪೆಮಾಡಿ ನೆರವೇರಿಸಬೇಕೆಂದು ಪ್ರಾರ್ಥಿಸುತ್ತಾರೆ. ಸರ್ವಜ್ಞನಾದ ನೀನು ಅವರ ಪ್ರಾರ್ಥನೆಯನ್ನು ನೆರವೇರಿಸಬೇಕೆಂದು ಬಹು ವಿಧದಿಂದ ಹೇಳಲು; ಶ್ರೀರಾಮನು ಆ ಮಾತುಗಳಿಗೆ ಒಡಂಬಟ್ಟು ಇಂದ್ರನ ರಥವನ್ನೇರಿದನು.

ಆಗ ವೀರನಾದ ಆಂಜನೇಯನು ಎದ್ದು ಬೊಬ್ಬಿರಿದು ಹೋಗಿ ಆ ದಿವ್ಯ ರಥದ ಧ್ವಜದಂಡಾಗ್ರದಲ್ಲಿ ಕುಳಿತನು. ಸುರರಾಜನ ಸಾರಥಿಯಾದ ಮಾತಲಿಯು ರಾಮನ ಅಡಿದಾವರೆಗಳಿಗೆ ನಮಸ್ಕರಿಸಿ ರಥದ ಮೇಲೆ ಹತ್ತಿ ಕುದುರೆಗಳ ಕಡಿವಾಣಗಳನ್ನು ಹಿಡಿದು ಅವುಗಳ ಕುತ್ತಿಗೆಗಳ ಇಕ್ಕೆಲಗಳನ್ನೂ ತಟ್ಟಿ ವೈದಡವಿ ಎದುರಿಗಿರುವ ಹಗೆಯ ಸಾರಥಿಯನ್ನು ಮೂದಲಿಸಿ ಕುದುರೆಗಳನ್ನು ಮುಂದಕ್ಕೆ ನಡಿಸಿದನು. ಆಗ ದೇವತೆಗಳು ಸಂತೋಷದಿಂದ ಶ್ರೀರಾಮನ ಮೇಲೆ ಪೂಮಳೆಗರೆದು "ವಿಜಯೀಭವ!" ಎಂದು ಹರಸಿ ದೇವದುಂದುಭಿಗಳನ್ನು ತಾಡಿಸಿದರು. ಕೂಡಲೆ ರಾಮ ರಾವಣರ ರಥಗಳೆರಡೂ ಸಮರಾಂಗಣದಲ್ಲಿ ಎದುರೆದುರಾಗಿ ನಿಂತವು. ಆಗ ರಥಿಕರಿಬ್ಬರ ಸಿಂಹನಾದಗಳೂ ಸಾರಥಿಗಳಿಬ್ಬರ ಚಪ್ಪರಣೆಯೂ ಮಹಾ ವೀರರಾದ ರಾಮ ರಾವಣರ ಉದ್ದಂಡ ಧನುಷ್ಕಾಂಡಗಳ ಮೌರ್ವೀನಿನಾದಗಳೂ ಎರಡು ರಥಚಕ್ರಗಳ ಚೀತ್ಕಾರ ಧ್ವನಿಗಳೂ ಅವರೀರ್ವರೂ ಪ್ರಯೋಗಿಸುತ್ತಿರುವ ಬಾಣಗಳ ಭೀಂಕೃತಿ ಭೀಕರಧ್ವಾನವೂ ಒಟ್ಟಾಗಿ ಸೇರಿ ಮೊದಲು ದೇವಾಸುರರ ದೋರ್ದಂಡಾಭಿಘಾತದಿಂದ ಪ್ರಮಥಿತವಾದ ಮಹಾ ಸಮುದ್ರಸಂಭೂತವಾದ ಕೋಲಾಹಲಧ್ವನಿಗಿಂತಲೂ ಮಿಗಿಲಾಗಿ ಲೋಕತ್ರಯವನ್ನೂ ತುಂಬಿ ಕಿವುಡುಮಾಡಿತು. ಕಲಹವು ಬಲವಾಗಲು; ಆಗ ಕುಪಿತನಾದ ದಶಾನನನು ರಾಮನನ್ನು ಕುರಿತು—ಎಲೈ ರಾಮನೇ, ಕೇಳು. ನಿನಗಿನ್ನೇಕೆ ಸೀತಾಪೇಕ್ಷೆಯು? ನೀನು ಶುದ್ಧ ಮೂಢನಲಾ! ಇಂದ್ರಪ್ರೇಷಿತವಾದ ರಥದ ಬಲವನ್ನು ನಂಬಿ ಬೆರೆತಿರುವಿಯೋ? ನಾನು ಬ್ರಹ್ಮೇಂದ್ರಾದಿ ಸುರಸಂಕುಲವು ಸಮರ ಭೂಮಿಯಲ್ಲಿ ಎದುರಾದಾಗ್ಗೂ ಅವರೆಲ್ಲರನ್ನೂ ಒಂದು ತೃಣಕ್ಕಾದರೂ ಸಮಾನವಾಗಿ ಬಗೆಯುವವನಲ್ಲ. ಈ ನನ್ನ ಶೌರ್ಯಾಗ್ನಿಯಿಂದ ಕ್ಷಣಕಾಲದಲ್ಲಿ ಮೂರು ಲೋಕಗಳನ್ನೂ ಸುಟ್ಟು ಬೂದಿಮಾಡಿಬಿಡಬಲ್ಲೆನು. ನನ್ನ ಮನೋನಿಶ್ಚಯವು ಹೀಗಿರುವಲ್ಲಿ ನೀನು ದುರಾಶಾಪಾಶಬದ್ಧನಾಗಿ ವ್ಯರ್ಥಾಯಾಸದಿಂದ ಬಳಲಿ ಕೆಡುತ್ತಿರುವಿಯಲ್ಲಾ! ಅಂದನು. ಆಗ ಪಂಗ್ತಿರಥನಂದನನು—ಎಲಾ ರಣಮೂರ್ಖನಾದ ರಾವಣನೇ, ಕೇಳು. ನಿನಗಿರುವ ದುರ್ಗರ್ವವೆಂಬ ಹುಚ್ಚು ನಿನ್ನ ತಲೆಗೇರಿರುವುದು. ಸನ್ನಿಪಾತಜ್ವರಪೀಡಿತನು ತನ್ನ ಯುಕ್ತಾಯುಕ್ತವನ್ನು ಹೇಗೆ ತಿಳಿಯನೋ ಹಾಗೆ ಉನ್ಮತ್ತನಾದ ನಿನಗೆ ನಿನ್ನ ಹಿತಾಹಿತವು ತಿಳಿಯದು, ದುರಾಶಾಪಾಶಬದ್ಧನಾಗಿ ಮೃತ್ಯುದೇವತೆಗೆ ಮುಂದಲೆಯನ್ನು ಕೊಟ್ಟಿರುವವನು ನೀನು. ಲೋಕದಲ್ಲಿ

ಸ್ವಾರ್ಥಾಪೇಕ್ಷೆಗೆ ಹಾನಿಯೊಂದೇ ಮುಖ್ಯ ಲಾಭವಾಗಿರುವುದು. ಅಂಥ ನಿನಗೆ ವೃದ್ಧಿಯ ಸುದ್ದಿಯೆತ್ತಣದು ? ವೃಥಾಯಾಸಿಯು ನೀನಲ್ಲದೆ ಮತ್ತಾರಿರುವರು ? ಈ ವರೆಗೂ ನಿರಪರಾಧಿಗಳಾದ ನಿನ್ನ ಪುತ್ರ ಮಿತ್ರ ಬಾಂಧವಾದಿಗಳನ್ನೆಲ್ಲಾ ಪಾಪಿಷ್ಠನಾದ ನೀನು ಕೊಲೆಗೀಡುಮಾಡಿಸಿದಿ ! ವಜ್ರಶುಂಠನಾದ ನಿನ್ನ ಸಂಬಂಧವಿಲ್ಲದಿದ್ದರೆ ಅಪಜಯವೂ ಮರಣವೂ ಅವರನ್ನು ಮುಟ್ಟುತ್ತಿರಲಿಲ್ಲ. ಮಹಾ ಪಾಪಕರ್ಮಾಭ್ಯುದಯಿಯಾದ ನಿನ್ನ ಸಂಬಂಧಮಾತ್ರದಿಂದ ಅಪಾರ ಪ್ರಾಣಿನಾಶವುಂಟಾಗಿರಲು ; ಸಾಕ್ಷಾತ್ತಾದ ನಿನಗೆ ಉಳಿಗಾಲವುಂಟಾದರೆ ಆಗ ಒಂದು ಸೊಳ್ಳೆಯು ಮಹಾ ಸಮುದ್ರವನ್ನು ಕುಡಿದುಬಿಡುವುದು. ಒಂದು ಗುಳ್ಳೇನರಿಯು ಅಸಂಖ್ಯಾತ ಸಿಂಹಸಮೂಹವನ್ನು ಹೊಡೆದು ಕೊಂದುಬಿಡುವುದು. ಎಲೈ ಮೂಢನೇ, ಹರಕೆ ಕುರಿಯು ಹುಲ್ಮೇಯುವುದಕ್ಕೆ ಆತುರಪಡುವಂತೆ ಬಾಳುವೆನೆಂಬ ಭ್ರಮೆಯಿಂದ ಕಂಗೆಡುತ್ತಿರುವಿ? ಇನ್ನಾದರೂ ನೀನು ಸೀತೆಯನ್ನು ತಂದೊಪ್ಪಿಸಿ ಅಳಿದುಳಿದ ರಕ್ಕಸರೊಡನೆ ಪ್ರಾಣಗಳಿರುವ ವರೆಗೂ ಲಂಕೆಯಲ್ಲಿ ಸುಖವಾಗಿರು ಎಂದು ಹೇಳಲು ; ಆಗ ರಾವಣನು ರಾಮನನ್ನು ನೋಡಿ—ಎಲೈ ರಾಮನೇ, ನೀನು ಮೂಢನು. ಲೋಕದಲ್ಲಿ ರಾಕ್ಷಸಕುಲದವರು ಕ್ಷಣಿಕವಾದ ಬಾಳಿಗೆ ಮನಸ್ಸನ್ನು ಮಾರಿ ವಿಪತ್ತಿಗೆ ಹೆದರಿ ಹೆಜ್ಜೆಯನ್ನು ಹಿಂದಕ್ಕೆ ತೆಗೆವುದುಂಟೇ ! ಹಾನಿವೃದ್ಧಿಗಳೆರಡರ ಸ್ಮೃತಿಯೇ ನಮಗಿರುವುದಿಲ್ಲ. ಯಾರಿಗೂ ತಲೆವಾಗದೇ ಬಾಳಿ ಯುದ್ಧಮುಖದಲ್ಲಿ ಹೊಡೆದಾಡಿ ಮಡಿವುದೇ ನಮ್ಮ ಸನಾತನಧರ್ಮಸಾರವು. ಒಳ್ಳೆಯದಕ್ಕೆ ಮುಂದೆ ಹೋಗುವುದು ಕೆಟ್ಟದಕ್ಕೆ ಹಿಂದೆಗೆಯುವುದೂ ಪ್ಯೈಗಳ್ಳರಾದ ನಿಮ್ಮ ಧರ್ಮವು. ಇಂಥ ದುರ್ಬಲನಾದ ನೀನು ನನಗೆ ನರನೀತಿಯನ್ನು ಬೋಧಿಸಿ ಕಪಟದಿಂದ ಜಯವನ್ನು ಅಪೇಕ್ಷಿಸುತ್ತಿರುವಿಯಾ ? ಛೀ ! ಭಯಭ್ರಾಂತಮಾನಸನೇ ! ಬೇಗ ಬಾಣವನ್ನು ತೊಡು, ಪ್ರಯೋಗಿಸು ಎಂದು ಹೇಳಿದನು. ಆಗ ರಾಮನು —ಎಲಾ ರಾವಣನೇ, ನಾನು ಬ್ರಹ್ಮಾದಿ ದಿವಿಜರ ಸಹಾಯವನ್ನು ಬಯಸತಕ್ಕವನೇ ? ನನ್ನನ್ನು ಯಾರೆಂದು ತಿಳಿದಿರುವಿ ? ಹಲವು ತಲೆಗಳನ್ನು ಹೊತ್ತಿರುವ ನಿನ್ನ ಕೊರಳ್ಗಳಲ್ಲಿ ಕೂರಲಗುಗಳನ್ನು ಚಾಚಿ ಮೂಗುಗಳಿಂದ ಹೊರಡಿಸಿ ನಿನ್ನ ದೇಹವನ್ನು ಹದ್ದು ನಾಯ್ನರಿಗಳಿಗೆ ಹಂಚಿ ಸೀತೆಯನ್ನು ಪಡೆಯದೆ ಬಿಡುವೆನೇ ಎಂದು ರಾವಣನ ಮೇಲೆ ಬಾಣಪ್ರಯೋಗವನ್ನು ಮಾಡಿದನು.

ಅನಂತರ ಸ್ಥಿರವಿಕ್ರಮಯುಕ್ತನಾದ ನಿಶಾಚರ ಚಕ್ರವರ್ತಿಯು ಆ ಬಾಣಗಳನ್ನೆಲ್ಲಾ ತರಿದೊಟ್ಟಿ ಹೊಸತಾಗಿ ಸಾಣೆ ಹಿಡಿದಿದ್ದ ಕ್ರೂರ ವಿಷಮ ಬಾಣಗಳನ್ನು ಬತ್ತಳಿಕೆಯಿಂದ ತೆಗೆದು ಶರಾಸನದಲ್ಲಿ ಹೂಡಿ ಅಬ್ಬರಿಸಿ ರಾಮನನ್ನು ಹೊಡೆಯಲು ; ಆಗ ಧನುರಾಗಮಪಂಡಿತನಾದ ಶ್ರೀ ರಾಮನು ಪ್ರತಿ ಬಾಣಗಳನ್ನು ಪ್ರಯೋಗಿಸಿ ಅವುಗಳನ್ನು ನಡುದಾರಿಯಲ್ಲೇ ಕಡಿದುದುರಿಸಿ ರಾವಣನನ್ನು ಕುರಿತು—ಎಲೈ ವೀರನಾದ ರಾವಣನೇ, ಲೋಕದಲ್ಲಿ ಪರಭಾಗ್ಯಕ್ಕೆ ಕೈ ಹಾಕದೆ ಪರಸ್ತ್ರೀಯರನ್ನು ಕಾಮಿಸದೆ ಪರಹಿತವನ್ನೇ ಮಾಡುತ್ತಿರುವಂಥ ಪುರುಷನಿಗೆ ಒಂದು ವೇಳೆ ದೈವಯೋಗದಿಂದ ಕಷ್ಟಕಾರ್ಪಣ್ಯಗಳು ಬಂದಾಗ್ಯೂ ಅವುಗಳು ಪರಿಹಾರವಾಗುವುದರಲ್ಲಿ ಸಂದೇಹವಿಲ್ಲ.

ಅದು ಕಾರಣ ಅಂಥವನಿಗೆ ಜಯವು ಸಿದ್ಧಿಸುವುದು. ಪರಭಾಗ್ಯಾಪಹಾರಕನೂ ಪರ ಸಂತಾಪಸಮುತ್ಪಾದಕನೂ ಮಹಾ ದ್ರೋಹಿಯೂ ಆಗಿರುವ ನಿನ್ನಂಥವನಿಗೆ ವ್ಯರ್ಥಾ ಯಾಸವಲ್ಲದೆ ಎಂದಿಗೂ ಜಯವುಂಟಾಗಲಾರದು. ಆದರೂ ಮೂರ್ಖರಿಗೆಲ್ಲಾ ಕಲ್ಲಾ ಯ್ತನಾದ ನೀನು ಹಿತಚಿಂತಕರಾದವರ ಹಿತೋಕ್ತಿಗಳನ್ನು ಕೇಳದೆ ಅನ್ಯಾಯವಾಗಿ ನಿನ್ನ ಪುತ್ರ ಮಿತ್ರ ಬಾಂಧವಾಶ್ರಿತರನ್ನು ಕಳೆದುಕೊಂಡು ಏಕಾಂಗಿಯಾಗಿ ನಿಂತಿರುವಿ. ಈಗಲಾದರೂ ವಿವೇಕವನ್ನು ತಂದುಕೊಂಡು ನಿನ್ನ ತಮ್ಮನಾದ ವಿಭೀಷಣನಂತೆ ನಮಗೆ ಶರಣಾಗತನಾಗಿ ಸೀತೆಯನ್ನು ತಂದೊಪ್ಪಿಸಿ ವಿಭೀಷಣನೊಡನೆ ಕೂಡಿ ಲಂಕಾರಾ ಜ್ಯವನ್ನು ಎಂದಿನಂತೆ ಆಳಿಕೊಂಡಿರು. ಈ ನಮ್ಮ ಹಿತೋಕ್ತಿಗಳನ್ನು ಕೇಳದೆ ಬುದ್ಧಿ ಭ್ರಂಶತೆಯಿಂದ ಗರ್ವಿಸಿದಿಯಾದರೆ ನಿನ್ನ ತಲೆಗಳನ್ನೂ ತರಿದುರುಳಿಸಿ ನಿನ್ನ ಬಲ್ಮೆ ಯ್ಯನ್ನು ಹರಿದು ಹದ್ದು ಕಾಗೆ ನಾಯ್ನರಿಗಳಿಗೆ ಆಹಾರಾರ್ಥವಾಗಿ ಪಾಲುಮಾಡಿ ಕೊಡುವೆನು ಎಂದು ಹೇಳಿದನು. ಆಗ ಮೃತ್ಯುದೇವತೆಯ ಮನೆಗುರಿಯಂತಿರುವ ರಾವಣನು ರಾಮನನ್ನು ನಿಂದಿಸಿ ನುಡಿದನು. ಆಹಾ ! ಶ್ರೀ ರಾಮನ ಬಲಾತಿಶಯ ವನ್ನು ಬಣ್ಣಿಸುವವರಾರು ? ತತ್‌ಕ್ಷಣದಲ್ಲೇ ಅತಿ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ರಾವಣನ ಹತ್ತು ತಲೆಗಳನ್ನೂ ಕತ್ತರಿಸಿ ಆಕಾಶಕ್ಕೆ ಹಾರಿಸಿದನು. ಮಹಾ ತ್ಮನಾದ ರಾವಣನ ತಪಶ್ಶಕ್ತಿಯನ್ನು ವಿವರಿಸುವ ಬಗೆಯೆಂತು ? ಆ ಕೂಡಲೆ ಅವನ ದಶಶಿರಸ್ಸುಗಳೂ ಎಂದಿನಂತೆ ಹುಟ್ಟಿ ಬೆಳೆದು ಆರ್ಭಟಿಸಿದುವು. ಮತ್ತು ಅವನು ಅತ್ಯುಗ್ರ ಕೋಪದಿಂದ ಕೂಡಿದವನಾಗಿ ಅಸಂಖ್ಯಾತ ಮಹಾಸ್ತ್ರಗಳನ್ನು ರಾಮನ ಮೇಲೆ ಪ್ರಯೋಗಿಸಿದನು. ಆ ಅಸ್ತ್ರಗಳು ಕೌಸಲ್ಯಾನಂದನನನ್ನು ಮೂರ್ಛೆಗೊಳಿಸಿದು ದಲ್ಲದೆ ಬ್ರಹ್ಮಾಂಡಮಂಡಲವನ್ನೆಲ್ಲಾ ತುಂಬಿ ಜೀವಿಜಾಲವನ್ನು ಭಯಸಾಗರದಲ್ಲಿ ಮುಳುಗಿಸಿ ಕಡೆಗೆ ದೇವಲೋಕಕ್ಕೆ ಹೋಗಿ ಇಂದ್ರಾದಿ ದೇವತೆಗಳ ಒಡಲುಗಳಲ್ಲಿ ಹೊಕ್ಕು ನೋಯಿಸಿ ಮೈ ಮರೆಸಿದುವು.

ಅನಂತರದಲ್ಲಿ ಶೈತ್ಯೋಪಚಾರಗಳಿಂದ ತಿಳಿವನ್ನು ಹೊಂದಿ ಮೇಲೆದ್ದ ಶ್ರೀರಾ ಮನನ್ನು ಕುರಿತು ಮಾತಲಿಯು—ಎಲೈ ಶ್ರೀ ರಾಮನೇ, ಈ ಖಳನು ಬಲು ಬಲ್ಲಿ ದನು. ಕ್ರೂರರ ಕುಲನಾಯಕನು. ಮೂಢರ ಮನೆಯ ಗುರುವು. ದುಷ್ಟರ ಗರು ಡಿಯ ಆಚಾರ್ಯನು. ಪಾಪಿಷ್ಠರ ಪರಮಮಿತ್ರನು. ದ್ರೋಹ ಕರ್ಮದೀಕ್ಷಿತನು. ಆದುದರಿಂದ ಇವನ ಮಹಾಸ್ತ್ರಗಳ ಪೆಟ್ಟನ್ನು ತಾಳುವುದು ಅಸಾಧ್ಯವು. ಇನಕುಲ ದರಸರಿಗೆ ಯುದ್ಧರಂಗದಲ್ಲಿ ಆಲಸ್ಯವು ಸಲ್ಲದು. ಅದುಕಾರಣ ಶೀಘ್ರವಾಗಿ ಮಹಾ ಸ್ತ್ರಗಳನ್ನು ತೊಡು. ಪ್ರಯೋಗಿಸು. ಖಳನ ಮಸ್ತಕಗಳ ಸರಿಸದಲ್ಲಿ ಕೂರಲಗುಗಳಾ ಡುತ್ತಿರಲಿ. ಕೈಗುಂದಬೇಡವೆಂದು ಹೇಳಿ ತೇರಿನ ತೇಜಿಗಳನ್ನು ಮುಂದಕ್ಕೆ ನೂಕಿ ದನು. ಮಾತಲಿಯ ಮಾತುಗಳು ಕಿವಿಗಳಿಗೆ ಬೀಳುವುದಕ್ಕೆ ಮುಂಚಿತವಾಗಿಯೇ ತೀವ್ರಗತಿಪ್ರಯುಕ್ತಗಳಾದ ರಾಮನ ಬಾಣಗಳು ರಾವಣನ ತಲೆಗಳನ್ನು ಕಡಿದು ಹಾರಿಸುತ್ತಿದ್ದುವು. ಆ ತಲೆಗಳು ರಣದೇವತೆಯು ಆಡುತ್ತಿರುವ ಚಂಡುಗಳೋ ಎಂಬಂತೆ ಪ್ರಕಾಶಿಸುತ್ತಿದ್ದುವು. ಹೀಗೆ ಶ್ರೀ ರಾಮನು ನೂರಾರುಸಾರಿ ರಾವಣನ ತಲೆ ಗಳನ್ನು ತರಿದಿಕ್ಕುತ್ತಿದ್ದರೂ ಅವನ ತಲೆಗಳು ಮತ್ತೆ ಮತ್ತೆ ಬೆಳೆದು ಬೊಬ್ಬಿರಿಯುತ್ತಿ

ದ್ದುವು. ಆಗ ಶ್ರೀರಾಮನು ಆ ಆಶ್ಚರ್ಯಸ್ಥಿತಿಯನ್ನು ನೋಡಿ ಅಲಘುಪ್ರಯತ್ನ ದಿಂದ ಬ್ರಹ್ಮನನ್ನು ಮೆಚ್ಚಿಸಿ ತ್ರಿಲೋಕದುರ್ಲಭವಾದ ವರವನ್ನು ಪಡೆದವನಾದ ರಾವಣನ ತಪೋಮಹಿಮೆಗೆ ಮೆಚ್ಚಿ ಆಶ್ಚರ್ಯಮಯಮನಸ್ಕನಾಗಿ—ವೃಥಾಯಾಸ ದಿಂದೇನು ಪ್ರಯೋಜನವು? ಇನ್ನು ಮೇಲೆ ಈ ಯುದ್ಧವು ಸಾಕು. ಲಂಕಾನಾಯಕನ ಆಯುಷ್ಯಕ್ಕೆ ಎಂದಿಗೂ ಅವಸಾನವಿಲ್ಲ. ಅದುಕಾರಣ ಇವನೊಡನೆ ಯುದ್ಧಕ್ಕೆ ಅವಸಾನವನ್ನು ನಾನೇ ಮಾಡುವೆನು ಎಂದು ಧನುರ್ಬಾಣಗಳನ್ನು ರಥದಲ್ಲಿರಿಸಿ ತಾನು ಧ್ವಜಸ್ತಂಭವನ್ನು ಒರಗಿ ಕೂತುಕೊಂಡು ವ್ಯಸನದಿಂದ ಬಳಲಿ—ಪೂತುರೇ! ರಾವಣಾ, ಮಜಭಾಪು! ಎನ್ನುತ್ತ ಬೆರಗಾಗಿದ್ದನು.

ತತ್‌ಕ್ಷಣದಲ್ಲೇ ಅಗಸ್ತ್ಯ ಮಹಾಮುನಿಯು ರಾಮನ ಬಳಿಗೆ ಬಂದು ಅವನಿಗೆ ಆದಿತ್ಯ ಹೃದಯವೆಂಬ ಮಹಾಮಂತ್ರವನ್ನು ಉಪದೇಶಿಸಿ—ನೀನು ಪ್ರಯೋಗಿಸುವ ಬಾಣದ ಆದಿಮಧ್ಯಾಂತಸ್ಥಾನಗಳಲ್ಲಿ ತ್ರಿಮೂರ್ತಿಗಳನ್ನು ನೆಲೆಗೊಳಿಸಿ ಈ ಅಮರವಿ ರೋಧಿಯ ವಕ್ಷಸ್ಥಳಕ್ಕೆ ಪ್ರಯೋಗಿಸು ಎಂದು ಹೇಳಿ ಹೊರಟುಹೋದನು. ಆ ಮೇಲೆ ಶ್ರೀ ರಾಮನೆದ್ದು ಬಿಲ್ಲಿನಲ್ಲಿ ದಿವ್ಯಮಾರ್ಗಣವನ್ನು ಹೂಡಿ ಅದರಲ್ಲಿ ಹರಿಹರ ಹಿರಣ್ಯಗ ರ್ಭರನ್ನು ಮಂತ್ರದಿಂದ ಪ್ರತಿಷ್ಠಿಸಿ ರಾವಣನೆದೆಗೆ ಗುರಿಗಟ್ಟಿ ಹೊಡೆದನು. ಆಗ ರಾವ ಣನು ಕಂಗೆಡದೆ ತನ್ನ ಮೇಲೆ ಬರುತ್ತಿರುವ ದಿವ್ಯಾಸ್ತ್ರವನ್ನು ಅನೇಕ ಮಂತ್ರಾಸ್ತ್ರಗಳಿಂದ ಹೊಡೆದನು. ಸೂರ್ಯಚಂದ್ರರನ್ನು ಹಿಡಿದು ನುಂಗುವ ರಾಹುವನ್ನು ನಕ್ಷತ್ರಗಳು ತಡೆದು ನಿಲ್ಲಿಸಬಲ್ಲುವೇ? ರಾಮಬಾಣಗಳು ರಾವಣನ ಮಹಾಸ್ತ್ರಗಳನ್ನೆಲ್ಲಾ ತರಿದೊ ಟ್ಟುತ್ತ ಮಹಾವೇಗದಿಂದ ಬಂದು ಅವನ ವಕ್ಷಸ್ಸ್ಥಳವನ್ನು ಹೊಕ್ಕು ಬೆನ್ನಿನಲ್ಲಿ ಹಾಯಲು; ಆಗ ರಾವಣನು ಕೆಳಗೆ ಬಿದ್ದನು. ಕೂಡಲೆ ಅವನ ಪ್ರಾಣಗಳು ದೇಹ ವನ್ನು ಬಿಟ್ಟು ಹೊರಟುಹೋದುವು. ಆಗ ಸುರಲೋಕದಲ್ಲಿ ಸಂತೋಷಸೂಚಕವಾದ ಧ್ವನಿಗಳೂ ದುಂದುಭ್ಯಾದಿ ವಾದ್ಯಧ್ವಾನಗಳೂ ಕೂಡಿ ಜಗತ್ತೆಲ್ಲವೂ ಶಬ್ದಮಯವಾ ಗಿದ್ದಿತು. ರಾಮನ ಮೇಲೆ ಪೂಮಳೆಯು ಸುರಿದಿತು. ಸೂರ್ಯನು ಲೋಕಾನಂದಕರ ವಾದ ತನ್ನ ತೇಜಸ್ಸಿನಿಂದ ಬೆಳಗಿದನು. ಶೈತ್ಯಸೌರಭ್ಯಮಾಂದ್ಯಗಣಯುಕ್ತವಾದ ವಾಯುವು ಬೀಸಿತು. ದಿಕ್ಪಾಲಕರೆಲ್ಲರೂ ತಮ್ಮ ತಮ್ಮ ಸ್ಥಾನಗಳಲ್ಲಿ ನಂಬಿಕೆಯನ್ನಿ ಟ್ಟರು. ದೇವವಾರಂಗನೆಯರೆಲ್ಲಾ ನಲಿದು ನರ್ತಿಸಿದರು. ದೇವಸ್ತ್ರೀಪುರುಷಯುಗ್ಮದ ಅನುರಾಗಲತೆಯು ಕುಡಿಯೊಡೆದಿತು. ಮಹಾತ್ಮರ ಹೃದಯದಲ್ಲಿ ವಿಕಾಸಭಾವ ವುಂಟಾಯಿತು. ವಿಶೇಷ ವಿಷಯಗಳನ್ನು ಹೇಳವುದೇಕೆ? ಲೋಕತ್ರಯ ಜೀವಿಜಾಲದ ಹೃದಯದಲ್ಲಿ ಸಮಾಧಾನವು ಹುಟ್ಟಿತು. ವಿಭೀಷಣನು ಶೂರಸೋದರಮೃತಿವ್ಯಸನದಿಂದ ಕಂಗೆಟ್ಟವನಾಗಿ ಕಣ್ಣೀರುಗಳನ್ನು ಸುರಿಸಿದನು. ಲೋಕದಲ್ಲಿ ಭ್ರಾತೃವಾದವನು ಎಂಥ ದುರ್ಮಾರ್ಗಿಯಾಗಿದ್ದರೂ ವಿರೋಧಿಯಾಗಿದ್ದರೂ ಅವನು ರಕ್ತಸಂಬಂಧಿಯಾ ದುದರಿಂದ ಅವನ ವಿನಾಶವು ಮಹಾ ಪರಿತಾಪ ದುಃಖಗಳನ್ನು ಕೊಡದೆ ಬಿಡುವು ದಿಲ್ಲ. ಇಂಥ ಅಪ್ರತಿಮಮಲ್ಲನಾದ ರಾವಣನ ಮೃತಿವಾರ್ತೆಯನ್ನು ಕೇಳಿ ಅವನ ಪಟ್ಟದರಸಿಯಾದ ಮಂಡೋದರಿಯು ವಾಚಾತೀತಸಂತಾಪ ದುಃಖಗಳಿಂದ ಪೀಡಿತ

ಳಾಗಿ ಬಿದ್ದು ಮೂರ್ಛೆಹೊಂದಿ ಹಿತೋಪಚಾರಗಳಿಂದೆದ್ದು ಕುಳಿತು ನಿಜಪತಿಯಾದ ರಾವಣನ ಲೋಕೋತ್ತರ ಶೌರ್ಯ ಧೈರ್ಯ ಪರಾಕ್ರಮಗಳನ್ನು ನೆನೆ ನೆನೆದು ಹಂಬಲಿಸಿ ರೋದಿಸಿ ಬಾಯಾರಿ ಕಂಗೆಟ್ಟು ಸರ್ವಾಂತಃಪುರಸ್ತ್ರೀಯರೊಡನೆ ಹೊರಟು ರಣಭೂಮಿಗೆ ಬಂದು ರಾವಣನ ಹೆಣದ ಮೇಲೆ ಬಿದ್ದು ಹೊರಳುತ್ತ ಕಲ್ಮರಗಳು ಕರಗುವಂತೆ ಕೊರಗಿ ಮೊರೆಯಿಡುತ್ತ—ಹಾ! ಕಾಂತನೇ, ಮಡಿದಿಯಾ! ವೀರಪತ್ನಿಯೆಂಬ ಬಿರುದು ನಿನಗಿಂದು ಹೋಯಿತೇ? ಅಂತಃಪುರಸ್ತ್ರೀಯಾದ ನನ್ನನ್ನು ತಿರಸ್ಕರಿಸಿ ವೀರಲಕ್ಷ್ಮಿಯನ್ನು ವರಿಸಿದಿಯಾ? ಸರ್ವಕಾಲದಲ್ಲೂ ಸರ್ವಾವಸ್ಥೆಗಳಲ್ಲೂ ನಿನ್ನ ನೆನಹನ್ನು ಬಿಟ್ಟರಿಯದ ನನ್ನಲ್ಲಿ ಅಪರಾಧವೇನಿರುವುದು? ಅಜ್ಞಾನಿಯಾದ ನನಗೆ ವಿವೇಕವನ್ನು ಬೋಧಿಸುವುದು ಸರ್ವಜ್ಞನಾದ ನಿನಗೆ ಧರ್ಮವಲ್ಲವೇ? ಸತ್ಯಪೂರ್ವಕವಾಗಿ ಮಹಾತ್ಮನಾದ ನಿನ್ನ ಕೈ ಹಿಡಿದು ಬಾಳುತ್ತಿದ್ದ ನನ್ನನ್ನು ಬಿಟ್ಟು ಪರಲೋಕವಾಸಿಯಾಗುವುದು ನಿನ್ನಂಥವರಿಗೆ ವಿಹಿತವೇ? ನಿಷ್ಕಾರಣವಾಗಿ ನನ್ನನ್ನು ಅನಾಥೆಯನ್ನು ಮಾಡಬಹುದೇ? ಅವಲಂಬನವೃಕ್ಷವಿಲ್ಲದ ಬಳ್ಳಿಯಂತಾದೆನಲ್ಲಾ? ಎಂದು ವಿವಿಧವಾಗಿ ನಿಜವಲ್ಲಭನ ಗುಣಾವಳಿಗಳನ್ನು ಹೊಗಳಿಕೊಂಡು ಮೂರ್ಛೆಹೊಂದುತ್ತ ಎಚ್ಚೇಳುತ್ತ ದುಃಖಿಸುತ್ತ ಸಂಕಟಪಡುತ್ತಿದ್ದಳು.

ಅನಂತರದಲ್ಲಿ ಲೋಕಮಾನ್ಯಯಶಸ್ಕನಾದ ಶ್ರೀರಾಮನು ವಿಭೀಷಣನನ್ನು ನೋಡಿ—ಎಲೈ ರಾಕ್ಷಸರಾಜೇಂದ್ರನೇ, ವಿಧಿಯ ನಿಯಮವನ್ನು ಮೀರಿ ನಡೆವುದಕ್ಕೆ ಯಾರಿಂದಲೂ ಆಗದು. ನೀನು ಹೋಗಿ ಜಗದೇಕವೀರನಾದ ರಾವಣನ ಪಟ್ಟಮಹಿಷಿಯೂ ಮಹಾ ಪತಿವ್ರತೆಯೂ ಆದ ಮಂಡೋದರಿಯನ್ನು ಮೃದುಮಧುರವಚನಗಳಿಂದ ಸಮಾಧಾನಪಡಿಸಿ ನಿನ್ನಣ್ಣನಾದ ರಾವಣನೇ ಮೊದಲಾದವರಿಗೆ ಉತ್ತರಕ್ರಿಯಾದಿಗಳನ್ನು ನೆರವೇರಿಸು ಎಂದು ಅಪ್ಪಣೆಯನ್ನು ಕೊಡಲು; ಆಗ ವಿಭೀಷಣನು ಶ್ರೀ ರಾಮನನ್ನು ಕುರಿತು—ಜೀಯಾ, ಜಗತ್ಪೂಜ್ಯನೇ, ನನ್ನ ಬಿನ್ನಪವನ್ನು ಲಾಲಿಸಬೇಕು. ಮೊದಲು ಕುಬೇರನು ಈ ರಾವಣನನ್ನು ಕುರಿತು—ನೀನು ಬ್ರಹ್ಮವಂಶಸಂಭೂತನಾಗಿರುವುದರಿಂದ ದುರ್ಮಾರ್ಗಿಯಾಗಿರದೆ ಸುಮಾರ್ಗದಲ್ಲಿ ನಡೆ ಎಂದು ಹಿತವಾದವನ್ನು ತಿಳಿಸಿದುದಕ್ಕೆ ಆಗ್ರಹೋದಗ್ರನಾಗಿ ಹೋಗಿ ತನಗಣ್ಣನಾದ ಕುಬೇರನೊಡನೆ ಕಠಿಣವಾಗಿ ಯುದ್ಧಮಾಡಿ ಆತನ ಪುಷ್ಪಕವಿಮಾನವನ್ನು ಕಿತ್ತುಕೊಂಡು ಭ್ರಾತೃದ್ರೋಹವನ್ನು ಸಂಪಾದಿಸಿಕೊಂಡನು ಅದಲ್ಲದೆ ಇಂದ್ರಾದಿ ದೇವತೆಗಳಿಗೆ ನಿಷ್ಕಾರಣವಾಗಿ ನಾನಾವಿಧವಾದ ಹಿಂಸೆಗಳನ್ನುಂಟುಮಾಡಿ ದೇವದ್ರೋಹಿಯಾದನು. ಮತ್ತು ಜ್ಞಾನನಿಷ್ಠರಾಗಿ ತಪೋವನದಲ್ಲಿ ಇತರರಿಗೆ ತೊಂದರೆಯಿಲ್ಲದಂತೆ ತಪಸ್ಸುಮಾಡಿಕೊಂಡಿದ್ದ ಮುನಿಗಳ ಯಜ್ಞಾದಿ ಸತ್ಕರ್ಮಗಳನ್ನು ಭಂಗಪಡಿಸಿ ಬ್ರಹ್ಮದ್ರೋಹಕ್ಕೆ ಪಾತ್ರನಾದನು. ಜಗದೇಕವೀರನಾದ ರಾಜನೂ ಧರ್ಮಸಂಸ್ಥಾಪಕನೂ ಆದ ನಿನ್ನಡಿದಾವರೆಗಳಿಗೆ ಅಪರಾಧವನ್ನು ಮಾಡಿ ರಾಜದ್ರೋಹಕ್ಕೆ ಗುರಿಯಾದನು. ಮತ್ತು ನಾನು ಇವನನ್ನು ಕುರಿತು—ಇಂಥ ದುರಾಲೋಚನೆಗಳನ್ನೂ ದುಷ್ಕೃತ್ಯಗಳನ್ನೂ ಮಾಡಿ ಕೆಡಬೇಡವೆಂದು ಹಿತವಚನಗಳನ್ನು ಹೇಳಿದುದಕ್ಕೆ ನಿರಪರಾಧಿಯಾದ

ನನ್ನನ್ನು ಅವಾಚ್ಯವಚನಗಳಿಂದ ಬೈಯ್ದುದಲ್ಲದೆ ಚಾವಡಿಯಿಂದ ನೂಕಿಸಿಬಿಟ್ಟನು. ಇಂಥ ಪತಿತನು ನನಗೆ ಅಣ್ಣನೂ ಅಲ್ಲ. ನಾನು ಆತನಿಗೆ ತಮ್ಮನೂ ಅಲ್ಲ. ಗರ್ವಾಂಧನಾದವನು ಗುರುವಾದರೂ ಪರಿತ್ಯಾಗಕ್ಕೆ ಯೋಗ್ಯನೆಂದು ಶಾಸ್ತ್ರವಚನವಿರುವುದು. ತನ್ನಲ್ಲಿ ಹುಟ್ಟಿ ತನ್ನನ್ನು ಬಾಧೆಗೊಳಿಸುತ್ತಿರುವ ವ್ಯಾಧಿಯು ಅರಣ್ಯಸಂಭೂತಗಳಾದ ಮೂಲಿಕೆಗಳಿಂದ ನಾಶವನ್ನು ಹೊಂದುವಂತೆ ಇವನು ನನ್ನೊಡನೆ ಹುಟ್ಟಿದವನಾದಾಗ್ಯೂ ತನ್ನ ದುಷ್ಕೃತ್ಯಗಳಿಂದ ತಾನೇ ನಾಶವಾದನು. ಆದುದರಿಂದ ನನ್ನ ಮತ್ತು ಸರ್ವ ಜಗತ್ತಿನ ಮಾನಸಿಕವಾದ ರೋಗವು ಪರಿಹಾರವಾದಂತಾಯಿತು. ನನಗೂ ಮೂರ್ಖನಾದ ಇವನಿಗೂ ಸಂಬಂಧವೇನೂ ಇರುವುದಿಲ್ಲ. ನಾನು ಇವನಿಗೆ ಪ್ರೇತಕಾರ್ಯವನ್ನು ಮಾಡುವುದಿಲ್ಲ ಎಂದು ರಾಮನು ಮೆಚ್ಚುವಂತೆ ನೀತಿಯನ್ನು ಹೇಳಿದನು.

ಆಗ ಸರ್ವಪ್ರಾಣಿದಯಾಕರನಾದ ಶ್ರೀರಾಮನು ಆ ಮಾತುಗಳನ್ನು ಕೇಳಿ ವಿಭೀಷಣನನ್ನು ಕುರಿತು—ಎಲೈ ನೀತಿಪರಾಯಣನಾದ ವಿಭೀಷಣನೇ, ಜಗತ್ತಿನಲ್ಲಿ ನೀನು ತಿಳಿಯದ ಧರ್ಮರಹಸ್ಯಗಳು ಒಂದೂ ಇಲ್ಲವು. ಲೋಕದಲ್ಲಿ ಹಗೆತನಕ್ಕೆ ಮರಣವೇ ಅಂತ್ಯವೆಂದು ಧರ್ಮಜ್ಞರು ಬೋಧಿಸುವರು. ಮಹಾತ್ಮನಾದ ಈ ರಾವಣನು ಸಕಲ ವೇದಶಾಸ್ತ್ರಗಳನ್ನೂ ಓದಿದವನು. ಮತ್ತು ಸಕಲ ರಾಜನೀತಿಗಳನ್ನೂ ತಿಳಿದವನು. ಲೋಕದಲ್ಲಿ ಶೂರರಾದವರಿಗೆ ಸುರಾಸುರನರೋರಗಪುರುಷರನ್ನೆಲ್ಲಾ ಯುದ್ಧರಂಗದಲ್ಲಿ ಜಯಿಸಿ ಅಪ್ರತಿಹತವಾದ ಕೀರ್ತಿಯನ್ನು ಸಂಪಾದಿಸುವುದು ನ್ಯಾಯವಲ್ಲದೆ ಅನ್ಯಾಯವಲ್ಲ. ಜಗದುತ್ಪತ್ತಿಕಾಲದಿಂದಲೂ ಸುರಾಸುರರಿಗೆ ಗಜಸಿಂಹಗಳಂತೆಯೂ ಗರುಡೋರಗಗಳಂತೆಯೂ ಗೋವ್ಯಾಘ್ರಗಳಂತೆಯೂ ಹಗೆತನವು ಪ್ರಸಿದ್ಧವಾಗಿರುವುದು. ಆದುದರಿಂದ ಈ ರಾಕ್ಷಸರಾಜನಾದ ದಶಕಂಠನು ದೇವತೆಗಳನ್ನು ಜಯಿಸಿದುದು ತಪ್ಪೆಂದು ಹೇಳುವುದಕ್ಕಾಗುವುದಿಲ್ಲ. ಮುನಿಜನಗಳು ಮಾಡುವ ಯಜ್ಞಗಳ ಆಹುತಿಯಿಂದ ವೈರಿಗಳಾದ ದೇವತೆಗಳಿಗೆ ಆಹಾರವುಂಟಾಗುತ್ತಿದ್ದುದರಿಂದ ಯಜ್ಞಾದಿಗಳನ್ನು ಭಂಗಪಡಿಸಿದನು. ನಾವು ಇವನ ತಂಗಿಯಾದ ಶೂರ್ಪನಖಿಯ ಕಿವಿ ಮೂಗುಗಳನ್ನು ಕೊಯ್ದು ಮೊದಲಿವನನ್ನು ಅಪಮಾನಪಡಿಸಿದುದರಿಂದ ಅದಕ್ಕೆ ಬದಲಾಗಿ ವೀರನಾದ ಇವನು ನಮಗೆ ಅಪಮಾನಮಾಡಿದನು. ಯೋಚಿಸಿ ನೋಡಿದರೆ ಇವನಲ್ಲೇನೂ ತಪ್ಪು ಕಂಡುಬರುವುದಿಲ್ಲ. ಬುದ್ಧಿಶಾಲಿಯಾದ ನಿನಗೆ ನಾನು ವಿಶೇಷವಾಗಿ ಹೇಳತಕ್ಕುದೇನು ಎಂದು ಹೇಳಿದನು.

ಅನಂತರದಲ್ಲಿ ವಿಭೀಷಣನು ರಾಮಚಂದ್ರನ ಅಪ್ಪಣೆಯನ್ನು ತಲೆಯಲ್ಲಿ ಆಂತು ಅಣ್ಣನಾದ ರಾವಣನ ಶವದ ಬಳಿಗೆ ಬಂದು ನೋಡಿ ಕೊನೆಮೊದಲಿಲ್ಲದ ದುಃಖದಿಂದ ಅದರ ಮೇಲೆ ಬಿದ್ದು ಹೊರಳಿ—ಎಲೈ ಮಹಾತ್ಮನಾದ ಅಣ್ಣನೇ, ಹೀಗಾಗುವುದೆಂಬುದನ್ನು ನಾನು ಮೊದಲೇ ತಿಳಿದು ಹೇಳಿದಂಥ ಹಿತೋಕ್ತಿಗಳು ಸಾಯುವವನಿಗೆ ವೈದ್ಯರು ಕೊಟ್ಟ ಮದ್ದುಗಳು ವಿಷವಾಗಿ ತೋರುವಂತೆ ನಿನಗೆ ರುಚಿಸಲಿಲ್ಲವು. ಪಾಪಿಯಾದ ನಾನು ನಿನ್ನ ವಿಯೋಗವನ್ನು ಹೇಗೆ ಸಹಿಸಲಿ! ಈ ದುರವಸ್ಥೆಯಲ್ಲಿರುವ ನಿನ್ನನ್ನು ನೋಡುತ್ತಿರುವ ನನ್ನ ಕಣ್ಣುಗಳಿಗೆ ಮಣ್ಣು ಬೀಳಲೊಲ್ಲದಲ್ಲಾ! ಪುಣ್ಯಶೀಲನಾದ

ನೀನು ಪ್ರಸಿದ್ಧನಾಗಿ ರಣರಂಗದಲ್ಲಿ ಯುದ್ಧಮಾಡಿ ದೇಹವನ್ನು ಬಿಟ್ಟು ಹೊರಟು ಪರಲೋಕವಾಸಿಯಾದಿ ? ಈ ಮಹಾ ದುಃಖಪರಂಪರೆಯನ್ನು ಅನುಭವಿಸುವುದಕ್ಕಾಗಿ ಪಾಪಿಷ್ಠನಾದ ನಾನು ಮಾತ್ರ ಉಳಿದೆನು ಎಂದು ಅನೇಕ ವಿಧವಾಗಿ ಹಂಬಲಿಸಿ ದುಃಖಿಸಿ ಮೈಮರೆತು ಮೈತಿಳಿದೆದ್ದು ಕುಳಿತು—ದೈವಯತ್ನವನ್ನು ಮೀರುವವ ರಾರು ? ಎಂದು ನಿರ್ಧರಿಸಿ ಮಂಡೋದರಿಯೇ ಮೊದಲಾದ ಅಂತಃಪುರ ಸ್ತ್ರೀಜನರನ್ನು ಬಹುವಿಧ ವಿವೇಕವಚನಗಳನ್ನು ಹೇಳಿ ಸಮಾಧಾನಪಡಿಸಿ ವೀರಕುಲತಿಲಕನಾದ ರಾವಣನ ಶವವನ್ನು ಪಾಲಕಿಯಲ್ಲಿಟ್ಟುಕೊಂಡು ವಿವಿಧ ವಾದ್ಯಗಳೊಡನೆ ಕೂಡಿ ಮಸಣಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಮೃತದೇಹೋಚಿತಸಂಸ್ಕಾರಕೃತ್ಯಗಳನ್ನು ವಿಧಿವತ್ತಾಗಿ ಮಾಡಿ ತಿಲತರ್ಪಣವನ್ನು ಕೊಟ್ಟು ಅನಂತರದಲ್ಲಿ ಯುದ್ಧರಂಗದಲ್ಲಿ ಸತ್ತಿದ್ದ ಭ್ರಾತೃಪುತ್ರಮಿತ್ರಬಾಂಧವಾದಿಗಳಿಗೆಲ್ಲಾ ವಿಧಿವತ್ಕರ್ಮಪೂರ್ವಕವಾಗಿ ತರ್ಪಣೋದಕವನ್ನು ಕೊಟ್ಟು ಮಂಡೋದರ್ಯಾದಿ ಮಾನಿನೀ ಜನರನ್ನು ಅಂತಃಪುರಕ್ಕೆ ಕಳುಹಿಸಿ ತಾನು ಸ್ನಾನವನ್ನು ಮಾಡಿ ಶುಚಿರ್ಭೂತನಾಗಿ ಪಾಳಯದಲ್ಲಿ ಸುಗ್ರೀವಾದಿ ಕಪಿಸೇನಾಸಮೇತನಾಗಿ ಕುಳಿತಿರುವ ಶ್ರೀರಾಮನ ಸನ್ನಿಧಿಗೆ ಬಂದು ಸಾಷ್ಟಾಂಗ ಪ್ರಣತನಾಗಿ ಎದ್ದು ನಿಂತುಕೊಂಡಿದ್ದನು. ಆಗ ಶ್ರೀರಾಮನು ಸುಗ್ರೀವನನ್ನು ನೋಡಿ—ಎಲೈ ಕಪಿಚಕ್ರವರ್ತಿಯೇ, ನೀನು ಈ ಲಕ್ಷ್ಮಣನನ್ನು ಕರೆದುಕೊಂಡು ಕಪಿಬಲಸಮೇತನಾಗಿ ವಿಭೀಷಣನೊಡನೆ ಲಂಕಾನಗರಕ್ಕೆ ಹೋಗಿ ದಿವ್ಯವಾದ ರಾವಣನ ಸಿಂಹಾಸನದ ಮೇಲೆ ಕುಳ್ಳಿರಿಸಿ ಲಂಕಾ ರಾಜ್ಯಾಭಿಷೇಕವನ್ನು ಮಾಡಿ ಈ ರಾಕ್ಷಸರಾಜನಾದ ವಿಭೀಷಣನು ಅಪ್ಪಣೆಯನ್ನು ಕೊಟ್ಟರೆ ಮಂಗಳಸ್ನಾನಾದಿಗಳನ್ನು ಮಾಡಿಸಿ ಸೀತೆಯನ್ನು ಕರೆದುಕೊಂಡು ಬಾ ಎಂದು ಹೇಳಿದನು. ಆಗ ಸುಗ್ರೀವನು ರಾಮಾನುಜನೊಡನೆ ಹೊರಟು ಸಮಸ್ತವಾನರ ಸೇನೆಯನ್ನು ಕರೆದುಕೊಂಡು ಲಂಕಾನಗರಕ್ಕೆ ಹೋಗಿ ವಿಭೀಷಣನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ವಿಧಿವತ್ತಾದ ಕರ್ಮಗಳಿಂದ ರಾಕ್ಷಸರಾಜ್ಯಾಭಿಷೇಕವನ್ನು ಮಾಡಿಸಿದನು. ಅನಂತರದಲ್ಲಿ ಕೃತಜ್ಞನಾದ ವಿಭೀಷಣನು ಲಕ್ಷ್ಮಣನನ್ನೂ ಸುಗ್ರೀವಾಂಗದಾದಿ ಕಪಿನಾಯಕರನ್ನೂ ಅಸದೃಶವಾದ ಸತ್ಕಾರಗಳಿಂದಲೂ ಸನ್ಮಾನಗಳಿಂದಲೂ ದಣಿಸಿದನು. ಕೂಡಲೆ ಲೋಕಮಾತೃವಾದ ಸೀತೆಯನ್ನು ಕರಿಸಿಕೊಂಡು ತನ್ನ ಪಟ್ಟಮಹಿಷಿಯಿಂದ ಆಕೆಗೆ ಮಂಗಳಸ್ನಾನಾದಿಗಳನ್ನು ಮಾಡಿಸಿ ದಿವ್ಯವಸ್ತ್ರಾಭರಣಗಳಿಂದಲಂಕರಿಸಿ ನವರತ್ನಖಚಿತವಾದ ಪಾಲಕಿಯಲ್ಲಿ ಕುಳ್ಳಿರಿಸಿಕೊಂಡು ಆ ಪಾಲಕಿಯ ಮುಂದೆಸೆಯಲ್ಲಿ ತಾನು ಬೆತ್ತದ ಕೋಲನ್ನು ಹಿಡಿದುಕೊಂಡು ಹೊರಟು ಜನಸಮುದಾಯದಲ್ಲಿ ದಾರಿಯನ್ನು ಬಿಡಿಸುತ್ತ ಕರೆದುಕೊಂಡು ಬಂದು ರಾಮನ ಸನ್ನಿಧಿಯಲ್ಲಿ ನಿಲ್ಲಿಸಿ ತಾನೂ ನಮಸ್ಕಾರವನ್ನು ಮಾಡಿ ಕೈಕಟ್ಟಿಕೊಂಡು ನಿಂತನು.

ಆಗ ಬಲು ನಾಚಿಕೆಯಿಂದ ತಲೆಯನ್ನು ಬೊಗ್ಗಿಸಿಕೊಂಡು ಭೂಮಿಯನ್ನು ಕಣ್ಣೀರುಗಳಿಂದ ನೆನೆಸುತ್ತಿರುವ ಸೀತೆಯನ್ನು ನೋಡಿ ಶ್ರೀರಾಮನು—ಎಲೈ ಜಾನಕಿಯೇ, ರಾಕ್ಷಸರು ಹೆಂಡತಿಯನ್ನು ಅಪಹರಿಸಿಕೊಂಡು ಹೋದರೆ ಕೂಡಲೆ ದುಷ್ಟ

ರಾದ ಅವರನ್ನು ವಧಿಸಿ ಪತ್ನಿಯನ್ನು ತೆಗೆದುಕೊಂಡು ಬರುವುದಕ್ಕೆ ಕೈಯಲ್ಲಿ ಹರಿಯದೆ ಬಿಟ್ಟುಬಿಟ್ಟನು ಎಂದು ಲೋಕದ ಜನರು ನನ್ನನ್ನು ಹೀಯಾಳಿಸುವರು ಎಂಬ ಯೋಚನೆಯಿಂದ ಬಂದು ನಿನ್ನನ್ನು ತೆಗೆದುಕೊಂಡು ಬಂದ ರಾವಣನನ್ನು ಅವನ ಪುತ್ರಮಿತ್ರ ಬಾಂಧವಾದಿಗಳೊಡನೆ ಕೊಂದು ನಿನ್ನನ್ನು ಸೆರೆಯಿಂದ ಬಿಡಿಸಿದೆನೇ ಹೊರತು ಪುನಃ ನಿನ್ನೊಡನೆ ಕೂಡಿ ಬಾಳಬೇಕೆಂಬ ದುರಾಲೋಚನೆಯಿಂದಲ್ಲ. ಒಂದು ಸಂವತ್ಸರದಿಂದಲೂ ದುಷ್ಟರೂ ಮೂರ್ಖರೂ ಪಾಪಕರ್ಮಾಸಕ್ತರೂ ಆದ ರಾಕ್ಷಸರ ಮನೆಯಲ್ಲಿದ್ದ ನಿನ್ನೊಡನೆ ನಾನು ತಿರಿಗಿ ಕೂಡಿ ಬದುಕಿದರೆ ಜಗತ್ತಿನ ಜನರು ಒಪ್ಪರು. ನೀನು ಭೂಮಿಯ ಮಗಳು. ಮಹಾ ಪತಿವ್ರತೆಯು. ಒಳ್ಳೆಯ ನಡತೆಯುಳ್ಳವಳು ಎಂಬುದನ್ನು ನಾನು ಚೆನ್ನಾಗಿ ಬಲ್ಲೆನು. ಆದಾಗ್ಯೂ ಲೋಕಾಪವಾದಕ್ಕೆ ಅಂಜಿ ನಡೆವುದು ಉತ್ತಮಕುಲದಲ್ಲಿ ಹುಟ್ಟಿದವರಿಗೆ ಆವಶ್ಯಕ ಧರ್ಮವು. ನಾನು ಏಕಪತ್ನೀವ್ರತಸ್ಥನಾದುದರಿಂದ ನಿನ್ನನ್ನು ಬಿಟ್ಟ ಮೇಲೆ ಮತ್ತೊಬ್ಬಳನ್ನು ಮದುವೆಯಾಗುವುದಿಲ್ಲ. ಇನ್ನುಮೇಲೆ ನಾನು ಅಯೋಧ್ಯಾನಗರಕ್ಕೆ ಹೋಗಿ ನಾನು ಬರುವುದನ್ನೇ ನಿರೀಕ್ಷಿಸುತ್ತ ಪ್ರಾಣಧಾರಣೆಯನ್ನು ಮಾಡಿಕೊಂಡಿರುವ ಭರತನನ್ನು ಸಮ್ಮತಿಪಡಿಸಿ ಆತನಿಗೆ ಪಟ್ಟಾಭಿಷೇಕವನ್ನು ಮಾಡಿ ವೃದ್ಧಳೂ ನನಗೆ ತಾಯಿಯೂ ಮತ್ತು ಪೂಜ್ಯಳೂ ಆದ ಕೌಸಲ್ಯಾದೇವಿಯನ್ನು ಸಂಗಡ ಕರೆದುಕೊಂಡು ತಪೋವನಕ್ಕೆ ಹೋಗಿ ಅಲ್ಲಿ ಪಾರಮಾರ್ಥಿಕ ಫಲಾಪೇಕ್ಷೆಯಿಂದ ದೇಹಾವಸಾನಕಾಲದ ವರೆಗೂ ತಪಸ್ಸನ್ನು ಮಾಡಿಕೊಂಡಿರುವೆನು. ನೀನು ನಿನ್ನ ತಂದೆಯಾದ ಜನಕರಾಜನ ಮನೆಗಾದರೂ ಅಥವಾ ನಿನ್ನ ಮನಸ್ಸು ಬಂದ ಇನ್ನಾವ ಕಡೆಗಾದರೂ ಹೋಗಬಹುದು ಎಂದು ಹೇಳಿ ಸುಮ್ಮನಾಗಲು ;

ಆಗ ಸೀತೆಯು ತನ್ನ ಮನಸ್ಸಿನಲ್ಲಿ—ಸರ್ವಜ್ಞನಾದ ಈ ರಾಮಚಂದ್ರನು ಸಕಲ ಜಗಜ್ಜೀವಿಜಾಲದ ಮನೋಗತಗಳನ್ನು ಚೆನ್ನಾಗಿ ಬಲ್ಲವನಾದಾಗ್ಯೂ ಅಕಳಂಕನಾದ ತಾನು ತನಗೆ ಬರುವ ಲೋಕಾಪವಾದವನ್ನು ತಪ್ಪಿಸಿಬಿಡುವುದಕ್ಕೋಸ್ಕರ ನನಗಿಂಥ ಮಾತುಗಳನ್ನು ಹೇಳುತ್ತಿರುವನು. ನಾನು ಮಹಾತ್ಮನಾದ ಈತನ ಚಿತ್ತವೃತ್ತಿಗನುಸಾರವಾಗಿ ನಡೆದು ನನ್ನ ಸತ್ಯವನ್ನು ತೋರಿಸಿಕೊಳ್ಳುವೆನೆಂದು ಯೋಚಿಸಿ, ಗಡಗಡನೆ ನಡುಗಿ ಕಣ್ಣೀರುಗಳನ್ನು ಸುರಿಸುತ್ತ ನಮಸ್ಕರಿಸಿ ಶ್ರೀರಾಮನನ್ನು ಕುರಿತು—ಎಲೈ ಪ್ರಾಣಕಾಂತನೇ, ನೀನು ಕರುಣಿಸಿ ನನ್ನ ಕೈಹಿಡಿದಂದಿನಿಂದ ಅಯೋಧ್ಯೆಯಲ್ಲಿ ದ್ವಾದಶಸಂವತ್ಸರಗಳೂ ಅರಣ್ಯದಲ್ಲಿ ಹದಿಮೂರು ಸಂವತ್ಸರಗಳೂ ನಿನ್ನ ಸೇವೆಯನ್ನು ಮಾಡಿಕೊಂಡು ನಿನ್ನೊಡನೆ ಇದ್ದೆನಷ್ಟೆ. ಈ ವರೆಗೂ ನನ್ನ ನಡತೆಯಲ್ಲಿ ಎಳ್ಳಷ್ಟಾದರೂ ತಪ್ಪನ್ನು ಕಂಡಿಯಾ? ಹಾಗೆ ಕಂಡಿದ್ದರೆ ಹೇಳು. ನಾನು ಇದುವರೆಗೂ ಲಂಕೆಯಲ್ಲಿ ಹೇಗಿದ್ದೆನೋ ಆ ಸ್ಥಿತಿಯನ್ನೆಲ್ಲಾ ಚೆನ್ನಾಗಿ ಕಂಡುಬಂದಿರುವ ನಿನ್ನ ಪ್ರಿಯ ದೂತನಾದ ಆಂಜನೇಯನು ಇದೋ! ಇಲ್ಲೇ ನಿಂತಿರುವನು. ಇವನು ಆ ವರ್ತಮಾನವನ್ನೆಲ್ಲಾ ನಿನಗೆ ಮೊದಲೇ ಹೇಳಿರಬಹುದು. ನಿನಗಿಷ್ಟವಾದರೆ ಈಗಲೂ ನನ್ನೆದುರಿಗೆ ಕೇಳು. ಸರ್ವಪ್ರಕಾರದಲ್ಲೂ ನನಗೆ ಪತಿಯಾಗಿರುವ ನೀನು

ಅಬಲೆಯಾದ ನನ್ನಲ್ಲಿ ಕರುಣೆಯನ್ನಿಡದೆ ಕಲ್ಲೆದೆಯುಳ್ಳವನಾಗಿ ಇಂಥ ನಿರ್ದಯೋಕ್ತಿಗಳೆಂಬ ಕೂರಲಗುಗಳಿಂದ ನನ್ನೆದೆಯನ್ನು ಸೀಳುವುದು ಸರ್ವಪ್ರಾಣಿಹಿತನಾದ ನಿನಗೆ ಧರ್ಮವೇ? ನನ್ನ ಪ್ರಾಣೇಶನಾದ ನೀನು ನನ್ನನ್ನು ಇಷ್ಟು ಕಠಿಣೋಕ್ತಿಗಳಿಂದ ನಿಂದಿಸಿ ನುಡಿದ ಮೇಲೆ ಕ್ಷಣಿಕವಾದ ಈ ಪ್ರಾಣಗಳೊಡನೆ ಇರಬೇಕೆಂಬ ಅಪೇಕ್ಷೆಯು ನನಗೆ ಲೇಶವಾದರೂ ಇರುವುದಿಲ್ಲ. ನಿರಪರಾಧಿನಿಯಾದ ನಾನು ನಿನ್ನ ವಾಗ್ಬಾಣಗಳಿಂದ ಹತಳಾಗಿ ಮೃತಳಾದರೆ ನಿನಗೆ ಸ್ತ್ರೀಹತ್ಯಾದೋಷವು ಸಂಭವಿಸುವುದಿಲ್ಲವೆಂದು ಬಗೆದಿರುವಿಯಾ? ಲೋಕದಲ್ಲಿ ಮಹಾತ್ಮರಾದವರಿಗೆ ಕಠಿಣಬುದ್ಧಿಯು ಉಂಟಾಗುವುದೇ ಇಲ್ಲ. ಒಂದು ವೇಳೆ ಉಂಟಾದರೆ ಅದು ಶ್ರೇಯಸ್ಸೂಚಕವೆಂದು ಹೇಳುವುದಕ್ಕೆ ಆಗವುದೇ ಇಲ್ಲ. ಅದು ಹೇಗಾದರೂ ಇರಲಿ. ಇಹದಲ್ಲೂ ಪರದಲ್ಲೂ ನನಗೆ ಗತಿದಾಯಕನೂ ಆಶ್ರಯನೂ ಆದ ನಿನ್ನ ಆಜ್ಞೆಯನ್ನು ತಿರಸ್ಕರಿಸದೆ ಇರುವುದೇ ನನ್ನ ನಿಜಧರ್ಮವು. ನಾನು ನಿನ್ನನ್ನು ಬಿಟ್ಟಿರಬೇಕೆಂಬುದೇ ನಿನ್ನ ಆಜ್ಞಾವಚನವು. ನಿನ್ನನ್ನಗಲಿದ ಮೇಲೆ ನಾನು ನನ್ನ ತಂದೆಯ ಮನೆಯಲ್ಲೂ ಇರುವುದಿಲ್ಲ. ಇನ್ನೆಲ್ಲಿಗೂ ಹೋಗುವುದಿಲ್ಲ. ನಿನ್ನ ಸನ್ನಿಧಿಯಲ್ಲೇ ಅಗ್ನಿಪ್ರವೇಶವನ್ನು ಮಾಡಿ ಈ ದೇಹವನ್ನು ಪರಿತ್ಯಜಿಸುವೆನು. ಲೋಕದಲ್ಲಿ ಸರ್ವಪ್ರಾಣಿಗಳ ಬಾಹ್ಯಾಭ್ಯಂತರವೃತ್ತಗಳನ್ನು ತಿಳಿಯುವ ದಿವಾಕರನಿಶಾಕರರೂ ವಾಯ್ವಗ್ನಿಗಳೂ ಆಕಾಶವೂ ಭೂಮಿಯೂ ನೀರೂ ಹೃದಯವೂ ಯಮನೂ ಅಹೋರಾತ್ರಿಗಳೂ ಉಭಯ ಸಂಧ್ಯೆಗಳೂ ಧರ್ಮಪುರುಷನೂ ನನ್ನ ಸರ್ವವೃತ್ತಕ್ಕೂ ಸಾಕ್ಷಿಗಳಾಗಿದ್ದಾರೆ. ಇದರಲ್ಲಿ ಯಾವ ಸಂದೇಹವೂ ಅಣುಮಾತ್ರವೂ ಇಲ್ಲವು ಎಂದು ಹೇಳಿ ಮೈದುನನಾದ ಲಕ್ಷ್ಮಣನನ್ನು ನೋಡಿ—ಎಲೈ ಲಕ್ಷ್ಮಣನೇ, ಬೇಗನೆ ಚಿತಾಗ್ನಿಯನ್ನು ಸಿದ್ಧಮಾಡಿ ಉರಿಸು ಎನ್ನಲು; ಆಗ ಲಕ್ಷ್ಮಣನು ಸಂದೇಹಯುಕ್ತನಾಗಿ ಅಣ್ಣನ ಮುಖವನ್ನು ನೋಡಲು; ಆತನು ಹಾಗೆ ಮಾಡಬಹುದೆಂದು ಅಪ್ಪಣೆಯನ್ನು ಕೊಟ್ಟನು. ಅನಂತರದಲ್ಲಿ ಲಕ್ಷ್ಮಣನು ಕ್ಷಣಮಾತ್ರದಲ್ಲಿ ದೊಡ್ಡವುಗಳಾದ ಒಣಗಿದ ಕೊರಡುಗಳನ್ನು ತರಿಸೊಟ್ಟಿ ಬೆಂಕಿಯನ್ನು ಹಾಕಿ ಹೊತ್ತಿಸಲು; ಕೂಡಲೆ ಉರಿಯು ಆಕಾಶದ ವರೆಗೂ ವ್ಯಾಪಿಸಿತು. ಆಗ ವಿಭೀಷಣ ಸುಗ್ರೀವಾದಿಗಳು ರಾಮನ ಮನಃಕಾಠಿಣ್ಯವನ್ನೂ ದೃಢನಿಶ್ಚಯವನ್ನೂ ನೋಡಿ ಬೆರಗಾಗಿ ನಿರ್ಜೀವಿಗಳಾದ ಚಿತ್ರಪುತ್ಥಳಿಗಳಂತೆ ನಿಂತಿದ್ದರು. ವಾಯುಮಾರ್ಗದಲ್ಲಿ ದೇವತೆಗಳು—ಕುಸುಮಕೋಮಲವಾದ ಶ್ರೀರಾಮನ ಮನಸ್ಸು ಈ ರೀತಿಯಾಗಿ ವಜ್ರಕಾಠಿಣ್ಯವನ್ನು ಧರಿಸಬಹುದೇ; ಅಯ್ಯೋ! ಎಂದು ಮರುಗುತ್ತಿದ್ದರು. ಮತ್ತು ದೇವೇಂದ್ರನ ಪತ್ನಿಯಾದ ಶಚೀದೇವಿಯೂ ಇನ್ನೂ ಇತರರಾದ ದೇವಸ್ತ್ರೀಸಮೂಹವೂ ಈ ಸ್ಥಿತಿಯನ್ನೆಲ್ಲಾ ನೋಡಿ ಮಹಾ ಶಂಕಾತಂಕಿತಮನಸ್ಕರಾಗಿ—ಲೋಕದಲ್ಲಿ ಪುರುಷರಿಗೆ ಸಮಾನರಾದ ಕಠಿಣಹೃದಯವುಳ್ಳವರು ಯಾರೂ ಇಲ್ಲ. ಸರ್ವಜ್ಞನೂ ಲೋಕಾಭಿರಾಮನೂ ಆದ ರಾಮಚಂದ್ರನ ಮನಸ್ಸು ಇಂಥ ಮಹಾ ಪತಿವ್ರತೆಯಾದ ಸೀತೆಯಲ್ಲಿ ಇಷ್ಟು ಕಾಠಿಣ್ಯವುಳ್ಳದಾದ ಮೇಲೆ ಸಾಧಾರಣರಾದ ಇತರ ಪುರುಷರನ್ನು ಮೆಚ್ಚಿಸುವುದು ಹೇಗೆ? ಸತ್ಯದಿಂದ ಪುರುಷ

ರನ್ನು ಮೆಚ್ಚಿಸುವ ಮಹಾತ್ಮಳಾದ ಸ್ತ್ರೀಯು ಲೋಕದಲ್ಲಿ ಈ ಸೀತೆಗಿಂತಲೂ ಬೇರೆ ಯಾರಿರುವರೋ ತಿಳಿಯದು! ಸ್ವಭಾವವಾಗಿ ಅಂಗದಲ್ಲಿಯೂ ಮನಸ್ಸಿನಲ್ಲಿಯೂ ಮೃದುತ್ವವುಳ್ಳವರಾದ ಅಬಲೆಯರು ಸ್ವಭಾವವಾಗಿ ಮನೋದೇಹೋಭಯ ಕಾಠಿಣ್ಯ ಯುಕ್ತರಾದ ಪುರುಷರನ್ನು ಅನುವರ್ತಿಸಿ ಸಹಧರ್ಮಿಣೀತ್ವದಿಂದ ಬಾಳುವುದು ಸಾಧಾರಣವಾದುದಲ್ಲ ಎಂದು ವಿವಿಧವಾಗಿ ಹೇಳಿಕೊಳ್ಳುತ್ತ ಪರಿತಾಪಮಯಚಿತ್ತ ವುಳ್ಳವರಾಗಿದ್ದರು.

ಅತ್ತ ಹಾಗಿರಲು, ಇತ್ತ ಜಾನಕಿಯು ಭಯಭರಿತ ಭಕ್ತಿಯುಕ್ತಳಾಗಿ ನಿಜಪ ತಿಯಾದ ಶ್ರೀ ರಾಮನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಧಗದ್ಧಗಾಯಮಾ ನವಾಗಿ ಉರಿಯುತ್ತಿರುವ ಚಿತಾಗ್ನಿಯ ಬಳಿಗೆ ಬಂದು ಮೂರುಸಾರಿ ಪ್ರದಕ್ಷಿಣ ವನ್ನು ಮಾಡಿ ನಮಸ್ಕರಿಸಿ ಕೈಮುಗಿದು ನಿಂತುಕೊಂಡು —ನಾನು ಮನೋವಾಕ್ಕಾಯ ಕರ್ಮಗಳಿಂದಲೂ ಶ್ರೀರಾಮನನ್ನಲ್ಲದೆ ಪರಪುರುಷನನ್ನು ಅಪೇಕ್ಷಿಸಿದವಳಾಗಿದ್ದರೆ ಈ ಅಗ್ನಿದೇವತೆಯು ನನ್ನನ್ನು ಸುಟ್ಟು ಬೂದಿಮಾಡಿ ಬಿಡಲಿ! ಇಲ್ಲದಿದ್ದರೆ ಕಾಪಾಡಲಿ! ಎಂದು ಮನಸ್ಸಿನಲ್ಲಿ ರಾಮನಡಿದಾವರೆಗಳನ್ನು ಧ್ಯಾನಿಸುತ್ತ ಬೆಂಕಿಯಲ್ಲಿ ಬಿದ್ದಳು. ಆಗ ಸಕಲ ಕಪಿಸೇನೆಗಳೂ ವಿಮಾನಸ್ಥರಾದ ದೇವತೆಗಳೂ ಖೋ! ಎಂದು ಕೂಗಿ ರೋದಿಸಿದರು. ತರುವಾಯ ಅಗ್ನಿದೇವನು ನಿಜರೂಪವನ್ನು ಧರಿಸಿ ಬಂದು ಸೀತೆಯು ಮುಡಿದ ಹೂವುಗಳು ಬಾಡದಂತೆಯೂ ಉಟ್ಟು ತೊಟ್ಟಿದ್ದ ದಿವ್ಯ ವಸ್ತ್ರಾಭರಣಗಳ ಕಳೆಯು ಕುಂದದಂತೆಯೂ ಎಚ್ಚರಿಕೆಯಿಂದ ರಕ್ಷಿಸಿ ಸರ್ವಾಲಂಕಾರಭೂಷಿತೆಯಾದ ಸೀತೆಯನ್ನು ಎತ್ತಿಕೊಂಡು ಚಿತಾಗ್ನಿ ಮಧ್ಯದಿಂದ ಹೊರಟು ಶ್ರೀರಾಮನ ಸನ್ನಿಧಿಗೆ ಬಂದು—ಎಲೈ ಪರಿಶುದ್ಧನಾದ ಶ್ರೀರಾಮನೇ! ನೀನು ಲೋಕದವರಂತೆ ನಿಜವಾಗಿ ಮನುಷ್ಯನೇ? ದುಷ್ಟನಾದ ರಾವಣನನ್ನು ಕೊಂದು ಲೋಕದಲ್ಲಿ ಧರ್ಮಸಂಸ್ಥಾಪನವ ನ್ನು ಮಾಡುವುದಕ್ಕಾಗಿ ಮನುಷ್ಯಾವತಾರದಿಂದ ಬಂದ ಮಹಾ ವಿಷ್ಣುವಲ್ಲವೇ? ಈ ಸೀತೆಯು ಸಾಮಾನ್ಯ ಸ್ತ್ರೀಯರಂತೆ ಮಾನುಷಿಯೇ? ಸರ್ವವಿಧದಿಂದಲೂ ನಿನ್ನನ್ನು ಅನುಸರಿಸುವವಳಾಗಿ ನರಸ್ತ್ರೀರೂಪವನ್ನು ಧರಿಸಿ ಬಂದ ಸಾಕ್ಷಾಲ್ಲಕ್ಷ್ಮೀದೇವಿಯ ಲ್ಲವೇ? ಸರ್ವಜ್ಞನಾದ ನೀನು ಪ್ರಾಕೃತ ಮನುಷ್ಯರಂತೆ ನಟಿಸಬೇಡ. ಪರಿಶುದ್ಧಸ್ವಭಾ ವಳಾದ ಈ ಸೀತೆಯನ್ನು ನಿಸ್ಸಂದೇಹಚಿತ್ತದಿಂದ ಪರಿಗ್ರಹಿಸು ಎಂದು ಹೇಳಿ ಆಕೆ ಯನ್ನು ರಾಮನ ಸನ್ನಿಧಿಯಲ್ಲಿ ಬಿಟ್ಟು ತಾನು ತತ್ಕ್ಷಣದಲ್ಲೇ ಅದೃಶ್ಯನಾದನು.

ಅನಂತರದಲ್ಲಿ ಬ್ರಹ್ಮರುದ್ರೇಂದ್ರರೇ ಮೊದಲಾದ ಸಕಲ ದೇವತೆಗಳು ತಮ್ಮ ತಮ್ಮ ವಿಮಾನಗಳನ್ನೇರಿಕೊಂಡು ರಾಮನ ಬಳಿಗೆ ಬಂದು ಬಹು ಪ್ರಕಾರವಾಗಿ ಶ್ಲಾಘಿಸಿ ಆತನನ್ನು ಕುರಿತು—ಎಲೈ ಶ್ರೀರಾಮಚಂದ್ರನೇ, ಈ ಜಾನಕಿಯೂ ನೀನೂ ಜಗತ್ತಿನಲ್ಲಿ ಪಾಪವನ್ನು ವಿನಾಶಮಾಡುವುದಕ್ಕಾಗಿಯೂ ಧರ್ಮವನ್ನು ನೆಲೆ ಗೊಳಿಸುವುದಕ್ಕಾಗಿಯೂ ಅವತರಿಸಿದವರಲ್ಲವೇ? ನೀನು ಮಹಾ ವಿಷ್ಣುವಾಗಿ ಈ ಮಹಾ ಲಕ್ಷ್ಮಿಯಾಗಿರುವ ಸೀತೆಯಲ್ಲಿ ಈ ರೀತಿಯಾಗಿ ಸಂದೇಹಪಟ್ಟುದರಿಂದ ಜಗ ಜ್ಜನರು ತಾವೂ ಲೋಕಾಪವಾದಕ್ಕೆ ಅಂಜಿ ನಡೆಯಬೇಕೆಂದು ತಿಳಿದಂತಾಯಿತು. ಈ

ನಿನ್ನ ಸದ್ಗುಣಗಳಿಗೂ ನಿನ್ನ ನಿಜಪತ್ನಿಯಾದ ಈ ಸೀತೆಯು ನಡಿಸಿದ ಕೆಲಸಕ್ಕೂ ನಾವೆಲ್ಲರೂ ಪೂರ್ಣ ಸಂತುಷ್ಟರಾದೆವು. ನೀನಿನ್ನೀ ಸಂದೇಹವನ್ನು ಬಿಟ್ಟು ಪರಿಶುದ್ಧಳಾಗಿರುವ ಸೀತೆಯನ್ನು ಸಂತೋಷದಿಂದ ಪರಿಗ್ರಹಿಸು. ಲೋಕಾನುಗ್ರಹಾರ್ಥವಾಗಿ ನೀನೂ ನಿನ್ನ ಪತ್ನಿಯೂ ಮಾಡಿದ ಎರಡು ಕೆಲಸಗಳಿಗೆ ಎರಡು ವರಗಳನ್ನು ಕೊಡುವೆವು, ನಿಸ್ಸಂದೇಹದಿಂದ ಬೇಡಿಕೋ ಎಂದು ಹೇಳಲು,

ಆಗ ನಿಶ್ಶಂಕಮನಸ್ಕನಾದ ಶ್ರೀ ರಾಮನು ಆ ದೇವತೆಗಳಿಗೆಲ್ಲಾ ನಮಸ್ಕರಿಸಿ— ಸರ್ವಜ್ಞರಾದ ನೀವೆಲ್ಲರೂ ಈ ಸೀತೆಯು ಪರಿಶುದ್ಧಳು ಎಂದು ಹೇಳಿದ ಮೇಲೆ ನಾನು ಪರಿಗ್ರಹಿಸದೆ ಇರುವುದು ಹೇಗೆ? ಮಹಾತ್ಮರಾದ ನಿಮ್ಮೆಲ್ಲರ ಆಜ್ಞಾನುಸಾರವಾಗಿ ಈ ಸೀತೆಯನ್ನು ಪುನಃ ಪರಿಗ್ರಹಿಸುವೆನು. ನಾನು ನಿಮ್ಮನ್ನು ಬೇಡಿಕೊಳ್ಳುವ ಎರಡು ವರಗಳು ಯಾವುವೆಂದರೆ—ನನ್ನ ನಿಮಿತ್ತವಾಗಿ ಈ ಯುದ್ಧರಂಗದಲ್ಲಿ ಪ್ರಾಣಗಳನ್ನು ತೊರೆದ ಕಪಿಗಳೆಲ್ಲಾ ಮಲಗಿದ್ದವರೇಳುವ ಹಾಗೆ ಜೀವಿಸಿ ಏಳಬೇಕು. ಮತ್ತು ಈ ಕಪಿನಾಯಕರು ಭೂಲೋಕದಲ್ಲಿ ಯಾವ ಸ್ಥಳದಲ್ಲಿ ವಾಸಮಾಡಿದಾಗ್ಯೂ ಅಲ್ಲೆಲ್ಲಾ ವಿವಿಧ ತರುಲತೆಗಳು ನಿರಂತರವೂ ಸಂಪೂರ್ಣ ಫಲಭರಿತಗಳಾಗಿದ್ದುಕೊಂಡು ಈ ಕಪಿಪರಿವಾರಕ್ಕೆಲ್ಲಾ ಪರಮಾನಂದವನ್ನುಂಟುಮಾಡುತ್ತಿರಬೇಕೆಂಬುವೇ ಎಂದು ಹೇಳಿದನು. ಅವರು ಅದೇ ರೀತಿಯಾಗಿ ವರವನ್ನು ಕೊಡಲು; ತತ್‌ಕ್ಷಣದಲ್ಲಿಯೇ ಸತ್ತು ಬಿದ್ದಿದ್ದ ಸಮಸ್ತ ಕಪಿಗಳೂ ಜೀವದೊಡನೆ ಕೂಡಿ ಎದ್ದು ಬಂದು ಶ್ರೀರಾಮನಿಗೆ ನಮಸ್ಕರಿಸಿದುವು. ಆಗ ಈಶ್ವರನು ರಾಮನನ್ನು ನೋಡಿ— ಎಲೈ ರಾಮನೇ, ಇಲ್ಲಿ ನೋಡು. ನಿನ್ನ ತಂದೆಯಾದ ದಶರಥನು ಪ್ರಿಯಪುತ್ರನಾದ ನಿನ್ನನ್ನು ನೋಡುವ ಉದ್ದೇಶದಿಂದ ವಿಮಾನಾರೂಢನಾಗಿ ನಿನ್ನ ಬಳಿಗೆ ಬಂದಿದ್ದಾನೆ ಎಂದು ತೋರಿಸಲು ; ಆಗ ದಶರಥನು ಶೀಘ್ರವಾಗಿ ವಿಮಾನವನ್ನು ಕೆಳಗಿಳಿಸಿ ನಮಸ್ಕರಿಸುತ್ತಿರುವ ಸೀತಾ ರಾಮ ಲಕ್ಷ್ಮಣರನ್ನು ತೆಗೆದಾಲಿಂಗಿಸಿಕೊಂಡು ಮುದ್ದಾಡಿ ಆ ಮೇಲೆ ರಾಮನನ್ನು ಕುರಿತು—ಎಲೈ ಪ್ರಿಯನಂದನನೇ, ಸತ್ಯವಂತನಾದ ನೀನು ಹದಿನಾಲ್ಕು ಸಂವತ್ಸರಗಳಿಂದಲೂ ವನವಾಸವನ್ನು ಮಾಡಿ ನನ್ನನ್ನು ಸತ್ಯಪ್ರತಿಜ್ಞನನ್ನಾಗಿ ಮಾಡಿದಿ. ಇನ್ನು ಮೇಲೆ ನೀನು ಶೀಘ್ರವಾಗಿ ಅಯೋಧ್ಯಾನಗರಕ್ಕೆ ಹೋಗಿ ಪಟ್ಟಾಭಿಷಿಕ್ತನಾಗಿ ಅಮಿತವಿಕ್ರಮರಾದ ತಮ್ಮಂದಿರೊಡನೆ ಕೂಡಿ ರಾಜ್ಯಪರಿಪಾಲನೆಯನ್ನು ಮಾಡಿಕೊಂಡು ಸುಖವಾಗಿರು ಎಂದು ಆಶೀರ್ವಾದವನ್ನು ಮಾಡಿ ಅವರನ್ನು ಕಳುಹಿಸಿ ತಾನು ಇಂದ್ರಾದಿ ದೇವತೆಗಳೊಡನೆ ಕೂಡಿ ಅಲ್ಲಿಂದ ಹೊರಟುಹೋದನು. ಆಗ ಮಾತಲಿಯೂ ನಿಜಸ್ವಾಮಿಯಾದ ದೇವೇಂದ್ರನೊಡನೆ ರಾಮನ ವಿಕ್ರಮಾತಿಶಯವನ್ನು ಹೊಗಳುತ್ತ ಹೋದನು. ಆಗ ಅಮಂದಾನಂದಸಂದೋಹತುಂದಿಲನಾದ ರಘುನಂದನನು ಸೀತಾಲಕ್ಷ್ಮಣರೊಡನೆ ಕೂಡಿ ಸುಗ್ರೀವ ವಿಭೀಷಣಾದಿ ಕಪಿರಾಕ್ಷಸಸೇನಾಸಮೇತನಾಗಿ ತನ್ನ ಪಾಳಯಕ್ಕೆ ಬಂದು ಸಂತೋಷದಿಂದಿರುತ್ತಿದ್ದನು.

---

## 10. RAMA'S CORONATION.

## ೧೦. ರಾಮನ ಪಟ್ಟಾಭಿಷೇಕವು.

ಅನಂತರದಲ್ಲಿ ಲಂಕಾರಾಜನಾದ ವಿಭೀಷಣನು ಸೀತಾಲಕ್ಷ್ಮಣ ಸಮೇತನಾಗಿ ಸಂತೋಷದಿಂದ ಕುಳಿತಿರುವ ಶ್ರೀರಾಮನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಕೈಮುಗಿದು ನಿಂತುಕೊಂಡು—ಜೀಯಾ, ಸರ್ವಪ್ರಾಣಿದಯಾಕರನೇ! ಆಶ್ರಿತನಾದ ನನ್ನಲ್ಲಿ ಕೃಪೆಮಾಡಿ ಲಂಕಾನಗರಕ್ಕೆ ಬಿಜಯಮಾಡಿ ಅಲ್ಪಶಕ್ತನಾದ ನಾನು ಮಾಡುವ ಸೇವೆಯನ್ನು ಕೈಕೊಂಡು ಲಂಕಾನಗರದ ಜನಗಳಿಗೆಲ್ಲಾ ದರ್ಶನಾಶೀರ್ವಾದಗಳನ್ನು ಕೊಟ್ಟು ಅವರನ್ನೆಲ್ಲಾ ಸಂತೋಷ ಸಮಾಧಾನಯುಕ್ತರನ್ನಾಗಿ ಮಾಡಿ ಆ ಮೇಲೆ ನಿಜ ರಾಜಧಾನಿಯಾದ ಅಯೋಧ್ಯಾಪಟ್ಟಣಕ್ಕೆ ದಯೆಮಾಡಬಹುದೆಂದು ಭಯಭಕ್ತಿಪುರಸ್ಸರವಾಗಿ ಬೇಡಿಕೊಳ್ಳಲು; ಆಗ ಶ್ರೀರಾಮನು—ಎಲೈ ಕೃತಜ್ಞನಾದ ರಾಕ್ಷಸ ರಾಜೇಂದ್ರನೇ! ನನ್ನ ಚಿಕ್ಕತಾಯಿಯಾದ ಕೈಕೇಯಿದೇವಿಯು ವನವಾಸಕ್ಕಾಗಿ ನೇಮಿಸಿದ ಹದಿನಾಲ್ಕು ಸಂವತ್ಸರಗಳು ಮುಗಿಯುವುದಕ್ಕಿಂತ ಮೊದಲು ಪೊಳಲುಗಳನ್ನು ಪ್ರವೇಶಿಸುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿರುವೆನು. ನನ್ನ ಹಗೆಯ ಸಂಹಾರಾರ್ಥವಾಗಿ ಪ್ರಿಯನಾದ ನೀನು ನನಗೋಸ್ಕರ ಮಾಡಿದ ಸಹಾಯವು ಅಪಾರವಾದುದು. ಅದಕ್ಕಿಂತಲೂ ಅತಿಶಯವಾದ ಉಪಚಾರವು ಮತ್ತಾವುದಿರುವುದು? ಅಯೋಧ್ಯಾನಗರದಲ್ಲಿ ನನ್ನ ತಾಯಂದಿರು ನನ್ನನ್ನೇ ನೆನಸಿಕೊಂಡು ಚಿಂತಿಸುತ್ತಿರುವರು ನನ್ನ ತಮ್ಮಂದಿರಾದ ಭರತಶತ್ರುಘ್ನರಿಗೆ ನನ್ನಗಲಿಕೆಯಿಂದುಂಟಾಗಿರುವ ದುಃಖವು ಅಪರಿಮಿತವಾಗಿರುವುದು. ಅದುಕಾರಣ ನಾನು ಈ ದಿವಸವೇ ಅಯೋಧ್ಯಾನಗರವನ್ನು ಕುರಿತು ಪ್ರಯಾಣಮಾಡಬೇಕಾಗಿರುವುದು. ಇದಕ್ಕೋಸ್ಕರ ನೀನು ಅನುಮತಿಸಿ ಸಹಾಯವನ್ನು ಮಾಡಬೇಕು ಅಂದನು.

ಆ ಬಳಿಕ ವಿಭೀಷಣನು ರಾಮನ ಮಾತುಗಳಿಗೆ ಒಡಂಬಟ್ಟು ಕೂಡಲೆ ಪುಷ್ಪಕ ವಿಮಾನವನ್ನು ತರಿಸಿ ಮುಂದೆ ನಿಲ್ಲಿಸಿ—ಜೀಯಾ ಸರ್ವಜ್ಞನೇ, ಅಯೋಧ್ಯಾನಗರದಲ್ಲಿ ನಿನ್ನ ಆಗಮನವನ್ನೇ ಕುತೂಹಲದಿಂದ ನಿರೀಕ್ಷಿಸುತ್ತಿರುವ ಮಾತೃ ಭ್ರಾತೃ ಪುರಜನಾದಿಗಳ ಆನಂದೋದಯಕ್ಕಾಗಿ ಚಿತ್ತಾನುಸಾರವಾಗಿ ಬಿಜಯಮಾಡಬಹುದೆಂದು ಕೈಮುಗಿದುಕೊಂಡು ಬಿನ್ನವಿಸಲು; ಆಗ ಸಂತುಷ್ಟನಾದ ಶ್ರೀರಾಮನು ದೇವತೆಗಳ ವಿಮಾನಗಳಿಗಿಂತ ನೂರ್ಮಡಿ ಮಿಗಿಲೆನಿಸಿ ಶಂಕರನ ಪ್ರಿಯಮಂದಿರವಾದ ಕೈಲಾಸದಂತೆಯೂ ವಿಷ್ಣುವಿಗೆ ನಿತ್ಯಾವಾಸಸ್ಥಾನವಾದ ಕ್ಷೀರಸಮುದ್ರದಂತೆಯೂ ಬ್ರಹ್ಮನಿಗೆ ಭವನವಾದ ಸತ್ಯಲೋಕದಂತೆಯೂ ಬಹಳವಾದ ಮನೆಗಳಿಂದಲೂ ಅಸಂಖ್ಯಾತಗಳಾದ ಉಪ್ಪರಿಕೆಗಳಿಂದಲೂ ಮನೋಹರಗಳಾದ ಚಂದ್ರಶಾಲೆಗಳಿಂದಲೂ ಕೇಳಿದ ಫಲಗಳಿಂದ ತುಂಬಿರುವ ತರುಷಂಡಗಳಿಂದಲೂ ವಿವಿಧವಾದ ಪುಷ್ಪಲತಾ ಸಂಕುಲದಿಂದಲೂ ತುಂಬಿರುವ ಉದ್ಯಾನವನಗಳಿಂದಲೂ ಮಾಧುರ್ಯನೈರ್ಮಲ್ಯ ಶೈತ್ಯಗುಣಯುಕ್ತ ಜಲಭರಿತಗಳಾದ ಸರೋವರಗಳಿಂದಲೂ ಅಪೇಕ್ಷಿತ ಭಕ್ಷ್ಯಭೋಜ್ಯಗಳನ್ನು

ಸಿದ್ಧಪಡಿಸುತ್ತಿರುವ ದೇವಸ್ತ್ರೀಯರುಗಳಿಂದಲೂ ಇನ್ನೂ ಅಗತ್ಯವಾದ ಅನೇಕ ಸಾಮ ಗ್ರಿಗಳಿಂದಲೂ ಕೂಡಿ ಶೋಭಿಸುತ್ತಿರುವ ವಿಮಾನವನ್ನು ನೋಡಿ ಅತ್ಯಾಶ್ಚರ್ಯಪಟ್ಟು ಅದರ ಮೇಲೆ ತಾನು ಮೊದಲು ಏರಿ ಆ ಮೇಲೆ ಹಸ್ತವನ್ನು ಕೊಟ್ಟು ಸೀತೆಯನ್ನು ಮೇಲೇರಿಸಿ ತನ್ನ ಎಡದೊಡೆಯ ಮೇಲೆ ಕುಳ್ಳಿರಿಸಿಕೊಂಡನು. ತರುವಾಯ ಲಕ್ಷ್ಮಣನು ಧನುರ್ಬಾಣಗಳನ್ನು ತೆಗೆದುಕೊಂಡು ವಿಮಾನವನ್ನು ಹತ್ತಿ ರಾಮನ ಹಿಂದುಗಡೆಯಲ್ಲಿ ಕೂತುಕೊಂಡನು. ಅನಂತರದಲ್ಲಿ ಶ್ರೀರಾಮನ ಆಜ್ಞಾನುಸಾರವಾಗಿ ವಾನರ ಚಕ್ರೇಶ್ವರನಾದ ಸುಗ್ರೀವನೂ ಯುವರಾಜನಾದ ಅಂಗದನೂ ನೀಲ ನಳಾಂಜನೇಯಾದಿ ವಾನರ ಸೇನಾಪತಿಗಳೂ ತಮ್ಮ ತಮ್ಮ ಸೇನೆಗಳೊಡನೆ ಪುಷ್ಪಕವನ್ನು ಹತ್ತಿದರು. ಆ ವಿಮಾನವು ಇಷ್ಟು ಪರಿವಾರಪರಿಪೂರಿತವಾಗಿದ್ದರೂ ಅದರಲ್ಲಿ ಸ್ಥಳವು ಇನ್ನೂ ತೆರಪಾಗಿಯೇ ಇದ್ದಿತು. ಆ ಮೇಲೆ ದೇವತೆಗಳು ದೇವದುಂದುಭಿಗಳನ್ನು ಬಾರಿಸಿ ಪುಷ್ಪವೃಷ್ಟಿಯನ್ನು ಸುರಿಸಿದರು.

ಅನಂತರದಲ್ಲಿ ಆ ವಿಮಾನವು ಶ್ರೀರಾಮನ ಆಜ್ಞಾನುಸಾರವಾಗಿ ಆಕಾಶ ಮಾರ್ಗಕ್ಕೆ ಏರಿ ಹೊರಟು ಕಪಿರಾಜಧಾನಿಯಾದ ಕಿಷ್ಕಿಂಧಾಪಟ್ಟಣದ ಬಳಿಗೆ ಬರಲು; ಆಗ ಸೀತೆಯು ರಾಮನನ್ನು ನೋಡಿ ಮಾತಾಡುವಷ್ಟರಲ್ಲಿಯೇ ರುಮೆತಾರೆಯರೇ ಮೊದಲಾದ ವಾನರ ನಾರಿಯರು ಮೊದಲಿದ್ದ ತಮ್ಮ ವಾನರಾಕಾರಗಳನ್ನು ಬಿಟ್ಟು ಮನೋಜ್ಞಮಾನುಷ ಸ್ತ್ರೀ ರೂಪಗಳನ್ನು ಧರಿಸಿ ಸರ್ವಾಲಂಕಾರಶೋಭಿತೆಯರಾಗಿ ಅತ್ಯುತ್ತಮವಾದ ಪುಷ್ಪ ಫಲಾದಿಗಳನ್ನು ತೆಗೆದುಕೊಂಡು ಎದುರಾಗಿ ಬಂದು ಸೀತೆಗೆ ಕೈಗಾಣಿಕೆಯನ್ನು ಒಪ್ಪಿಸಿ ಮೊದಲು ರಾವಣನು ತೆಗೆದುಕೊಂಡು ಹೋಗುವಾಗ ಸೀತೆಯು ಬೀಸಾಡಿದ್ದ ಆಭರಣಗಳನ್ನು ಆಕೆಗೆ ಧರಿಸಿ ಶೃಂಗರಿಸಿದರು. ಆಗ ಸೀತಾ ದೇವಿಯು ಪರಮಸಂತೋಷದಿಂದ ಕೂಡಿದವಳಾಗಿ ತಾರಾ ರುಮಾದಿ ವಾನರ ನಾರಿಯರನ್ನು ಆಲಿಂಗಿಸಿ ಮನ್ನಿಸಿದಳು. ಆ ಬಳಿಕ ಸುಗ್ರೀವನೆದ್ದು ರಾಮನಿಗೆ ಸಾಷ್ಟಾಂಗಪ್ರಣತನಾಗಿ—ಜೀಯಾ ಮಹಾತ್ಮನೇ, ಈ ರಾತ್ರಿಯಲ್ಲಿ ನಮ್ಮ ಪಟ್ಟಣ ದಲ್ಲಿದ್ದು ಸೇವಕನಾದ ನನ್ನ ಪೂಜೆಯನ್ನು ಕೃಪೆಯಿಂದ ಸ್ವೀಕರಿಸಿ ನಮ್ಮೆಲ್ಲರನ್ನೂ ಕೃತಾರ್ಥರನ್ನು ಮಾಡಿ ನಾಳಿನ ಪ್ರಾತಃಕಾಲದಲ್ಲಿ ಪ್ರಯಾಣಮಾಡಬೇಕೆಂದು ಬೇಡಿಕೊಳ್ಳಲು; ಆಗ ಶ್ರೀರಾಮನು ಸುಗ್ರೀವನನ್ನು ಕುರಿತು—ಅಯ್ಯಾ ಪರಮ ಪ್ರಿಯನಾದ ವಾನರ ಚಕ್ರವರ್ತಿಯೇ, ನಿನ್ನ ಹಾಗೆ ನಮಗೆ ಸತ್ಕಾರವನ್ನು ಮಾಡಿದ ವರು ಯಾರುಂಟು ? ಇದೇನು ಔಪಚಾರಿಕವೇ ? ಎಂದಿಗೂ ಅಲ್ಲ. ಮಹಾತ್ಮನಾದ ನೀನು ಮಾಡಿದ ಸಹಾಯವನ್ನು ನಾನು ಎಂದಿಗೂ ಮರೆಯಲಾರೆನು. ಮೊದಲು ಹೋಗಿದ್ದ ನನ್ನ ಅಭಿಮಾನವು ಯಾರ ದೆಸೆಯಿಂದ ಕೈಗೂಡಿತು ? ನಾನು ಒಂದು ನಾಲಿಗೆಯಿಂದ ಅಸದೃಶವಾದ ನಿನ್ನ ಸಹಾಯಾಧಿಕ್ಯವನ್ನು ಹೊಗಳಲಾರೆನು. ನನ್ನ ತಮ್ಮನಾದ ಭರತನು ಈ ದಿನದಲ್ಲಿ ನನ್ನನ್ನು ಕಾಣದೆಹೋದರೆ ಅಗ್ನಿಪ್ರವೇಶವನ್ನು ಮಾಡಿ ದೇಹವನ್ನು ತೊರೆದುಕೊಳ್ಳುವನು. ಈ ರೀತಿಯಾಗಿ ಆತನು ಪ್ರಥಮದಲ್ಲೇ ನನ್ನೆದುರಿಗೆ ಪ್ರತಿಜ್ಞೆಯನ್ನು ಮಾಡಿರುವನು. ಅದುಕಾರಣ ನಿನ್ನ ಅಂತಃಪುರ ಸ್ತ್ರೀ

ಯರು ಸೀತೆಯೊಡನೆ ಸುಖಸಲ್ಲಾಪಗಳನ್ನು ಮಾಡುತ್ತ ಬರಲಿ ಎಂದು ಹೇಳಲು; ಹಾಗೇ ಸಿದ್ಧರಾದ ಅವರೆಲ್ಲರೊಡನೆ ಹೊರಟು ವಿಮಾನವನ್ನು ನಡಿಸುತ್ತ ಭರದ್ವಾಜಾಶ್ರಮದ ಸಮುಕ್ಕೆ ಬರಲು; ಆ ಕೂಡಲೆ ಆ ಮಹರ್ಷಿಯು ಪರಮ ಸಂತೋಷದಿಂದ ಕೂಡಿದವನಾಗಿ ಸಾವಿರಾರು ಜನ ಮುನಿಗಳೊಡನೆ ಕೂಡಿ ಬಂದು ಶ್ರೀರಾಮನನ್ನು ಎದುರ್ಗೊಂಡು ವೇದಘೋಷಗಳನ್ನು ಮಾಡುತ್ತ ರಾಮನ ಮೇಲೆ ಮಂತ್ರಾಕ್ಷತೆಗಳನ್ನು ತಳಿದು ಪುಷ್ಪಫಲಾದಿಗಳನ್ನು ಕೊಟ್ಟು—ಎಲೈ ರಘುರಾಜೇಂದ್ರನೇ, ಈ ದಿವಸ ನಮ್ಮ ಆಶ್ರಮದಲ್ಲಿದ್ದು ನಾವು ಮಾಡುವ ಆತಿಥ್ಯವನ್ನು ಸ್ವೀಕರಿಸಿ ಬೆಳಗಾಗುತ್ತಲೇ ಹೊರಟು ಭರತನನ್ನು ಕಾಣಬಹುದು ಎಂದು ಹೇಳಲು; ಆಗ ರಾಮನು— ಪೂಜ್ಯರಾದ ಭರದ್ವಾಜ ಮಹರ್ಷಿಗಳೇ, ತಮ್ಮ ಅಪ್ಪಣೆಯ ಮೇರೆಗೆ ನಡೆಯುವುದು ವಿಹಿತವೇ ಎಂದು ತಿಳಿದಿರುವೆನು. ಆದರೆ ನಾನು ಈ ದಿವಸ ಹೋಗಿ ಭರತನನ್ನು ಕಾಣದೆಹೋದರೆ ಆತನು ಖಂಡಿತವಾಗಿ ಯಜ್ಞೇಶ್ವರನಿಗೆ ಆಹುತಿಯಾಗುವನು. ಇದರಲ್ಲಿ ಏನೂ ಸಂದೇಹವಿಲ್ಲ. ಇದಕ್ಕೆ ಏನು ಯೋಚನೆಯನ್ನು ಮಾಡಬಹುದು. ಅಪ್ಪಣೆಯಾದಂತೆ ನಡೆದುಕೊಳ್ಳುತ್ತೇನೆ ಎಂದು ರಾಮನು ಹೇಳಿದುದಕ್ಕೆ ಭರದ್ವಾಜ ಮಹರ್ಷಿಯು—ನೀನು ಈ ದಿವಸ ಮಾತ್ರ ನಮ್ಮ ಆಶ್ರಮದಲ್ಲಿರುವ ವರ್ತಮಾನವನ್ನು ತಿಳಿಸುವ ಹಾಗೆ ಹೇಳಿ ಶೀಘ್ರವಾಗಿ ಭರತನ ಬಳಿಗೆ ಹನುಮಂತನನ್ನು ಕಳುಹಿಸು ಎನ್ನಲು; ಆಗ ಶ್ರೀರಾಮನು—ಆಗಲಿ, ಅದಕ್ಕೇನೆಂದು ಆಂಜನೇಯನನ್ನು ಕರೆದು ಹೇಳಬೇಕಾದ ಮಾತುಗಳನ್ನೆಲ್ಲಾ ಹೇಳಿ ಅವನನ್ನು ಭರತನ ಬಳಿಗೆ ಕಳುಹಿಸಿ ತಾನು ಪರಿವಾರಸಮೇತನಾಗಿ ಸುರಾಚಾರ್ಯನ ಮಗನಾದ ಭರದ್ವಾಜ ಮಹರ್ಷಿಯ ಆಶ್ರಮದಲ್ಲಿ ಪುಷ್ಪಕವಿಮಾನದಿಂದಿಳಿದು ಅಲ್ಲಿರುತ್ತಿದ್ದನು.

ಆ ಬಳಿಕ ಭರದ್ವಾಜಮಹರ್ಷಿಯು ಕಾಮಧೇನುವನ್ನು ನೆನೆಯಲು; ಆ ಕೂಡಲೆ ಕಾಮಧೇನುವು ಬಂದು ದಿವ್ಯಭೋಜನಗಂಧಮಾಲ್ಯಾಂಬರವಿಭೂಷಣಾದಿಗಳಿಂದ ಸೀತಾರಾಮಲಕ್ಷ್ಮಣರನ್ನೂ ಕಪಿರಾಕ್ಷಸಸೇನೆಗಳನ್ನೂ ಸತ್ಕರಿಸಿದ ಬಳಿಕ ಶ್ರೀರಾಮನು ಮುನಿಪತಿಯ ಅಪ್ಪಣೆಯಿಂದ ಸರ್ವಪರಿವಾರಸಮೇತನಾಗಿ ಅಲ್ಲಿಂದ ಹೊರಟು ನಂದಿಗ್ರಾಮಕ್ಕೆ ಬರುತ್ತಿದ್ದನು. ರಾಮನ ಅಪ್ಪಣೆಯಿಂದ ಮೊದಲೇ ಹೊರಟಿದ್ದ ಆಂಜನೇಯನು ನಂದಿಗ್ರಾಮಕ್ಕೆ ಬಂದು ಶ್ರೀರಾಮನು ಬರಲಿಲ್ಲವೆಂದು ಪ್ರಾಣಗಳನ್ನು ತೊರೆದುಕೊಳ್ಳುವುದಕ್ಕಾಗಿ ಜ್ವಾಲಾಮಾಲೆಯಿಂದ ಕೂಡಿರುವ ಅಗ್ನಿಯನ್ನು ಪ್ರದಕ್ಷಿಣೆಮಾಡುತ್ತಿರುವ ಭರತನ ಭಕ್ತಿಭಾವವನ್ನು ನೋಡಿ ಅತಿಜಾಗ್ರತೆಯಿಂದ ಬಂದು ಆತನ ಕೈಯನ್ನು ಹಿಡಿದುಕೊಂಡು—ಎಲೈ ಸತ್ಯಸಂಧನಾದ ಭರತನೇ, ಅಗ್ನಿಯನ್ನು ಪ್ರವೇಶಿಸಬೇಡ! ಇದೋ! ಶ್ರೀರಾಮನು ಬಂದನು. ಕೈಲಾಸ ಭೂದರದಂತೆ ಆಕಾಶಮಾರ್ಗದಲ್ಲಿ ಬರುತ್ತಿರುವ ಕುಬೇರನ ವಿಮಾನವನ್ನು ನೋಡು! ಅದರ ನಡುಗಡೆಯಲ್ಲಿ ಪ್ರಕಾಶಮಾನವಾದ ಬೆಳ್ಗೊಡೆಯಿಂದಲೂ ಶ್ವೇತಚಾಮರಗಳಿಂದಲೂ ಕೂಡಿರುವ ಮಣಿಪೀಠದಲ್ಲಿ ಕುಳಿತಿರುವವನೇ ನಿನ್ನ ಪ್ರಿಯಭ್ರಾತೃವಾದ ಶ್ರೀರಾಮನು. ನನ್ನ ಹೆಸರು ಹನುಮಂತನು. ಮತ್ತು ರಾಘವನಿಂದ ಕಳುಹಿಸಲ್ಪಟ್ಟ

ದೂತನು. ಇನ್ನು ಮೇಲೆ ನಿನ್ನ ಮನಸ್ಸಿನ ಸಂಶಯವನ್ನು ಬಿಟ್ಟು ತೆಂಕಣದಿಕ್ಕಿನ ಕಡೆಗೆ ನೋಡು ಎನ್ನಲು ; ಆಗ ಭರತನು ನಡೆದುಬರುತ್ತಿರುವ ಬಲ್ಮುಗಿಲೋ ಎಂಬಂತೆ ಕಂಗೊಳಿಸುತ್ತ ಬರುತ್ತಿರುವ ವಿಮಾನವನ್ನು ದಿಟ್ಟಿಸಿ ನೋಡುತ್ತಿರುವಷ್ಟರಲ್ಲಿಯೇ ಆ ವಿಮಾನವು ನಂದಿಗ್ರಾಮದ ಬಳಿಗೆ ಬಂದಿಳಿದಿತು.

ಆಗ ಭರತನು ಬಹಳವಾಗಿ ಸಂತೋಷವೆಂಬ ಸಮುದ್ರದಲ್ಲಿ ಮುಳುಗಿ ತೇಲಾಡುತ್ತ ತಾನು ಆ ದಿನದ ವರೆಗೂ ಭಯಭಕ್ತಿಪುರಸ್ಸರವಾಗಿ ಆರಾಧಿಸುತ್ತಿದ್ದ ಶ್ರೀರಾಮನ ರತ್ನಖಚಿತಗಳಾದ ಹಾವುಗೆಗಳನ್ನು ಮಂಡೆಯ ಮೇಲಿರಿಸಿಕೊಂಡು ಹೊರಟನು. ಆಗ ಆ ಭರತನ ಎರಡು ಕಡೆಗಳಲ್ಲೂ ಚಿನ್ನದ ಹಿಡಿಗಳಿಂದ ಶೋಭಿಸುತ್ತಿರುವ ಶ್ವೇತ ಚಾಮರಗಳಿಂದ ಬೀಸುತ್ತಿದ್ದರು. ಮತ್ತು ಶರತ್ಸಮಯದ ಹುಣ್ಣಿಮೆಯ ಚಂದ್ರನಂತೆ ಬಿಳುಪಾಗಿಯೂ ಒಟುವಾಗಿಯೂ ಇರುವ ಕೊಡೆಗಳೂ ಬಾಲಸೂರ್ಯನಂತಿರುವ ಕೆಂಪು ಕೊಡೆಗಳೂ ಕಾರ್ಮುಗಿಲುಗಳಂತೆ ಕಪ್ಪಾಗಿರುವ ಕಪ್ಪು ಕೊಡೆಗಳೂ ಪಚ್ಚೆಯಂತೆ ಹೊಳೆಯುತ್ತಿರುವ ಹಸುರು ಕೊಡೆಗಳೂ ಒಪ್ಪುತ್ತಿದ್ದುವು. ಮುಂದುಗಡೆಯಲ್ಲಿ ನವರತ್ನಖಚಿತಗಳಾದ ತಡಿಗಳಿಂದಲೂ ವಿಚಿತ್ರ ಮಣಿಗಳಿಂದ ಅಲಂಕೃತಗಳಾಗಿ ಒಪ್ಪುತ್ತಿರುವ ಮೊಗವಾಡಗಳಿಂದಲೂ ಮುತ್ತಿನ ಕುಚ್ಚುಗಳ ಗೊಂಡೆಗಳಿಂದಲೂ ಕೆಂಪು ದಮಾಸಿನ ಎದೆಪಟ್ಟಿಗಳಿಂದಲೂ ನಾನಾ ಪ್ರಕಾರಗಳಾದ ಚಿನ್ನಬೆಳ್ಳಿಗಳ ಒಡವೆಗಳಿಂದಲೂ ಅಲಂಕೃತಗಳಾಗಿ ಪರಿಶೋಭಿಸುತ್ತಿರುವ ಹಿಡಿಗುದುರೆಗಳ ಸಾಲುಗಳು ಮೇಲಾಗಿ ಒಪ್ಪುತ್ತಿದ್ದುವು. ಮತ್ತು ದಿಗ್ಗಜಗಳು ತಾವು ನಿರಂತರವೂ ಭೂಮಿಯನ್ನು ಹೊರುವುದರಿಂದುಂಟಾಗುವ ಶ್ರಮವನ್ನು ಹೋಗಲಾಡಿಸಿಕೊಳ್ಳುವುದಕ್ಕೋಸ್ಕರ ಶ್ರೀರಾಮನ ಪಾದುಕೆಗಳ ಸೇವೆಯನ್ನು ಮಾಡುವುದಕ್ಕಾಗಿ ನಾನಾ ರೂಪಗಳನ್ನು ಧರಿಸಿ ಬಂದಿರುವುವೋ ಎಂಬಂತೆ ನೀರಾಜಿಯ ಗುಳಗಳಿಂದಲೂ ಚಿನ್ನದ ಕಿರುಗಂಟೆಗಳಿಂದಲೂ ಸುವರ್ಣದ ಸರಪಣಿಗಳಿಂದಲೂ ಕಾಲುಕಡಗಗಳಿಂದಲೂ ನೋಡುವವರಿಗೆ ಚಂದವನ್ನು ಬೀರುತ್ತ ಕಿವಿಗಳ ಮುಂಗಡೆಯಲ್ಲಿ ಜೋಲುತ್ತಿರುವ ಬಿಳಿಯ ಚಾಮರಗಳಿಂದಲೂ ಶೃಂಗರಿಸಲ್ಪಟ್ಟುವುಗಳಾಗಿ ನವರತ್ನ ಖಚಿತಗಳಾದ ಅಂಬಾರಿಗಳನ್ನು ಧರಿಸಿಕೊಂಡು ಮದಗಜಗಳು ಮುಂದೆ ನಡೆದುವು. ಅವುಗಳ ಮುಂದೆ ಹಸುಬಲ್ಲೆಯದವರೂ ಅವರ ಮುಂದೆ ಬೆಳ್ಳಿ ಕಟ್ಟಿನ ಈಟಿಯವರೂ ಅವರ ಮುಂದೆ ಧನುರ್ಬಾಣಗಳನ್ನು ಧರಿಸಿದವರೂ ಎರಡು ಕಡೆಗಳಲ್ಲೂ ಸಾಲುಸಾಲಾಗಿ ಹೋಗುತ್ತಿದ್ದರು ಅವರ ನಡುವೆ ಓಲಗದವರೂ ಕೊಳಲಿನವರೂ ಕಹಳೆಯವರೂ ತಂಬೂರಿಯನ್ನೂ ವೀಣೆಯನ್ನೂ ಸಾರಂಗವನ್ನೂ ಸ್ವರಮಂಡಲವನ್ನೂ ಕಿನ್ನರಿಯನ್ನೂ ನುಡಿಸುವವರೂ ಭೇರಿ ಮದ್ದಲೆ ನಗಾರಿ ಹುಯ್ಲು ತಂಬಟೆ ಈ ಮೊದಲಾದುವುಗಳನ್ನು ಬಾರಿಸುವವರೂ ಹೋಗುತ್ತಿದ್ದರು. ಮತ್ತು ಭರತ ಶಾಸ್ತ್ರಾಧಿದೇವತೆಗಳೋ, ಅಪ್ಸರಸ್ತ್ರೀಯರ ಸಂಕುಲವೋ ? ಎಂಬ ಭ್ರಾಂತಿಯನ್ನು ಹುಟ್ಟಿಸುತ್ತಿರುವ ಪಾರವಿಲಾಸಿನಿಯರು ದಿವ್ಯ ವಿವಿಧ ವರ್ಣಪರಿಶೋಭಿಗಳಾದ ಸೀರೆಗಳನ್ನುಟ್ಟು ಕಾಸೆಯನ್ನು ಕಟ್ಟಿ ಸೀರೆಯ ಸೆರಗನ್ನು ನಡುವಿನ ಪಟ್ಟಿಯಲ್ಲಿ ಸಿಕ್ಕಿಸಿ ನವರತ್ನಾಭರಣಗಳನ್ನು ಧರಿಸಿ

ವಿಚಿತ್ರಾಂಬರಗಳಿಂದ ಮಾಡಲ್ಪಟ್ಟು ಮನೋಹರಗಳಾದ ಕುಪ್ಪಸಗಳನ್ನು ತೊಟ್ಟು ಕಾಲುಗಳಿಗೆ ಕಿರುಗೆಜ್ಜೆಗಳ ಸರಗಳನ್ನು ಕಟ್ಟಿಕೊಂಡು ಸಾಲುಸಾಲಾಗಿ ಎದುರೆದು ರಾಗಿ ನಿಂತು ಅಭಿನಯಿಸುತ್ತ ನರ್ತಿಸುತ್ತ ಬರುತ್ತಿದ್ದರು. ಮತ್ತು ಮನೋಹರಗಳಾದ ಬಿಳಿಯ ನಿಲುವಂಗಿಗಳನ್ನು ತೊಟ್ಟು ನಾನಾವರ್ಣಗಳಿಂದ ಮನೋಜ್ಞಗಳಾದ ಪಾಗುಗ ಳನ್ನು ಧರಿಸಿ ಕೈಗಳಲ್ಲಿ ಚಿನ್ನದಿಂದಲೂ ಬೆಳ್ಳಿಯಿಂದಲೂ ಮಾಡಲ್ಪಟ್ಟ ಕೋಲುಗಳನ್ನು ಹಿಡಿದುಕೊಂಡು ಜನರು ಒಬ್ಬರ ಮೇಲೊಬ್ಬರು ನುಗ್ಗದಂತೆ ಎಚ್ಚರವನ್ನು ಹೇಳುತ್ತ ಕಂಚುಕಿಗಳು ಬರುತ್ತಿದ್ದರು. ಮತ್ತು ಕುತ್ನಿಯ ಚಲ್ಲಣಗಳನ್ನು ತೊಟ್ಟು ತುಂಡಂಗಿ ಗಳನ್ನು ಇಟ್ಟುಕೊಂಡು ವಿವಿಧವಾದ ಚಿನ್ನದ ಕಂಬಿಯ ಪಾಗುಗಳನ್ನು ಧರಿಸಿ ಚಿನ್ನ ಬೆಳ್ಳಿಗಳಿಂದ ಮಾಡಲ್ಪಟ್ಟ ತೋರದೊಣ್ಣೆಗಳನ್ನು ಹೆಗಲುಗಳ ಮೇಲೆ ಇರಿಸಿಕೊಂಡು ಅನೇಕರು ಪಜ್ತು ಪಜ್ತುಯಾಗಿ ಬರುತ್ತಿದ್ದರು. ಮತ್ತು ಅತ್ಯುನ್ನತವಾದ ಕೇತುದಂಡಗ ಳನ್ನೂ ಅನನ್ಯಜನ ಸಾಧಾರಣವಾದ ಬಿರುದುಗಳನ್ನೂ ಹಿಡಿದುಕೊಂಡು ಅಪರಿಮಿತಸಂ ಖ್ಯಾತರಾದ ಜನರು ಸಾಲುಸಾಲಾಗಿ ಬರುತ್ತಿದ್ದರು. ಮತ್ತು ವಂದಿಮಾಗಧವೈತಾಳಿಕಾ ದಿಗಳು ರಘುಕುಲತಿಲಕನಾದ ಶ್ರೀರಾಮನ ಪಾದುಕೆಗಳನ್ನು ಹೊಗಳುತ್ತ ಇಪ್ಪಕ್ಕಗ ಳಲ್ಲೂ ಬರುತ್ತಿದ್ದರು. ಮತ್ತು ಮುತ್ತೈದೆಯರಾದ ಸ್ತ್ರೀಯರು ಕಲಶ ಕನ್ನಡಿ ಮೊದಲಾದ ಮಂಗಲ ದ್ರವ್ಯಗಳನ್ನು ಹಿಡಿದುಕೊಂಡು ಸಂತೋಷದಿಂದ ಬಂದರು. ನಾಲ್ದೆಸೆಗಳಲ್ಲೂ ಇಂದ್ರನೀಲಮಣಿಮಯವಾದ ನಾಲ್ಕು ಕೋಲುಗಳಿಂದ ಕೂಡಿ ದುದೂ ಮೇಲೆ ಪೀತಾಂಬರದಿಂದ ಪರಿಶೋಭಿಸಲ್ಪಟ್ಟುದೂ ಆದ ಚಪ್ಪರದ ನಡುಗಡೆ ಯಲ್ಲಿ ಭರತನ ಶಿರಸ್ಸ್ಥಾಯಿಗಳಾದ ರಾಮಪಾದುಕೆಗಳು ಬರುತ್ತಿದ್ದುವು. ಬ್ರಹ್ಮ ಜ್ಞಾನಿಗಳಾದ ತಾಪಸ ಶ್ರೇಷ್ಠರು ಮುನಿವಟುಗಳೊಡನೆ ಕೂಡಿ ನಿಂಬೆಯ ಹಣ್ಣು ತೆಂಗಿನ ಕಾಯಿ ಉತ್ತತ್ತಿ ಈ ಮೊದಲಾದ ಫಲಗಳನ್ನೂ ಮಂತ್ರಾಕ್ಷತೆಗಳನ್ನೂ ಕೈಗಳಲ್ಲಿ ಹಿಡಿದುಕೊಂಡು ಋಗ್ಯಜುಸ್ಸಾಮಗಳೆಂಬ ವೇದತ್ರಯ ವಾಕ್ಯಗಳ ಪಠನ ವನ್ನು ಮಾಡುತ್ತ ಪಾದುಕೆಗಳ ಹಿಂದು ಮುಂದುಗಡೆಗಳಲ್ಲೂ ಇಕ್ಕೆಲಗಳಲ್ಲೂ ಬರುತ್ತಿದ್ದರು. ಮತ್ತು ಅನೇಕ ಸಾಮಂತ ರಾಜಕುಮಾರರು ತೇಜಿಗಳನ್ನೇರಿಕೊಂಡು ಕುಂತಖಡ್ಗಾದ್ಯನೇಕಾಯುಧಗಳನ್ನು ಧರಿಸಿ ಬೆಂಗಾವಲಾಗಿ ಬರುತ್ತಿದ್ದರು. ಕೌಸ ಲ್ಯಾಸುಮಿತ್ರಾ ಕೈಕೇಯಿಯರೇ ಮೊದಲಾದ ಮಾತೃ ಜನಗಳೂ ಅಂತಃಪುರ ಸ್ತ್ರೀಯರೂ ರಜತ ಸುವರ್ಣಗಳಿಂದ ನಿರ್ಮಿತಗಳಾಗಿ ನವರತ್ನಖಚಿತಗಳೂ ಮನೋಹರಗಳೂ ಆದ ಅಂದಣಗಳನ್ನೂ ಪಾಲಕಿಗಳನ್ನೂ ಏರಿ ಮಹಾಸಂಭ್ರಮದಿಂದ ಬರುತ್ತಿದ್ದರು.

ಆಗ ಹಿಮದಿಂದ ಬಿಡಲ್ಪಟ್ಟ ಚಂದ್ರನಂತೆ ವಿಘ್ನಪರಂಪರೆಗಳನ್ನು ಕಳೆದು ಮತ್ತೂ ಜಗದಾಹ್ಲಾದಕರನಾಗಿರುವ ಶ್ರೀರಾಮಚಂದ್ರನು ತನ್ನಂತೆಯೇ ಜಟಾಚೀರಧ ರರಾಗಿ ಅನ್ನಾಹಾರಗಳನ್ನು ಪರಿತ್ಯಜಿಸಿ ಹದಿನಾಲ್ಕು ಸಂವತ್ಸರಗಳಿಂದಲೂ ಫಲಾ ಹಾರಗಳನ್ನು ಮಾತ್ರ ಮಾಡುತ್ತ ಬಡವಾದ ಮೈಯ್ಯುಳ್ಳವರಾಗಿರುವ ತಮ್ಮಂದಿರಾದ ಭರತಶತ್ರುಘ್ನರನ್ನು ನೋಡಿ—ಅಯ್ಯೋ ! ನನ್ನಲ್ಲಿರುವ ಅಪಾರವಾದ ಭಕ್ತಿಪ್ರೀತಿಗ ಳಿಂದ ಇವರು ಇಷ್ಟು ದುಃಖಗಳಿಗೆ ಗುರಿಯಾದರಲ್ಲಾ ! ನನ್ನೊಬ್ಬನಿಂದ ಮಾತೃಜನಗ

ಳಿಗೂ ಭ್ರಾತೃ ಜನಗಳಿಗೂ ಪುರಪರಿವಾರ ಜನರಿಗೂ ಇಷ್ಟು ಕಷ್ಟಸ್ಥಿತಿಯು ಸಂಪ್ರಾಪ್ತವಾಯಿತು. ಅಹೋರಾತ್ರಿಗಳಲ್ಲೂ ಪರಹಿತನಾದ ನನ್ನ ಸ್ಥಿತಿಯು ಸರ್ವರಿಗೂ ದುಃಖವನ್ನೇ ಕೊಡುತ್ತಿರುವುದಲ್ಲಾ! ಆಗಲಿ. ಇದೆಲ್ಲಾ ಅಘಟನಘಟನ ಸಮರ್ಥನಾದ ಭಗವಂತನ ಚಿತ್ತವು. ಅವನಿಲ್ಲದೆ ತೃಣವಾದರೂ ಚಲಿಸುವುದಿಲ್ಲ ಎಂದು ಹೇಳುವ ಶ್ರುತಿವಚನವು ಸರ್ವಲೋಕಪರಿಗ್ರಾಹ್ಯವು. ಈ ಲೋಕದ ಸ್ಥಿತಿಯನ್ನು ಕುರಿತು ಯೋಚಿಸಿದರೆ ಯಾರಿಗೂ ಅತ್ಯಂತ ಸುಖವಾದರೂ ದುಃಖವಾದರೂ ಉಂಟಾಗಲಿಲ್ಲ. ಕೆಳಗಡೆಯು ಮೇಲಕ್ಕೂ ಮೇಲ್ಗಡೆಯು ಕೆಳಕ್ಕೂ ಆಗುತ್ತಿರುವ ರಥಚಕ್ರನೇಮಿಯಂತೆ ಸುಖಾನಂತರದಲ್ಲಿ ದುಃಖವೂ ದುಃಖಾನಂತರದಲ್ಲಿ ಸುಖವೂ ಸಂಭವಿಸುತ್ತ ಇರುವುದು ಸ್ವಾಭಾವಿಕವು. ಇದಕ್ಕಾಗಿ ನಾವು ಮಾಡತಕ್ಕುದೇನು ? ಎಂದು ಯೋಚಿಸುವುದು ಯುಕ್ತವಾದರೂ ಜಗತ್ತನ್ನೇ ಭವಯಂತ್ರದಲ್ಲಿ ಸಿಕ್ಕಿಸಿ ನರಳಿಸುವ ಮಮತಾಶಕ್ತಿಯು ಅಕುಂಠಿತವಾದುದು ಎಂದು ವಿವಿಧವಾಗಿ ಯೋಚಿಸುತ್ತ ಮರುಗುತ್ತ ಶೀಘ್ರವಾಗಿ ವಿಮಾನದಿಂದ ಭೂಮಿಗಿಳಿಯಲು ; ಆಗ ಭರತನು ಬೇಗನೆ ಮುಂದೆ ಬಂದು ಶ್ರೀರಾಮನ ಅಡಿದಾವರೆಗಳಿಗೆ ನವರತ್ನಖಚಿತವಾದ ದಿವ್ಯ ಪಾದುಕೆಗಳನ್ನು ತೊಡಿಸಿ ಸಾಷ್ಟಾಂಗವಾಗಿ ಭೂಮಿಯಲ್ಲಿ ಬಿದ್ದು ನಮಸ್ಕರಿಸಿದನು. ಆ ಕೂಡಲೆ ರಿಪುಭಯಂಕರನಾದ ಶತ್ರುಘ್ನನು ಅತಿ ಸಂಭ್ರಮದಿಂದ ಮುಂದೆ ಬಂದು ಸೀತಾರಾಮಲಕ್ಷ್ಮಣರಿಗೆ ನಮಸ್ಕರಿಸಿದನು. ಆಗ ಆನಂದಬಾಷ್ಪಸಂಯುಕ್ತನೇತ್ರನಾದ ಶ್ರೀರಾಮನು ಪ್ರಿಯರಾದ ಭರತ ಶತ್ರುಘ್ನರನ್ನು ತೆಗೆದಪ್ಪಿಕೊಂಡು ಮುದ್ದಿಸಿ ಮೈದಡವಿ ಮುಂದಲೆಯನ್ನು ಆಘ್ರಾಣಿಸಿ ಮುಂದೆ ಬಂದು ಕೌಸಲ್ಯಾದಿ ಮಾತೃಜನಗಳಿಗೆ ಸೀತಾ ಲಕ್ಷ್ಮಣರೊಡನೆ ಕೂಡಿ ನಮಸ್ಕರಿಸಲು ; ಕೌಸಲ್ಯೆಯು ಸೀತಾರಾಮಲಕ್ಷ್ಮಣರನ್ನು ಆಲಿಂಗಿಸಿಕೊಂಡು ಪರಮಾನಂದರಸದಿಂದ ಅಭಿಷೇಕಿಸುವಳೋ ಎಂಬಂತೆ ನಿರರ್ಗಳವಾಗಿ ಹೊರಟು ಹರಿಯುತ್ತಿರುವ ಆನಂದಬಾಷ್ಪೋದಕಸೇಚನೆಯಿಂದ ಅವರನ್ನು ನೆನೆಸಿದಳು. ಆ ಮೇಲೆ ಸರ್ವಲೋಕಸುಖಾರಾಮನಾದ ಶ್ರೀರಾಮನು ವಶಿಷ್ಠಾದಿಮುನಿಜನಗಳಿಗೂ ಗುರುಜನಗಳಿಗೂ ಭಯಭಕ್ತಿಪೂರ್ವಕವಾಗಿ ನಮಸ್ಕರಿಸಿ ಅಪ್ರತಿಹತಗಳಾದ ಅವರ ಶುಭಾಶೀರ್ವಾದಗಳನ್ನು ಕೈಕೊಂಡು ಮುಂದೆ ಬಂದು ಬಂದು ಗುಂಪಾಗಿ ನೆರೆದಿರುವ ಮಂತ್ರಿ ಸೇನಾಪತಿ ಪೌರಪರಿಜನಾದಿಗಳನ್ನು ಅವರವರ ತಾರತಮ್ಯಾನುಸಾರವಾಗಿ ಹಸ್ತಲಾಘವಾಲಿಂಗನಾವಲೋಕನಪ್ರಿಯವಚನಗಳಿಂದ ಮನ್ನಿಸಿ ಸಂತೋಷದಿಂದಿರುತ್ತಿದ್ದನು.

ಅನಂತರದಲ್ಲಿ ಸತ್ಯಸಂಧನಾದ ಭರತನು ಶ್ರೀರಾಮಚಂದ್ರನಿಗೆ ನಮಸ್ಕರಿಸಿ ಎದ್ದು ಕೈಮುಗಿದು ನಿಂತುಕೊಂಡು—ಎಲೈ ಸುಜನಸೇವ್ಯನಾದ ಶ್ರೀರಾಮಚಂದ್ರನೇ, ಸರ್ವಜ್ಞನಾದ ನೀನು ಮೊದಲು ನನ್ನ ತಾಯಿಯಾದ ಕೈಕೇಯಿಯ ಮಾತುಗಳನ್ನು ಮನ್ನಿಸಿ ತಂದೆಯಾದ ದಶರಥ ಭೂಪಾಲನನ್ನು ಸತ್ಯಪ್ರತಿಜ್ಞನನ್ನಾಗಿ ಮಾಡುವುದಕ್ಕೋಸ್ಕರ ವನವಾಸೋದ್ಯುಕ್ತನಾಗಿ ನನ್ನ ಅಧೀನಕ್ಕೆ ಕೊಟ್ಟಿದ್ದ ಈ ಕೋಸಲರಾಜ್ಯವನ್ನು ಈಗ ತಿರಿಗಿ ನಿನ್ನ ವಶಕ್ಕೆ ಒಪ್ಪಿಸಿ ಕೃತಾರ್ಥನಾಗಿದ್ದೇನೆ. ದೊಡ್ಡ ಗೂಳಿ

ಯಿಂದ ಹೊತ್ತು ನಿರ್ವಹಿಸುವುದಕ್ಕೆ ಯೋಗ್ಯವಾದ ಮಹಾಭಾರವಸ್ತುವನ್ನು ಎಳೆಗ ರುವು ಹೇಗೆ ಹೊರಲಾರದೋ ಹಾಗೆ ಮೂರು ಲೋಕಗಳ ಭಾರವನ್ನಾದರೂ ವಹಿಸಿ ಕೊಂಡು ಪರಿಪಾಲಿಸುವುದಕ್ಕೆ ಯೋಗ್ಯನಾದ ನಿನ್ನಿಂದ ಧರಿಸಲ್ಪಡತಕ್ಕ ಈ ಕೋಸಲ ರಾಜ್ಯಭಾರವನ್ನು ಅಲ್ಪನಾದ ನಾನು ಧರಿಸಬಲ್ಲೆನೇ ? ಲೋಕದಲ್ಲಿ ಸೂರ್ಯನಂತೆ ಮಿಂಚು ಹುಳುವಿಗೂ ಮಹಾಗಜದಂತೆ ಆದರ ಮರಿಗೂ ಪರಾಕ್ರಮಶಾಲಿಯಾದ ಅರಸನಂತೆ ಬಾಲಕನಾದ ಅವನ ಮಗನಿಗೂ ಹೇಗೆ ಸಾಮರ್ಥ್ಯವಿರುವುದಿಲ್ಲವೋ ಹಾಗೆ ನಾನು ಕೋಸಲರಾಜ್ಯ ಪರಿಪಾಲನೆ ಮಾಡುವುದರಲ್ಲಿ ಮಹಾತ್ಮನಾದ ನಿನಗೆ ಸಮಾ ನವಾದ ಶಕ್ತಿವಂತನಲ್ಲದವನಾಗಿದ್ದೇನೆ. ಸರ್ವಪ್ರಾಣಿಹಿತಚಿಂತಕನೂ ಧರ್ಮಸಂಸ್ಥಾ ಪಕನೂ ಆದ ನೀನು ಈ ರಾಜ್ಯಭಾರವನ್ನು ವಹಿಸಿಕೊಂಡು ಸೂರ್ಯ ಚಂದ್ರ ನಕ್ಷ ತ್ರಗಳಿರುವ ವರೆಗೂ ಸತ್ಯದಿಂದ ಪರಿಪಾಲಿಸುತ್ತ ದಶರಥಾದಿ ಪೂರ್ವ ರಾಜರುಗ ಳಿಗಿಂತಲೂ ಅಪಾರವಾಗಿ ಕೀರ್ತಿಸಂಪಾದನೆಯನ್ನು ಮಾಡಿಕೊಂಡು ಇರುವವನಾಗು ಎಂದು ಭಯಭಕ್ತಿ ಪುರಸ್ಸರವಾಗಿ ಬಿನ್ನವಿಸಲು ; ಪರಮಾನಂದತುಂದಿಲಮನಸ್ಕನಾದ ಶ್ರೀರಾಮನು ಸತ್ಯಸಂಧನೂ ಮಹಾತ್ಮನೂ ಆದ ಭರತನ ವಿಜ್ಞಾಪನೆಗಳಿಗೆ ಹಾಗೇ ಆಗಲಿ ಎಂದು ಅನುಮತಿಯನ್ನಿತ್ತು ಸರ್ವಪರಿವಾರ ಮಧ್ಯದಲ್ಲಿ ರಾರಾಜಿಸುತ್ತಿರುವ ದಿವ್ಯ ಮಣಿಮಯಾಸನದ ಮೇಲೆ ಕೂತುಕೊಂಡನು.

ಅನಂತರದಲ್ಲಿ ಅರಿಭಯಂಕರನಾದ ಶತ್ರುಘ್ನನ ಅಪ್ಪಣೆಯ ಮೇರೆಗೆ ಬುದ್ಧಿ ವಂತರಾದ ಜಟಾಬಂಧವಿಸ್ರಂಸಕರು ಬಂದು ಲೋಕಾಭಿರಾಮನಾದ ಶ್ರೀರಾಮನ ಸನ್ನಿಧಿಯಲ್ಲಿ ಸಾಷ್ಟಾಂಗ ಪ್ರಣತರಾಗಿ ಎದ್ದು ಕೈಮುಗಿದು ನಿಂತರು. ಆಗ ರಾಮಾ ಜ್ಞಾನುಸಾರವಾಗಿ ಮೊದಲು ಭರತನ ಜಡೆಯನ್ನೂ ಆ ಮೇಲೆ ಲಕ್ಷ್ಮಣನ ಜಡೆಯ ನ್ನೂ ಅನಂತರದಲ್ಲಿ ಶತ್ರುಘ್ನನ ಜಡೆಯನ್ನೂ ಬಿಡಿಸಿ ಅವರಿಗೆ ಮಂಗಳಸ್ನಾನವನ್ನು ಮಾಡಿಸಿ ಆ ಬಳಿ ಶ್ರೀರಾಮಚಂದ್ರನು ತನ್ನ ಜಡೆಯನ್ನೂ ಬಿಡಿಸುವುದಕ್ಕೆ ಅಪ್ಪಣೆ ಕೊಡಲು ; ಆ ಜಡೆಯನ್ನು ಬಿಡಿಸುವವರು ನವರತ್ನಖಚಿತಗಳಾದ ಸಿಕ್ಕಟ್ಟೆಗೆಗಳಿಂ ದಲೂ ಬಾಚಣಿಗೆಗಳಿಂದಲೂ ಉಗುರುಗಳಿಂದಲೂ ಸ್ವಲ್ಪವಾದರೂ ನೋವಾಗದಂತೆ ಬಿಡಿಸಿ ಪರಿಮಳಯುಕ್ತವಾದ ತೈಲವನ್ನು ಲೇಪಿಸಿ ಚೆನ್ನಾಗಿ ಜಡಿದೊತ್ತಿ ಮಂಗ ಳಸ್ನಾನವನ್ನು ಮಾಡಿಸಿದರು. ಆ ಮೇಲೆ ಶ್ರೀರಾಮನು ರಾಜಯೋಗ್ಯವಾದ ದಿವ್ಯಾಂ ಬರಾಭರಣಭೂಷಿತನಾಗಿ ಸರ್ವಲೋಕರಮ್ಯವಾದ ತೇಜಸ್ಸಂಪನ್ನತೆಯನ್ನು ಹೊಂದಿ ಭೂದೇವೇಂದ್ರನಂತೆ ರಾರಾಜಿಸಿದನು. ಅನಂತರದಲ್ಲಿ ಸುಗ್ರೀವಾಂಗದಾದಿ ಕಪಿಕ ಟಕವೂ ವಿಭೀಷಣಾದಿ ರಾಕ್ಷಸರೂ ಸಂತೋಷದಿಂದ ಮಂಗಳಸ್ನಾನವನ್ನು ಮಾಡಿ ದಿವ್ಯಾಂಬರಾಭರಣಭೂಷಿತರಾಗಿ ರಂಜಿಸಿದರು.

ಅಷ್ಟರಲ್ಲಿಯೇ ಪಟ್ಟಮಹಿಷಿಯಾದ ಸೀತಂಬಿನಿಯೂ ಸರ್ವಗುರುಜನ ಮಾತೃಜನ ಭ್ರಾತೃ ಜನ ಪರಿವಾರಾದಿ ಜನರೊಡನೆ ದಿವ್ಯಪೀಠೋಪವಿಷ್ಟನಾಗಿರುವ ಶ್ರೀರಾಮಚಂದ್ರನ ಅಭ್ಯುದಯ ಸೂಚಕವಾದ ಮಂಗಳಾರತಿಯನ್ನು ಎತ್ತಿ ಹರಸುವುದಕ್ಕೋಸ್ಕರ ಕೈಗ ಳಿಂದ ಧರಿಸಿಕೊಂಡಿರುವ ನವರತ್ನಖಚಿತವಾದ ಹರಿವಾಣವೋ ಎಂಬಂತೆ ದರ್ಶನೀಯ

ವಾದ ಕೆಂಬಣ್ಣದಿಂದ ಕೂಡಿದ ದಿವಾಕರಮಂಡಲವು ಅಸ್ತಗಿರಿಯ ಶಿಖರ ಪ್ರಾಂತದಲ್ಲಿ ಪರಿಶೋಭಿಸಿತು. ಧರ್ಮಸ್ವರೂಪನಾದ ಶ್ರೀರಾಮನು ಇನ್ನು ಮೇಲೆ ರಾಜ್ಯರಕ್ಷಣೆಗೆ ಬರುವನು. ಅದುಕಾರಣ ನಾವೆಲ್ಲರೂ ವೃಥಾ ಪರಿಭ್ರಮಣಾಯಾಸವನ್ನು ಬಿಟ್ಟು ಸ್ವಸ್ಥತೆಯಿಂದಿರುವಣ ಎಂದು ಉಲ್ಲಾಸದಿಂದ ಕೂಡಿ ಪಕ್ಷಿಸಮೂಹವೆಲ್ಲವೂ ಸೇರಿ ಹರ್ಷಧ್ವನಿಯನ್ನು ಮಾಡುತ್ತಿವೆಯೋ ಎಂಬಂತೆ ಆ ಸಂಧ್ಯಾವೇಳೆಯಲ್ಲಿ ತಮ್ಮ ತಮ್ಮ ಗೂಡುಗಳನ್ನು ಕುರಿತು ತೆರಳುತ್ತಿರುವ ಪಕ್ಷಿಗಳ ಬಳಗವು ಕಾಣಿಸುತ್ತಿದ್ದಿತು. ಕೂಡಲೆ ವಿಹಂಗಮಸಂಕುಲದ ಕಲಕಲವು ತಪ್ಪಿಹೋಗಲು ; ಆಗ ಆ ಖಗಸಂಕುಲವು ಮಾತಿನಿಂದ ಶ್ರೀರಾಮ ಯಶೋವಿಸ್ತಾರವನ್ನು ಹೊಗಳಿ ದಣಿದು ಮನಸ್ಸಿನಿಂದ ಯೋಚಿಸುತ್ತಿರುವುದೋ ಎಂಬಂತಿದ್ದಿತು. ಕೂಡಲೆ ಧರ್ಮಾತ್ಮನಾದ ಶ್ರೀರಾಮನ ಕೀರ್ತಿಯು ಮೊದಲು ಅಂಕುರರೂಪದಿಂದ ಸರ್ವಮಂದಿರಾಂತಃಪ್ರದೇಶಗಳನ್ನು ಪ್ರವೇಶಿಸಿತೋ ಎಂಬಂತೆ ಸಂಧ್ಯಾದೀಪಗಳು ಶೋಭಿಸಿದುವು. ನಿಜಕಾಂತನಾದ ದಿವಾಕರನು ಹೊರಟುಹೋಗಲು ಪರಪುರುಷನಾದ ಚಂದ್ರನನ್ನು ನೇತ್ರಗಳಿಂದಲೂ ನೋಡಬಾರದೆಂದು ಪರಿಶುದ್ಧಭಾವದಿಂದ ಕೂಡಿದ ಕಮಲಿನೀನಾರಿಯರು ಕಣ್ಮುಚ್ಚುತ್ತಿರುವರೋ ಎಂಬಂತೆ ಸರೋವರಗಳಲ್ಲಿ ಕಮಲಗಳೆಲ್ಲಾ ಮುಗಿಯುತ್ತಿದ್ದುವು. ಕೂಡಲೆ ರಾತ್ರಿಯೆಂಬ ರಮಣಿಯು ನಿಜಕಾಂತನಾದ ಚಂದ್ರನನ್ನು ಕೂಡುವುದಕ್ಕೋಸ್ಕರ ರಮಣೀಯವಾದ ಕುಸುಂಬೆಯ ಬಣ್ಣದ ಸೀರೆಯನ್ನುಟ್ಟು ಸಂಜೆಗೆಂಪೆಂಬ ಕುಪ್ಪಸವನ್ನು ತೊಟ್ಟು ಮಲ್ಲಿಗೆಯ ಹೂವುಗಳನ್ನು ಧರಿಸಿ ಬರುತ್ತಿರುವಳೋ ಎಂಬ ಹಾಗೆ ವಿವಿಧವರ್ಣದಿಂದ ಕೂಡಿ ನಕ್ಷತ್ರಗಳಿಂದ ಒಪ್ಪುತ್ತಿರುವ ಸಾಯಂಸಂಧ್ಯಾಸಮಯವು ವರ್ಣನಾತೀತವಾಗಿದ್ದಿತು. ಕೂಡಲೆ ಅಂಧಕಾರವು ಭೂಲೋಕವನ್ನು ವ್ಯಾಪಿಸಿಕೊಂಡು—ಈ ಶ್ರೀರಾಮನು ನನ್ನ ಆಶ್ರಯದಿಂದ ಜೀವಿಸುತ್ತಿದ್ದ ನಿಶಾಚರ ಚಕ್ರೇಶ್ವರನಾದ ರಾವಣನನ್ನು ಅವನ ಪರಿವಾರಸಮೇತವಾಗಿ ಸಂಹರಿಸಿದನು, ಅದುಕಾರಣ ಇವನ ದೇಶವನ್ನು ಕವಿದು ಕಣ್ಕಾಣದಂತೆ ಮಾಡುವೆನು ಎಂಬಂತೆ ತಮಃಪಟಲವು ಒಪ್ಪುತ್ತಿದ್ದಿತು. ಮಹಾತ್ಮನಾದ ರಾಮನ ಕೀರ್ತಿಯು ನನಗಿಂತಲೂ ಅತಿನಿರ್ಮಲವೂ ಅಪಾರವೂ ಉಳ್ಳುದಾಗಿದೆ ಎಂಬುದಾಗಿ ಹೇಳುತ್ತಾರೆ. ಈ ಸಂಗತಿಯನ್ನು ನಾನೇ ಹೋಗಿ ಪ್ರತ್ಯಕ್ಷವಾಗಿ ನೋಡಿಬರಬೇಕೆಂಬ ಉದ್ದೇಶದಿಂದ ಚಂದ್ರನೇ ಬರುತ್ತಿರುವನೋ ಎಂಬಂತೆ ಉದಯಶಿಖರಿಯ ಶಿಖರಪ್ರಾಂತದಲ್ಲಿ ಚಂದ್ರೋದಯಸೂಚಕವಾದ ಬೆಳಕು ಹೊಳೆಯುತ್ತಿದ್ದಿತು. ಪೂರ್ವಾಶಾಗಣಿಕೆಯು ತನ್ನ ರೂಪವು ಲೋಕರಂಜಕರಾದ ಮಹಾಪುರುಷರ ಮನಸ್ತೃಪ್ತಿಗೆ ಸಾಕಾಗಿರುವುದೋ ಎಂದು ಅತ್ಯುತ್ತಮದರ್ಪಣವನ್ನು ಹಿಡಿದು ನೋಡುತ್ತಿರುವಳೋ ಎಂಬಂತೆ ಉದಯಿಸಿ ಬರುತ್ತಿರುವ ಚಂದ್ರಮಂಡಲವು ಮಂಗಳಕರವಾಗಿದ್ದಿತು. ಇದು ಚಂದ್ರಬಿಂಬವಲ್ಲವು, ಪೂರ್ವಾಶಾನಾರಿಯ ಮುಖಮಂಡಲವು, ಮೊಳೆತು ಹಬ್ಬುತ್ತಿರುವುದು, ಚಂದ್ರಿಕೆಯಲ್ಲವು, ಹರಿದಿಗಂಗನೆಯ ಲೋಕಮೋಹನಕರವಾದ ಮುಗುಳ್ನಗೆಯ ಕಾಂತಿಯು, ಮೇಲೆ ಕಾಣುವುವು ನಕ್ಷತ್ರಸಂಕುಲಗಳಲ್ಲವು, ಶ್ರೀರಾಮನ ವಿಜಯವಾರ್ತೆಯನ್ನು ಕೇಳಿದುದರಿಂದ ಮಿತಿ

ಮೀರಿ ನರ್ತಿಸಿದ ಸುರಗಣಿಕೆಯರ ಕಿತ್ತುಹೋದ ಕಂಠಮಾಲಿಕೆಗಳಲ್ಲಿದ್ದ ಮುತ್ತಿನ ಮಣಿಗಳ ಸಂಕುಲವು ಎಂಬಂತೆ ಆ ನಿಶಾಸಮಯವು ಚಂದ್ರ ನಕ್ಷತ್ರಗಳೊಡನೆ ಕೂಡಿ ಕಂಗೊಳಿಸುತ್ತಿದ್ದಿತು. ಇದು ಚಂದ್ರಮಂಡಲವೋ ಕಾಲನು ತಂದಿಕ್ಕಿದ ಪೂರ್ವದಿಗರಣ್ಯದ ಮಹಾಗ್ನಿಪಿಂಡವೋ ಎಂಬಂತೆ ಲೋಕಾಹ್ಲಾದಕರವಾದ ಚಂದ್ರೋದಯವು ಪರಿಶೋಭಿಸುತ್ತಿದ್ದಿತು. ಈ ಪೂರ್ವದಿಶೆಯೆಂಬ ಸ್ತ್ರೀಯು ಮೊದಲು ತನ್ನ ಬಳಿಗೆ ಸೂರ್ಯನೆಂಬ ಪುರುಷನು ಬರಲು, ಅವನಿಗೆ ಸ್ಥಳವನ್ನು ಕೊಟ್ಟು ಉಪಚರಿಸಿ ಅವನನುಮತಿಯಂತೆ ಅಭೇದವಾಗಿದ್ದು ಅವನನ್ನು ಕಳುಹಿಸಿಕೊಟ್ಟಳು. ಈಗ ಈ ಚಂದ್ರನು ಬರಲು ಅವನಿಗೂ ಯಥಾವತ್ತಾಗಿ ಸತ್ಕರಿಸುತ್ತಿರುವಳು. ಲೋಕದಲ್ಲಿ ಗಣಿಕೆಯರನ್ನು ನಂಬಿರುವುದೆಂತು ? ಅವರು ವಸುಬಲವಿದ್ದರೆ ಪುರುಷ ತಾರತಮ್ಯಾನುಸಾರವಾಗಿ ನಡೆದುಕೊಳ್ಳುವರು. ಶ್ರೀರಾಮನ ಕೀರ್ತಿಕಾಂತೆಯು ತ್ರಿಲೋಕಪ್ರಖ್ಯಾತವಾದ ತನ್ನ ಕಾಂತಿಮಂಡಲವನ್ನು ತಿರಸ್ಕರಿಸುತ್ತಿರುವ ತಮಸ್ತತಿಯನ್ನು ನೋಡಿ ನಕ್ಕುದರಿಂದ ಆ ನಗೆಯ ಕಾಂತಿಯು ತಮಸ್ಸನ್ನು ಅಪ್ಪಳಿಸಿ ವಿರಾಜಿಸುತ್ತಿರುವುದೋ ಎಂಬಂತೆ ಸರ್ವದಿಕ್ಪ್ರದೇಶಗಳಲ್ಲೂ ಬೆಳದಿಂಗಳು ಪ್ರಕಾಶಿಸುತ್ತಿದ್ದಿತು. ಶ್ರೀರಾಮದರ್ಶನದಿಂದ ಸಂತುಷ್ಟಾಂತರಂಗರಾದ ಅಯೋಧ್ಯಾನಿವಾಸಿಗಳಂತೆ ಜೊನ್ನವಕ್ಕಿಗಳು ಬಲಿತ ಬೆಳದಿಂಗಳನ್ನು ಕುಡಿದು ಕುಡಿದು ತೃಪ್ತಿಹೊಂದಿ ನಲಿದಾಡಿದುವು. ನೀಲೋತ್ಪಲಗಳು ನಿಜಕಾಂತನ ಕರಸ್ಪರ್ಶದಿಂದ ಎಚ್ಚೆತ್ತುವೋ ಎಂಬ ಹಾಗೆ ಚಂದ್ರೋದಯದಿಂದ ವಿಕಸಿತಗಳಾಗಿ ಮನೋಹರತೆಯಿಂದ ಒಪ್ಪುತ್ತಿದ್ದುವು. ಮತ್ತು ಗುರುಪತ್ನಿಯೊಡನೆ ಕೂಡಿ ಕಳಂಕಿಯಾಗಿ ದೋಷಾಕರನಾದ ಈ ಚಂದ್ರನನ್ನು ಕಣ್ಣುಗಳಿಂದ ನೋಡಲೇ ಬಾರದೆಂದು ಮೊಗಗಳನ್ನು ಮುಚ್ಚಿಕೊಂಡುವೋ ಎಂಬ ಹಾಗೆ ಶೀತಕರಕರ ಜಡೀಭೂತಗಳಾದ ಪದ್ಮಿನಿಗಳು ಮುಚ್ಚಿಕೊಂಡುವು. ಲೋಕದಲ್ಲಿ ಮಹನೀಯರು ತಮಗೆ ಎಂಥ ಕಷ್ಟಕಾಲವು ಸಂಪ್ರಾಪ್ತವಾದಾಗ್ಯೂ ಆಶ್ರಿತರನ್ನು ಬಿಡುವುದಿಲ್ಲ ಎಂಬುದಕ್ಕೆ ಸಾಕ್ಷಿಯನ್ನು ತೋರಿಸುತ್ತಿವೆಯೋ ಎಂಬಂತೆ ಪದ್ಮಿನಿಗಳು ಹಗಲೆಲ್ಲಾ ತಮ್ಮಲ್ಲಿದ್ದು ಜೀವಿಸಿಕೊಳ್ಳುತ್ತಿದ್ದ ಭ್ರಮರಗಳನ್ನು ತಮ್ಮ ಸಂಕೋಚಾವಸ್ಥೆಯಲ್ಲೂ ಕೂಡ ತಮ್ಮಲ್ಲೇ ಸೇರಿಸಿಕೊಂಡು ಕಾಪಾಡುತ್ತಿರುವುವು. ಕನ್ನೈದಿಲೆಗಳು ಮುಗಿಯುತ್ತಿರುವ ಪದ್ಮಿನಿಗಳನ್ನು ನೋಡಿ—ಈ ಕಮಲಗಳು ದಿನಪತಿಯನ್ನು ನಿಜಪತಿಯನ್ನಾಗಿ ಮಾಡಿಕೊಂಡು ತೆರೆಮರೆಯಿಲ್ಲದೆ ಹಗಲೆಲ್ಲಾ ಆತನೊಡನಿದ್ದುದೂ ಸಾಲದೆ ಹಗಲಿರುಳುಗಳಲ್ಲಿ ಮಧ್ಯಪಾಯಿಗಳೊಡನೆ ಸೇರಿಕೊಂಡಿರುವ ಭಯಾವಹವಾದ ತಮ್ಮ ದೋಷವನ್ನು ಮರೆತು ಇತರರ ದೋಷವನ್ನು ಮಾತ್ರ ನೆನಸಿಕೊಂಡು ಕಣ್ಮುಚ್ಚಿಕೊಳ್ಳುತ್ತಿರುವ ಅವುಗಳ ಅವಿಚಾರಸ್ಥಿತಿಗೋಸ್ಕರವಾಗಿ ನಗುತ್ತಿರುವುವೋ ಎಂಬಂತೆ ವಿಕಸನವನ್ನು ಹೊಂದಿ ಪರಿಶೋಭಿಸುತ್ತಿದ್ದುವು. ನಿಜಪತಿಗಳನ್ನು ಕಾಣದೆ ಮಹಾ ವಿರಹವ್ಯಥೆಯಿಂದ ಕೂಗಿ ಕೂಗಿ ಕೊರಗುತ್ತಿರುವ ಚಕ್ರವಾಕಿಗಳು ನಿರಂತರವೂ ನಿಜಕಾಂತರ ಅಗಲುವಿಕೆಯಿಂದ ವ್ಯಥಿತರಾಗಿ ಅವರನ್ನು ಕರೆದು ಹಂಬಲಿಸಿ ದುಃಖಿಸುತ್ತ ಮರುಗುತ್ತಿರುವ ಶ್ರೀರಾಮವಿರೋಧಿಗಳ ಕಾಂತೆಯರನ್ನು ಅನುಕರಿಸುತ್ತಿದ್ದುವು. ಜಗತ್ತೆಲ್ಲವೂ ಕ್ಷೀರಸಮುದ್ರ

ದಿಂದ ವ್ಯಾಪ್ತವಾಯಿತೋ ಎಂಬಂತೆ ಎಲ್ಲಿ ನೋಡಿದರೂ ಶಾಂತತೆಯಿಂದಲೂ ಧಾವಳ್ಯ ದಿಂದಲೂ ಯುಕ್ತವಾದ ಚಂದ್ರಿಕೆಯು ಚೆನ್ನಾಗಿದ್ದಿತು. ಆಗ ಮಹಾತ್ಮನಾದ ಶ್ರೀರಾ ಮಚಂದ್ರನು ಇಷ್ಟಬಂಧುಜನಗಳೊಡನೆ ದಿವ್ಯಭೋಜನಾದಿಗಳನ್ನು ಮಾಡಿ ಗಂಧ ಪುಷ್ಪ ತಾಂಬೂಲಾದಿಗಳನ್ನು ಸ್ವೀಕರಿಸಿ ಸಂತೋಷದಿಂದಿರುತ್ತಿದ್ದು ಸರ್ವರನ್ನೂ ಅವರವರ ಶಯ್ಯಾಗೃಹಗಳಿಗೆ ಕಳುಹಿಸಿ ತಾನು ಅತ್ಯುತ್ತಮವಾದ ಸೆಜ್ಜೆಮನೆಗೆ ಬಂದು ಅಲ್ಲಿ ದಿವ್ಯಶಯ್ಯಾದಿ ಶಯನಸಾಮಗ್ರಿಗಳಿಂದ ಕೂಡಿರುವ ಮಂಚದ ಮೇಲೆ ಜಗದಾನಂದಿನಿ ಯಾದ ಜನಕನಂದಿನಿಯೊಡನೆ ಕೂಡಿ ಸಂತೋಷದಿಂದ ಪವಡಿಸಿದನು.

ಅನಂತರದಲ್ಲಿ ಜಗದಭಿರಾಮನಾದ ಶ್ರೀರಾಮನಿಗೆ ಈ ದಿವಸ ಜಗದಾನಂದ ಸಂದೋಹಸಂದಾಯಕವಾದ ಪಟ್ಟಾಭಿಷೇಕಮಹೋತ್ಸವವು ಬೆಳೆಯುತ್ತಿದೆ. ಈ ಪುಣ್ಯಕರವಾದ ಸಂದರ್ಶನವನ್ನು ಲೋಕತ್ರಯದವರೂ ನೋಡಿ ಕೃತಾರ್ಥರಾಗುವುದ ಕ್ಕಾಗಿ ನಿಮ್ಮನಿಮ್ಮ ಪರಿವಾರಗಳೊಡನೆ ಕೂಡಿ ಬನ್ನಿರಿ ಎಂದು ಸಾರುತ್ತಿರುವುವೋ ಎಂಬಂತೆ ಮುಂಗೋಳಿಗಳು ಕೊಕೋಕೋ ಎಂದು ಉಚ್ಚೈರ್ಧ್ವನಿಯಿಂದ ಕೂಗಿ ದುವು. ಭೂಲೋಕದಲ್ಲಿ ನಡೆಯುವ ಈ ಸಂಗತಿಯನ್ನು ಚೆನ್ನಾಗಿ ತಿಳಿದುಕೊಂಡು ಶೀಘ್ರವಾಗಿ ಹೋಗಿ ಇಂದ್ರಾದಿದೇವತೆಗಳಿಗೆ ತಿಳಿಸಬೇಕೆಂದು ಸ್ವರ್ಗಲೋಕಸ್ಥವಾದ ನಂದನವನದಿಂದ ಹೊರಟು ದೇವಗಂಗೆಯನ್ನು ದಾಟಿ ಶಿವನಿವಾಸಸ್ಥಾನವಾದ ಕೈಲಾ ಸಾಚಲಮಾರ್ಗವಾಗಿ ಬರುತ್ತಿರುವಲ್ಲಿ ಶಂಕರನ ಪ್ರಿಯಭೂಷಣಗಳಾದ ಸರ್ಪಗಳು ತನ್ನನ್ನು ಸಂಪೂರ್ಣವಾಗಿ ನುಂಗಿಬಿಡುವುದಕ್ಕೆ ಬರುತ್ತಿರಲು ; ಸೂಕ್ಷ್ಮದೇಹದಿಂದ ತಪ್ಪಿಸಿಕೊಂಡು ಅಯೋಧ್ಯಾನಗರವನ್ನು ಪ್ರವೇಶಿಸಿ ಸರ್ವಸ್ಥಳದಲ್ಲೂ ವಿಚಾರಿಸುತ್ತಿ ರುವುದೋ ಎಂಬಂತೆ ಮುಂಜಾವದ ತಂಗಾಳಿಯು ಮೆಲ್ಲನೆ ಬೀಸಿತು. ಸೂರ್ಯನು ಈ ಸಂಗತಿಯನ್ನು ಕೇಳಿ—ನನ್ನ ವಂಶೋದ್ಧಾರಕನಾದ ಶ್ರೀರಾಮಚಂದ್ರನ ಪಟ್ಟಾ ಭಿಷೇಕ ಮಹೋತ್ಸವವನ್ನು ಅತ್ಯುನ್ನತಸ್ಥಾನದಲ್ಲಿದ್ದುಕೊಂಡು ಕಣ್ತುಂಬಾ ನೋಡಿ ದಣಿಯಬೇಕೆಂಬ ಮಹಾಶೆಯಿಂದ ಬಂದನೋ ಎಂಬಂತೆ ಉದಯಶಿಖರಿಯ ಶಿಖರ ವನ್ನು ಅಡರಿ ರಾರಾಜಿಸಿದನು. ಪಟ್ಟಾಭಿಷಿಕ್ತನಾಗುವ ನಿಜನಾಯಕನಾದ ಶ್ರೀರಾ ಮನನ್ನು ನೋಡಿ ಸೀತೆಯ ನೇತ್ರಕಮಲಗಳು ಈ ರೀತಿಯಾಗಿ ಅರಳುವುವು ಎಂದು ತೋರಿಸುತ್ತಿರುವುವೋ ಎಂಬಂತೆ ಕಮಲಗಳು ಅರಳಿ ಪ್ರಕಾಶಿಸುತ್ತಿದ್ದುವು. ಪೂರ್ವ ಪಶ್ಚಿಮದಿಗಂಗನೆಯರು ವಿನೋದಾರ್ಥವಾಗಿ ಆಡುವುದಕ್ಕೋಸ್ಕರ ಪ್ರೀತಿಯಿಂದ ಹಿಡಿದಿರುವ ಮಾಣಿಕ್ಯದ ಮುತ್ತಿನ ಚಂಡುಗಳೋ ಎಂಬಂತೆ ಉದಯಿಸುತ್ತ ಪೂರ್ವ ದಿಕ್ಕಿನಲ್ಲಿ ಕೆಂಬಣ್ಣದಿಂದ ಪ್ರಕಾಶಿಸುವ ಸೂರ್ಯನೂ ಅಸ್ತಮಿಸುತ್ತ ಪಶ್ಚಿಮದಿಕ್ಕಿ ನಲ್ಲಿ ಬೆಳುಬಣ್ಣದಿಂದ ಒಪ್ಪುತ್ತಿರುವ ಚಂದ್ರನೂ ಪರಿಶೋಭಿಸುತ್ತಿದ್ದರು.

ಇಂಥ ಲೋಕ ತಮಸ್ತತಿ ವಿನಾಶಕರವಾದ ಸೂರ್ಯೋದಯ ಸಮಯದಲ್ಲಿ ವಿವಿಧವಾದ ಮಂಗಳವಾದ್ಯಧ್ವನಿಗಳಿಂದಲೂ ವಂದಿಮಾಗಧರ ಜಯಜಯನಿನಾದಗ ಳಿಂದಲೂ ಎಚ್ಚೆತ್ತವನಾಗಿ ಶ್ರೀರಾಮಚಂದ್ರನು ಭಗವಂತನ ಧ್ಯಾನ ಪೂರ್ವಕವಾಗಿ ದಿವ್ಯತಲ್ಪದ ದೆಸೆಯಿಂದ ಉಪ್ಪವಡಿಸಿ ಮಂಗಳವಸ್ತು ದರ್ಶನವನ್ನು ಮಾಡಿ ಸ್ನಾನ

ಸಂಧ್ಯಾವಂದನ ಭಗವತ್ಪೂಜಾತನ್ನಾಮಸಂಕೀರ್ತನಾದಿ ನಿತ್ಯಕರ್ಮಗಳನ್ನು ನೆರವೇ
ರಿಸಿ ದುರ್ಗತರಿಗೆ ಇಷ್ಟಾರ್ಥಗಳನ್ನು ಕೊಟ್ಟು ತೃಪ್ತಿಪಡಿಸಿ ತಮ್ಮಂದಿರೊಡನೆ ಕೂಡಿ
ಸಮಸ್ತ ಪರಿವಾರಯುಕ್ತನಾಗಿ ಅಲ್ಲಿಂದ ಹೊರಟು ಭರತನ ಓಲಗದ ಚಾವಡಿಗೆ
ಬಂದು ದಿವ್ಯಾಸನದ ಮೇಲೆ ಕುಳಿತುಕೊಳ್ಳಲು; ಆಗ ಸಮಸ್ತರೂ ತಮ್ಮ ತಮ್ಮ
ಸ್ಥಾನಗಳಲ್ಲಿ ನಿಶ್ಶಬ್ದತೆಯಿಂದ ಕೂತುಕೊಂಡರು. ಆಗ ಅತಿ ಸಂತುಷ್ಟನಾದ ಭರತನು
ಎದ್ದುಬಂದು ಸಾಷ್ಟಾಂಗವಾಗಿ ನಮಸ್ಕರಿಸಿ ಕೈಮುಗಿದು ನಿಂತುಕೊಂಡು—ಎಲೈ
ಸರ್ವಜ್ಞಶಿಖಾಮಣಿಯಾದ ಶ್ರೀರಾಮಚಂದ್ರನೇ, ಮೊದಲು ನೀನು ಈ ಅಯೋಧ್ಯಾ
ಸಾಮ್ರಾಜ್ಯವನ್ನು ಕೃಪೆಯಿಂದ ನನಗೊಪ್ಪಿಸಿಕೊಟ್ಟು ಧರ್ಮಸಂಸ್ಥಾಪನಾರ್ಥವಾಗಿ
ಅರಣ್ಯಕ್ಕೆ ತೆರಳಿದಾಗ ಇದ್ದ ಆದಾಯಕ್ಕಿಂತ ಈಗಿರುವ ಆದಾಯವು ಹತ್ತುಮಡಿ
ಹೆಚ್ಚಾಗಿದೆ ಇದೋ, ಬೊಕ್ಕಸ ಉಗ್ರಾಣ ಚತುರಂಗಬಲ ರಾಜ್ಯ ಈ ಮೊದಲಾದ
ಸರ್ವಶಾಖೆಗಳ ಕರಣಿಕರುಗಳೆಲ್ಲಾ ಆದಾಯಗಳಲ್ಲಿ ವ್ಯಯಗಳನ್ನು ಕಳೆದು ನಿಲುವುಗ
ಳನ್ನು ತೋರಿಸುತ್ತಿರುವ ಲೆಕ್ಕಗಳನ್ನು ತೆಗೆದುಕೊಂಡು ಬಂದು ಅರಿಕೆ ಮಾಡಿಕೊಳ್ಳು
ವುದಕ್ಕೆ ಸಿದ್ಧರಾಗಿ ಸಮಯವನ್ನು ನೋಡುತ್ತ ಕಾದಿದ್ದಾರೆ. ಪರಿಶೀಲನೆ ಮಾಡಬ
ಹುದು ಎಂದು ಬಿನ್ನವಿಸಲು; ಆಗ ಶ್ರೀರಾಮನು ಅವರೆಲ್ಲರನ್ನೂ ಕ್ರಮವಾಗಿ ಕರಿಸಿ
ವಿಚಾರಿಸುವುದಕ್ಕೆ ಆರಂಭಿಸಿ ತಾನು ಮೊದಲು ವನಕ್ಕೆ ಹೋಗುವಾಗ ಇದ್ದ ನಿಲುವು
ಇಷ್ಟು, ಈಚೆಗೆ ಭರತನು ಮಾಡಿಸಿದ ಆದಾಯವಿಷ್ಟು; ಅಂತು ಮೊತ್ತದಲ್ಲಿ ಆ ದಿನದ
ವರೆಗೂ ಆದ ವ್ಯಯವನ್ನು ಕಳೆದು ಉಳಿವನ್ನು ಚೆನ್ನಾಗಿ ಪರೀಕ್ಷಿಸಿ ನೋಡಲಾಗಿ
ಭರತನು ಹೇಳಿದಂತೆ ಸಕಲಭಾಗಗಳಲ್ಲಿಯೂ ದಶಭಾಗಾಧಿಕ್ಯವುಂಟಾಗಿರಲು; ಆಗ
ಸಂತೋಷ ಸಮುದ್ರದಲ್ಲಿ ಮುಳುಗಿದವನಾದ ಶ್ರೀರಾಮಚಂದ್ರನು ತನ್ನ ಮುದ್ದು
ತಮ್ಮನಾದ ಭರತನನ್ನು ಬಾಚಿ ತಬ್ಬಿಕೊಂಡು ಆತನ ಅನ್ಯಾದೃಶ ರಾಜ್ಯಭಾರ ನೈಪು
ಣ್ಯಕ್ಕೆ ಮೆಚ್ಚಿ ತಲೆದೂಗಿ ಬಹಳವಾಗಿ ಕೊಂಡಾಡಿದನು. ಆಗ ಸಾರಥಿಶ್ರೇಷ್ಠನಾದ
ಸುಮಂತ್ರನು ದಿವ್ಯಾಶ್ವನಿಬದ್ಧವಾಗಿ ಸರ್ವಾಲಂಕಾರ ವಿರಾಜಮಾನವಾದ ರಾಜರಥ
ವನ್ನು ಶೀಘ್ರವಾಗಿ ತಂದು ನಿಲ್ಲಿಸಲು; ಆ ಕೂಡಲೆ ಶ್ರೀರಾಮಚಂದ್ರನು ಕಪಿಕುಲೇ
ಶ್ವರನಾದ ಸುಗ್ರೀವನನ್ನು ಮಹಾ ಗಜದ ಮೇಲಣ ಅಂಬಾರಿಯಲ್ಲಿ ಕುಳ್ಳಿರಿಸಿ ಆ
ಮೇಲೆ ಕಪಿಸೇನೆಗಳು ಏರುವುದಕ್ಕಾಗಿ ಅಸಂಖ್ಯಾತಗಳಾದ ಗಜಸಮೂಹಗಳು ಬಂದು
ನಿಲ್ಲಲು; ಆಗ ಕಪಿವೀರರೆಲ್ಲಾ ಆ ಗಜಗಳ ಕುಂಭಸ್ಥಳಗಳಲ್ಲಿಯೂ ಕೊಂಬುಗಳ
ಮೇಲೂ ಬೆನ್ನುಗಳ ಮೇಲೂ ಸಂತೋಷದಿಂದ ಕುಳಿತುಕೊಂಡು ಚಪ್ಪರಿಸುತ್ತ ಹೊರ
ಟವು. ಆ ಕೂಡಲೆ ಲಂಕಾರಾಜನಾದ ವಿಭೀಷಣನೊಡನೆ ಬಂದಿದ್ದ ರಾಕ್ಷಸ ಸಮೂ
ಹವು ಯಥೋಚಿತವಾಹನಾರೂಢವಾಗಿ ಹೊರಟಿತು. ಶ್ರೀರಾಮಚಂದ್ರನು ಅದನ್ನು
ನೋಡಿ ಪರಮೋಲ್ಲಾಸದಿಂದ ತಾನು ಸೀತಾಸಮೇತನಾಗಿ ರಥಾರೂಢನಾಗಲು;
ಭರತನು ಕುದುರೆಗಳ ಕಡಿವಾಣಗಳನ್ನು ಹಿಡಿದುಕೊಂಡು ರಥವನ್ನು ನಡಿಸುತ್ತ
ಸಾರಥಿಯ ಕೆಲಸವನ್ನು ಮಾಡುತ್ತ ನಡೆದನು. ಲಕ್ಷ್ಮಣ ಶತ್ರುಘ್ನರು ಧವಳ ಚಾಮ
ರಗಳನ್ನು ಬೀಸುತ್ತ ಹೊರಟರು. ಶರಣಾಗತನಾದ ವಿಭೀಷಣನು ಬೆಳ್ಗೊಡೆಯನ್ನು

ಹಿಡಿದು ನಡೆದನು. ಕೌಸಲ್ಯಾದಿ ಅಂತಃಪುರ ಪರಿವಾರಗಳ ಅಂದಣಗಳು ಅವರೆಯ ರೊಡನೆ ಸಾಲುಸಾಲಾಗಿ ಹೊರಟವು. ಆಗ ಚತುರಂಗಬಲವೂ ವಿವಿಧವಾದ ಊಳಿಗ ದವರೂ ಇವರೇ ಮೊದಲಾದ ಸಮಸ್ತ ಜನರೂ ತತ್ತತ್ಕ್ರಮಾನುಸಾರವಾಗಿ ಹೊರಟು ಬರುತ್ತಿದ್ದರು.

ಅತ್ತ ಮೊದಲೇ ಮಾರ್ಗಸಮೀಕರಣಾರ್ಥವಾಗಿ ನಿಯಮಿತರಾಗಿ ಹೋಗಿದ್ದ ಶಿಲ್ಪಕಾರರು ಆ ನಂದಿಗ್ರಾಮದಿಂದ ರಾಜಧಾನಿಯಾದ ಅಯೋಧ್ಯಾನಗರದ ಪರ್ಯಂ ತರವೂ ಹಳ್ಳತಿಟ್ಟುಗಳನ್ನು ಸಮಮಾಡಿ ದೊಡ್ಡ ದೊಡ್ಡ ಹಳ್ಳಗಳಿಗೂ ತೊರೆಗಳಿಗೂ ಬಲವಾದ ಸೇತುಗಳನ್ನು ಕಟ್ಟಿ ಮಾರ್ಗದಲ್ಲೆಲ್ಲಾ ಸಣ್ಣ ಸಣ್ಣ ಕಲ್ಲುಗಳನ್ನೂ ಮಣ್ಣ ನ್ನೂ ಹಾಕಿ ಗಟ್ಟಿಸಿ ಅಣುಮಾತ್ರವೂ ವ್ಯತ್ಯಾಸವಿಲ್ಲದಂತೆ ಇರುವ ಗಂಧದ ಕಲ್ಲೋ ಎಂಬಂತೆ ಮಾಡಿದರು. ಮತ್ತು ನಂದಿಗ್ರಾಮದಿಂದ ಅಯೋಧ್ಯೆಯ ವರೆಗೂ ಮಹೋ ನ್ನತವಾದ ಚಪ್ಪರವನ್ನು ಹಾಕಿ ಮಾಂದಳಿರು ಬಾಳೆಗಂಬ ವಿವಿಧವಾದ ಕುಸುಮ ಗುಚ್ಛ ಬಾಳೆಗೊನೆ ಎಳನೀರು ಈ ಮೊದಲಾದ ಮಂಗಲವಸ್ತುಗಳಿಂದಲೂ ವಿಚಿತ್ರಾಂ ಬರಗಳಿಂದಲೂ ತೋರಣಧ್ವಜ ಪತಾಕೆಗಳಿಂದಲೂ ಅಲಂಕರಿಸಿ ನೋಡುವವರ ನೇತ್ರ ಗಳಿಗೂ ಯೋಚಿಸುವವರ ಮನಸ್ಸುಗಳಿಗೂ ಆಶ್ಚರ್ಯವನ್ನುಂಟುಮಾಡುವಂತೆ ಮಾಡಿ ದರು. ಮತ್ತು ಅಲ್ಲಿಗಲ್ಲಿಗೆ ಎಳನೀರು ನೀರ್ಮಜ್ಜಿಗೆ ಪಾನಕ ಫಲಾಹಾರದ್ರವ್ಯ ಗಂಧ ಪುಷ್ಪ ತಾಂಬೂಲ ಈ ಮೊದಲಾದುವುಗಳಿಂದ ಕೂಡಿ, ಲೋಕದಲ್ಲಿ ಸುಕೃತಿಗಳಾದ ವರು ಸ್ವರ್ಗಕ್ಕೆ ಹೋಗುವ ದಾರಿಯೊಂದಿದ್ದರೆ ಅದು ಇದೇ ಎಂಬುವಂತೆ ಪರಿರಂಜಿ ಸುವ ಅರವಟಿಗೆಗಳು ಏರ್ಪಡಿಸಲ್ಪಟ್ಟುವು. ಅಲ್ಲಿಗಲ್ಲಿಗೆ ಲತಾಮಂಟಪಗಳೂ ಸಮಸ್ತಾ ಹಾರ ಸಾಮಗ್ರಿಗಳಿಂದ ಸಂಪೂರಿತವಾದ ಬೀಡಾರಗಳೂ ನಯವಾದ ಗಾರೆಯಿಂದ ಮಾಡಲ್ಪಟ್ಟು ಕಾಳಂಜಿಗಳಿಂದ ತುಂಬಲ್ಪಟ್ಟ ನಿರ್ಮಲೋದಕಗಳಿಂದ ಕೂಡಿದ ಕೊಳ ಗಳೂ ರಾರಾಜಿಸಿದುವು. ಮತ್ತು ಶ್ರೀರಾಮನು ಮೊದಲು ಅಯೋಧ್ಯಾನಗರವನ್ನು ಬಿಟ್ಟು ಅರಣ್ಯಕ್ಕೆ ಹೋದಾರಭ್ಯ ರಾಜಧಾನಿಯಲ್ಲೂ ದೇಶದಲ್ಲೂ ಸರ್ವಜನರೂ ವ್ಯಸನಾಕ್ರಾಂತರಾಗಿದ್ದುದರಿಂದ ಕೆಲಕೆಲರು ಪೊಳಲು ಊರು ಹಳ್ಳಿ ಇವುಗಳನ್ನು ಬಿಟ್ಟು ಹೋಗಿ ಪರದೇಶವಾಸಿಗಳಾದುದರಿಂದ ಅವುಗಳೆಲ್ಲವೂ ಹಾಳುಬಿದ್ದು ಮನೆಗಳು ಮುರಿದು ಕಂಬ ಬೋದಿಗೆಗಳೆಲ್ಲಾ ಬಿದ್ದು ತೊಟ್ಟಿ ಪಡಸಾಲೆಗಳೆಲ್ಲಾ ಅಮಂಗಲಗಳಾಗಿ ಮಹೋನ್ನತವಾದ ಮಹಡಿಗಳೆಲ್ಲಾ ನೆಲಸಮನಾಗಿ ವಿಶೇಷವಾದ ಹಾಳುಗೋಡೆಗಳೇ ಕಾಣಿಸುತ್ತ ಹೆಗ್ಗಣಗಳಿಗೂ ಇಲಿಗಳಿಗೂ ಆವಾಸಗಳಾಗಿ ಎಲ್ಲಿ ನೋಡಿದರೂ ಇಲಿಬಿಲ ಗಳೂ ಹುಲ್ಲುಗಿಡಗಳೂ ಕಾಣಿಸುತ್ತಿದ್ದುವು. ಆ ಸ್ಥಳಗಳಲ್ಲಿ ಮೊಲ ನರಿ ತೋಳ ಮೊದಲಾದುವುಗಳು ಬಂದು ವಾಸಮಾಡುತ್ತಿದ್ದುವು. ಎಲ್ಲಿ ನೋಡಿದರೂ ಗೆದ್ದಲು ಗಳೂ ಸೊಳ್ಳೆಗಳೂ ಜೇನ್ನೊಣಗಳೂ ಮೊರೆಯುತ್ತಿದ್ದುವು ಹಾಳುಮನೆಗಳಲ್ಲಿ ಮುಂಗಿಸಿಗಳು ಓಡಿಯಾಡುತ್ತಿದ್ದುವು. ಹಾವುಗಳು ಫೂತ್ಕರಿಸುತ್ತ ಇಲಬಿಲಗಳನ್ನು ಹೊಕ್ಕು ಹೊರಟು ತಿರುಗುತ್ತಿದ್ದುವು. ಈ ರೀತಿಯಾಗಿ ಇನ್ನೂ ವಿವಿಧವಾದ ವಿಕಾರ ಸ್ಥಿತಿಗಳನ್ನು ಹೊಂದಿ ನೋಡುವವರಿಗೆ ದುಃಖಾಶ್ಚರ್ಯಭೀತಿಭಾವಗಳನ್ನು ಹುಟ್ಟಿ

ಸುತ್ತ ಅಯೋಧ್ಯಾನಗರ ದೇಶಗಳ ಸ್ಥಿತಿಯು ಬಹು ಪರಿತಾಪಕರವಾಗಿದ್ದಿತು. ಆಗ ರಾಜಕೋಶದಿಂದ ಕೊಡಲ್ಪಟ್ಟ ದ್ರವ್ಯರಾಶಿಯಿಂದ ಹೊಸದಾದ ಸ್ವರ್ಗಸೀಮೆಯೋ ಎಂಬಂತೆ ದೇಶವೆಲ್ಲವೂ ಮಂಗಳಕರವಾದ ಸುಸ್ಥಿತಿಯಿಂದ ಆಶ್ಚರ್ಯವನ್ನು ಬೀರುತ್ತ ಮನೋಹರತೆಯಿಂದ ಒಪ್ಪಿತು. ಅಯೋಧ್ಯಾ ದೇಶದಲ್ಲಿ ಎಲ್ಲಿ ನೋಡಿದರೂ ಊರೂರುಗಳಲ್ಲಿ ತೋರಣ ಚಿತ್ರಪತಾಕಾಧ್ವಜಾದಿ ಮಂಗಳಸೂಚಕವಸ್ತುಗಳು ರಾರಾಜಿಸಿದುವು. ಬೀದಿಬೀದಿಗಳಲ್ಲಿ ಉತ್ಸವಗಳು ಭಜನೆಗಳು ಮನಂಗೊಳಿಸಿದುವು. ಲೋಕದಲ್ಲಿ ಪುಣ್ಯಾತ್ಮರ ಭೋಗಯೋಗ್ಯವಾದ ಅಮರಾವತಿಯೊಂದಿದ್ದರೆ ಅದೇ ಇದು ಎಂಬಂತೆ ವಾಚಾಮಗೋಚರವಾದ ಶೃಂಗಾರದಿಂದ ಅಯೋಧ್ಯಾನಗರವು ಪರಿಶೋಭಿಸಿತು. ಪ್ರತಿಯೊಂದು ಮಂದಿರವೂ ವಿಚಿತ್ರಾಲಂಕಾರದಿಂದ ಕೂಡಿ ನೋಟಕರ ಕಣ್ಬಗೆಗಳನ್ನು ಸೆಳೆಯುತ್ತ ಒಪ್ಪುತ್ತಿದ್ದಿತು. ರಾಜಾಲಯಗಳ ಮತ್ತು ದೇವಾಲಯಗಳ ಚಿತ್ರಶೃಂಗಾರ ಚಮತ್ಕೃತಿಗಳನ್ನು ಬಣ್ಣಿಸುವುದಕ್ಕೆ ಬರುವುದಿಲ್ಲವು. ವಿದೇಶಗತರಾಗಿದ್ದ ಜನರೆಲ್ಲರೂ ಸಂತೋಷಭಾವಭರಿತವಾದ ಹೃದಯವುಳ್ಳವರಾಗಿ ಅಮೂಲ್ಯಾಂಬರಾಭರಣಗಳಿಂದ ಭೂಷಿಸಿಕೊಂಡು ಬಂದು ನೆರೆದರು. ಅನಂತರದಲ್ಲಿ ಶ್ರೀರಾಮದರ್ಶನೋತ್ಸುಕತೆಯಿಂದ ಸಮಸ್ತ ದೇಶದ ಪ್ರಜೆಗಳೂ ಬಂದು ನೆರೆದರು. ಮುನಿಜನಗಳೂ ಮಂತ್ರಿಗಳೂ ಸಮಸ್ತ ಪರಿವಾರದೊಡನೆ ಕೂಡಿದವರಾಗಿ ಮಂಗಳದ್ರವ್ಯಗಳನ್ನು ತೆಗೆದುಕೊಂಡು ಬಂದು ನಿಂತರು. ಕೂಡಲೆ ಶ್ರೀರಾಮದರ್ಶನಾರ್ಥವಾಗಿ ನಾಲ್ಕು ಸಮುದ್ರಗಳೂ ಬಂದು ನೆರೆದುವೋ ಎಂಬಂತೆ ಚತುರಂಗಬಲಗಳು ಬಂದು ನಿಂತುವು ವಿವಿಧವಾದ್ಯಗಳು ಮೊರೆಯುತ್ತ ದಿಙ್ಮಂಡಲಗಳಲ್ಲಿ ಪ್ರತಿಧ್ವನಿಯನ್ನು ಹುಟ್ಟಿಸುತ್ತಿದ್ದುವು. ಆಗ ಪ್ರಮುಖರಾದ ಅಧಿಕೃತಿಗಳೂ ಪುರಜನರೂ ಶಿಲ್ಪಕಾರರೂ ಒಂದುಗೂಡಿ ಶ್ರೀರಾಮನ ಬರುವಿಕೆಯನ್ನು ಎದುರುನೋಡುತ್ತ ಪುಷ್ಪಫಲಗಳನ್ನು ಹಿಡಿದು ನಿಂತರು.

ಅನಂತರದಲ್ಲಿ ಶ್ರೀರಾಮಚಂದ್ರನು ಹೊರಟು ಗೋಧೂಳೀ ಲಗ್ನದಲ್ಲಿ ಅಯೋಧ್ಯಾನಗರವನ್ನು ಪ್ರವೇಶಿಸಿ ತನ್ನ ತಂದೆಯಾದ ದಶರಥಮಹಾರಾಜನ ಅರಮನೆಯನ್ನು ಹೊಕ್ಕು ಅಲ್ಲಿಳಿದುಕೊಂಡು ತನ್ನ ಪ್ರಿಯಸಹೋದರನಾದ ಭರತನನ್ನು ನೋಡಿ—ಎಲೈ ಭರತನೇ, ನಮ್ಮ ಪ್ರಾಣಸಖನಾದ ಸುಗ್ರೀವನು ನಮಗೆ ಪರಮೋಪಕಾರವನ್ನು ಮಾಡಿದವನಾದುದರಿಂದ ಸೇನಾಸಮೇತನಾಗಿ ನೀನೇ ಹೋಗಿ ಆತನನ್ನು ವಿಭವದೊಡನೆ ಕರೆದುಕೊಂಡು ಬಂದು ನನ್ನ ಮೊದಲಿನರಮನೆಯಲ್ಲಿಳಿಸಿ ಆತನ ಉಪಚಾರ ವಿಷಯದಲ್ಲಿ ಯಾವ ಭಾಗದಲ್ಲೂ ಕೊರತೆಯುಂಟಾಗದಂತೆ ವಿಚಾರಿಸಿಕೊಳ್ಳುವವನಾಗು ಹೋಗು ಎಂದು ಅಪ್ಪಣೆಯನ್ನು ಕೊಡಲು ; ಆಗ ಅನುಜ್ಞಾತನಾದ ಭರತನು ಸಂತೋಷದಿಂದ ಕೂಡಿ ಸಮಸ್ತ ಪರಿವಾರಸಮೇತನಾಗಿ ಸುಗ್ರೀವನ ಬಳಿಗೆ ಬಂದು ಪ್ರೀತಿಯಿಂದ ಆತನ ಕೈಯನ್ನು ಹಿಡಿದುಕೊಂಡು ಕುಶಲಪ್ರಶ್ನೆಯಂಗೆಯ್ದು ಸಕಲ ಮರ್ಯಾದೆಯಿಂದ ಶ್ರೀರಾಮನ ಮೊದಲಿನರಮನೆಗೆ ಕರೆದುಕೊಂಡು ಬಂದು ಅಲ್ಲಿಳಿಸಿ ಸುಗ್ರೀವನನ್ನು ಕುರಿತು—ಎಲೈ ಪ್ರಿಯಸಖನೇ, ಮಹಾತ್ಮನಾದ ವಾನರಚಕ್ರೇಶ್ವರನೇ, ನೀನು ನಮಗೆ ಮಾಡಿದ ಮಹೋಪಕಾರಕ್ಕೆ ಪ್ರತಿಯಾಗಿ ನಾವು ನಿನಗೆ ಏನನ್ನು ತಾನೆ ಮಾಡಬಲ್ಲೆವು ? ನಾಲ್ಕು ಜನ ಸಹೋದರರಾದ ನಮ್ಮಲ್ಲಿ ನೀನು ಐದನೆಯವನು.

ಭೂಲೋಕದಲ್ಲಿ ನಿನಗೆ ಸಮಾನರಾದವರಾರುಂಟು ? ಶಾಶ್ವತವಾದ ನಿನ್ನ ಕೀರ್ತಿಗೂ ಪರಹಿತಕ್ಕೋಸ್ಕರವಾಗಿ ಉಪಯುಕ್ತವಾದ ನಿನ್ನ ಬಲಕ್ಕೂ ಮೂರು ಲೋಕಗಳಲ್ಲೂ ಎಣೆಯುಂಟೇ ? ಇಲ್ಲವು ಎಂದು ವಿವಿಧವಾಗಿ ಸುಗ್ರೀವನ ಸುಗುಣಕಥನವನ್ನು ಮಾಡಿ ನಾಳಿನ ದಿನ ನಡೆಯುವ ಶ್ರೀರಾಮಚಂದ್ರನ ಪಟ್ಟಾಭಿಷೇಕ ಮಹೋತ್ಸವಕ್ಕಾಗಿ ಚತುಸ್ಸಮುದ್ರೋದಕಗಳನ್ನೂ ಗಂಗಾದಿ ಮಹಾನದ್ಯುದಕಗಳನ್ನೂ ದಿವ್ಯೌಷಧೀರಸಗಳನ್ನೂ ತರುವುದಕ್ಕೋಸ್ಕರವಾಗಿ ಕಪಿವೀರರಿಗೆ ಅಪ್ಪಣೆಯನ್ನು ಮಾಡು ಎಂದು ಹೇಳಲು ಸುಗ್ರೀವನು ಆ ಕ್ಷಣದಲ್ಲಿಯೇ ಮಹಾ ಪರಾಕ್ರಮಶಾಲಿಗಳಾದ ಜಾಂಬವಂತ ವೇಗದರ್ಶಿ ಋಷಭ ಹನುಮಂತ ಇವರನ್ನು ಕರೆದು ಕ್ರಮವಾಗಿ ಮೂಡ ಪಡುವ ತೆಂಕ ಬಡಗ ದೆಸೆಗಳಲ್ಲಿರುವ ಸಮುದ್ರಗಳ ಉದಕಗಳನ್ನೂ ನದಿಗಳ ಉದಕಗಳನ್ನೂ ದಿವ್ಯೌಷಧೀರಸಗಳನ್ನೂ ತೆಗೆದುಕೊಂಡು ಈ ರಾತ್ರಿ ಬೆಳಗಾಗುವಷ್ಟರಲ್ಲಿಯೇ ಇಲ್ಲಿಗೆ ಬರಬೇಕೆಂದು ನೇಮಿಸಿ ನವರತ್ನಖಚಿತಗಳಾದ ಸುವರ್ಣ ಕುಂಭಗಳನ್ನು ಕೊಡಿಸಿ ಕಳುಹಿಸಿದನು. ಅವರೆಲ್ಲರೂ ಅದೇ ಪ್ರಕಾರವಾಗಿ ಹೊರಟುಹೋಗಿ ಎರಡು ಜಾವಗಳ ಹೊತ್ತಿಗೆ ಚತುಸ್ಸಮುದ್ರಾದ್ಯುದಕಗಳನ್ನೂ ದಿವ್ಯೌಷಧೀರಸಗಳನ್ನೂ ತೆಗೆದುಕೊಂಡು ಬಂದು ಭರತನಿಗೆ ಒಪ್ಪಿಸಿದರು.

ಅನಂತರದಲ್ಲಿ ಸೂರ್ಯೋದಯವಾಗಲು ; ಆ ಕೂಡಲೆ ಕೌಸಲ್ಯಾದೇವಿಯು ತನ್ನ ಪ್ರಿಯಪುತ್ರನಾದ ಶ್ರೀರಾಮಚಂದ್ರನಿಗೆ ಪಟ್ಟಾಭಿಷೇಕ ಮಹೋತ್ಸವವು ನಿರ್ವಿಘ್ನತೆಯಿಂದ ನಡೆಯುವುದೆಂಬ ಹರ್ಷಾತಿಶಯದಿಂದ ಕೂಡಿದವಳಾಗಿ ಅರಮನೆಯ ಸಭಾ ಮಂದಿರವನ್ನೆಲ್ಲಾ ಕಸ್ತೂರೀಮಿಶ್ರೋದಕದಿಂದ ಸಾರಣಿಗೆಯ್ಸಿ ಮುತ್ತಿನ ರಂಗವಲ್ಲಿಗಳನ್ನು ಬಿಡಿಸಿ ಅತಿ ರಮ್ಯವಾದ ಹಸೆಯ ಜಗಲಿಯ ಮೇಲೆ ಶಾಸ್ತ್ರೋಕ್ತಕ್ರಮಾನುಸಾರವಾಗಿ ಹಸೆಯನ್ನು ಬರೆಯಿಸಿ ಅದರ ಮೇಲೆ ನವರತ್ನಖಚಿತವಾದ ಹಸೆಮಣೆಯನ್ನು ತಂದಿಡಿಸಿ ಅದರ ಮೇಲೆ ದಿವ್ಯರತ್ನಕಂಬಳಿಗಳನ್ನು ಹರವಿಸಿ ಅದರ ಮುಂಗಡೆಯಲ್ಲಿ ಎರಡು ಬೀಸುಗಲ್ಲುಗಳನ್ನು ಗಂಧಪುಷ್ಪಾಕ್ಷತೆಗಳಿಂದಲಂಕರಿಸಿಡಿಸಿ ಹಾಗೆಯೇ ಎರಡು ಒನಕೆಗಳನ್ನು ಶೃಂಗರಿಸಿಡಿಸಿ ಸಗಣಿಯ ಉಂಡೆಗಳಿಂದ ವಿನಾಯಕಗಳನ್ನು ಮಾಡಿಸಿ ಅವುಗಳ ಅಗ್ರಭಾಗಗಳಲ್ಲಿ ಗರಿಕೆ ಹುಲ್ಲುಗಳನ್ನು ಸಿಕ್ಕಿಸಿ ಅದರ ನಾಲ್ದೆಸೆಗಳಲ್ಲೂ ಇಡಿಸಿ ಒಂದು ದೊಡ್ಡ ತಟ್ಟೆಯಲ್ಲಿ ಮಲ್ಲಿಕಾದಿ ಕುಸುಮಗಳನ್ನೂ ಇನ್ನೊಂದರಲ್ಲಿ ಎಲೆಯಡಿಕೆ ತೆಂಗಿನಕಾಯಿ ಬಾಳೆಯ ಹಣ್ಣುಗಳನ್ನೂ ಮತ್ತೊಂದು ತಟ್ಟೆಯಲ್ಲಿ ಮಂತ್ರಾಕ್ಷತೆಗಳನ್ನೂ ಇನ್ನೊಂದರಲ್ಲಿ ಅರಿಸಿನದ ಪುಡಿಯನ್ನೂ ಮತ್ತೊಂದರಲ್ಲಿ ಗೋಧಿಯ ಹಿಟ್ಟನ್ನೂ ಇನ್ನೊಂದರಲ್ಲಿ ದಿವ್ಯ ಗಂಧವನ್ನೂ ನವರತ್ನಖಚಿತವಾದ ಕಿಣ್ಣಾದಲ್ಲಿ ದಿವ್ಯ ಪರಿಮಳ ಯುಕ್ತವಾದ ಎಣ್ಣೆಯನ್ನೂ ತಂದಿರಿಸಿ ಇನ್ನೂ ವಿವಿಧವಾದ ಸಾಮಗ್ರಿಗಳನ್ನು ತಂದಿಡಿಸಿ ಅವೀರೆಯರನ್ನು ಕರಿಸಿ ಊರಿನಲ್ಲಿರುವ ವೃದ್ಧೆಯರಾದ ಸುಮಂಗಲೆಯರನ್ನೆಲ್ಲಾ ಕರಿಸಿಕೊಂಡು ಅವರನ್ನು ಕುರಿತು—ಸೀತಾರಾಮರನ್ನು ಹಸೆಮಣೆಯ ಮೇಲೆ ಕುಳ್ಳಿರಿಸಿ ಓಲಗ ತಾಳ ಮೇಳ ಪಿಳ್ಳಂಗೋವಿ ಮೊದಲಾದ ಸಮಸ್ತ ವಾದ್ಯರವಗಳೊಡನೆ ಸಂಭ್ರಮದಿಂದ ಅವರಿಗೆ ಎಣ್ಣೆಯ ಶಾಸ್ತ್ರಗಳನ್ನು ಬೆಳಿಸಿರಿ ಎಂದು ಸಂತೋಷದಿಂದ ಹೇಳಿದಳು. ಆಗ ಕುಲದ ಸಂಪ್ರದಾಯಗಳನ್ನು ತಿಳಿದಂಥ ಐದು ಜನ

ವೃದ್ಧ ಸುವಾಸಿನಿಯರು ಬಂದು ಅಲ್ಲಿಟ್ಟಿದ್ದ ಸಗಣಿಯ ವಿನಾಯಕಗಳನ್ನು ಗಂಧ ಪುಷ್ಪಾಕ್ಷತೆಗಳಿಂದ ಪೂಜಿಸಿ ತೆಂಗಿನಕಾಯಿಗಳನ್ನು ಒಡೆದು ಆ ಹೋಳುಗಳನ್ನೂ ಬಾಳೇಹಣ್ಣುಗಳನ್ನೂ ಎಲೆಯಡಿಕೆಗಳನ್ನೂ ನೈವೇದ್ಯಮಾಡಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಎದ್ದು ಕೈಮುಗಿದು ನಿಂತುಕೊಂಡು--ಸ್ವಾಮಿಾ, ವಿಘ್ನಕುಲತಿಮಿರಭಾಸ್ಕರನೇ, ವಿಘ್ನಾಂಭೋಧಿಕುಂಭಸಂಭವನೇ, ನಮ್ಮ ಶ್ರೀರಾಮಚಂದ್ರನಿಗೆ ನಡೆಯುವ ಪಟ್ಟಾಭಿಷೇಕಮಹೋತ್ಸವವು ನಿರ್ವಿಘ್ನತೆಯಿಂದ ನಡೆಯುವಂತೆ ದಯೆಮಾಡಿ ಅನುಗ್ರಹಿಸಬೇಕೆಂದು ಬಹು ವಿಧವಾಗಿ ಬೇಡಿಕೊಂಡು ಪುನಃ ಭಯಭಕ್ತಿ ಪುರಸ್ಸರವಾಗಿ ಬಲಗೊಂಡು ಪೊಡಮಟ್ಟು ಎದ್ದು ಇಬ್ಬರು ಕೈಗಳಲ್ಲಿ ಒನಕೆಗಳನ್ನು ತೆಗೆದುಕೊಂಡು ಸುವ್ವಿಹಾಡುಗಳನ್ನು ಹಾಡುತ್ತ ಅರಿಸಿನವನ್ನು ಕುಟ್ಟಿ ಆ ಬಳಿಕ ಬೀಸುವ ಕಲ್ಲುಗಳಿಗೆ ಗೋಧಿಯ ಹಿಟ್ಟನ್ನು ಹಾಕಿಕೊಂಡು ಪದಗಳನ್ನು ಹೇಳುತ್ತ ಬೀಸಿ ಅನಂತರದಲ್ಲಿ ಇಬ್ಬರು ಮುತ್ತೈದೆಯರು ಸೀತಾರಾಮರಿಗೆ ಆಶೀರ್ವಾದಗಳನ್ನು ಮಾಡಿ ಚಿನ್ನದ ಬಟ್ಟಲಲ್ಲಿರುವ ಪರಿಮಳ ತೈಲವನ್ನು ತೆಗೆದುಕೊಂಡು ಸೀತೆಗೊಬ್ಬಳು ರಾಮನಿಗೊಬ್ಬಳು ಒತ್ತಿ ಮಂಗಳಗಳನ್ನು ಹಾಡುತ್ತ ಆರತಿಗಳನ್ನೆತ್ತಿದರು.

ಅನಂತರದಲ್ಲಿ ಸಂತುಷ್ಟಾಂತರಂಗಳಾದ ಕೌಸಲ್ಯಾದೇವಿಯು ಅರಿಸಿನ ಕುಂಕುಮ ಗಂಧ ಪುಷ್ಪ ಅಕ್ಷತೆ ಹಣ್ಣು ಕಾಯಿ ದಕ್ಷಿಣೆ ತಾಂಬೂಲ ಇವು ಮೊದಲಾದುವುಗಳಿಂದ ಸತ್ಕರಿಸಿ ಆ ಮುತ್ತೈದೆಯರನ್ನೆಲ್ಲಾ ಅವರವರ ಮನೆಗಳಿಗೆ ಕಳುಹಿಸಿಕೊಟ್ಟು ತರುವಾಯ ಅವ್ವೇರುಗಳನ್ನು ಕುರಿತು—ಸೀತಾರಾಮರಿಗೆ ಮಂಗಳಮಜ್ಜನವನ್ನು ಮಾಡಿಸಿ ದಿವ್ಯಾಂಬರಾಭರಣಗಳನ್ನು ಧರಿಸಿ ಅಲಂಕರಿಸಿರಿ ಎಂದು ಅಪ್ಪಣೆಯನ್ನು ಕೊಟ್ಟಳು. ಆ ಕೂಡಲೆ ವೃದ್ಧೆಯರೂ ಜಾಣೆಯರೂ ಆದ ಅವ್ವೇರುಗಳು ಬಂದು ಸೀತಾರಾಮರನ್ನು ಮಜ್ಜನದ ಮನೆಗೆ ಬಿಜಮಾಡಿಸಿಕೊಂಡು ಹೋಗಿ ಶುದ್ಧಸ್ಫಟಿಕ ಶಿಲಾನಿರ್ಮಿತವಾದ ಬಚ್ಚಲಲ್ಲಿ ಚಂದ್ರಕಾಂತಶಿಲಾಕಲ್ಪಿತಗಳಾದ ಕಾಲ್ಮಣೆಗಳ ಮೇಲೆ ಕುಳ್ಳಿರಿಸಿ ನವರತ್ನಖಚಿತಗಳಾದ ಹೊಂಗರಗಗಳಿಂದ ಬಲು ಬಿಸಿಯೂ ಬಲು ತಣ್ಪೂ ಆಗದಿರುವ ಪರಿಮಳೋದಕವನ್ನು ಎರೆದು ಅರಿಸಿನವೇ ಮೊದಲಾದ ಅಂಗರಾಗಗಳನ್ನು ಲೇಪಿಸಿ ಮತ್ತೆ ಮಂಗಳಸ್ನಾನವನ್ನು ಮಾಡಿಸಿ ಪರಿಶುದ್ಧವಾದ ದಿವ್ಯ ವಸ್ತ್ರಗಳಿಂದ ಮೈಯೊರಿಸಿ ರಾಮನಿಗೆ ದಿವ್ಯ ಪೀತಾಂಬರಗಳನ್ನುಡಿಸಿ ಹೊದಿಸಿ ಕಿರೀಟ ಕುಂಡಲ ಕೇಯೂರ ಕಟಕ ಮುದ್ರಿಕಾ ಹಾರಾದಿ ವಿವಿಧಾಭರಣಗಳನ್ನು ತೊಡಿಸಿ ದಿವ್ಯ ಗಂಧ ಮಾಲಿಕೆಗಳಿಂದ ಅಲಂಕರಿಸಿ ಕರೆದುಕೊಂಡು ಬಂದು ಹಜಾರದಲ್ಲಿ ನವರತ್ನಖಚಿತವಾದ ಸುವರ್ಣದ ಮಂಚದ ಮೇಲೆ ಕುಳ್ಳಿರಿಸಿ ಅನಂತರದಲ್ಲಿ ಲೋಕಮಾತೃವಾದ ಸೀತೆಯನ್ನು ಅಸದೃಶವಾಗಿ ಅಲಂಕರಿಸುವುದಕ್ಕೆ ಆರಂಭಿಸಿದರು.

ಅವರಲ್ಲಿ ಒಬ್ಬಳು ಜಾಣೆಯು ಸೀತಾದೇವಿಯ ರೂಪಲಾವಣ್ಯಗಳನ್ನು ನೋಡಿ ತಲೆದೂಗಿದವಳಾಗಿ—ಎಲೈ ಅಕ್ಕಂದಿರಾ, ಲೋಕದ ಸಾಧಾರಣ ಸ್ತ್ರೀಯರಿಗೆ ಆಭರಣಗಳನ್ನು ತೊಡಿಸಿ ಅಲಂಕರಿಸಿದರೆ ಆ ಆಭರಣಗಳಿಂದ ಅವರಿಗೆ ಒಂದು ವಿಧವಾದ ಚಲುವಿಕೆಯುಂಟಾಗುವುದು, ಈ ಮಹಾ ಸೌಂದರ್ಯವತಿಯಾದ ಸೀತಾದೇವಿಗೆ ಆಭರಣಗಳನ್ನಿಟ್ಟರೆ ಈಕೆಯ ಅನನ್ಯಸಾಧಾರಣ ರೂಪಲಾವಣ್ಯಗಳಿಂದ ಆ ತೊಡವು

ಗಳಿಗೇ ಅಸದೃಶವಾದ ಪ್ರಾಶಸ್ತ್ಯಮುಂಟಾಗುವುದೇ ಹೊರತು ಅವುಗಳಿಂದಿವಳಿಗೇನೂ ಸೌಂದರ್ಯವುಂಟಾಗಲಾರದು ಎಂದು ಹೇಳಲು ; ಆಗ ಮತ್ತೊಬ್ಬಳು—ಎಲೈ ತಂಗಿಯೇ, ನೀನು ಹೇಳಿದ ಮಾತು ಸತ್ಯವಾದುದೇ ಸರಿ. ಆದರೂ ಲೋಕದ ನಡವಳಿಕೆಯ ಪ್ರಕಾರ ಈಕೆಗೆ ಆಭರಣಗಳನ್ನು ತೊಡಿಸಬೇಕಾಗಿದೆ ಎಂದು ಹೇಳಿ ಸೀತಾದೇವಿಯ ಕಾಲ್ಬೆರಳುಗಳಿಗೆ ವಜ್ರದ ಆಣಿಮೆಟ್ಟು ಕಾಲುಂಗುರ ಬೊಬ್ಬುಳಿಕಾಯಿ ಅಕ್ಕಿಪಿಲ್ಲಿ ಕಿರುಫಿಲ್ಲಿಗಳೆಂಬ ಒಡವೆಗಳನ್ನು ಇಕ್ಕಿದುದರಿಂದ ಆ ಬೆರಳುಗಳ ಉಗುರುಗಳ ಶ್ರೇಷ್ಠವಾದ ಕಾಂತಿಯಿಂದ ಪರಾಜಿತಗಳಾದ ನಕ್ಷತ್ರಗಳು ಬಂದು ಸೀತಾದೇವಿಯ ಪದನಖಗಳನ್ನು ಸೇವಿಸುತ್ತಿವೆಯೋ ಎಂಬಂತೆ ಪ್ರಕಾಶಿಸಿದುವು. ಮತ್ತೊಬ್ಬಳು ವಿಲಾಸವತಿಯು ಅರಗಿನ ರಸವನ್ನು ತಂದು ಬತ್ತಿಯಿಂದ ಅದ್ದಿ ತೆಗೆದು ಸೀತಾದೇವಿಯ ಕಾಲ್ಪಕ್ಕ ಹಿಂಮಡಿಗಳಿಗೆ ಜೊಳಿದು ಶೃಂಗರಿಸಲು ; ಆ ಅರಗಿನ ರಸದ ಕಾಂತಿಯೊಡನೆ ಕೂಡಿದ ಪಾದದ ಕೆಂದಳಿರ್ವಣ್ಣವು ಸೂರ್ಯೋದಯ ಕಾಲದಲ್ಲಿ ಉಂಟಾಗುವ ಪ್ರಾತಸ್ಸಂಧ್ಯಾರಾಗವನ್ನು ಪಳಿಯುತ್ತಿದ್ದಿತು. ಇನ್ನೊಬ್ಬಳು ಗಾಡಿಕಾತಿಯು ಚಿನ್ನದಿಂದ ಮಾಡಲ್ಪಟ್ಟ ಮನೋಹರವಾದ ಉಳಿಯನ್ನು ತೆಗೆದುಕೊಂಡು ಬಂದು ಸೀತಾದೇವಿಯ ಕಾಲುಗಳಿಗೆ ಇಡಲು ; ಅವುಗಳು ಬಾಲಾದಿತ್ಯನ ಪರಿವೇಷದಂತೆ ಕಂಗೊಳಿಸಿದುವು. ಮತ್ತೊಬ್ಬಳು ಮಾನಿನಿಯು ಸುವರ್ಣದ ಸರಿಗೆಗಳಿಂದ ನೇಯಲ್ಪಟ್ಟು ಅತಿ ರಮ್ಯತೆಯನ್ನೊಳಗೊಂಡಿರುವ ದಿವ್ಯವಾದ ಸೀರೆಯನ್ನು ಚೆನ್ನಾಗಿ ನೆರಿಹಿಡಿದು ತಂದು ಉಡಿಸುವುದಕ್ಕೆ ಆರಂಭಿಸಿ ಬಲುಹೊತ್ತಿನ ವರೆಗೂ ಆಕೆಯ ನಡುವನ್ನು ಕಾಣದೆ ಕಡೆಗೆ ಪ್ರಯಾಸದಿಂದ ಬಡನಡುವನ್ನು ಕಂಡು ಉಡಿಸಿದಳು ಮತ್ತೊಬ್ಬಳು ಕಮಲವಿಮಲಮುಖಿಯು ಸುವರ್ಣದ ನ್ಯಾವಣದಿಂದಲೂ ಕಿರುಗೆಜ್ಜೆಗಳಿಂದಲೂ ಕೂಡಿ ನವರತ್ನ ಖಚಿತವಾದ ನಡುವಿನ ಪಟ್ಟಿಯನ್ನು ತಂದು ಜನಕನಂದಿನಿಯ ನಡುವಿಗಿಟ್ಟು ನೋಡಿ ಈ ಸೊಬಗು ಯಾರಿಗುಂಟೆಂದು ತಲೆದೂಗಿದಳು. ಇನ್ನೊಬ್ಬಳು ಭೂಮಿಜೆಯ ಕೈಬೆರಳುಗಳಿಗೆ ಚಿತ್ರವಿಚಿತ್ರಗಳಾದ ಉಂಗುರಗಳನ್ನು ತಂದು ತೊಡಿಸಿದಳು. ಇನ್ನೋರ್ವಳು ಹಸ್ತಗಳಿಗೆ ನವರತ್ನಖಚಿತಗಳಾದ ಕಟಕ ಹಿಂಬಳೆ ಚಳಿಕೆ ಮುಂತಾದ ಆಭರಣಗಳನ್ನೂ ತೋಳುಗಳಿಗೆ ನಾಗಮುರಿ ಬಾಜೇಬಂದುಗಳನ್ನೂ ಕೊರಳಿಗೆ ಕಂಠೀಸರ ಕಡಲೇಕಾಯಿಯ ಸರ ಜರೀ ಸರ ಮುತ್ತಿನ ಸರ ಜೋಮಾಲೆ ಅಡ್ಡಿಕೆ ನಕ್ಷತ್ರಮಾಲಿಕೆ ಈ ಮೊದಲಾದ ನಾನಾವಿಧವಾದ ಕಂಠಾಭರಣಗಳನ್ನೂ ಹಣೆಯಲ್ಲಿ ಶ್ರೇಷ್ಠಮೌಕ್ತಿಕಗಳಿಂದ ರಚಿಸಲ್ಪಟ್ಟ ಚುಟ್ಟಿಯನ್ನೂ ಮೂಗಿನಲ್ಲಿ ಮನೋಹರವಾದ ಮೂಗುತಿಯನ್ನೂ ನಡುದಲೆಯಲ್ಲಿ ಮಲಕುಗೊಂಡೇ ಧಾರಗಳನ್ನೂ ಹಿಂದಲೆಯಲ್ಲಿ ಜಡೆ ಭಂಗಾರವೇ ಮೊದಲಾದ ವಿವಿಧಾಭರಣಗಳನ್ನೂ ಇಟ್ಟು ಇನ್ನೂ ಹೇಳುವುದಕ್ಕೆ ಅಸಾಧ್ಯವಾದ ಅಪಾರಾಭರಣಗಳನ್ನೂ ಇಟ್ಟು ಶೃಂಗರಿಸಿದಳು. ಮತ್ತೊಬ್ಬಳು ದಿವ್ಯ ರತ್ನ ಪುಂಜರಂಜಿತವಾಗಿ ನೋಡುವವರ ಕಣ್ಬಾಗೆಗಳನ್ನು ಸೆಳೆಯುತ್ತ ಅಸದೃಶವಾಗಿರುವ ಕುಪ್ಪಸವನ್ನು ತೊಡಿಸಿದಳು. ಈ ರೀತಿಯಾಗಿ ವಿವಿಧಾಭರಣಾಂಬರಗಳಿಂದ ಭೂಷಿತಳಾದ ಸೀತಾದೇವಿಯನ್ನು ನೋಡಿ ಅಂತಃಪುರನಾರಿಯರು ತಲೆದೂಗಿ ನಲಿದು ಸೀತಾದೇವಿಯ ಜನ್ಮವನ್ನು ಕೊಂಡಾಡಿ ದಣಿದರು.

ಈ ಪ್ರಕಾರವಾಗಿ ಸರ್ವಜಗನ್ಮನೋಹರಾಂಗಿಯಾದ ಜನಕರಾಜನ ಮಗಳು ಸರ್ವ ದಿವ್ಯಾಂಬರಾಭರಣಭೂಷಿತಳಾಗಲು; ಆಗ ಸ್ತ್ರೀಯರು ದೃಷ್ಟಿದೋಷ ನಿವಾರಣಾರ್ಥವಾಗಿ ಆರತಿಯನ್ನೆತ್ತಿ ಹಜಾರದಲ್ಲಿ ಮಂಚದ ಮೇಲೆ ಕುಳಿತಿರುವ ರಾಮಚಂದ್ರನ ಬಳಿಗೆ ಕರೆದುಕೊಂಡು ಬಂದು ಅವನ ಬಲಗಡೆಯಲ್ಲಿ ಕುಳ್ಳಿರಿಸಿ ಅವರಿಬ್ಬರಿಗೂ ಸೊಡರಿನ ಆರತಿಗಳನ್ನು ಎತ್ತಿದರು. ಅಷ್ಟರಲ್ಲಿಯೇ ವಶಿಷ್ಠಮಹರ್ಷಿಗಳು ಬಂದು ತಮ್ಮ ಶಿಷ್ಯಮಂಡಲಿಯಿಂದ ವೇದ ಘೋಷಗಳನ್ನು ಮಾಡಿಸುತ್ತ ಸೀತಾರಾಮರನ್ನು ಓಲಗದ ಚಾವಡಿಗೆ ಕರೆದುಕೊಂಡು ಬಂದು ದಿವ್ಯ ಪೀಠಾಗ್ರದಲ್ಲಿ ಕುಳ್ಳಿರಿಸಿದರು. ತರುವಾಯ ವಶಿಷ್ಠರೇ ಮೊದಲಾದ ಎಂಟು ಜನ ಮಹರ್ಷಿಗಳೂ ಅಷ್ಟವಸುಗಳೂ ಇಂದ್ರನನ್ನು ಹೇಗೋ ಹಾಗೆ ನಿರ್ಮಲವಾಗಿಯೂ ದಿವ್ಯಪರಿಮಳ ಯುಕ್ತವಾಗಿಯೂ ಇರುವ ಪವಿತ್ರೋದಕದಿಂದ ಸೀತಾರಾಮರಿಗೆ ಅಭಿಷೇಕವನ್ನು ಮಾಡಿದರು. ಆ ಮೇಲೆ ಮುನಿಪತಿಗಳೂ ಮಂತ್ರಿಗಳೂ ದಳವಾಯಿಗಳೂ ಜ್ಞಾನವೃದ್ಧರೂ ವಯೋವೃದ್ಧರೂ ಆದ ಪುರಜನರೂ ಇವರೇ ಮೊದಲಾದ ಸರ್ವಜನರೂ ಚತುಸ್ಸಮುದ್ರೋದಕಗಳಿಂದಲೂ ಗಂಗಾದಿಮಹಾನದಿಗಳ ಪುಣ್ಯೋದಕಗಳಿಂದಲೂ ಅಖಿಲೌಷಧೀರಸಗಳಿಂದಲೂ ಕ್ರಮವಾಗಿ ಅಭಿಷೇಕವನ್ನು ಮಾಡಿ ಹರಸಿದರು. ಪೂರ್ವದಲ್ಲಿ ಸರೋಜಸಂಭವನು ತಾನೇ ದಿವ್ಯ ರತ್ನಮಯವಾದ ಮಹಾಕಿರೀಟವನ್ನು ನಿರ್ಮಿಸಿ ರಘುವಂಶದ ರಾಜರಿಗೆ ಆದ್ಯನಾದ ವೈವಸ್ವತಮನುವಿಗೆ ಕೊಟ್ಟಿದ್ದ ಅಸದೃಶವಾದ ಕಿರೀಟವನ್ನು ಪುರೋಹಿತರಾದ ವಶಿಷ್ಠರು ಸಂತೋಷದಿಂದ ತೆಗೆದುಕೊಂಡು ಬಂದು ರಾಮನ ಶಿರಸ್ಸಿಗೆ ಧರಿಸಿದರು. ಆಗ ಶತ್ರುಘ್ನನು ಶ್ವೇತಛತ್ರವನ್ನು ಹಿಡಿದು ನಿಂತನು. ಕಪಿರಾಕ್ಷಸ ರಾಜರಾದ ಸುಗ್ರೀವ ವಿಭೀಷಣರು ಶ್ವೇತ ಚಾಮರಗಳನ್ನು ಹಿಡಿದುಕೊಂಡು ಪಟ್ಟಾಭಿಷಿಕ್ತನಾದ ಶ್ರೀರಾಮನ ಉಭಯ ಪಾರ್ಶ್ವಗಳಲ್ಲೂ ಬೀಸುತ್ತಿದ್ದರು. ಆಗ ವಾಯುವು ದೇವೇಂದ್ರನಿಂದ ಪ್ರೇರಿತನಾಗಿ ದಿವ್ಯವಾದ ಮುತ್ತುಗಳ ಕಂಠಮಾಲಿಕೆಯನ್ನು ತೆಗೆದುಕೊಂಡು ಬಂದು ಶ್ರೀರಾಮಚಂದ್ರನ ಕೊರಳಿಗೆ ಹಾಕಿದನು. ಆಗ ದೇವಲೋಕದಲ್ಲಿ ಸುರದುಂದುಭಿಗಳು ಮೊಳಗಿದುವು. ಗಂಧರ್ವಾದಿ ದೇವಗಾಯಕರು ದಿವ್ಯಗಾನವನ್ನು ಮಾಡಿ ಸಂತೋಷಿಸಿದರು. ಅಪ್ಸರಾಂಗನೆಯರು ನರ್ತಿಸಿ ನಲಿದಾಡಿದರು. ದೇವತೆಗಳು ಪೂಮಳೆಯನ್ನು ಕರೆದರು. ಶೈತ್ಯಸೌರಭ್ಯಮಾಂದ್ಯಯುಕ್ತವಾದ ವಾಯುವು ಬೀಸಿತು. ದಿಕ್ಕುಗಳೆಲ್ಲಾ ನಿರ್ಮಲವಾದುವು. ಸುಜನರ ಹೃದಯಗಳೆಲ್ಲವೂ ಪ್ರಸನ್ನತೆಯನ್ನು ಹೊಂದಿ ಆನಂದಯುಕ್ತಗಳಾದುವು. ಪುಣ್ಯಕರ್ಮಲತೆಯು ಕುಡಿವಡೆದು ಹಬ್ಬಿತು. ಸತ್ಯವು ನಿಶ್ಚಂಚಲತೆಯನ್ನೊಳಗೊಂಡಿತು. ದೇಶವೆಲ್ಲವೂ ನಿರ್ಭಯದಿಂದೊಡಗೂಡಿತು. ವೇದಶಾಸ್ತ್ರಗಳ ಪ್ರಚಾರವು ಅಭಿವೃದ್ಧಿಗೆ ಬಂದಿತು. ವಿಶೇಷವರ್ಣನೆಯಿಂದೇನು ? ರಘುಕುಲದ ಕೀರ್ತಿಚಂದ್ರನು ಪ್ರಸಿದ್ಧ ಚಂದ್ರನನ್ನು ಹೊಯ್ದುಪ್ಪಳಿಸಿ ಕ್ಷಯಕ್ಕೆ ಗುರಿಮಾಡಿದನು. ಸರ್ವಲೋಕವೂ ಆನಂದಾಂಬುಧಿಯೊಳಗೆ ಮುಳುಗಿತು. ಅನಂತರದಲ್ಲಿ ಶ್ರೀರಾಮಚಂದ್ರನು ಚತುರ್ವರ್ಣದವರಿಗೂ ದೀನಾನಾಥವಿಪನ್ನರಿಗೂ ಕುರುಡ ಕುಂಟರೇ ಮೊದಲಾದ ಅಂಗಹೀನರಿಗೂ ಅಪರಿಮಿತವಾದ ಧನಕನಕವಸ್ತ್ರಾಭರಣಾದಿಗಳನ್ನು ಕೊಟ್ಟು ದಣಿಸಿದನು. ಆಗ ಸಂತೋಷಯುಕ್ತನಾದ ಶ್ರೀರಾಮ

ಚಂದ್ರನು ತಮ್ಮನಾದ ಲಕ್ಷ್ಮಣನನ್ನು ನೋಡಿ—ಎಲೈ ಪ್ರಿಯ ಸಹೋದರನೇ, ನೀನು ಹದಿನಾಲ್ಕು ಸಂವತ್ಸರಗಳಿಂದಲೂ ನನ್ನೊಡನೆ ಕಾಡಿನಲ್ಲಿ ಮಹಾಕಷ್ಟವನ್ನು ಅನುಭವಿಸಿದವನಾದಿ. ಈಗ ಯೌವರಾಜ್ಯವನ್ನು ವಹಿಸಿ ನನ್ನೊಡನೆ ಸುಖದಿಂದಿರುವವನಾಗು ಎಂದು ಎಷ್ಟು ವಿಧದಲ್ಲಿ ಒಡಂಬಡಿಸಿದಾಗ್ಯೂ ಲಕ್ಷ್ಮಣನು ಒಪ್ಪದೆ— ಎಲೈ ಶ್ರೀರಾಮಚಂದ್ರನೇ, ಮಹಾತ್ಮನಾದ ನಿನ್ನ ಪಾದಗಳನ್ನು ಸೇವಿಸಿಕೊಂಡಿರುವುದೇ ನನಗೆ ಸ್ವರ್ಗಪದವಿಯು ಎಂದು ಹೇಳಲು; ಅನಂತರದಲ್ಲಿ ಶ್ರೀರಾಮನು ಭರತನಿಗೆ ಯುವರಾಜ್ಯಾಭಿಷೇಕವನ್ನು ಮಾಡಿಸಿ ಸುಗ್ರೀವಾಂಗದಾಂಜನೇಯಾದಿ ಕಪಿನಾಯಕರಿಗೂ ವಿಭೀಷಣಾದಿ ರಾಕ್ಷಸರಿಗೂ ಅವರವರ ಮನಸ್ಸಿನ ಕೋರಿಕೆಗಳನ್ನು ನೆರವೇರಿಸಿಕೊಟ್ಟು ಸಂತೋಷವನ್ನುಂಟುಮಾಡಿ ಕಳುಹಿಸಿಕೊಟ್ಟು ತಾನು ತಮ್ಮಂದಿರೊಡನೆ ಕೂಡಿ ಧರ್ಮದಿಂದ ಕೋಸಲರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದನು.

ಲೋಕಾನಂದಕರನಾದ ಶ್ರೀರಾಮಚಂದ್ರನು ಈ ರೀತಿಯಾಗಿ ಧರ್ಮಮಾರ್ಗವನ್ನು ಅತಿಕ್ರಮಿಸದೆ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದ ಕಾಲದಲ್ಲಿ ಆತನ ದೇಶದಲ್ಲಿ ಸ್ವಲ್ಪವಾದರೂ ಕಾಲಕ್ರಮವನ್ನು ಅತಿಕ್ರಮಿಸದೆ ಮುಗಿಲುಗಳು ಸಮೃದ್ಧಿಯಾಗಿ ಮಳೆಗಳನ್ನು ಕರೆಯುತ್ತಿದ್ದುವು. ಭೂಮಿಯೆಲ್ಲವೂ ಸಕಲ ವಿಧವಾದ ಬೆಳೆಗಳಿಂದ ಕೂಡಿ ಲೋಕಾನಂದದಾಯಕವಾಗಿದ್ದಿತು. ಧನಿಕರೆಲ್ಲರೂ ದರಿದ್ರರಿಗೆ ಸಹಾಯವನ್ನು ಮಾಡುತ್ತ ಅವರ ದಾರಿದ್ರ್ಯವನ್ನು ನಿರ್ಮೂಲನಂಗೆಯ್ಯುತ್ತಿದ್ದರು. ರಾಮನ ರಾಜ್ಯದಲ್ಲಿ ಸರ್ವರೂ ನೆರೆಯವರ ಮಹದೈಶ್ವರ್ಯವನ್ನು ನೋಡಿ ಪರಮಸಂತೋಷದಿಂದ ಹಿಗ್ಗುತ್ತಿದ್ದರೇ ಹೊರತು ಅಸೂಯೆಯಿಂದ ಕೂಡಿದವರು ಒಬ್ಬರಾದರೂ ಇರಲಿಲ್ಲ. ಸಮಸ್ತರೂ ವಯಃಪೂರ್ತಿಯಿಂದ ಮೃತಿಯನ್ನು ಹೊಂದುತ್ತಿದ್ದರೇ ಹೊರತು ಅಕಾಲಮರಣವೆಂಬುದು ದಶರಥನಂದನನ ಪ್ರಜೆಗಳಲ್ಲಿ ನಿರ್ನಾಮವಾಗಿದ್ದಿತು. ಉಂಡಮನೆಗೆರಡುಬಗೆವವರೂ ಕೊಂಡ ಸಾಲಗಳನ್ನು ಹರಿಸದವರೂ ಮೋಸದಿಂದ ಜೀವಿಸುವವರೂ ಕಳ್ಳತನದಿಂದ ಪರರ ದ್ರವ್ಯಗಳನ್ನು ಅಪಹರಿಸುವವರೂ ಇಲ್ಲದ ದೋಷಗಳನ್ನು ಹೇಳುವವರೂ ಕೋಸಲರಾಜ್ಯವನ್ನು ಇಟ್ಟಣಿಕಿ ನೋಡಲಮ್ಮರು. ಚಾಡಿಕಾರರೂ ದುಷ್ಟರೂ ನಿಂದಕರೂ ಈ ಮೊದಲಾದ ದುರ್ಜನರು ಸುಳಿವಿಲ್ಲದೆ ಹೋದರು. ಸುಳ್ಳಾಡುವವರ ಹೆಸರೇ ಇಲ್ಲವು ವಂಚಕರ ವರ್ತಮಾನವೇ ಇಲ್ಲವು. ಶ್ರೀರಾಮಚಂದ್ರನ ರಾಜ್ಯದಲ್ಲಿ ಯಾರಿಗಾದರೂ ಆಧಿವ್ಯಾಧಿಗಳುಂಟಾದರೆ ಸರ್ವರೂ ತಮ್ಮ ತಮ್ಮ ಶಕ್ತಿಯನ್ನು ಅತಿಕ್ರಮಿಸಿ ಸಹಾಯಮಾಡುವವರಾಗಿಯೂ ಪರಸ್ಪರ ಪ್ರೀತಿಯುಳ್ಳವರಾಗಿಯೂ ಸಂತೋಷದಿಂದ ಬಾಳುತ್ತಿದ್ದರು. ಈ ಪ್ರಕಾರವಾಗಿ ಶ್ರೀರಾಮಚಂದ್ರನು ಚಂದ್ರನಂತೆ ಸರ್ವರಿಗೂ ಆಹ್ಲಾದವನ್ನುಂಟುಮಾಡುವವನಾಗಿ ಪ್ರಜಾಪರಿವಾರಗಳನ್ನು ತನ್ನ ಮಕ್ಕಳನ್ನೋಪಾದಿಯಲ್ಲಿ ಕಾಪಾಡುತ್ತ ವೃದ್ಧರನ್ನು ಸನ್ಮಾನಿಸುತ್ತ ವಿದ್ವಾಂಸರನ್ನು ಪೂಜಿಸುತ್ತ ಮುನಿಜನರನ್ನು ವಂದಿಸುತ್ತ ವಿರೋಧಿಗಳನ್ನು ಕೊಲ್ಲುತ್ತ ಪಾಪಕೃತ್ಯಗಳನ್ನು ನಿರ್ಮೂಲನಂಗೆಯ್ಯುತ್ತ ಪರನಾರಿಯರನ್ನು ಸಹೋದರಿಯರಂತೆ ಕಾಣುತ್ತ ಸರ್ವೋತ್ಕೃಷ್ಟನಾಗಿದ್ದನು.

*

## ೫ ನೆಯ ಭಾಗ

# ದಶಾವತಾರಗಳು

## 1. THE FIRST OR FISH INCARNATION.

### ೧. ಮತ್ಸ್ಯಾವತಾರದ ಕಥೆ.

ಸರ್ವಾಂತರ್ಯಾಮಿಯಾದ ಶ್ರೀಮನ್ನಾರಾಯಣನು ಮಹಾಲಕ್ಷ್ಮೀಸಮೇತನಾಗಿ ಪರಮಪದದಲ್ಲಿ ನಿತ್ಯೈಶ್ವರ್ಯವನ್ನು ಅನುಭವಿಸುತ್ತ— ನಾನು ಬಹುಪ್ರಜೆಯಾಗುವೆನು ಎಂದು ಸಂಕಲ್ಪಮಾಡಿದುದಾಗಿ ವೇದಾಂತದಲ್ಲಿ ಹೇಳಿರುವ ಪ್ರಕಾರ ಸರ್ವಜಗತ್ತುಗಳನ್ನೂ ನಿರ್ಮಿಸಿ ಬಹುರೂಪವಾಗಿ ನಿಜಾತುಲಲೀಲೈಶ್ವರ್ಯವನ್ನು ಅನುಭವಿಸಬೇಕೆಂದು ಸಂಕಲ್ಪಿಸಿ ಚಿದಚಿತ್ತುಗಳೇ ಮೊದಲಾದ ತನ್ನಲ್ಲಿರುವ ಸೂಕ್ಷ್ಮತತ್ವಗಳಿಂದ ಸ್ಥೂಲಚಿದಚಿದಾದಿ ತತ್ವಮಯವಾಗಿ ತನ್ನ ನಾಭೀಕಮಲದಲ್ಲಿ ಚತುರ್ಮುಖಬ್ರಹ್ಮನನ್ನು ನಿರ್ಮಿಸಿ ಆತನನ್ನು ಕುರಿತು—ಎಲೈ ಬ್ರಹ್ಮನೇ, ಕೃತತ್ರೇತಾದ್ವಾಪರಕಲಿಗಳೆಂಬ ಚತುರ್ಯುಗಗಳು ಸಾವಿರ ಸಾರಿ ಮರಳಿ ಬಂದರೆ ಆಗ ನಿನಗೆ ಒಂದು ಹಗಲಾಗುವುದು. ಆ ಹಗಲಿನಲ್ಲಿ ನೀನು ಹದಿನಾಲ್ಕು ಲೋಕಗಳನ್ನೂ ಸೃಜಿಸು. ಆ ಲೋಕಗಳು ನಿನ್ನ ಹಗಲಿನಲ್ಲಿ ಪ್ರಕಾಶಿಸುತ್ತ ಇರುವುವು. ಆ ರಾತ್ರಿಯಲ್ಲಿ ಹಗಲಿನಂತೆಯೇ ಚತುರ್ಯುಗಗಳು ಒಂದು ಸಾವಿರ ಸಾರಿ ಮರಳುವ ಪರ್ಯಂತರವೂ ನೀನು ನಿದ್ರೆಯಿಂದ ಕೂಡಿದ್ದು ಪುನಃ ಬೆಳಗಾದ ಕೂಡಲೆ ಸೃಷ್ಟಿಯನ್ನು ಮಾಡುತ್ತ ಇದೇ ರೀತಿಯಾದ ಕಾಲಪರಿಮಾಣದಿಂದ ಕೂಡಿದ ಶತಸಂವತ್ಸರಗಳ ಪರ್ಯಂತರವೂ ಬ್ರಹ್ಮಪಟ್ಟವನ್ನಾಳುತ್ತಿದ್ದು ನೂರು ಸಂವತ್ಸರಗಳ ಕಡೆಯಲ್ಲಿ ಮಹಾಪ್ರಳಯವು ಉಂಟಾಗುವುದು. ಆಗ ನೀನು ಯಥಾಪ್ರಕಾರವಾಗಿ ನನ್ನಲ್ಲಿ ಬಂದು ಸೇರುವವನಾಗು ಎಂದು ಅಪ್ಪಣೆಯನ್ನು ಕೊಟ್ಟನು.

ಆ ಮಾತನ್ನು ಕೇಳಿ ಬ್ರಹ್ಮನು ಶ್ರೀಮನ್ನಾರಾಯಣನಿಗೆ ನಮಸ್ಕಾರವನ್ನು ಮಾಡಿ—ಎಲೈ ಸ್ವಾಮಿಯೇ, ಅಲ್ಪಜ್ಞನಾದ ನಾನು ಯಾವ ಶಕ್ತಿಯಿಂದ ಲೋಕಗಳನ್ನು ಸೃಷ್ಟಿಸಬಲ್ಲೆನು ಎಂದು ಬಿನ್ನಹವನ್ನು ಮಾಡಿಕೊಳ್ಳಲು ; ಆಗ ಮಹಾವಿಷ್ಣುವು ಯುಕ್ತವೆಂದು ಹೇಳಿ ಆತನಿಗೆ ಸಕಲ ವೇದಗಳನ್ನೂ ಸಕ್ರಮವಾಗಿ ಉಪದೇಶಿಸಿ ವೇದಪುಸ್ತಕಗಳನ್ನು ಕೊಟ್ಟು—ಈ ವೇದಗಳ ಬಲದಿಂದ ಲೋಕಗಳನ್ನು

ಸೃಜಿಸು ಎಂದು ಅಪ್ಪಣೆಯನ್ನು ಕೊಟ್ಟು ತಾನು ಮೊದಲು ಉದಕವನ್ನು ನಿರ್ಮಿಸಿ ಅದರ ಮೇಲೆ ಬ್ರಹ್ಮಾಂಡವನ್ನು ಕಲ್ಪಿಸಿ ಅದರೊಳಗೆ ಆ ಬ್ರಹ್ಮನನ್ನು ಇಟ್ಟು ತಾನೂ ಲಕ್ಷ್ಮೀಸಮೇತನಾಗಿ ಆ ಬ್ರಹ್ಮಾಂಡವನ್ನು ಪ್ರವೇಶಿಸಿ ಕ್ಷೀರಸಮುದ್ರದ ಮಧ್ಯದಲ್ಲಿ ಶೇಷಶಾಯಿಯಾಗಿ ಯೋಗನಿದ್ರೆಯಿಂದ ಕೂಡಿರುತ್ತಿದ್ದನು.

ಇತ್ತಲಾ ಕಮಲಸಂಭವನು ಶ್ರೀಮಹಾವಿಷ್ಣುವಿನ ಆಜ್ಞಾನುಸಾರವಾಗಿ ಭೂಲೋಕ ಭುವರ್ಲೋಕ ಸುವರ್ಲೋಕ ಮಹೋಲೋಕ ಜನೋಲೋಕ ತಪೋಲೋಕ ಸತ್ಯಲೋಕಗಳೆಂಬ ಏಳು ಲೋಕಗಳನ್ನು ಮೇಲುಗಡೆಯಲ್ಲೂ ಅತಲ ವಿತಲ ಸುತಲ ತಲಾತಲ ರಸಾತಲ ಮಹಾತಲ ಪಾತಾಳಗಳೆಂಬ ಏಳು ಲೋಕಗಳನ್ನು ಕೆಳಗಡೆ ಯಲ್ಲೂ ಈ ರೀತಿಯಾಗಿ ಹದಿನಾಲ್ಕು ಲೋಕಗಳನ್ನು ನಿರ್ಮಿಸಿ ಆ ಲೋಕಗಳಲ್ಲಿ ವೇದವಚನಾನುಸಾರವಾಗಿ ಸ್ವೇದಜ ಅಂಡಜ ಉದ್ಭಿಜ ಜರಾಯುಜಗಳೆಂಬ ನಾಲ್ಕು ವಿಧಗಳಾದ ಸ್ಥಾವರ ಜಂಗಮಪ್ರಾಣಿಗಳನ್ನು ಕಲ್ಪಿಸಿ ನವಬ್ರಹ್ಮರನ್ನೂ ಚತುರ್ದಶ ಮನುಗಳನ್ನೂ ಸೂರ್ಯಚಂದ್ರರನ್ನೂ ಇಂದ್ರಾದಿಗಳನ್ನೂ ಸೃಷ್ಟಿಸಿ ಅವರವರಿಗೆ ಯೋಗ್ಯವಾದ ಅಧಿಕಾರಗಳನ್ನು ಕಟ್ಟುಮಾಡಿ ಮಹಾವಿಷ್ಣುವಿನ ಆಜ್ಞಾನುಸಾರವಾಗಿ ನಡೆದುಕೊಂಡಿದ್ದನು. ತರುವಾಯ ಆ ಬ್ರಹ್ಮನ ರಾತ್ರಿಯ ಅವಾಂತರ ಪ್ರಳಯವೆಂಬ ಜಲಪ್ರಳಯದ ಮನುಷ್ಯಮಾನದ ಮುಂಚಿನ ದಿನದಲ್ಲಿ ಈ ಭೂಮಂಡಲಕ್ಕೆ ರಾಜನಾಗಿದ್ದಂಥ ಸತ್ಯಾಚರಣೆ ಭಗವದ್ಭಕ್ತಿ ಪ್ರಜಾರಂಜನೆ ಈ ಮೊದಲಾದ ಸಕಲಸದ್ಗುಣಗಣಗಳುಳ್ಳವನಾದ ಸತ್ಯವ್ರತನೆಂಬ ರಾಜನು ಪ್ರಾತಃಕರ್ಮವನ್ನು ನೆರವೇರಿಸುವುದಕ್ಕಾಗಿ ಗಂಗಾನದಿಗೆ ಬಂದು ಮಿಂದು ಶುಚಿರ್ಭೂತನಾಗಿ ನದೀತೀರದಲ್ಲಿ ಕುಳಿತು ಸಂಧ್ಯಾವಂದನೆಯನ್ನು ಮಾಡುವುದಕ್ಕೆ ಪ್ರಾರಂಭಿಸಿ ಸೂರ್ಯನಿಗೆ ಅರ್ಘ್ಯವನ್ನು ಕೊಡುವುದಕ್ಕೋಸ್ಕರ ತನ್ನ ಬೊಗಸೆಯಲ್ಲಿ ಗಂಗಾಜಲವನ್ನು ಎತ್ತಿಕೊಂಡು ಆ ನದಿಯಲ್ಲಿ ಬಿಡಬೇಕೆಂದು ಪ್ರಯತ್ನಿಸಿದಾಗ ಆ ತನ್ನ ಬೊಗಸೆಯಲ್ಲಿರುವ ನೀರಿನಲ್ಲಿ ಒಂದು ಸಣ್ಣ ಮೀನಿನ ಮರಿಯು ಕಾಣಿಸಿದುದರಿಂದ ಆ ಮೀನಿನ ಮರಿಯನ್ನು ಅರ್ಘ್ಯದ ನೀರಿನಲ್ಲಿ ಸೇರಿಸಿ ಅರ್ಘ್ಯವನ್ನು ಬಿಡಬಾರದೆಂದು ಯೋಚಿಸಿ ಆ ನೀರನ್ನು ಸುಮ್ಮನೆ ನದಿಯಲ್ಲಿ ಬಿಟ್ಟು ತಿರಿಗಿ ಬೊಗಸೆಯ ತುಂಬಾ ನೀರನ್ನು ಎತ್ತಲು ; ಪುನಃ ಆ ಬೊಗಸೆಯ ನೀರಿನಲ್ಲೂ ಅದೇ ಮೀನಿನ ಮರಿಯೇ ರಾಜನ ಕಣ್ಣಿಗೆ ಕಾಣಬಂದಿತು. ಆಗ ರಾಜನು ಆ ನೀರನ್ನು ಪುನಃ ನದಿಯಲ್ಲಿ ಬಿಟ್ಟನು. ಇದೇ ರೀತಿಯಾಗಿ ರಾಜನು ತನ್ನ ಬೊಗಸೆಯಲ್ಲಿ ನೀರನ್ನು ಎಷ್ಟು ಸಾರಿ ಎತ್ತಿದಾಗ್ಯೂ ಆ ಮೀನಿನ ಪಿಳ್ಳೆಯು ಬಂದು ಬಂದು ಕಾಡುತ್ತ ಬಂದುದರಿಂದ ಅರಸನು ಅದನ್ನು ತಿರುಗಿ ನೀರಿನಲ್ಲಿ ಬಿಡಬೇಕೆಂದು ಯೋಚಿಸುತ್ತಿರುವಷ್ಟರಲ್ಲಿ ಆ ಮೀನ್ಮರಿಯು ರಾಜನನ್ನು ಕುರಿತು—ಎಲೈ ಮಹಾತ್ಮನಾದ ಸತ್ಯವ್ರತನೇ, ನೀನು ಬಹು ಧರ್ಮಿಷ್ಠನೂ ಕರುಣೆಯುಳ್ಳವನೂ ಸರ್ವಪ್ರಾಣಿಹಿತನೂ ಎಂದು ತಿಳಿದು ನಾನು ಈ ಮಹಾ ನದಿಯಲ್ಲಿ ಬೆಸ್ತರ ಬಲೆಯಿಂದುಂಟಾಗುವ ವಿಪತ್ತನ್ನು ತಪ್ಪಿಸಿಕೊಳ್ಳುವುದಕ್ಕಾಗಿ ನಿನ್ನ ಕೈಸೇರಿ ನಿನ್ನ ಮರೆಹೊಕ್ಕೆನು. ಇಂಥ ನಿರಾಶ್ರಯ ಜೀವಿಯಾದ ನನ್ನನ್ನು ನೀನು ಅನಾದರಣೆಯಿಂದ ಬಿಟ್ಟುಬಿಡಬಹುದೇನಯ್ಯಾ, ಧರ್ಮಾತ್ಮನೇ ? ಎಂದು ಕೇಳಿತು.

ಆ ಮಾತುಗಳನ್ನು ಕೇಳಿದ ಕೂಡಲೆ ಸತ್ಯವ್ರತರಾಜನಿಗೆ ಮನಸ್ಸಿನಲ್ಲಿ ಕರುಣೆಯೂ ಆಶ್ಚರ್ಯವೂ ಹೆಚ್ಚಾಗಿ—ಬಾರೈ, ಮೀನುಮರಿಯೇ ಎಂದು ಆ ಮರಿಯೊಡನೆ ತನ್ನ ಬೊಗಸೆಯಲ್ಲಿದ್ದ ನೀರನ್ನು ಸಮೀಪದಲ್ಲಿದ್ದ ಅರ್ಘ್ಯಪಾತ್ರೆಯಲ್ಲಿ ಬಿಟ್ಟು ತಾನು ಸಂಧ್ಯಾಕರ್ಮತತ್ಪರನಾಗಿ ಕುಳಿತುಕೊಂಡಿದ್ದನು. ಅಷ್ಟರಲ್ಲಿ ಅಂಗುಷ್ಠಪ್ರಮಾಣಮಾತ್ರವಾಗಿದ್ದ ಆ ಮೀನಿನ ಮರಿಯು ಆ ಅರ್ಘ್ಯಪಾತ್ರೆಯ ತುಂಬಾ ಬೆಳೆದು ಆ ರಾಯನನ್ನು ಕುರಿತು—ಎಲೈ ಮಹಾರಾಜನಾದ ಸತ್ಯವ್ರತನೇ, ನನ್ನನ್ನು ನೋಡು. ನನಗೆ ಈ ಸ್ವಲ್ಪವಾದ ಅರ್ಘ್ಯಪಾತ್ರೆಯ ನೀರು ಸಾಕೇ ? ಎನ್ನಲು, ಆಗ ರಾಯನು ಅದನ್ನು ನೋಡಿ ಇದು ಸಾಧಾರಣವಾದ ಮೀನಲ್ಲ. ದೈವಿಕವಾದ ಮೀನೆಂದು ತಿಳಿದು ಅದನ್ನು ಅಲ್ಲಿದ್ದ ನೀರಿನ ಗಡಿಗೆಯಲ್ಲಿ ಬಿಟ್ಟನು. ಅದು ಆ ಕ್ಷಣದಲ್ಲೇ ಅದರ ತುಂಬಾ ಬೆಳೆಯಲು ; ಅದನ್ನು ಅಲ್ಲಿಂದ ತೆಗೆದು ಒಂದು ಕಡಾಯ್ಡಾರಿನಲ್ಲಿ ಬಿಡಲು ; ಅದು ಅದರ ತುಂಬಾ ಬೆಳದಿತು. ಅದನ್ನು ನೋಡಿ ರಾಜನು—ಈ ಮೀನಿನ ದೇಹಾಭಿವೃದ್ಧಿಗೆ ಸಾಧಾರಣವಾದ ಜಲಸ್ಥಾನಗಳು ಎಂದಿಗೂ ಸಾಕಾಗುವುದಿಲ್ಲ. ಅದುಕಾರಣ ಇದರ ವಾಸಕ್ಕೆ ಸಮುದ್ರೋದಕವೇ ಯೋಗ್ಯವಾದುದು ಎಂದು ಯೋಚಿಸಿ ಅದನ್ನು ತೆಗೆದುಕೊಂಡು ಹೋಗಿ ಸಮುದ್ರದಲ್ಲಿ ಬಿಡಲು, ಅದು ಅಲ್ಲಿ ಮಹಾದ್ಭುತಾಕಾರವಾಗಿ ಬೆಳೆದು ಸಮುದ್ರದಲ್ಲಿ ನಿರರ್ಗಳವಾಗಿ ಸಂಚಾರಮಾಡುತ್ತ ಈ ಸತ್ಯವ್ರತರಾಜನಿಗೆ ನಾಲ್ಕು ತೋಳುಗಳಿಂದ ಶಂಖಚಕ್ರಗದಾಪದ್ಮಗಳನ್ನು ಧರಿಸಿ ದಿವ್ಯಕಿರೀಟಕುಂಡಲ ಕಟಕ ಕೇಯೂರಾದಿ ಭೂಷಣಗಳಿಂದಲೂ ಪೀತಾಂಬರದಿಂದಲೂ ಅಲಂಕೃತವಾಗಿ ಶ್ರೀಮಹಾಲಕ್ಷ್ಮೀಸಮೇತವಾಗಿ ಮತ್ಸ್ಯಾಕಾರದಿಂದ ಕಾಣಿಸಿಕೊಂಡು ಆತನನ್ನು ಕುರಿತು—ಎಲೈ ರಾಜನೇ, ನಿನ್ನ ಪರಿವಾರಗಳಿಗೆ ಅಪ್ಪಣೆಯನ್ನು ಕೊಟ್ಟು ಪಟ್ಟಣಕ್ಕೆ ಕಳುಹಿಸಿ ನೀನೊಬ್ಬನೇ ಇದ್ದುಕೊಂಡು ನಾನಾಡುವ ಮಾತುಗಳನ್ನು ಕೇಳು ಎಂದು ಹೇಳಿತು.

ಆಗಲಾ ಸತ್ಯವ್ರತರಾಜನು ಆ ಮಾತುಗಳನ್ನು ಕೇಳಿ ಆ ಕ್ಷಣದಲ್ಲಿಯೇ ತನ್ನ ಪರಿವಾರಗಳನ್ನೆಲ್ಲಾ ಕಳಹಿಸಿಬಿಟ್ಟು ತಾನೊಬ್ಬನೇ ಕೈಮುಗಿದು ನಿಂತುಕೊಂಡು—ಏನಪ್ಪಣೆ ? ಎಂದು ಕೇಳಿಕೊಳ್ಳಲು ; ಆಗ ಆ ಮಹಾಮತ್ಸ್ಯವು—ಇಂದಿಗೆ ಏಳನೆಯ ದಿವಸದಲ್ಲಿ ಜಲಪ್ರಳಯವಾಗಿ ಭೂಮಿಯು ಕಾಣದೆ ಹೋಗುವುದು. ಅದುಕಾರಣ ನೀನು ನಿನ್ನ ಕುಟುಂಬದೊಡನೆ ಕೂಡಿ ಬರುವ ಯುಗದಲ್ಲಿ ಹುಟ್ಟುವ ಪ್ರಾಣಿಗಳ ಜೀವನಕ್ಕೋಸ್ಕರ ಬೇಕಾದ ಧಾನ್ಯಬೀಜಗಳನ್ನು ಸಂಗ್ರಹಮಾಡಿಕೊಂಡು ಇಂದಿಗೆ ಆರನೆಯ ದಿವಸದ ರಾತ್ರಿಯಲ್ಲಿ ಇದೇ ಸ್ಥಳಕ್ಕೆ ಬಂದರೆ ಆಗ ನನ್ನ ಈ ಮಹಾ ಮತ್ಸ್ಯಾಕೃತಿಯನ್ನು ನೋಡುವಿ. ಆಗ ನನ್ನ ಕೋರೆಯಲ್ಲಿ ಸಿಕ್ಕಿಕೊಂಡು ಅಲ್ಲಾಡುತ್ತಿರುವ ಒಂದು ಹಡಗು ಕಾಣಿಸುವುದು. ಆಗ ನೀನು ನಿನ್ನ ಕುಟುಂಬದ ಸಂಗಡ ಸಕಲಧಾನ್ಯೌಷಧಿಗಳ ಬೀಜಗಳನ್ನು ತೆಗೆದುಕೊಂಡು ಆ ಹಡಗನ್ನು ಹತ್ತುವವನಾಗು. ಅನಂತರದಲ್ಲಿ ನಡೆಯುವ ಕಾರ್ಯಗಳನ್ನು ನೀನೇ ತಿಳಿಯುವಿ ಎಂದು ಅಪ್ಪಣೆಯನ್ನು ಕೊಟ್ಟು ಸಮುದ್ರಾಂತರ್ಜಲಪ್ರವೇಶವನ್ನು ಮಾಡಿತು. ತರುವಾಯ

ಆ ರಾಯನು ಮಹಾವಿಷ್ಣುವಿನ ಆಜ್ಞೆಯನ್ನು ಶಿರಸಾವಹಿಸಿ ತನ್ನ ಪಟ್ಟಣಕ್ಕೆ ಬಂದು ರಾಜ್ಯದ ಸರ್ವಪ್ರಜೆಗಳಿಗೂ—ನೀವೆಲ್ಲರೂ ಚಿತ್ತೈಕಾಗ್ರತೆಯಿಂದ ವಿಷ್ಣುವಿನ ಧ್ಯಾನವನ್ನು ಮಾಡಿಕೊಂಡು ಮೋಕ್ಷಸುಖವನ್ನು ಹೊಂದಿ ಸುಖಪಡಿರಿ ಎಂದು ಡಂಗುರವನ್ನು ಹೊಯ್ಸಿ ಪ್ರಸಿದ್ಧಿಪಡಿಸಿ ತಾನು ಮಹಾವಿಷ್ಣುವಿನ ಅಪ್ಪಣೆಯ ಪ್ರಕಾರ ಕುಟುಂಬದೊಡನೆ ಬಂದು ಹಡಗನ್ನೇರಿದ ಉತ್ತರಕ್ಷಣದಲ್ಲಿಯೇ ಭೂಮಿಯು ಸಮುದ್ರದಲ್ಲಿ ಮುಳುಗಿಹೋಯಿತು. ಆಗಲಾ ಸತ್ಯವ್ರತರಾಜನು ಸಮುದ್ರದಲ್ಲಿ ಹಡಗಿನ ಮೇಲೆ ಸಂಚರಿಸುತ್ತ ಆಗಾಗ್ಗೆ ಮತ್ಸ್ಯಮಹಾಮೂರ್ತಿಯ ಸಂದರ್ಶನವನ್ನು ಮಾಡುತ್ತ ಸಂತೋಷದಿಂದಿರುತ್ತಿದ್ದನು.

ಆ ಮೇಲೆ ಚತುರ್ಮುಖಬ್ರಹ್ಮನು ತನಗೆ ಸಂಪ್ರಾಪ್ತವಾದ ರಾತ್ರಿಯಲ್ಲಿ ಮಲಗಿಕೊಂಡನು. ಸೋಮಕ ಹಯಗ್ರೀವರೆಂಬ ಹೆಸರುಳ್ಳ ಇಬ್ಬರು ದೈತ್ಯರು ಆ ವೇಳೆಯನ್ನರಿತು ಪರಸ್ಪರವಾಗಿ ಆಲೋಚಿಸಿಕೊಂಡುದೇನೆಂದರೆ—ಈ ಚತುರ್ಮುಖಬ್ರಹ್ಮನು ನಿದ್ರೆಯಿಂದ ಎಚ್ಚೆತ್ತ ಮೇಲೆ ಈಗ ಜಲಪ್ರಳಯದಿಂದ ನಾಶವಾಗಿರುವ ಭೂಲೋಕ ಭುವರ್ಲೋಕ ಸುವರ್ಲೋಕಗಳೆಂಬ ಮೂರು ಲೋಕಗಳನ್ನು ತಿರಿಗಿ ಸೃಷ್ಟಿಸುವನು. ಆಗ ಭೂಲೋಕದಲ್ಲಿ ನಡೆಯುವ ದೇವಯಾಗ ಪಿತೃಯಾಗಗಳಿಂದ ದೇವತೆಗಳೆಲ್ಲಾ ತೃಪ್ತರಾಗಿ ಹೆಚ್ಚಿ ನಮಗೆ ಹಗೆಗಳಾಗಿ ನಮ್ಮನ್ನು ತಿರಸ್ಕರಿಸುವರು. ಇದಕ್ಕೆಲ್ಲಾ ಕಾರಣಭೂತವಾದುದು ವೇದವಾಕ್ಯವು. ಈಗ ಬ್ರಹ್ಮನು ಮಲಗಿದ್ದಾನೆ. ಈ ವೇಳೆಯಲ್ಲಿ ನಾವು ಹೋಗಿ ಆ ವೇದಗಳನ್ನೇ ಅಪಹರಿಸಿಕೊಂಡು ಬಂದುಬಿಟ್ಟರೆ ನಮಗೆ ವಿರೋಧಿಗಳಾದ ದೇವತೆಗಳ ಹುಟ್ಟೇ ವಿನಾಶವಾಗಿ ಹೋಗುವುದು ಎಂದು ಯೋಚಿಸಿ ಸತ್ಯಲೋಕಕ್ಕೆ ಹೋಗಿ ವೇದದ ಪುಸ್ತಕಗಳನ್ನು ಅಪಹರಿಸಿಕೊಂಡು ಬಂದು ಸಮುದ್ರವನ್ನು ಪ್ರವೇಶಿಸಲು ; ಆಗ ಮತ್ಸ್ಯಮೂರ್ತಿಯಾದ ಮಹಾವಿಷ್ಣುವು ಅವರನ್ನು ಕಂಡು ಅವರಿಬ್ಬರನ್ನೂ ಸಂಹರಿಸಿ ವೇದಪುಸ್ತಕಗಳನ್ನೆಲ್ಲಾ ತೆಗೆದುಕೊಂಡು ತನ್ನಲ್ಲಿಟ್ಟುಕೊಂಡಿದ್ದನು.

ಅನಂತರದಲ್ಲಿ ನೇಮಕವಾದ ರಾತ್ರಿಯು ಕಳೆದು ಬೆಳಗಾಗಲು ; ಆಗ ಸರೋಜಸಂಭವನು ಎದ್ದು ಸ್ನಾನಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ನೆರವೇರಿಸಿಕೊಂಡು ಕಮಲಾಸನದಲ್ಲಿ ಕುಳಿತು ತಿರಿಗಿ ಸೃಷ್ಟಿಯನ್ನು ಮಾಡುವುದಕ್ಕೆ ಆರಂಭಿಸಿ ವೇದಪುಸ್ತಕಗಳನ್ನು ನೋಡುವಲ್ಲಿ ಅವುಗಳಿಲ್ಲದೆ ಇರಲು ; ಆಗ ಬ್ರಹ್ಮನು ಮಹಾಚಿಂತಾಕ್ರಾಂತನಾಗಿ ಭಯಭಕ್ತಿಯಿಂದ ಕೂಡಿ ಮಹಾವಿಷ್ಣುವನ್ನು ಧ್ಯಾನಮಾಡಿ—ಎಲೈ ಮಹಾವಿಷ್ಣುವೇ, ನಿನ್ನ ಅಪ್ಪಣೆಯ ಪ್ರಕಾರ ಸಂಪ್ರಾಪ್ತವಾದ ರಾತ್ರಿಯಲ್ಲಿ ನಾನು ಮಲಗಿದ್ದೆನು. ಆಗ ನನ್ನ ಸೃಷ್ಟಿಕರ್ಮಕ್ಕೆ ಆಧಾರಭೂತಗಳಾಗಿದ್ದ ವೇದಪುಸ್ತಕಗಳು ಏನಾದುವೋ ತಿಳಿಯೆನು. ಈಗ ಅವುಗಳೊಂದೂ ಕಾಣಿಸುವುದಿಲ್ಲ. ಇನ್ನು ಮೇಲೆ ನಾನು ನಿನ್ನ ಆಜ್ಞೆಯ ಮೇರೆಗೆ ಹೇಗೆ ಸೃಷ್ಟಿಮಾಡಲಿ ? ನಾನು ಮಲಗಿ ಮೈಮರೆತಿರುವಾಗ ಜಗದೀಶ್ವರನಾದ ನೀನು ಜಾಗರೂಕನಾಗಿದ್ದು ನನ್ನನ್ನು ಕಾಪಾಡದಿದ್ದರೆ ಮತ್ತೊಬ್ಬರು ಕಾಪಾಡುವರುಂಟೋ ? ಮಹಾಸ್ವಾಮಿಾ, ನಾನು ಈಗ ಕಣ್ಣಿಲ್ಲದ

ಕುರುಡನಂತಿದ್ದೇನೆ ಎಂದು ಬಹುವಿಧವಾಗಿ ಮೊರೆಯಿಡಲು ; ಆಗ ಮತ್ಸ್ಯಮೂರ್ತಿಯಾದ ಮಹಾವಿಷ್ಣುವು ಪ್ರತ್ಯಕ್ಷನಾಗಿ ಕಾಣಿಸಿಕೊಂಡು ಹಯಗ್ರೀವಸೋಮಕರೆಂಬ ದೈತ್ಯರು ವೇದಪುಸ್ತಕಗಳನ್ನು ಅಪಹರಿಸಿಕೊಂಡು ಹೋಗಿ ಸಮುದ್ರದಲ್ಲಿ ಹೊಕ್ಕುದನ್ನೂ ಸರ್ವಜ್ಞನಾದ ತಾನು ಮುಂದೆ ಹೀಗಾಗುವುದೆಂದು ತಿಳಿದು ಮೊದಲೇ ಮತ್ಸ್ಯಾವತಾರವನ್ನು ಮಾಡಿ ಸಮುದ್ರದಲ್ಲಿ ಸಂಚರಿಸುತ್ತಿದ್ದುದನ್ನೂ ತಾನು ಅವರನ್ನು ಕೊಂದುಹಾಕಿ ವೇದಪುಸ್ತಕಗಳನ್ನು ತಿರಿಗಿ ತೆಗೆದಿಟ್ಟುಕೊಂಡಿರುವುದನ್ನೂ ತಿಳಿಸಿ ಅವನಿಗೆ ವೇದಪುಸ್ತಕಗಳನ್ನು ಕೊಟ್ಟು ಪುನಃ ಅವುಗಳನ್ನು ಉಪದೇಶಿಸಿ ಅಂತರ್ಧಾನನಾದನು. ಅನಂತರದಲ್ಲಿ ಬ್ರಹ್ಮನು ಯಥಾವತ್ತಾಗಿ ಸೃಷ್ಟಿಕರ್ಮಕ್ಕೆ ಆರಂಭಿಸಿ ನೀರಿನಲ್ಲಿ ಮುಳುಗಿ ಪ್ರಳಯವಾಗಿ ಹೋಗಿದ್ದ ಭೂಲೋಕ ಭುವರ್ಲೋಕ ಸುವರ್ಲೋಕಗಳನ್ನು ಪೂರ್ವದಂತೆಯೇ ಉಂಟುಮಾಡಿದನು.

---

## 2. THE SECOND OR TURTLE INCARNATION.

### ೨. ಕೂರ್ಮಾವತಾರದ ಕಥೆ.

ದೇವೇಂದ್ರನು ತನ್ನ ನಿಜನಗರವಾದ ಅಮರಾವತೀಪಟ್ಟಣದಲ್ಲಿ ಸುಧರ್ಮವೆಂಬ ಸಭಾಮಧ್ಯದಲ್ಲಿ ಅಷ್ಟದಿಕ್ಪಾಲಕರೇ ಮೊದಲಾದ ಸಮಸ್ತ ದೇವತೆಗಳೊಡನೆ ಕೂಡಿ ಒಡ್ಡೋಲಗವನ್ನು ಕೊಡುತ್ತಿದ್ದು ತನ್ನ ಪಟ್ಟಣದ ಸೌಂದರ್ಯವನ್ನು ನೋಡಬೇಕೆಂದು ಕುತೂಹಲವುಳ್ಳವನಾಗಿ ನಾಲ್ಕು ಕೊಂಬುಗಳುಳ್ಳದಾಗಿಯೂ ಶ್ವೇತವರ್ಣವುಳ್ಳದಾಗಿಯೂ ಇರುವ ಪಟ್ಟದಾನೆಯನ್ನು ನವರತ್ನಖಚಿತಗಳಾದ ರೆಂಚೆಗಳಿಂದಲೂ ರತ್ನದ ಪದಕಗಳಿಂದಲೂ ಮಣಿಮಯವಾದ ಗಗ್ಗರಗಳಿಂದಲೂ ಕೆಂಬರಲುಗಳಿಂದ ಕೆತ್ತಿದ ಹಿಡಿಗಳುಳ್ಳ ಚೌರಿಗಳಿಂದಲೂ ಶೃಂಗರಿಸಿ ತೆಗೆದುಕೊಂಡು ಬರುವಂತೆ ಮಾವಟಿಗನಿಗೆ ಕಟ್ಟುಮಾಡಿದನು. ಅವನು ಆದೇ ಮೇರೆಗೆ ದಿವ್ಯಭೂಷಣಗಳಿಂದ ಅಲಂಕರಿಸಿ ಸಿದ್ಧಮಾಡಿದ ಐರಾವತದ ಮೇಲೆ ಸುರಪತಿಯು ತನ್ನ ಪಟ್ಟಮಹಿಷಿಯಾದ ಶಚೀದೇವಿಯೊಡನೆ ಕೂಡಿ ಏರಿಕೊಂಡು ಹೊರಡಲು; ಆಗ ಅಗ್ನಿಯು ಟಗರನ್ನೂ ಯಮನು ಕೋಣವನ್ನೂ ನಿರುತಿಯು ಮನುಷ್ಯನನ್ನೂ ವರುಣನು ನೆಗಳನ್ನೂ ವಾಯುವು ಎರಳೆಯನ್ನೂ ಕುಬೇರನು ಕುದುರೆಯನ್ನೂ ಈಶಾನನು ನಂದಿಯನ್ನೂ ಸಂಭ್ರಮದಿಂದ ಏರಿಕೊಂಡು ದೇವೇಂದ್ರನ ಉಭಯ ಪಾರ್ಶ್ವಗಳಲ್ಲೂ ಉಲ್ಲಾಸದಿಂದ ಬಂದರು. ಮತ್ತು ಅಷ್ಟವಸುಗಳೂ ಸಪ್ತಮರುತ್ತುಗಳೂ ಏಕಾದಶರುದ್ರರೂ ದ್ವಾದಶಾದಿತ್ಯರೂ ಸಕಲ ವಿಧ ವಸ್ತ್ರಾಭರಣ ಭೂಷಿತರಾಗಿ ತಮ್ಮ ತಮ್ಮ ವಾಹನಗಳನ್ನು ಏರಿಕೊಂಡು ದೇವೇಂದ್ರನ ಹಿಂಗಡೆಯಲ್ಲಿ ಸಂತೋಷದಿಂದ ಬಂದರು.

ಮತ್ತು ಗಂಧರ್ವಾಧಿಪತಿಗಳು ವೀಣೆ ತಂಬೂರಿ ಸಿತಾರು ಸಾರಂಗಿ ,ಕಿನ್ನರಿ ಸ್ವರಮಂಡಲ ಇವು ಮೊದಲಾದ ತಂತೀವಾದ್ಯಗಳನ್ನೂ ಕೊಳಲು ಮುಖವೀಣೆ ಓಲಗ ರಣಕಹಳೆ ಕೊಂಬು ತುತೂರಿ ಇವು ಮುಂತಾದ ರಂಧ್ರವಾದ್ಯಗಳನ್ನೂ ಮದ್ದಲೆ

ಭೇರೀ ಢಕ್ಕೆ ಡಿಂಡಿಮ ಇವು ಮೊದಲಾದ ಚರ್ಮವಾದ್ಯಗಳನ್ನೂ ತಾಳವೇ ಮೊದಲಾದ ಕಾಂಸ್ಯವಾದ್ಯಗಳನ್ನೂ ಕ್ರಮವಾಗಿ ನುಡಿಸುತ್ತ ಊದುತ್ತ ಬಾರಿಸುತ್ತ ಸಾವೇರಿ ಅಸಾವೇರಿ ಕಾಂಬೋದಿ ಯದುಕುಲಕಾಂಬೋದಿ ಭೈರವಿ ಆನಂದಭೈರವಿ ನೀಲಾಂಬರಿ ರೇಗುಪ್ತಿ ತೋಡಿ ಮುಂತಾದ ಅನೇಕ ವಿಧ ರಾಗಗಳಿಂದ ಮನೋಹರವಾಗಿ ಸಂಗೀತವನ್ನು ಹಾಡುತ್ತ ದೇವಪತಿಯ ಮುಂಗಡೆಯಲ್ಲಿ ಬಂದರು. ಮತ್ತು ಅಪ್ಸರ ಸ್ತ್ರೀಯರು ಸುರಪತಿಯ ಪುರೋಭಾಗದಲ್ಲಿ ಸಾಲುಸಾಲಾಗಿ ನಿಂತು ಭರತಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಸೊಬಗಿನಿಂದ ನರ್ತನಮಾಡುತ್ತ ಬಂದರು. ಮತ್ತು ಕಿನ್ನರ ಕಿಂಪುರುಷಾದಿಗಳು ಕೈಯೆತ್ತಿ—ಜಂಭಾರಿಯೇ, ಪಾಕಶಾಸನನೇ, ವೃತ್ರಾಸುರಸಂಹಾರಕನೇ, ತ್ರಿಲೋಕನಾಯಕನೇ, ಜಯಜಯ ಎಂದು ಸಂಭ್ರಮದಿಂದ ಹೊಗಳುತ್ತ ಬಂದರು. ಇಂಥ ಅತುಲವೈಭವದಿಂದ ಕೂಡಿ ದೇವೇಂದ್ರನು ಅಮರಾವತಿಯ ರಾಜವೀಥಿಯಲ್ಲಿ ಬರುತ್ತಿರಲು; ಆಗ ದೇವಸ್ತ್ರೀಯರು ಬಂದುಬಂದು ನವರತ್ನಗಳ ಆರತಿಗಳನ್ನು ಬೆಳಗುತ್ತಿದ್ದರು. ಸುರಪತಿಯು ಅವರಿಗೆ ಅಪರಿಮಿತ ವಸ್ತ್ರಾಭರಣಗಳನ್ನು ಕೊಡುತ್ತ ಮಹಾಸಂತೋಷದಿಂದಲೂ ಮಹದೈಶ್ವರ್ಯದಿಂದಲೂ ಮದೋನ್ಮತ್ತನಾಗಿ ಮೂರು ಲೋಕಗಳಲ್ಲೂ ತನಗೆ ಯಾರೂ ಸಮಾನರಿಲ್ಲವೆಂದು ತನ್ನ ಮನಸ್ಸಿನಲ್ಲಿ ಯೋಚಿಸಿಕೊಂಡು ಬಲು ಹೆಮ್ಮೆಯಿಂದ ಬರುತ್ತಿದ್ದನು.

ಅಷ್ಟರಲ್ಲಿ ದೂರ್ವಾಸನೆಂಬ ಕೋಪಸ್ವಭಾವವುಳ್ಳ ಉಗ್ರತಪಸ್ವಿಯು ಕೈಲಾಸ ಪರ್ವತಕ್ಕೆ ಹೋಗಿ ಪಾರ್ವತೀಪರಮೇಶ್ವರರನ್ನು ವಂದಿಸಿ ಭಯಭರಿತ ಭಕ್ತಿಯಿಂದ ಬಹಳವಾಗಿ ಸ್ತೋತ್ರಮಾಡಲು; ಆಗ ಪಾರ್ವತೀದೇವಿಯು ಪ್ರಸನ್ನಳಾಗಿ ತಾನು ಧರಿಸಿದ್ದ ಪುಷ್ಪಮಾಲಿಕೆಯನ್ನು ಕೊಟ್ಟುದರಿಂದ ಆತನು ಅದನ್ನು ತೆಗೆದುಕೊಂಡು ಪಾರ್ವತೀಪರಮೇಶ್ವರರನ್ನು ವಂದಿಸಿ ಅಲ್ಲಿಂದ ಹೊರಟು ಅಮರಾವತಿಗೆ ಬಂದು ರಾಜವೀಥಿಯಲ್ಲಿ ಮಹಾ ವೈಭವದೊಡನೆ ಬರುತ್ತಿರುವ ದೇವಪತಿಯನ್ನು ಕಂಡು ಸಂತೋಷದಿಂದ ಆತನಿಗೆ ಆ ಪುಷ್ಪಮಾಲಿಕೆಯನ್ನು ಕೊಟ್ಟು ಹರಸಿದನು. ಆಗ ದೇವೇಂದ್ರನು ಐಶ್ವರ್ಯಮತ್ತನಾಗಿ ಆ ಮುನಿಪತಿಯನ್ನು ವಿನಯದಿಂದ ಕಂಡು ವಂದಿಸದೆ ಅವನು ಕೊಟ್ಟ ಪುಷ್ಪಮಾಲಿಕೆಯನ್ನಾದರೂ ಭಕ್ತಿಯಿಂದ ತನ್ನ ಶಿರಸ್ಸಿನಲ್ಲಿ ಧರಿಸಿಕೊಳ್ಳದೆ ಉದಾಸೀನದಿಂದ ಅದನ್ನು ಐರಾವತದ ಕುಂಭಸ್ಥಳದ ಮೇಲೆ ಹಾಕಲು; ಅದು ಆ ಪುಷ್ಪಮಾಲಿಕೆಯನ್ನು ತನ್ನ ಸೊಂಡಲಿನಿಂದ ತೆಗೆದುಕೊಂಡು ಭೂಮಿಯಲ್ಲಿ ಬಡಿದು ಕಾಲಿನಿಂದ ತುಳಿದು ಹೊಸಗಿಬಿಟ್ಟಿತು. ಅದನ್ನು ಕಂಡು ದೂರ್ವಾಸಮುನಿಯು ಮಹಾ ಕೋಪಸಂತಪ್ತ ಹೃದಯನಾಗಿ ಕಣ್ಣುಗಳಿಂದ ಕಿಡಿಗಳನ್ನುದುರಿಸುವವನಾಗಿ ದುರ್ಗರ್ವದೂಷಿತನಾದ ಇಂದ್ರನನ್ನು ಕುರಿತು—ಎಲೈ ಮದಾಂಧನೇ, ಮೂರ್ಖನೇ, ಲೋಕವಂದ್ಯಳಾದ ಮಹಾದೇವಿಯ ಪರಿಶುದ್ಧ ಪ್ರಸಾದವನ್ನು ನೀನು ತ್ರಿಲೋಕಾಧಿಪತಿಯು ಚೆನ್ನಾಗಿ ಬಾಳುತ್ತಿರಬೇಕೆಂದು ನಾನು ನಿನ್ನಲ್ಲಿ ಅನುಗ್ರಹವನ್ನು ಮಾಡಿ ತಂದುಕೊಟ್ಟರೆ ನೀನು ಆ ಪ್ರಸಾದಮಾಲಿಕೆಯನ್ನು ಭಯಭಕ್ತಿಯಿಂದ ಶಿರಸ್ಸಿನಲ್ಲಿ ಧರಿಸದೆ ಯಾವ ಲೋಕತ್ರಯಾಧಿಪತ್ಯದ ಐಶ್ವರ್ಯಮದದಿಂದ ಐರಾವತದ ಕುಂಭ

ಸ್ಥಳದಲ್ಲಿ ಹಾಕಿದೆಯೋ ಆ ನಿನ್ನ ಐಶ್ವರ್ಯವನ್ನು ನಿನ್ನ ಹಗೆಗಳಾದ ದೈತ್ಯರು ಕಿತ್ತು ಕೊಳ್ಳಲಿ ಎಂದು ಶಾಪವನ್ನು ಕೊಟ್ಟನು. ಆಗ ಭಯಭ್ರಾಂತನಾದ ದೇವೇಂದ್ರನು ಕೆಟ್ಟ ಮೇಲೆ ಬುದ್ಧಿ ಬಂದಿತು ಎಂಬ ಗಾದೆಗೆ ಸರಿಯಾಗಿ ವಿವೇಕವನ್ನು ಹೊಂದಿ ಬೇಗ ಐರಾವತದಿಂದ ಕೆಳಕ್ಕಿಳಿದು ಆ ದೂರ್ವಾಸಮುನಿಪತಿಯ ಎರಡು ಪಾದಗಳ ಮೇಲೆ ಬಿದ್ದು ಹೊರಳುತ್ತ ದುಃಖದಿಂದ—ಸ್ವಾಮಿಾ, ದಯಾಳುವೇ, ನಾನು ಬಹು ಪಾಪಿಷ್ಠನು, ಮಹಾಪರಾಧಿಯು. ಸರ್ವಜ್ಞನಾದ ನೀನು ನನ್ನ ಅಪರಾಧವನ್ನು ಕ್ಷಮಿಸಿ ವಿಶಾಪವನ್ನು ದಯೆಪಾಲಿಸಿ ಅನಾಥನಾದ ನನ್ನನ್ನು ಉದ್ಧಾರಮಾಡಬೇಕೆಂದು ದೈನ್ಯದಿಂದ ಬಹಳವಾಗಿ ಬೇಡಿಕೊಂಡುದರಿಂದ ಆಗ ದೂರ್ವಾಸಮುನಿಯು ಕರುಣವುಳ್ಳವನಾಗಿ—ಕೆಲಕಾಲದ ಮೇಲೆ ಲಕ್ಷ್ಮೀಪತಿಯಾದ ಮಹಾವಿಷ್ಣುವು ಯಥಾಪ್ರಕಾರವಾಗಿ ನಿನಗೆ ತ್ರಿಲೋಕಾಧಿಪತ್ಯವುಂಟಾಗುವಂತೆ ಮಾಡುವನು ಎಂದು ವಿಶಾಪವನ್ನು ಕೊಟ್ಟು ಹೊರಟುಹೋದನು. ಆ ಬಳಿಕ ದೇವೇಂದ್ರನು ಕೊಬ್ಬಡಗಿದವನಾಗಿ ಮಹಾ ಚಿಂತೆಯಿಂದ ಕೂಡಿ ಮೋರೆಗೆ ಮುಸುಕು ಹಾಕಿಕೊಂಡು ಹಿಂದಿರುಗಿ ಅರಮನೆಗೆ ಹೋಗಿ ಏಕಾಂತಸ್ಥಳದಲ್ಲಿ ಬಿದ್ದುಕೊಂಡನು.

ಹೀಗಿರುವಲ್ಲಿ ಬಲಿ ನಮುಚಿ ಎಂಬವರೇ ಮೊದಲಾದ ದೈತ್ಯೇಂದ್ರರು ಸ್ವರ್ಗಲೋಕದ ವೃತ್ತಾಂತವನ್ನು ತಿಳಿಯುವುದಕ್ಕೋಸ್ಕರ ತಮ್ಮ ವಾಸಸ್ಥಾನವಾದ ರಸಾತಲದಿಂದ ಕಳುಹಿಸಿದ್ದ ರಾಕ್ಷಸಗೂಢಚಾರರು ಈ ಸಂಗತಿಯನ್ನು ತಿಳಿದು ಶೀಘ್ರದಿಂದ ರಸಾತಲಕ್ಕೆ ಹೋಗಿ ಆ ದೈತ್ಯರಾಜರಿಗೆ ಯಥಾವತ್ತಾಗಿ ಅರಿಕೆಮಾಡಿದರು. ಆಗ ಬಲಿಯು ತನ್ನ ಕುಲಗುರುಗಳಾದ ಶುಕ್ರಾಚಾರ್ಯರನ್ನೂ ತನ್ನ ಜೊತೆಯವರಾದ ದೈತ್ಯರಾಜರನ್ನೂ ಏಕಾಂತದಲ್ಲಿ ಕೂಡಿಸಿಕೊಂಡು ಈ ಸಂಗತಿಯನ್ನೆಲ್ಲಾ ತಿಳಿಸಿ—ನಾವು ಮುಂದೆ ಮಾಡಬೇಕಾದ ರಾಜಕಾರ್ಯವಾವುದು ಎಂದು ಕೇಳಿದನು. ಅದಕ್ಕೆ ಶುಕ್ರಾಚಾರ್ಯನು—ಎಲೈ ದೈತ್ಯರಾಜನೇ, ಎಣ್ಣೆ ಬಂದಾಗ ಕಣ್ಣುಮುಚ್ಚಿಕೊಂಡನು ಎಂಬಂತೆ ಮಾಡದೆ ಶತ್ರುವು ವಿಪದ್ಬಾಧಿತನಾಗಿರುವ ಇಂಥ ಕಾಲದಲ್ಲಿ ನೀನು ತಡಮಾಡದೆ ಚತುರಂಗಬಲಸಮೇತನಾಗಿ ದೇವಲೋಕಕ್ಕೆ ಹೋಗಿ ದೇವೇಂದ್ರನನ್ನು ಯುದ್ಧದಲ್ಲಿ ಸದೆಬಡಿದು ಅವನ ಪದವಿಯನ್ನು ಅಪಹರಿಸಿಕೊಂಡು ಸುಖಪಡದೆ ಇದ್ದರೆ ಲೋಕದಲ್ಲಿ ನಿಮ್ಮಂಥ ಹೇಡಿಗಳು ಇನ್ನಾರುಂಟು? ಪ್ರಪಂಚದಲ್ಲಿ ರಾಜನೀತಿಯನ್ನು ತಿಳಿದಂಥ ದೊರೆಗಳು ಹಗೆಗಳ ಪಟ್ಟಣಕ್ಕೆ ನಾನಾ ವೇಷಧಾರಿಗಳಾದ ಗೂಢಚಾರರನ್ನು ಕಳುಹಿಸಿ ಅಲ್ಲಿ ಜನಹಿಂಸಕಗಳಾದ ಅನ್ಯಾಯಕೃತ್ಯಗಳು ನಡೆಯುತ್ತಿರುವುದನ್ನೂ ರಾಜಮಂತ್ರಿ ಸೇನಾಪತಿ ಈ ಮೊದಲಾದವರಿಗೆ ಪರಸ್ಪರವಾಗಿ ಮನಸ್ತಾಪಗಳು ಹುಟ್ಟಿರುವುದನ್ನೂ ಅರಸುಗಳ ಜ್ಞಾತಿವರ್ಗದಲ್ಲಿ ಒಬ್ಬೊಬ್ಬರಿಗೆ ವೈಷಮ್ಯವುಂಟಾಗಿರುವುದನ್ನೂ ಅರಸು ತನ್ನ ರಾಜ್ಯದಲ್ಲಿ ದುಷ್ಟರಿಗೆ ಶಿಕ್ಷೆಯನ್ನೂ ಶಿಷ್ಟರಿಗೆ ರಕ್ಷಣೆಯನ್ನೂ ಮಾಡದೆ ದುಷ್ಟರಾದವರಿಗೆ ಸನ್ಮಾನವನ್ನೂ ಶಿಷ್ಟರಾದವರಿಗೆ ಅವಮಾನವನ್ನೂ ಮಾಡುತ್ತಿರುವುದನ್ನೂ ರಾಜನು ತನ್ನ ಕೈಕೆಳಗಣ ಉದ್ಯೋಗಸ್ಥರಿಗೆ ನಿಯಮಿತಕಾಲಾನುಸಾರವಾಗಿ ಸಂಬಳವನ್ನು ಸಲ್ಲಿಸುತ್ತ ಬಾರದಿರುವುದನ್ನೂ ರಾಜ್ಯದಲ್ಲಿ ಪ್ರಜೆಗಳು ವ್ಯಾಧಿ

ಕ್ಷಾಮಾದಿಗಳಿಂದ ಕ್ಷೋಭೆಪಡುತ್ತಿರುವುದನ್ನೂ ಚೆನ್ನಾಗಿ ತಿಳಿದುಕೊಂಡು ಅಂಥ ವೇಳೆಯಲ್ಲಿ ಒಂದು ಕ್ಷಣವಾದರೂ ಸಾವಕಾಶಮಾಡದೆ ದಂಡೆತ್ತಿಹೋಗಿ ಹಗೆಗಳನ್ನು ಜಯಿಸಿ ಅವರ ದೇಶಕೋಶಗಳನ್ನು ಸ್ವಾಧೀನಮಾಡಿಕೊಳ್ಳುವರು ಎಂದು ಹೇಳಲು; ಆಗ ದೈತ್ಯರಾಜರೆಲ್ಲರೂ ಆಚಾರ್ಯರು ಹೇಳಿದಂತೆಯೇ ನಡೆಯಬೇಕೆಂದು ಏಕಮನಸ್ಸಿನಿಂದ ದೇವೇಂದ್ರನ ಮೇಲೆ ಯುದ್ಧಕ್ಕೆ ಹೋಗಬೇಕೆಂದು ಸರ್ವಬಲದೊಡನೆ ಸನ್ನದ್ಧರಾಗುತ್ತಿದ್ದರು.

ತರುವಾಯ ದೇವತೆಗಳ ಕುಲಗುರುಗಳಾದ ಬೃಹಸ್ಪತ್ಯಾಚಾರ್ಯರು ವರ್ತಮಾನವನ್ನು ತಿಳಿಯುವುದಕ್ಕೋಸ್ಕರವಾಗಿ ದೈತ್ಯರ ಪಟ್ಟಣಗಳಿಗೆ ಕಳುಹಿಸಿದ್ದ ಬೇಹಿನವರು ದೈತ್ಯರ ಪ್ರಯತ್ನವನ್ನೆಲ್ಲಾ ತಿಳಿದು ಅತಿಶೀಘ್ರವಾಗಿ ಬೃಹಸ್ಪತ್ಯಾಚಾರ್ಯರ ಬಳಿಗೆ ಬಂದು ಆ ವರ್ತಮಾನವನ್ನೆಲ್ಲಾ ಗುಟ್ಟಾಗಿ ತಿಳಿಸಿದರು. ಆಗ ಬೃಹಸ್ಪತ್ಯಾಚಾರ್ಯರು ಬಹಳ ವ್ಯಾಕುಲಚಿತ್ತರಾಗಿ ದೇವೇಂದ್ರಾದ್ಯಷ್ಟದಿಕ್ಪಾಲಕರನ್ನು ಕರಿಸಿ ಏಕಾಂತದಲ್ಲಿ ಕುಳ್ಳಿರಿಸಿಕೊಂಡು ವಿರೋಧಿಗಳಾದ ರಾಕ್ಷಸರ ಆಗಮನವನ್ನು ತಿಳಿಸಿ ಮಹಾಮುನಿಯಾದ ದೂರ್ವಾಸನ ಶಾಪದಿಂದ ಈ ಸಮಯದಲ್ಲಿ ನಮಗೆ ಪರಾಜಯವಾಗುವುದು ಸಿದ್ಧವು. ಈಗ ನಾವು ವ್ಯರ್ಥವಾಗಿ ಯುದ್ಧರಂಗದಲ್ಲಿ ದೈತ್ಯರೊಡನೆ ಹೋರಾಡಿ ಹತರಾಗುವುದಕ್ಕಿಂತ ನಾವೆಲ್ಲರೂ ಈ ಸ್ವರ್ಗಲೋಕವನ್ನೇ ಬಿಟ್ಟು ಪುತ್ರಮಿತ್ರಕಳತ್ರಾದಿಗಳೊಡನೆ ಕೂಡಿ ಎಲ್ಲಿಯಾದರೂ ಗುಪ್ತವಾಗಿಯೂ ನಿರ್ಬಾಧಕವಾಗಿಯೂ ಇರುವ ಒಂದು ಪುಣ್ಯಾಶ್ರಮಕ್ಕೆ ಹೋಗಿ ಅಲ್ಲಿ ಮಹಾವಿಷ್ಣುವನ್ನು ಆರಾಧಿಸುತ್ತ ಕೆಲಕಾಲದ ವರೆಗೂ ಇದ್ದುಕೊಂಡು ಸಮಯ ಬಂದಾಗ ಹಗೆಗಳಾದ ದೈತ್ಯರನ್ನು ಯುದ್ಧರಂಗದಲ್ಲಿ ಸೋಲಿಸಿ ನಮ್ಮ ದೇವಲೋಕವನ್ನು ಸಾಧಿಸುವುದು ನನ್ನ ಬುದ್ಧಿಗೆ ಯುಕ್ತವಾಗಿ ತೋರುತ್ತಿದೆ ಎಂದು ಹೇಳಲು ; ಆ ಮಾತಿಗೆ ದೇವತೆಗಳೆಲ್ಲಾ ಒಡಂಬಟ್ಟುದರಿಂದ ಸುರಾಚಾರ್ಯನು—ನೀವೆಲ್ಲರೂ ಶೀಘ್ರವಾಗಿ ಹೊರಟು ಹೋಗಿ ನೈಮಿಶಾರಣ್ಯವೆಂಬ ಪುಣ್ಯಕ್ಷೇತ್ರದಲ್ಲಿ ವಾಸಮಾಡಿರಿ; ನಾನು ಶುಕ್ರಾಚಾರ್ಯರನ್ನೂ ದೈತ್ಯರಾಜರನ್ನೂ ಕಂಡು ಕೂಡಲೆ ನಿಮ್ಮ ಬಳಿಗೆ ಬರುವೆನು ಎಂದು ಹೇಳಿ ಅವರನ್ನೆಲ್ಲಾ ಅಲ್ಲಿಂದ ಕಳುಹಿಸಿಬಿಟ್ಟು ತಾನು ಜಾಗ್ರತೆಯಾಗಿ ರಸಾತಲಕ್ಕೆ ಬಂದು ದೈತ್ಯರಾಜರ ಬಳಿಗೆ ಬರಲು ; ಆಗ ಅವರೆಲ್ಲರೂ ಇವರಿಗೆ ಅಭಿವಂದಿಸಿ ಸರ್ವೋಪಚಾರಗಳನ್ನೂ ಮಾಡಿ ರಹಸ್ಯಸ್ಥಳದಲ್ಲಿ ಕುಳ್ಳಿರಿಸಿಕೊಂಡು—ತಾವು ದಯೆಮಾಡಿದ ಕಾರ್ಯವೇನು ? ನಿಮ್ಮ ಮುಖವನ್ನು ನೋಡಿದರೆ ಬಲುದುಗುಡದಿಂದಿರುವಂತೆ ಕಾಣುತ್ತದೆ ಎಂದು ಕೇಳಲು ; ಆಗ ಸುರಾಚಾರ್ಯನು—ಎಲೈ ದೈತ್ಯೇಂದ್ರರುಗಳಿರಾ, ನಾನು ಈಗ ಹೇಳುವ ಮಾತುಗಳನ್ನೆಲ್ಲಾ ನೀವು ಸಾವಧಾನದಿಂದ ಕೇಳಿ ಮಹಾಬುದ್ಧಿಶಾಲಿಗಳಾದ ಶುಕ್ರಾಚಾರ್ಯರೊಡನೆ ಆಲೋಚಿಸಿ ನಾನು ಹೇಳುವುದು ಯುಕ್ತವಾಗಿದ್ದರೆ ಆ ಪ್ರಕಾರವೇ ನಡೆಯಬಹುದು. . ಆ ಮಾತುಗಳು ಯಾವುವೆಂದರೆ—ದೇವೇಂದ್ರನಿಗೆ ನಾನು ಬಾರಿಬಾರಿಗೂ ಎಷ್ಟು ವಿಧವಾಗಿ ನೀತಿಗಳನ್ನು ಉಪದೇಶಮಾಡುತ್ತ ಬಂದಾಗ್ಯೂ ಆತನು ತನ್ನ ಸಿರಿಯ ಮದದಿಂದ ಆ ಉಪದೇಶವನ್ನು

ಗಣಿಸದೆ ಮಹಾಮುನಿಗಳಿಗೆ ಅವಮಾನವನ್ನು ಮಾಡುತ್ತಲೂ ಅನ್ಯಾಯದಿಂದ ನಡೆಯುತ್ತಲೂ ಬರುತ್ತಿರುವುದರಿಂದ ಆಗಾಗ್ಗೆ ಅವನಿಗೆ ಹಾನಿಗಳು ತಟ್ಟುತ್ತ ಇರುವುವು. ಹಾಗೆ ತಟ್ಟಿದಾಗ್ಗೂ ವಿಷ್ಣುವು ಅವನಿಗೆ ಸಹಾಯಕನಾದುದರಿಂದ ಅವುಗಳನ್ನೆಲ್ಲಾ ಪರಿಹರಿಸುತ್ತ ತಿರಿಗಿ ಅವನಿಗೆ ತ್ರಿಲೋಕಾಧಿಪತ್ಯವನ್ನು ಉಂಟುಮಾಡುತ್ತ ಬರುತ್ತಿರುವನು. ಈಗ ದೇವೇಂದ್ರನಿಗೆ ಅವನ ದುರಹಂಕಾರದಿಂದ ದೂರ್ವಾಸಮುನಿಯ ಶಾಪವು ಪ್ರಾಪ್ತವಾದುದರಿಂದ ಅವನು ತನ್ನ ಸಕಲ ಪರಿವಾರದೊಡನೆ ಕೂಡಿ ಓಡಿಹೋಗಿದ್ದಾನೆ. ಈಗ ನಿಮಗೆ ತ್ರಿಲೋಕಾಧಿಪತ್ಯವು ನಿರಾಯಾಸದಿಂದ ಸ್ವಾಧೀನವಾಗುವುದು. ಆದರೂ ಕೆಲದಿನಗಳ ಮೇಲೆ ವಿಷ್ಣುವು ನಿಮ್ಮನ್ನು ಜಯಿಸಿ ಇಂದ್ರನಿಗೆ ಲೋಕತ್ರಯಾಧಿಪತ್ಯವನ್ನು ಉಂಟುಮಾಡುವನು. ನಾನು ಇದನ್ನು ಯೋಚಿಸಿ ಮೂರ್ಖನೂ ದುಷ್ಟನೂ ಆದ ಇಂದ್ರನ ಸಹವಾಸವು ನನಗೆ ಯೋಗ್ಯವಾದುದಲ್ಲ. ಅದು ನನಗೆ ಸಂಪೂರ್ಣವಾಗಿ ತಪ್ಪಿಹೋಗುವಂತೆ ಮಾಡುವುದಕ್ಕೆ ತ್ರಿಲೋಕಾಧಿಪತ್ಯವು ನಿಮ್ಮಲ್ಲಿ ಶಾಶ್ವತವಾಗಿ ನಿಲ್ಲುವಂತೆ ಮಾಡಿ ನಾನೂ ಶುಕ್ರಾಚಾರ್ಯರೂ ಏಕಾಲೋಚನೆಯಿಂದ ಸುಖದಿಂದಿರಬೇಕೆಂದು ಯೋಚಿಸಿಕೊಂಡು ಈಗ ನಿಮ್ಮ ಬಳಿಗೆ ಬಂದಿದ್ದೇನೆ ಅಂದನು.

ಆಗ ಶುಕ್ರಾಚಾರ್ಯರೂ ದೈತ್ಯರಾಜರೂ ಕೂಡಿ ಆಲೋಚಿಸಿ ಬೃಹಸ್ಪತ್ಯಾಚಾರ್ಯರನ್ನು ಕುರಿತು—ನೀವು ಹೇಳಿದುದೆಲ್ಲಾ ನಿಜವೇ ಸರಿ. ಇದರಲ್ಲಿ ಒಂದು ಮಾತಾದರೂ ಸುಳ್ಳಲ್ಲ. ನೀವು ಇಂದ್ರನನ್ನು ಬಿಟ್ಟು ನಮಗೆ ಸಹಾಯಮಾಡುವುದಾದರೆ ತ್ರಿಲೋಕಾಧಿಪತ್ಯವು ನಮ್ಮನ್ನು ಬಿಟ್ಟು ಎಂದಿಗೂ ತೊಲಗುವುದಿಲ್ಲವೆಂದು ಖಂಡಿತವಾಗಿ ನಂಬಿದ್ದೇವೆ. ಆ ತ್ರಿಲೋಕಾಧಿಪತ್ಯವು ನಮ್ಮಲ್ಲೇ ಸ್ಥಿರವಾಗಿರುವ ಹಾಗೆ ನೀವು ಮಾಡಿದಲ್ಲಿ ನಾವೆಲ್ಲರೂ ನಿಮ್ಮ ಆಜ್ಞೆಯನ್ನು ಸ್ವಲ್ಪವಾದರೂ ಮೀರದೆ ಕೃತಜ್ಞತೆಯಿಂದ ನಡೆದುಕೊಳ್ಳುವೆವೆಂದು ಬಿನ್ನವಿಸಿದರು. ಆಗ ಬೃಹಸ್ಪತ್ಯಾಚಾರ್ಯನು ಅವರನ್ನು ಕುರಿತು—ಎಲೈ ದೈತ್ಯರಾಜರುಗಳಿರಾ, ನೀವು ಹಾಗೆ ನಡೆಯುವಂಥವರೇ ಸರಿ. ಈ ವಿಷಯದಲ್ಲಿ ನನಗೆ ಬಹಳವಾಗಿ ನಂಬಿಕೆಯುಂಟು. ಆದರೆ ನಾನು ಯೋಚಿಸಿರುವ ಕೆಲಸವು ಬಹಳ ದುರ್ಘಟವಾದುದು. ಆ ಕಾರ್ಯಕ್ಕೆ ವಿಷ್ಣುವಿನ ಸಹಾಯವು ಒದಗದಿದ್ದರೆ ಅದು ನಡೆಯಲಾರದು. ಆದುದರಿಂದ ನಾನು ಮೊದಲಿನ ಹಾಗೆಯೇ ಆ ದೇವತೆಗಳಲ್ಲೇ ಸೇರಿಕೊಂಡು ಆ ಕಾರ್ಯದ ಸಂವಿಧಾನಗಳನ್ನೆಲ್ಲಾ ಮಾಡುವೆನು. ಅದು ನನ್ನ ಇಷ್ಟಾನುಸಾರವಾಗಿ ಕೈಗೂಡಿದರೆ ತಿರಿಗಿ ಬಂದು ನಿಮ್ಮನ್ನು ಕಂಡು ಏಕಾಂತದಲ್ಲಿ ಆ ಸಂಗತಿಯನ್ನೆಲ್ಲಾ ತಿಳಿಸುವೆನು. ಈಗ ನೀವು ಸರ್ವರೂ ಮಹಾತ್ಮರಾದ ಶುಕ್ರಾಚಾರ್ಯರನ್ನು ಕರೆದುಕೊಂಡು ದೇವತೆಗಳಿಂದ ಬಿಡಲ್ಪಟ್ಟಿರುವ ಸ್ವರ್ಗಲೋಕಕ್ಕೆ ಹೋಗಿ ತ್ರಿಲೋಕಾಧಿಪತ್ಯವನ್ನು ಮಾಡಿಕೊಂಡು ಸುಖದಿಂದಿರಿ ಎಂದು ಹೇಳಿ ಅವರನ್ನೆಲ್ಲಾ ಅಮರಾವತೀಪಟ್ಟಣಕ್ಕೆ ಕಳುಹಿಸಿ ತಾನು ಅವರ ಅನುಮತಿಯನ್ನು ಹೊಂದಿ ಅಲ್ಲಿಂದ ಹೊರಟು ಮಹಾವಿಷ್ಣುವಿನ ಬಳಿಗೆ ಬಂದು ದೇವೇಂದ್ರನಿಗೆ ದೂರ್ವಾಸರ ಶಾಪ ಬಂದುದನ್ನೂ ದೇವತೆಗಳನ್ನೆಲ್ಲಾ ನೈಮಿಶಾ

ರಣ್ಯಕ್ಕೆ ಕಳುಹಿಸಿ ತಾನು ದೈತ್ಯರ ಬಳಿಗೆ ಹೋಗಿ ಮಾಡಿರುವ ತಂತ್ರವನ್ನೂ ತಿಳಿಸಿ ಮಹಾವಿಷ್ಣುವನ್ನು ಕುರಿತು--ನೀನು ಮಹಾತ್ಮನು, ಸರ್ವಜ್ಞನು ಮತ್ತು ಸರ್ವಶಕ್ತನು. ಯಥಾಪ್ರಕಾರವಾಗಿ ದೇವತೆಗಳಿಗೆ ಸ್ವರ್ಗಲೋಕ ಪ್ರಾಪ್ತಿಯುಂಟಾಗುವುದಕ್ಕೆ ಯಾವ ಉಪಾಯವನ್ನು ಹೇಳುವಿಯೋ ಆ ಪ್ರಕಾರವೇ ನಡೆಯುವೆನು ಎಂದನು.

ಆ ಮಾತುಗಳನ್ನು ಕೇಳಿ ಮಹಾವಿಷ್ಣುವು ಮುಗುಳ್ನಗೆಯುಳ್ಳವನಾಗಿ ಸುರ ಗುರುವನ್ನು ನೋಡಿ—ನೀನು ಮಹಾ ಬುದ್ಧಿಶಾಲಿಯು. ಒಳ್ಳೆಯ ಯೋಚನೆಯನ್ನು ಮಾಡಿದೆ. ದೇವೇಂದ್ರನಿಗೆ ನಿನ್ನಂಥ ಗುರುವು ಶ್ರೇಯಶ್ಚಿಂತಕನಾಗಿರುವಲ್ಲಿ ಅವನಿಗೆ ಯಾವ ಕಾರ್ಯವು ತಾನೆ ಅಸಾಧ್ಯವು? ಎಂದು ಬಹು ವಿಧವಾಗಿ ಹೊಗಳಿದನು. ಅದನ್ನು ಕೇಳಿ ಸುರಗುರುವು—ಎಲೈ ಸರ್ವಾಂತರ್ಯಾಮಿಯಾದ ಸ್ವಾಮಿಯೇ, ಸಕಲ ಲೋಕಗಳಲ್ಲಿರುವ ಪ್ರಾಣಿಗಳೂ ಬೊಂಬೆಗಳು. ಮಹಾತ್ಮನಾದ ನೀನು ಸೂತ್ರ ಧಾರನು. ಅವುಗಳೆಲ್ಲವೂ ನೀನು ಕುಣಿಸಿದ ಹಾಗೆ ಕುಣಿಯುವುವು. ಭಕ್ತನಾದ ನನ್ನ ಹೃದಯದಲ್ಲಿ ನೀನಿದ್ದುಕೊಂಡು ಪ್ರೇರೇಪಿಸಿದ ಹಾಗೆ ನಾನು ಮಾಡಿದೆನೇ ಹೊರತು ಅಲ್ಪಜ್ಞನಾದ ನನ್ನ ಬುದ್ಧಿಯು ಎಷ್ಟರದು ? ನಾನೆಷ್ಟರವನು ? ಮಹಾತ್ಮನಾದ ನೀನು ಅಲ್ಪನಾದ ನನ್ನನ್ನು ಕೊಂಡಾಡಿ ನಾಚಿಕೆ ಪಡಿಸಬೇಡ. ಮುಂದೆ ಮಾಡಬೇಕಾದ ಕಾರ್ಯಕ್ಕೆ ಅಪ್ಪಣೆಯನ್ನು ಕೊಡು ಎಂದು ವಿನಯದಿಂದ ಬೇಡಿಕೊಂಡನು.

ಆಗ ಮಹಾವಿಷ್ಣುವು—ಎಲೈ ಸುರಾಚಾರ್ಯನೇ, ನನ್ನ ವಾಸಸ್ಥಾನವಾದ ಕ್ಷೀರಸಮುದ್ರವನ್ನು ಮಂದರಪರ್ವತದಿಂದ ಕಡೆದರೆ ಆ ಕಡಲಲ್ಲಿ ಅಮೃತವು ಉತ್ಪ ನ್ನವಾಗುವುದು. ದೇವತೆಗಳು ಅದನ್ನು ಕುಡಿದರೆ ಜರಾಮರಣರಹಿತರಾಗಿ ತಿರಿಗಿ ತ್ರಿಲೋಕಾಧಿಪತ್ಯವನ್ನು ಹೊಂದಿ ಸಂತೋಷದಿಂದ ಆಳುವರು. ಆದರೆ ಇದು ಮಹಾ ದುಸ್ಸಾಧ್ಯವಾದ ಕಾರ್ಯವು. ಈ ಕೆಲಸವು ದೇವತೆಗಳಿಂದ ಮಾತ್ರವೇ ಆಗತಕ್ಕುದಲ್ಲ. ನೀನು ಏನಾದರೂ ಯುಕ್ತಿಯಿಂದ ಈಗ ಮಾಡಿರುವ ತಂತ್ರವನ್ನೇ ಬಲಪಡಿಸಿ ದೇವತೆ ಗಳಿಗೂ ದೈತ್ಯರಿಗೂ ಸಂಧಿಯನ್ನು ಮಾಡಿ ಉಭಯಪಕ್ಷದವರನ್ನೂ ಕೂಡಿಸಿದರೆ ಈ ಕಾರ್ಯವು ನಿರ್ವಿಘ್ನವಾದೀತು ಎಂದು ಹೇಳಿದನು. ಅನಂತರದಲ್ಲಿ ಸುರಾಚಾರ್ಯನು ವಿಷ್ಣುವಿಗೆ ನಮಸ್ಕರಿಸಿ—ಮಹಾತ್ಮನಾದ ನಿನ್ನ ಕೃಪೆಯಿಂದ ನಿನ್ನ ಅಪ್ಪಣೆಯಂತೆಯೇ ಮಾಡುವೆನೆಂದು ಹೇಳಿ ಅನುಜ್ಞೆಯನ್ನು ಹೊಂದಿ ಅಲ್ಲಿಂದ ಹೊರಟು ನೈಮಿಶಾರಣ್ಯಕ್ಕೆ ಬಂದು ಏಕಾಂತದಲ್ಲಿ ದೇವೇಂದ್ರನ ಸಂಗಡ ತಾನು ಮಾಡಿರುವ ತಂತ್ರಾಲೋಚನೆಗಳ ನ್ನೆಲ್ಲಾ ತಿಳಿಸಿ ಅಲ್ಲಿಂದ ಸ್ವರ್ಗಲೋಕವನ್ನು ಕುರಿತು ಹೊರಟನು.

ಅಷ್ಟರಲ್ಲಿ ದೈತ್ಯರಾಜನು ರಸಾತಲದಿಂದ ಸ್ವರ್ಗಲೋಕಕ್ಕೆ ಹೋಗಿ ತ್ರಿಲೋಕಾ ಧಿಪತ್ಯವನ್ನು ಮಾಡುತ್ತ ತಮ್ಮ ಗುರುಗಳಾದ ಶುಕ್ರಾಚಾರ್ಯರನ್ನು ಕುರಿತು— ಸುರಾಚಾರ್ಯರಾದ ಬೃಹಸ್ಪತ್ಯಾಚಾರ್ಯರು ಮೊದಲು ನಮ್ಮ ಬಳಿಗೆ ಬಂದು ರಾಜ್ಯಕಾರ್ಯವಿಷಯವಾಗಿ ಆಲೋಚಿಸಿಕೊಂಡು ಹೋಗಿ ಬಹಳ ದಿವಸಗಳಾದುವು. ಇನ್ನಾದರೂ ಬರಲಿಲ್ಲ. ನಮ್ಮ ಬಳಿಗೆ ಬಂದು ಸುಳ್ಳುಮಾತುಗಳನ್ನು ಹೇಳಿ ನಮ್ಮನ್ನು ಉಬ್ಬಿಸಿ ಹೋದ ಹಾಗೆ ಕಾಣುತ್ತದೆ ಎಂದು ಹೇಳಲು ; ಅದಕ್ಕೆ ಶುಕ್ರಾಚಾರ್ಯರು —ಅವರು ಸುಳ್ಳನ್ನು ಹೇಳತಕ್ಕವರಲ್ಲ. ಏನೋ ಮಹಾಕಾರ್ಯಪ್ರಯತ್ನದಿಂದ

ಸ್ವಲ್ಪ ಸಾವಕಾಶವಾಗಿರಬಹುದು. ನೀವು ಇಷ್ಟು ಮಾತ್ರಕ್ಕೆ ಚಪಲಚಿತ್ತರಾಗಿ ಬೇರೆ ಆಲೋಚನೆಯನ್ನು ಮಾಡಬಾರದು. ಯಾವ ಮನುಷ್ಯನು ಚಂಚಲಚಿತ್ತನಾಗದೆ ಸ್ಥಿರ ಚಿತ್ತನಾಗಿರುವನೋ ಅವನಿಗೆ ಎಣಿಸಿದ ಕೆಲಸವೆಲ್ಲಾ ನಿರ್ವಿಘ್ನವಾಗಿ ಕೈಗೂಡುವುವು ಎಂದು ಹೇಳುತ್ತ ಇದ್ದರು.

ಆ ವೇಳೆಗೆ ಸರಿಯಾಗಿ ಬೃಹಸ್ಪತ್ಯಾಚಾರ್ಯರು ಬಂದು ಅರಮನೆಯ ಬಾಗಿಲ ಲ್ಲಿ ನಿಂತು—ನಾನು ಬಂದಿರುವ ಸುದ್ದಿಯನ್ನು ಶೀಘ್ರವಾಗಿ ದೈತ್ಯರಾಜನಿಗೆ ತಿಳಿಸು ಎಂದು ಬಾಗಿಲನ್ನು ಕಾಯುವವನಿಗೆ ಹೇಳಲು; ಅವನು ಆ ಕೂಡಲೆ ಹೋಗಿ ವಿಜ್ಞಾಪಿಸಿದ ಕ್ಷಣದಲ್ಲಿಯೇ ಅವರೆಲ್ಲರೂ ಆಚಾರ್ಯರು ಹೇಳಿದ ಮಾತು ಯುಕ್ತ ವಾದುದೆಂದು ನಿಶ್ಚಯಿಸಿಕೊಂಡು ಶುಕ್ರಾಚಾರ್ಯರನ್ನು ಸಂಗಡ ಕರೆದುಕೊಂಡು ಎದುರಿಗೆ ಬಂದು ಸುರಾಚಾರ್ಯರಿಗೆ ಅಭಿವಂದಿಸಿ ಕೈಹಿಡಿದು ಏಕಾಂತಸ್ಥಳಕ್ಕೆ ಕರೆ ದುಕೊಂಡು ಹೋಗಿ ದಿವ್ಯಪೀಠದಲ್ಲಿ ಕುಳ್ಳಿರಿಸಿ ಸನ್ಮಾನವನ್ನು ಮಾಡಿ ಅವರ ಅಪ್ಪಣೆ ಯನ್ನು ಪಡೆದು ತಾವೆಲ್ಲರೂ ತಮ್ಮ ತಮ್ಮ ಉಚಿತಸ್ಥಾನಗಳಲ್ಲಿ ಕುಳಿತುಕೊಂಡರು. ಅನಂತರದಲ್ಲಿ ಸುರಾಚಾರ್ಯನು ನಗೆಮೊಗದಿಂದ ಕೂಡಿ ದೈತ್ಯರನ್ನು ಕುರಿತು—ನೀವೆ ಲ್ಲರೂ ಬಹಳ ಧರ್ಮಿಷ್ಠರಾದುದರಿಂದ ನಿಮ್ಮ ಕಾರ್ಯವು ಕೈಗೂಡುವ ಹಾಗೆ ದೇವರು ಅನುಗ್ರಹಿಸಿದ್ದಾನೆ. ದೇವತೆಗಳಿಗೆ ಸಹಾಯವಾಗಿ ಮಹಾವಿಷ್ಣುವು ತನ್ನ ವಾಸ ಸ್ಥಾನವಾದ ಕ್ಷೀರಸಮುದ್ರವನ್ನು ಮಂದರಪರ್ವತದಿಂದ ಕಡೆದರೆ ಅದರಲ್ಲಿ ನಿಮಗೆ ಬೇಕಾದ ಅನರ್ಘವಾದ ಪದಾರ್ಥಗಳೂ ಅಮೃತವೂ ಹುಟ್ಟುವುವು. ಆ ಅಮೃತವನ್ನು ನೀವು ಪಾನಮಾಡಿದರೆ ಅಮರ್ತ್ಯರಾಗಿ ತಿರಿಗಿ ಯುದ್ಧರಂಗದಲ್ಲಿ ದೈತ್ಯರನ್ನು ಜಯಿಸಿ ನಿಮ್ಮ ಸ್ವರ್ಗಪದವಿಯನ್ನು ಹೊಂದುವಿರಿ ಎಂದು ಅಪ್ಪಣೆಯನ್ನು ಕೊಡಲು; ಅಲ್ಲಿಂದ ಬಂದು ದೇವತೆಗಳನ್ನು ಕುರಿತು ನಾನು—ಎಲೈ ದೇವತೆಗಳಿರಾ, ನೀವು ಅಲ್ಪ ಬಲರು. ಮೇರುಪರ್ವತಕ್ಕೆ ಸಮಾನವಾದ ಮಂದರಪರ್ವತವನ್ನು ಕಿತ್ತು ಹೊತ್ತುಕೊಂಡು ಬರು ವುದಕ್ಕೆ ನಿಮಗೆ ಶಕ್ತಿಸಾಲದು. ಇದಕ್ಕೋಸ್ಕರ ಒಂದು ಒಳ್ಳೆಯ ಯೋಚನೆಯು ನನ್ನ ಮನಸ್ಸಿಗೆ ತೋರಿದೆ. ಅದೇನಂದರೆ, ನೀವೂ ದೈತ್ಯರೂ ಒಬ್ಬ ತಂದೆಯ ಮಕ್ಕಳು. ಅವರಿಗೆ ನೀವು ದ್ವೇಷಿಗಳಾಗಿರುವುದರಿಂದ ಪದೇ ಪದೇ ನಿಮಗೆ ಇಂಥ ತೊಂದರೆಗಳು ಸಂಭವಿಸುತ್ತ ಇರುತ್ತವೆ. ಲೋಕದಲ್ಲಿ ಸ್ವಜನವಿರೋಧವು ಬಲುಕೆಟ್ಟುದು. ಆದರಿಂದ ದುಃಖಪ್ರಾಪ್ತಿಯೇ ಹೊರತು ಎಳ್ಳಷ್ಟಾದರೂ ಸುಖವಿಲ್ಲವು. ಆದುದರಿಂದ ನೀವೂ ಅವರೂ ಐಕಮತ್ಯದಿಂದ ಕೂಡಿದರೆ ಎಂಥ ಅಸಾಧ್ಯ ಕಾರ್ಯವಾದರೂ ನಿರ್ವಿಘ್ನವಾಗಿ ನಡೆಯುವುದು. ಆ ಮೇಲೆ ಇತ್ತಂಡದವರೂ ಅಮೃತಪಾನವನ್ನು ಮಾಡಿ ಸುಖದಿಂದ ಸಹೃದಯರಾಗಿರಬಹುದು ಎಂದು ಹೇಳಿದೆನು. ಅದಕ್ಕೆ ಅವರೆಲ್ಲರೂ ಸಂತೋಷ ದಿಂದ ನನ್ನನ್ನು ಕುರಿತು—ತಾವೇ ದೈತ್ಯರಿಗೂ ನಮಗೂ ಸಂಧಿಮಾಡಿಸಬೇಕೇ ಹೊರತು ಇನ್ನಾರಿಂದಲೂ ಈ ಕಾರ್ಯವು ನೆರವೇರಲಾರದು ಎಂದು ಬಹಳವಾಗಿ ಬೇಡಿಕೊಂ ಡುದರಿಂದ ನಾನು ನನ್ನ ಮನಸ್ಸಿನಲ್ಲಿ ಯೋಚಿಸಿದ ಯೋಚನೆಯು ಕೈಗೂಡುವು ದೆಂದು ಸಂತೋಷಪಟ್ಟುಕೊಂಡು ಅವರ ಮಾತಿನ ಮೇರೆಗೆ ನಿಮ್ಮ ಬಳಿಗೆ ಬರುವವನ ಹಾಗೆ ಇಲ್ಲಿಗೆ ಬಂದೆನು ಎಂದು ಹೇಳಿದನು.

ಆ ಮಾತನ್ನು ಕೇಳಿ ಶುಕ್ರಾಚಾರ್ಯರೂ ದೈತ್ಯರಾಜರೂ ಬೃಹಸ್ಪತ್ಯಾಚಾರ್ಯರ ಯುಕ್ತಿಯನ್ನು ಬಹಳವಾಗಿ ಕೊಂಡಾಡಿ ಮುಂದೆ ನಾವು ನಡೆಯಬೇಕಾದ ಕ್ರಮವನ್ನು ದಯೆಮಾಡಿ ನೇಮಿಸಬೇಕೆಂದು ಬೇಡಿಕೊಂಡರು. ಅದಕ್ಕೆ ಸಂತುಷ್ಟರಾದ ಬೃಹಸ್ಪತ್ಯಾಚಾರ್ಯರು—ನೀವು ಇತ್ತಂಡದವರೂ ಕೂಡಿ ಏಕಮನಸ್ಸಿನಿಂದ ಪಾಲ್ಗಡಲನ್ನು ಕಡೆಯುವಲ್ಲಿ ಅಮೃತ ಒಂದು ವಿನಾ ಉಳಿದ ಭೋಗ್ಯವಸ್ತುಗಳು ಏನೇನು ಹುಟ್ಟಿದಾಗ್ಯೂ ಅವುಗಳಲ್ಲಿ ಒಂದನ್ನಾದರೂ ನೀವು ಮುಟ್ಟದೆ ದೇವತೆಗಳಿಗೇ ಬಿಟ್ಟು ನೀವು ಅಮೃತ ಒಂದನ್ನು ಮಾತ್ರ ತೆಗೆದುಕೊಂಡು ಪಾನಮಾಡಿದರೆ ನೀವೇ ಅಮರ್ತ್ಯರಾಗುವಿರಿ. ಹೀಗೆ ಮಾಡುವುದರಿಂದ ನೋಡುವವರಿಗೆ ನ್ಯಾಯವಾಗಿಯೂ ಇರುವುದು ಎಂದು ಹೇಳಲು ; ಆ ಮಾತನ್ನು ಕೇಳಿ ದೈತ್ಯರೆಲ್ಲರೂ ಮಹಾತ್ಮರಾದ ಈ ಬೃಹಸ್ಪತ್ಯಾಚಾರ್ಯರು ನಿಜವಾಗಿಯೂ ನಮ್ಮ ಶ್ರೇಯಸ್ಸನ್ನೇ ಕೋರಿಕೊಂಡಿರುವರೇ ಹೊರತು ದೇವತೆಗಳಲ್ಲಿ ಅಣುಮಾತ್ರವಾದರೂ ಪ್ರೇಮವಿಲ್ಲವೆಂದು ತಮ್ಮ ಮನಸ್ಸಿನಲ್ಲಿ ತಿಳಿದು ನಿಶ್ಚಯಿಸಿಕೊಂಡು ಸುರಗುರುವನ್ನು ಕುರಿತು—ಸ್ವಾಮಿ, ಇನ್ನು ಮುಂದೆ ಏನು ಮಾಡುವಿರಿ ಎಂದು ಕೇಳಲು, ಆಗ ಸುರಾಚಾರ್ಯನು—ನಾನು ಹೋಗಿ ಸಮಯೋಚಿತವಚನಗಳಿಂದ ಇಂದ್ರಾದಿಗಳನ್ನೆಲ್ಲಾ ಕರೆದುಕೊಂಡು ಬಂದು ಮಂದರಗಿರಿಯ ತಪ್ಪಲಲ್ಲಿ ನಿಲ್ಲಿಸಿ ತಿರಿಗಿ ಇಲ್ಲಿಗೆ ಬಂದು ನಿಮ್ಮನ್ನೂ ಅಲ್ಲಿಗೆ ಕರೆದುಕೊಂಡು ಹೋಗುವೆನು ಎಂದು ಹೇಳಿ ತಿರಿಗಿ ಮಹಾವಿಷ್ಣುವಿನ ಬಳಿಗೆ ಬಂದು ತಾನು ದೈತ್ಯರೊಡನೆ ಆಲೋಚಿಸಿಕೊಂಡು ಬಂದ ಸಂಗತಿಯನ್ನೆಲ್ಲಾ ಆದ್ಯಂತವಾಗಿ ತಿಳಿಸಿ ಕಡೆಗೆ ಅಮೃತವು ಅವರಿಗೆ ಸೇರದೆ ದೇವತೆಗಳಿಗೇ ಸೇರುವ ಹಾಗೆ ಮಾಡುವ ಭಾರವು ಸರ್ವಶಕ್ತನಾದ ನಿನ್ನನ್ನೇ ಹೊಂದಿದೆ ಎಂದು ಹೇಳಲು; ಆಗ ವಿಷ್ಣುವು ಹಾಗೇ ಮಾಡುವೆನೆಂದು ನಂಬಿಕೆಯನ್ನು ಕೊಟ್ಟು ಕಳುಹಿಸಿದನು.

ಅನಂತರದಲ್ಲಿ ಬೃಹಸ್ಪತ್ಯಾಚಾರ್ಯರು ಅಲ್ಲಿಂದ ಹೊರಟು ಬಂದು ದೇವೇಂದ್ರಾದಿಗಳನ್ನೆಲ್ಲಾ ಕರೆದುಕೊಂಡು ಬಂದು ಮಂದರಪರ್ವತದ ಬಳಿಯಲ್ಲಿ ನಿಲ್ಲಿಸಿ ಆ ಮೇಲೆ ದೈತ್ಯರಾಜರ ಬಳಿಗೆ ಹೋಗಿ ಶುಕ್ರಾಚಾರ್ಯರು ಸಹಿತವಾಗಿ ಅವರನ್ನೆಲ್ಲಾ ಕರೆದುಕೊಂಡು ದೇವತೆಗಳ ಬಳಿಗೆ ಬಂದು ಕಾಲೋಚಿತವಾದ ಮಾತುಗಳಿಂದ ಇತ್ತಂಡದವರಿಗೂ ಸಮಾಧಾನವನ್ನುಂಟುಮಾಡಿ ಸ್ನೇಹವನ್ನು ಬೆಳೆಸಿದನು ಆ ಮೇಲೆ ಸುರಾಸುರರು ದೈತ್ಯದಾನವರು ಯಕ್ಷಗರುಡಗಂಧರ್ವಕಿಂಪುರುಷೋರಗರೇ ಮೊದಲಾದವರೆಲ್ಲಾ ಏಕಚಿತ್ತದಿಂದ ಕೂಡಿ ಮಂದರಗಿರಿಯನ್ನು ಕೀಳುವುದಕ್ಕೆ ಆರಂಭಿಸಿದರು. ಎಷ್ಟು ಶ್ರಮಪಟ್ಟು ಕಿತ್ತಾಗ್ಯೂ ಆ ಗಿರಿಯು ಸ್ವಲ್ಪವಾದರೂ ಅಲ್ಲಾಡದೆ ಇದ್ದುದರಿಂದ ದೇವಾಸುರರು ಮಹಾ ವ್ಯಸನಾಕ್ರಾಂತರಾಗಿ ವಿಷ್ಣುವಿಗೆ ನಮಸ್ಕರಿಸಿ ಭಯಭಕ್ತಿಯಿಂದ ಪ್ರಾರ್ಥನೆಯನ್ನು ಮಾಡಿಕೊಳ್ಳಲು ; ಆಗ ವಿಷ್ಣುವು ಅನಂತನೆಂಬ ಮಹಾಶೇಷನನ್ನು ಕರೆದು—ನೀನು ಹೋಗಿ ಮಂದರಾಚಲವನ್ನು ಕಿತ್ತಿಟ್ಟು ಬಾ ಎಂದು ಹೇಳಿ ಕಳುಹಿಸಲು ; ಆತನು ಮಹಾ ಬಲಶಾಲಿಯಾದುದರಿಂದ ನಿಮೇಷಮಾತ್ರದಲ್ಲಿ ಆ ಗಿರಿಯನ್ನು ಕಿತ್ತು ಇರಿಸಿದನು. ಆ ಮೇಲೆ ಸುರಾಸುರ ಸಮೂಹವು ಸಂತೋಷದಿಂದ

ಕೂಡಿ ಆ ಮಂದರ ಪರ್ವತವನ್ನು ತಲೆಯ ಮೇಲೆ ಹೊತ್ತುಕೊಂಡು ಬಂದು ಕ್ಷೀರಸಾಗರದಲ್ಲಿ ಹಾಕಲು; ಅದು ಆ ಕ್ಷಣದಲ್ಲೇ ಸಮುದ್ರದಲ್ಲಿ ಮುಣುಗಿಹೋಯಿತು. ಆಗ ದೇವಾಸುರರೆಲ್ಲರೂ ರಾತ್ರಿಯೆಲ್ಲಾ ಶ್ರಮಪಟ್ಟು ಹೆತ್ತ ಕೂಸನ್ನು ನಾಯಿ ಎತ್ತಿಕೊಂಡು ಹೋಯಿತು ಎಂಬ ಗಾದೆಗೆ ಸರಿಯಾಗಿ ಈ ವರೆಗೂ ನಾವು ಅನುಭವಿಸಿದ ಶ್ರಮವೆಲ್ಲಾ ಕ್ಷಣಕಾಲದಲ್ಲಿ ವ್ಯರ್ಥವಾಗಿ ಹೋಯಿತು ಎಂದು ಬಹಳವಾಗಿ ಚಿಂತೆಪಟ್ಟು—ಭಕ್ತಪರಾಧೀನನಾದ ಲಕ್ಷ್ಮೀಪತಿಯೇ, ಮಹಾತ್ಮನಾದ ನೀನೇ ನಮ್ಮ ಕಷ್ಟವನ್ನು ಸಾಫಲ್ಯವುಳ್ಳದನ್ನಾಗಿ ಮಾಡಿ ನಮ್ಮಲ್ಲಿ ಕನಿಕರವನ್ನಿಟ್ಟು ಈಗ ನಾವು ಆರಂಭಿಸಿರುವ ಕಾರ್ಯವು ನಿರ್ವಿಘ್ನವಾಗಿ ಕೈಗೂಡುವಂತೆ ಅನುಗ್ರಹಿಸಬೇಕೆಂದು ಬಹು ವಿಧವಾಗಿ ಪ್ರಾರ್ಥಿಸಿಕೊಂಡುದರಿಂದ ಆಗ ಮಹಾವಿಷ್ಣುವು ಅವರಿಗೆ ಪ್ರತ್ಯಕ್ಷನಾಗಿ—ಎಲೈ ದೇವಾಸುರರುಗಳಿರಾ, ನಾನು ನಿಮುಗೋಸ್ಕರವಾಗಿ ಮಹಾ ಕೂರ್ಮಾವತಾರವನ್ನು ಮಾಡಿ ಈ ಕ್ಷೀರಸಾಗರದಲ್ಲಿ ಮುಳುಗಿಹೋಗಿರುವ ಮಂದರಪರ್ವತವನ್ನು ಮೇಲೆತ್ತಿ ಸಮುದ್ರದ ನಡುನೀರಿನಲ್ಲಿ ನನ್ನ ಬೆನ್ನಿನ ಮೇಲೆ ಧರಿಸಿಕೊಂಡು ನಿಲ್ಲುವೆನು. ಅನಂತರದಲ್ಲಿ ನಿಮ್ಮ ಸಂತೋಷವಿದ್ದ ಹಾಗೆ ಕಡೆದುಕೊಳ್ಳಿರಿ ಎಂದು ಹೇಳಿ ಅದೃಶ್ಯನಾಗಿ ಸಮುದ್ರವನ್ನು ಹೊಕ್ಕು ಮಹಾಕೂರ್ಮರೂಪವನ್ನು ಧರಿಸಿ ತನ್ನ ಬೆನ್ನಿನಿಂದ ಮಂದರನಗವನ್ನು ಮೇಲೆತ್ತಿ ಧರಿಸಿಕೊಂಡು ನಿಂತನು.

ಆಗ ದೇವಾಸುರರು ನೀರಿನ ಮೇಲೆ ನಿಂತಿರುವ ಮಂದರಗಿರಿಯನ್ನು ನೋಡಿ ಮಹಾವಿಷ್ಣುವಿನ ಮಹಿಮೆಗೆ ಬಹಳವಾಗಿ ಆಶ್ಚರ್ಯಪಟ್ಟು ಆತನನ್ನು ಬಹುವಿಧವಾಗಿ ಸ್ತುತಿಸಿ ವಾಸುಕಿ ಎಂಬ ಸರ್ಪರಾಜನನ್ನು ತಂದು ಆ ಪರ್ವತಕ್ಕೆ ಸುತ್ತಿ ದೇವಾಸುರರು ಒಂದೊಂದು ಕಡೆಗೆ ನಿಂತು ಸಮುದ್ರವನ್ನು ಕಡೆಯುತ್ತಿರಲು; ಆಗ ತ್ರಿಲೋಕ ಭಯಂಕರವಾದ ವಿಷವು ಹುಟ್ಟಿತು. ಅದನ್ನು ನೋಡಿ ತ್ರಿಲೋಕಗಳೂ ತಲ್ಲಣಿಸಿದುವು. ಸುರಾಸುರರೆಲ್ಲರೂ ಕಂಗೆಟ್ಟು ಮುಂಗೆಟ್ಟರು. ಆಗ ಅವ್ಯಾಜಕರುಣಾಸಮುದ್ರನಾದ ಶಿವನು ಬಂದು ಆ ವಿಷವನ್ನು ತೆಗೆದುಕೊಂಡು ಪಾನಮಾಡಿ ಲೋಕ ಪ್ರಳಯವನ್ನು ತಪ್ಪಿಸಿ ಆ ಹಿಂದೆ ಸಮುದ್ಭೂತವಾದ ಚಂದ್ರಕಳೆಯನ್ನು ಆಭರಣವಾಗಿ ಧರಿಸಿಕೊಂಡನು. ತರುವಾಯ ದೇವಾಸುರರು ಸಮುದ್ರವನ್ನು ಮಥಿಸುತ್ತಿರಲು; ಆಗ ಹುಟ್ಟಿದ ಲಕ್ಷ್ಮಿಯನ್ನೂ ಕೌಸ್ತುಭರತ್ನವನ್ನೂ ಮಹಾವಿಷ್ಣುವು ಅಂಗೀಕರಿಸಿದನು. ಆ ಬಳಿಕ ಹುಟ್ಟಿದ ಅಪ್ಸರಸ್ತ್ರೀಯರು ಕಲ್ಪವೃಕ್ಷ ಕಾಮಧೇನು ಚಿಂತಾಮಣಿ ವಾರುಣಿ ಎಂಬ ಮದ್ಯ ಉಚ್ಚೈಶ್ರವಸ್ಸೆಂಬ ಕುದುರೆ ಇವು ಮೊದಲಾದುವುಗಳನ್ನೆಲ್ಲಾ ದೇವೇಂದ್ರನು ತೆಗೆದುಕೊಂಡನು ಅನಂತರದಲ್ಲಿ ಧನ್ವಂತ್ರಿಯೆಂಬ ಒಬ್ಬ ತೇಜಃಪುಂಜರಂಜಿತನಾದ ಪುರುಷನು ಅಕ್ಷಯವಾದ ಅಮೃತ ಕಲಶವನ್ನು ತೆಗೆದುಕೊಂಡು ಸಮುದ್ರದಿಂದ ಮೇಲಕ್ಕೆ ಬರಲು; ಆತನನ್ನು ಕಂಡು ಬೃಹಸ್ಪತ್ಯಾಚಾರ್ಯನು ದೈತ್ಯರಿಗೆ ಕಣ್ಸನ್ನೆಮಾಡಲು; ದೈತ್ಯರಾಜರೆಲ್ಲಾ ಆ ಸೂಚನೆಯನ್ನು ತಿಳಿದು ಶೀಘ್ರವಾಗಿ ಹೋಗಿ ಧನ್ವಂತ್ರಿಯ ಕೈಯಿಂದ ಅಮೃತಕಲಶವನ್ನು ಕಿತ್ತುಕೊಂಡರು. ಅದನ್ನು ಕಂಡು ದೇವತೆಗಳೆಲ್ಲಾ ಬಹಳವಾಗಿ ಭಯಪಟ್ಟವರಾಗಿ ದೈನ್ಯದಿಂದ ಮಹಾವಿಷ್ಣುವಿನ ಬಳಿಗೆ ಓಡಿಬಂದು ಆತನನ್ನು ಕುರಿತು—ಎಲೈ ಆಪದ್ರಕ್ಷ

ಕನೇ, ಕಿಂಚಿದಾಶೆಯಿಂದ ಪ್ರಾಣಧಾರಣೆಯನ್ನು ಮಾಡಿಕೊಂಡು ಸ್ಥಾನಭ್ರಷ್ಟ ರಾಗಿ ಅನಾಥಬಂಧುವಾದ ನಿನ್ನನ್ನು ನಂಬಿಕೊಂಡಿದ್ದ ನಮಗಿನ್ನೇನು ಗತಿ? ಈ ವೇಳೆ ಯಲ್ಲಿ ಆಪತ್ಸಮುದ್ರನಿಮಗ್ನರಾದ ನಮ್ಮನ್ನು ಕೃಪೆಯಿಂದ ಕಾಪಾಡದೆ ಹೋದರೆ ನಾವೆಲ್ಲರೂ ಸತ್ಯವಾಗಿ ಕೆಟ್ಟುಹೋಗುತ್ತೇವೆ. ಸ್ವಾಮಿಾ, ರಕ್ಷಿಸು ರಕ್ಷಿಸು ಎಂದು ಬಹಳವಾಗಿ ಬೇಡಿಕೊಂಡು ಸ್ತುತಿಸಿದುದರಿಂದ ಕರುಣಾಳುವಾದ ವಿಷ್ಣುವು ತ್ರಿಲೋಕ ಮೋಹನಕರವಾದ ಮೋಹಿನೀರೂಪವನ್ನು ಧರಿಸಿ ದೈತ್ಯರನ್ನು ವಂಚಿಸಿ ಅವರ ಕೈಯಿಂದ ಅಮೃತ ಕಲಶವನ್ನು ತೆಗೆದುಕೊಂಡು ದೇವತೆಗಳಿಗೆಲ್ಲಾ ಅಮೃತಪಾನವನ್ನು ಮಾಡಿಸಿ ಧನ್ವಂತ್ರಿಯನ್ನೂ ಅಮೃತಕಲಶವನ್ನೂ ದೇವೇಂದ್ರನ ವಶಕ್ಕೆ ಕೊಟ್ಟು ಅದೃಶ್ಯವಾಗಿ ಹೋದನು. ಆಗ ದೈತ್ಯರೆಲ್ಲಾ ಕೂಡಿ ಮಹಾವ್ಯಸನದಿಂದ ಮೋಸ ಹೋದೆವೆಂದು ಯೋಚಿಸಿಕೊಂಡು ದೇವತೆಗಳ ಕಡೆಯಿಂದ ತಿರಿಗಿ ಅಮೃತಕಲಶ ವನ್ನು ಕಿತ್ತುಕೊಳ್ಳಬೇಕೆಂದು ಯುದ್ಧಕ್ಕೆ ಉದ್ಯುಕ್ತರಾಗಲು ; ಆಗ ದೇವೇಂದ್ರಾದಿ ದೇವತೆಗಳೆಲ್ಲಾ ಅಮೃತಪಾನಬಲದಿಂದ ಯುದ್ಧರಂಗದಲ್ಲಿ ದೈತ್ಯರನ್ನೆಲ್ಲಾ ಜಯಿಸಿದುದ ರಿಂದ ಆ ದೈತ್ಯರೆಲ್ಲರೂ ಹೆದರಿ ಸ್ವರ್ಗವನ್ನು ಬಿಟ್ಟು ರಸಾತಲಕ್ಕೆ ಓಡಿಹೋದರು. ತರುವಾಯ ದೇವತೆಗಳೆಲ್ಲರೂ ಮಹಾವಿಷ್ಣುವನ್ನು ಕಂಡು ನಮಸ್ಕರಿಸಿ ಬಹುವಿಧ ವಾಗಿ ಸ್ತುತಿಸಿ ಸ್ವರ್ಗಲೋಕಕ್ಕೆ ಬಂದು ದೇವೇಂದ್ರನಿಗೆ ಯಥಾವತ್ತಾಗಿ ತ್ರಿಲೋಕ ರಾಜ್ಯಾಭಿಷೇಕವನ್ನು ಮಾಡಿ ಸುಖದಿಂದಿದ್ದರು.

---

## 3. THE THIRD OR BOAR INCARNATION.

### ೩. ವರಾಹಾವತಾರದ ಕಥೆ.

ಸನಕಸನಂದರೆಂಬ ಮುನಿಗಳ ಶಾಪದಿಂದ ಚತುರ್ಮುಖಬ್ರಹ್ಮನ ಮಾನಸಪುತ್ರ ನಾದ ಕಶ್ಯಪಪ್ರಜಾಪತಿಯ ಹೆಂಡತಿಯಾದ ದಿತಿಯ ಬಸುರಿನಲ್ಲಿ ವೈಕುಂಠಲೋಕದ ದ್ವಾರಪಾಲಕರಾದ ಜಯ ವಿಜಯರು ಅವಳಿ ಮಕ್ಕಳಾಗಿ ಹುಟ್ಟಲು ; ಆ ಕಾಲದಲ್ಲಿ ಬ್ರಹ್ಮದೇವನು ಅವರ ಬಳಿಗೆ ಬಂದು ಹಿರಿಯವನಿಗೆ ಹಿರಣ್ಯಕಶಿಪುವೆಂದೂ ಕಿರಿಯವನಿಗೆ ಹಿರಣ್ಯಾಕ್ಷನೆಂದೂ ಹೆಸರನ್ನಿಟ್ಟು ಅವರಿಗೆ ಬೇಕಾದ ವಸ್ತ್ರಾಭರಣಾದಿ ಸಮಸ್ತ ವಸ್ತು ಗಳನ್ನೂ ಕೊಟ್ಟು ಹರಸಿ ಸತ್ಯಲೋಕಕ್ಕೆ ಹೊರಟು ಹೋದನು. ಆ ಮೇಲೆ ಅವರಿ ಬ್ಬರೂ ಅದ್ಭುತಾಕಾರರಾಗಿ ಬೆಳೆದು ಮಹಾಪರಾಕ್ರಮಶಾಲಿಗಳಾಗಿ ವಿರೋಧಿಗಳ ಮೇಲೆ ಹೊರಟು ದಿಗ್ವಿಜಯಗಳನ್ನು ಮಾಡಿ ಸಕಲ ಧರಣೀಮಂಡಲವನ್ನೂ ಸ್ವಾಧೀನ ಮಾಡಿಕೊಂಡು ಶೋಣಿತಪುರವೆಂಬ ಪಟ್ಟಣದಲ್ಲಿ ಅತಿಸಂಭ್ರಮದಿಂದ ವಾಸಮಾಡಿ ಕೊಂಡು ರಾಜ್ಯಭಾರವನ್ನು ಮಾಡುತ್ತ ಸುಖದಿಂದಿರುತ್ತಿದ್ದರು. ದೇವೇಂದ್ರನು ಅವ ರಿಗೆ ಹೆದರಿಕೊಂಡು ಅವರ ರಾಜ್ಯದಲ್ಲಿ ಕಾಲವನ್ನತಿಕ್ರಮಿಸದೆ ಸರಿಯಾಗಿ ಮಳೆಗಳನ್ನು ಕರೆಯುತ್ತ ಬಂದುದರಿಂದ ಹೊಲ ಗದ್ದೆ ತೋಟ ಮೊದಲಾದ ಭೂಮಿಗಳೆಲ್ಲಾ ಸಸ್ಯಾ

ದಿಗಳಿಂದ ತುಂಬಿ ಸದಾಕಾಲವೂ ಪ್ರಕಾಶಿಸುತ್ತಿದ್ದ ಕಾರಣ ಸುಭಿಕ್ಷಯೋಗದಿಂದ ಸರ್ವ ಪ್ರಜೆಗಳೂ ಸುಖವಾಗಿ ಸಕಲೈಶ್ವರ್ಯಸಂಪನ್ನರಾಗಿದ್ದರು. ಯಮನು ಆ ದೈತ್ಯರ ಭಯದಿಂದ ಬಾಧಿಸಲ್ಪಟ್ಟವನಾಗಿ ಅವರ ದೇಶದಲ್ಲಿ ಅಕಾಲಮರಣವು ಸಂಭವಿಸದಂತೆ ಜಾಗರೂಕತೆಯಿಂದ ಕಾದುಕೊಂಡಿರುತ್ತಿದ್ದನು. ಆದಕಾರಣ ಅವರ ರಾಜ್ಯದಲ್ಲಿ ದಾರಿದ್ರ್ಯ ಕಷ್ಟ ಅಕಾಲಮರಣ ಇತ್ಯಾದಿಗಳನ್ನು ಸ್ವಪ್ನದಲ್ಲಿಯಾದರೂ ಕಂಡು ಕೇಳಿದ ಪ್ರಜೆಯೇ ಇರಲಿಲ್ಲವು.

ಈ ರೀತಿಯಾಗಿ ಹಿರಣ್ಯಕಶಿಪು ಹಿರಣ್ಯಾಕ್ಷರು ಏಕಛತ್ರಾಧೀಶ್ವರರಾಗಿ ನಿರ್ಭಯದಿಂದ ರಾಜ್ಯಭಾರವನ್ನು ಮಾಡುತ್ತ ಇರಲು; ಒಂದಾನೊಂದು ದಿವಸ ಲೋಕಸಂಚಾರ ಶೀಲನಾದ ನಾರದ ಮುನೀಶ್ವರನು ಇವರ ಮಹದೈಶ್ವರ್ಯವನ್ನು ನೋಡಬೇಕೆಂದು ಶೋಣಿತಪುರಕ್ಕೆ ಬರಲು; ಆಗ ಹಿರಣ್ಯಕಶಿಪು ಹಿರಣ್ಯಾಕ್ಷರು ಒಂದ ನಾರದನನ್ನು ಎದುರುಗೊಂಡು ಕರೆದು ತಂದು ತಮ್ಮ ಸಮೀಪದಲ್ಲಿ ಸುವರ್ಣಪೀಠಾಗ್ರದಲ್ಲಿ ಕುಳ್ಳಿರಿಸಿ ಯಥಾಮರ್ಯಾದೆಯಿಂದ ಸನ್ಮಾನಿಸಿ—ಎಲೈ ಮುನಿಕುಲತಿಲಕನೇ, ನೀನು ಮೂರುಲೋಕಗಳನ್ನೂ ಸಂಚರಿಸುತ್ತಿರುವಿಯಲ್ಲ! ಪೂರ್ವದಲ್ಲಿಯಾಗಲಿ ಈಗಾಗಲಿ ನಮ್ಮ ಹಾಗೆ ಸಕಲಸಂಪತ್ತಿನಿಂದ ಕೂಡಿ ರಾಜ್ಯಭಾರವನ್ನು ಮಾಡಿದವರೂ ಮಾಡುತ್ತಿರುವವರೂ ಉಂಟೇ? ಎಂದು ಕೇಳಲು, ಆಗ ನಾರದಮುನಿಯು— ನಿಮ್ಮ ಹಾಗೆ ರಾಜ್ಯಭಾರವನ್ನು ಮಾಡಿದವರೂ ಮಾಡುತ್ತಿರುವವರೂ ಮೂರು ಲೋಕಗಳಲ್ಲಿಯೂ ಒಬ್ಬರೂ ಇಲ್ಲ ಎಂದು ಹೇಳಿದನು. ಆ ಮಾತಿಗೆ ದೈತ್ಯಚಕ್ರೇಶ್ವರರು—ಹಾಗಾದರೆ ಮುಂದೆಯಾದರೂ ನಮ್ಮ ಹಾಗೆ ಏಕಛತ್ರಾಧೀಶ್ವರತ್ವದಿಂದ ರಾಜ್ಯಭಾರ ಮಾಡುವವರು ಯಾರಾದರೂ ಹುಟ್ಟುವರೋ? ಎಂದು ಕೇಳಲು; ಆ ಮಾತಿಗೆ ಮುನಿಯು—ಮುಂದೆ ನಿಮ್ಮ ವಂಶದಲ್ಲಿ ಬಲಿಚಕ್ರವರ್ತಿಯೆಂಬವನು ಹುಟ್ಟಿ ನಿಮಗಿಂತಲೂ ಅತಿಶಯವಾಗಿ ಸಾರ್ವಭೌಮತ್ವದಿಂದ ಈ ಭೂಮಂಡಲವನ್ನು ಆಳುವನು. ಆದರೆ ವಿಷ್ಣುವು ಮೋಸಮಾಡಿ ಅವನ ಅಧಿಕಾರವನ್ನು ತಪ್ಪಿಸಿ ಭೂಮಿಯನ್ನು ಕಿತ್ತುಕೊಳ್ಳುವನು ಎಂದು ಹೇಳಿದನು. ಆ ಮಾತನ್ನು ಕೇಳಿದ ಕ್ಷಣದಲ್ಲಿಯೇ ಕಿರಿಯವನಾದ ಹಿರಣ್ಯಾಕ್ಷನೆಂಬವನು ಮಹಾಕೋಪದಿಂದ ಕಣ್ಣುಗಳಲ್ಲಿ ಕಿಡಿಗಳನ್ನುದುರಿಸುತ್ತ ತ್ರಿಲೋಕಭೀಕರ ಪರಾಕ್ರಮಶೀಲರಾದ ನಾವೂ ನಮ್ಮ ವಂಶದವರೂ ಆಳುವ ಈ ಧರಣೀಮಂಡಲವನ್ನು ನಮ್ಮ ಕಡೆಯಿಂದ ಕಿತ್ತುಕೊಳ್ಳುವುದಕ್ಕೆ ವಿಷ್ಣುವು ಎಷ್ಟರವನು? ಈ ಭೂಮಂಡಲವು ಅವನ ಕೈಗೆ ಸಿಕ್ಕದಂತೆ ಮಾಡಬೇಕೆಂದು ಯೋಚಿಸಿ ಆ ಕ್ಷಣದಲ್ಲಿಯೇ ಎದ್ದು ಭೂಮಂಡಲವನ್ನು ಚಾಪೆಯ ಹಾಗೆ ಸುತ್ತಿ ಕಂಕುಳಲ್ಲಿಟ್ಟುಕೊಂಡು ಸಮುದ್ರವನ್ನು ಪ್ರವೇಶಿಸಿ ರಸಾತಲಕ್ಕೆ ಹೋಗಿ ಭೂಮಿಯನ್ನಲ್ಲಿಟ್ಟು ತನ್ನ ಮೈಗೊಬ್ಬಿನಿಂದ ದೇವತೆಗಳನ್ನು ಜಯಿಸಬೇಕೆಂದು ಭಯಂಕರಗದಾದಂಡವನ್ನು ತೆಗೆದುಕೊಂಡು ಆರ್ಭಟಿಸುತ್ತ ಸುರಲೋಕಕ್ಕೆ ಹೊರಟು ಹೋದನು.

ಅಷ್ಟರಲ್ಲಿಯೇ ಸಕಲದೇವತೆಗಳೂ ಮುನಿಜನಗಳೂ ಕೂಡಿ ಬ್ರಹ್ಮದೇವನ ಬಳಿಗೆ ಹೋಗಿ ಆತನನ್ನು ಕರೆದುಕೊಂಡು ಕ್ಷೀರಸಮುದ್ರಕ್ಕೆ ಹೋಗಿ ಶ್ರೀಮಹಾವಿ

ಷ್ಣುವನ್ನು ಕಂಡು ನಮಸ್ಕರಿಸಿ ಸ್ತೋತ್ರವನ್ನು ಮಾಡಿ—ಎಲೈ ಜಗನ್ನಾಥನೇ, ಸರ್ವ ಜಗದ್ರಕ್ಷಕನೇ, ದುಷ್ಟನಾದ ಹಿರಣ್ಯಾಕ್ಷನೆಂಬ ದೈತ್ಯನು ಭೂಮಿಯನ್ನು ತೆಗೆದು ಕೊಂಡು ಹೋಗಿ ರಸಾತಲದಲ್ಲಿ ಹಾಕಿರುವುದರಿಂದ ದೇವಯಜ್ಞ ಪಿತೃಯಜ್ಞ ಮೊದ ಲಾದುವುಗಳೆಲ್ಲಾ ನಡೆಯದೆ ಸಂಪೂರ್ಣವಾಗಿ ನಿಂತುಹೋಗಿರುವುದರಿಂದ ನಾವೆಲ್ಲರೂ ಆಹಾರಶೂನ್ಯರಾಗಿ ಮೃತಪ್ರಾಯರಾಗಿದ್ದೇವೆ. ಮಹಾತ್ಮನಾದ ನೀನು ಅನಾಥರಾದ ನಮ್ಮಲ್ಲಿ ಕರುಣೆಯನ್ನಿಟ್ಟು ಆ ದೈತ್ಯನನ್ನು ಕೊಂದು ಭೂಮಿಯನ್ನು ರಸಾತಲದಿಂದ ಮೇಲಕ್ಕೆತ್ತಿ ಯಥಾಪ್ರಕಾರವಾಗಿಟ್ಟು ನಮ್ಮನ್ನು ಕಾಪಾಡಬೇಕೆಂದು ಬಹುತರವಾಗಿ ಬೇಡಿಕೊಳ್ಳಲು ; ಆಗ ದಯಾರ್ದ್ರಹೃದಯನಾದ ವಿಷ್ಣುವು—ಒಳ್ಳೆಯದೆಂದು ಹೇಳಿ ಅವರಿಗೆ ಅಭಯವನ್ನಿತ್ತು ಅವರೆಲ್ಲರನ್ನೂ ಅವರವರ ಲೋಕಗಳಿಗೆ ಕಳುಹಿಸಿದನು.

ಹೀಗಿರುವಲ್ಲಿ ಒಂದು ದಿವಸ ಸತ್ಯಲೋಕದಲ್ಲಿ ಸರೋಜಸಂಭವನು—ಪುರುಷೋ ತ್ತಮನು ಭೂಮಿಯನ್ನು ರಸಾತಲದಿಂದ ಮೇಲಕ್ಕೆತ್ತಿ ಯಥಾಪ್ರಕಾರವಾಗಿ ನಿಲ್ಲಿಸಿ ಹವ್ಯಕವ್ಯಗಳು ನಿರ್ವಿಘ್ನತೆಯಿಂದ ನಡೆಯುವ ಹಾಗೆ ಎಂದಿಗೆ ಮಾಡುವನೋ ? ಎಂದು ಚಿಂತಿಸುತ್ತ ಆತನನ್ನು ಧ್ಯಾನಿಸುತ್ತಿರುವಲ್ಲಿ ಆತನ ಮೂಗಿನ ರಂಧ್ರದ ದೆಸೆ ಯಿಂದ ಅಂಗುಷ್ಠಮಾತ್ರ ಪ್ರಮಾಣವುಳ್ಳ ಒಂದು ವರಾಹವು ಸಿಡಿದು ಕೆಳಗೆ ಬಿದ್ದು ಒಡನೆ ಮುಗಿಲನ್ನು ಮುಟ್ಟುವ ಹಾಗೆ ರೌದ್ರಾಕಾರವಾಗಿ ಬೆಳೆದು ದಶದಿಕ್ಕುಗಳು ಒಡೆಯುವ ಹಾಗೆ ಗರ್ಜಿಸುತ್ತಿದ್ದಿತು. ಆ ಮಹಾ ವರಾಹಕ್ಕೆ ನಾಲ್ಕು ವೇದಗಳು ನಾಲ್ಕು ಕಾಲುಗಳಾದುವು. ಮಹಾವಾಸುಕಿಯು ಬಾಲವಾದನು. ಸ್ಮೃತಿ ಪುರಾಣ ಗಳೆರಡೂ ಎರಡು ಕಿವಿಗಳಾದುವು. ಆದಿತ್ಯಚಂದ್ರರು ಎರಡು ಕಣ್ಣುಗಳಾದರು. ದೇವಪಿತೃಯಜ್ಞಗಳು ಕೋರೆದಾಡೆಗಳಾದುವು. ಸಕಲಮಂತ್ರಗಳು ಸರ್ವಾಂಗಗಳಾ ದುವು. ಇಂಥ ಅದ್ಭುತಾಕಾರಯುಕ್ತವಾದ ಮಹಾಸೂಕರವನ್ನು ನೋಡಿ ಸರೋಜ ಸಂಭವನು—ಸ್ವಾಮಿಾ, ನಿನ್ನ ಲೋಕಭೀಕರವಾದ ಮಹಾರ್ಭಟವನ್ನು ಸಹಿಸುವವರು ಯಾರು ? ಸರ್ವಶಕ್ತನಾದ ನೀನು ನಮ್ಮಲ್ಲಿ ಕೃಪೆಮಾಡಿ ಆ ಕೇಡಾಳಿಯಾದ ದೈತ್ಯ ನನ್ನು ಕೊಂದು ಭೂಮಿಯನ್ನು ತೆಗೆದುಕೊಂಡು ಬಂದು ಯಥಾರೀತಿಯಾಗಿಟ್ಟು ಲೋಕವನ್ನು ಉದ್ಧರಿಸಿ ಕಾಪಾಡು ಎಂದು ಭಯಭಕ್ತಿಯಿಂದ ಕೂಡಿ ಬೇಡಿಕೊ ಳ್ಳಲು ; ಕೂಡಲೆ ವರಾಹವು ಘುಡಿಘುಡಿಸುತ್ತ ದಾಡೆಯನ್ನು ಮಸೆದು ಎಡಬಲಗ ಳನ್ನು ನೋಡುತ್ತ ಮೂಗಿನ ರಂಧ್ರದಲ್ಲಿ ಬಿಸಿಯಾದ ಉಸಿರನ್ನು ಭಯಂಕರವಾಗಿ ಬಿಡುತ್ತ ಎರಡು ಕಣ್ಣುಗಳಿಂದ ಕೆಂಗಿಡಿಗಳನ್ನುದುರಿಸುತ್ತ ಬಾಲವನ್ನು ಆಕಾಶಕ್ಕೆತ್ತಿ ರೋಮಗಳನ್ನು ಕೆದರಿ ನಿಗುರಿಸಿಕೊಂಡು ಹೊರಟು ಅತಿರಭಸದಿಂದ ಪಾತಾಳವನ್ನು ಪ್ರವೇಶಿಸಿ ಅಲ್ಲಿ ಬಿದ್ದಿರುವ ಧರಣಿಯನ್ನು ತನ್ನ ಕೋರೆದಾಡೆಗಳಿಂದ ಮೇಲೆತ್ತಿಕೊಂಡು ಶೀಘ್ರದಿಂದ ತೆಗೆದುಕೊಂಡು ಬರುತ್ತಿದ್ದಿತು. ಆಗ ಪಾತಾಳಲೋಕನಿವಾಸಿಗಳಾದ ಪ್ರಾಣಿಗಳೆಲ್ಲವೂ ಅಪೂರ್ವವಾದ ಈ ವರಾಹವನ್ನೂ ಅದರ ಅನ್ಯಾದೃಶವಾದ ಬಲ ವನ್ನೂ ನೋಡಿ ಭಯಾಶ್ಚರ್ಯಗಳ ಸಮುದ್ರಗಳಲ್ಲಿ ಮುಳುಗುತ್ತಿದ್ದುವು.

ಇತ್ತಲು ಮೊದಲೇ ಪ್ರಾಯದ ಕೊಬ್ಬಿನಿಂದ ಬಲಿಷ್ಠರಾದ ದೇವತೆಗಳನ್ನು ಜಯಿಸುವುದಕ್ಕೋಸ್ಕರ ಸುರಲೋಕವನ್ನು ಕುರಿತು ಹೊರಟಿದ್ದ ಹಿರಣ್ಯಾಕ್ಷನು

ಬಲದ ಉಬ್ಬಿನಿಂದ ಕೂಡಿ ಕಂಡ ಕಂಡವರನ್ನು ಕಾಳೆಗಕ್ಕೆ ಕರೆದು ಕರೆದು ಎದುರಾ ದವರನ್ನು ಹೊಡೆದು ನಾಶಮಾಡುತ್ತ ಬರುತ್ತಿರಲು; ದೇವತೆಗಳಲ್ಲಿ ಒಬ್ಬರಾದರೂ ಅವನಿಗೆದುರಾಗದೆ ಅವನು ಕಾಣದ ಹಾಗೆ ಓಡಿಹೋಗಿ ಮೈಮರಸಿಕೊಳ್ಳುತ್ತ ಇದ್ದರು. ತರುವಾಯ ಹಿರಣ್ಯಾಕ್ಷನು ಎದುರಿಗೆ ನಿಂತು ಕಾದುವವರು ಯಾರೂ ಇಲ್ಲದೆ ಹೋಗಲು; ಪುನಃ ಹೊರಟು ಬಲಿಷ್ಠರಾದವರನ್ನು ಹುಡುಕುತ್ತ ಆರ್ಭಟಿಸಿ ಕೊಂಡು ಅಮರಾವತೀಪಟ್ಟಣವನ್ನು ಹೊಗಲು; ದೇವತೆಗಳೆಲ್ಲಾ ಅವನನ್ನು ಕಂಡು ಹೆದರಿ ಮೂರ್ಛೆಹೋಗಿ ಎದ್ದು ದಿಕ್ಕು ದಿಕ್ಕುಗಳಿಗೆ ಚದುರಿಹೋದರು. ಆಗ ಹಿರಣ್ಯಾ ಕ್ಷನು ದೇವೇಂದ್ರನ ಬಳಿಗೆ ಬಂದು ಅವನನ್ನು ಕುರಿತು—ಎಲೈ ಇಂದ್ರನೇ, ನೀನು ಈ ದೇವತೆಗಳಿಗೆಲ್ಲಾ ಒಡೆಯನೆನ್ನಿಸಿಕೊಂಡು ಜಂಭಾಸುರಪಾಕಾಸುರಾದಿ ಬಲಿಷ್ಠ ರಾದ ದೈತ್ಯರನ್ನು ಯುದ್ಧರಂಗದಲ್ಲಿ ಜಯಿಸಿ ಗರ್ವಿತನಾಗಿ ಜಂಭಾರಿ ಪಾಕಶಾಸನ ಎಂದು ಹೊಗಳಿಸಿಕೊಳ್ಳುತ್ತಿರುವಿಯಷ್ಟೆ. ತಡಮಾಡಬೇಡ! ಏಳು! ನನ್ನೊಡನೆ ಕಾಳೆ ಗಕ್ಕೆ ನಿಲ್ಲು! ನೋಡೋಣ ಎನ್ನಲು; ಆಗ ದೇವೇಂದ್ರನು ಬೆಚ್ಚಿ ಗಡಗಡನೆ ನಡು ಗುತ್ತ—ಅಯ್ಯಾ ಮಹಾತ್ಮನಾದ ದೈತ್ಯರಾಜನೇ, ಎಲ್ಲಾದರೂ ಎಂದಾದರೂ ಬೆಂಕಿ ಯೊಡನೆ ಅರಳೆಗೂ ಸಿಂಗದೊಡನೆ ಮೊಲಕ್ಕೂ ಗರುಡನೊಡನೆ ಹಾವಿಗೂ ಜಗಳವಾ ದರೆ ಅರಳೆ ಮೊಲ ಹಾವುಗಳು ನಾಮಮಾತ್ರಾವಶೇಷಗಳಾಗದೆ ಬದುಕುವುದುಂಟೇ? ಹಾಗೆ ನಾನು ಮಹಾವೀರನಾದ ನಿನ್ನೊಡನೆ ಜಗಳವಾಡಿ ಬದುಕಬಲ್ಲೆನೇ? ಅಲ್ಪಬಲ ನಾದ ನಾನು ನಿನಗೆ ಸಮಾನನೇ? ಎಂದು ದೈನ್ಯವಚನದಿಂದ ಬಹುವಿಧವಾಗಿ ಹೇಳಿ ಕೊಳ್ಳಲು ಆಗ ಹಿರಣ್ಯಾಕ್ಷನು—ಛೀ! ಹೇಡಿಯೇ, ನೀನು ಗಂಡಸು ಎಂದು ಹುಟ್ಟ ಬಹುದೇ? ಮೂರು ಲೋಕಗಳ ಅಧಿಪತಿಯೆನ್ನಿಸಿಕೊಂಡು ಹೀಗೆ ಸಾವಿಗೆ ಅಂಜಿ ಕಾಳೆಗಕ್ಕೆ ನಿಲ್ಲಲಾರದೆ ಹೋದ ನಿನ್ನ ಜನ್ಮವನ್ನು ಸುಡಬೇಕು! ನೀನು ಪುರುಷಾಕಾ ರದ ಹೆಂಗಸೇ ಸರಿ! ಎಂದು ಹೀಯಾಳಿಸಿ ಅವನನ್ನು ಬಿಟ್ಟು ಅಲ್ಲಿಂದ ಹೊರಟು ಅಗ್ನಿ ಯಮ ನಿರುತಿ ವಾಯು ಕುಬೇರಾದ್ಯರ ನಗರಗಳಿಗೆ ಹೋಗಲು, ಅವರೆಲ್ಲರೂ ಪ್ರಚಂ ಡನಾದ ಇವನು ಬರುವ ವರ್ತಮಾನವನ್ನು ಕೇಳಿ ಇವನ ಕಣ್ಣುಗಳಿಗೆ ಕಾಣಿಸಿಕೊ ಳ್ಳದೆ ತೋರಿದ ಕಡೆಗೆ ಓಡಿಹೋಗಿ ಅವಿತುಕೊಂಡರು.

ಅದನ್ನು ಕಂಡು ಹಿರಣ್ಯಾಕ್ಷನು—ಅಯ್ಯೋ, ನನಗೆ ಎದುರಾಗಿ ಕಾಳೆಗಕ್ಕೆ ನಿಂತು ಕಾದುವವರು ಯಾರೂ ಇಲ್ಲದೆ ಹೋದರಲ್ಲಾ! ನಾನು ಎಷ್ಟು ವಿಶೇಷವಾಗಿ ಹುಡು ಕಿಕೊಂಡು ತಿರುಗಿದಾಗ್ಯೂ ನಿಷ್ಪ್ರಯೋಜನವಾಯಿತಲ್ಲಾ! ನನ್ನ ತೋಳ್ತೀಟೆಯನ್ನು ಎಲ್ಲಿ ಹೋಗಿ ಕಳೆದುಕೊಳ್ಳುವೆನೋ ತಿಳಿಯದಲ್ಲಾ! ಎಂದು ಯೋಚಿಸುತ್ತ ಸಮುದ್ರವನ್ನು ಹೊಕ್ಕು ವರುಣನ ಪಟ್ಟಣಕ್ಕೆ ಹೋಗಿ ಆತನನ್ನು ಹಿಡಿದು ಬೇಗ ಕಾಳೆಗಕ್ಕೆ ಬಾರೋ, ಎಂದು ಕರೆಯಲು, ಆಗ ಆತನು ಭಯಚಕಿತಮನಸ್ಸುಳ್ಳವನಾಗಿ ದೈನ್ಯದಿಂದ ಕೂಡಿ —ಮಹಾಪರಾಕ್ರಮಶಾಲಿಯಾದ ನಿನ್ನೊಡನೆ ಎದುರಾಗಿ ನಿಂತು ಕಾದುವುದಕ್ಕೆ ಕ್ಷುದ್ರಬಲನಾದ ನನಗೆ ಶಕ್ತಿಯುಂಟೇ? ಜಗದೇಕವೀರನಾದ ನಿನ್ನೊಡನೆ ಕಾದುವು ದಕ್ಕೆ ನನಗೆ ಶಕ್ತಿಯಿಲ್ಲವೆಂದು ಕೈಮುಗಿದು ಬೇಡಿಕೊಳ್ಳಲು; ಆಗ ದೈತ್ಯನು ವ್ಯಸ

ನಾಕ್ರಾಂತನಾಗಿ ವರುಣನನ್ನು ಕುರಿತು—ನೀನು ಬಲುಮುದುಕನಾಗಿದ್ದೀಯೆ. ಈ ಲೋಕದಲ್ಲಿ ನನ್ನೊಡನೆ ನಿಂತು ಕಾದುವ ಪರಾಕ್ರಮಶಾಲಿಗಳು ಎಲ್ಲಾದರೂ ಯಾರಾದರೂ ಇದ್ದರೆ ಬೇಗ ಹೇಳು ಎಂದನು. ಅದಕ್ಕೆ ವರುಣನು ಸ್ವಲ್ಪ ಯೋಚಿಸಿ—ಎಲೈ ದೈತ್ಯರಾಜನೇ, ನೀನು ಮೊದಲು ತೆಗೆದುಕೊಂಡು ಹೋಗಿ ರಸಾತಲದಲ್ಲಿ ಹಾಕಿದ ಭೂಮಿಯನ್ನು ತನ್ನ ಕೋರೆದಾಡೆಗಳ ಮೇಲೆ ಇರಿಸಿ ತೆಗೆದುಕೊಂಡು ಒಬ್ಬ ವರಾಹ ರಾಜನು ಹೋಗುತ್ತಾ ಇದ್ದಾನೆ. ಒಂದು ವೇಳೆ ಅವನೇನಾದರೂ ನಿನ್ನೊಡನೆ ಯುದ್ಧಕ್ಕೆ ನಿಂತರೂ ನಿಲ್ಲಬಹುದು. ಅವನೂ ನಿಲ್ಲದೆಹೋದರೆ ಇನ್ನಾರನ್ನೂ ಕಾಣೆನು ಎಂದು ಹೇಳಿದನು. ಆ ಮಾತನ್ನು ಕೇಳಿ ಹಿರಣ್ಯಾಕ್ಷನು ಮಹಾ ಕೋಪದಿಂದ ಮುಂಗಾಣದವನಾಗಿ ಹೊರಟು ಭೂತಳವನ್ನು ಎತ್ತಿಕೊಂಡು ಹೋಗುತ್ತಿರುವ ವರಾಹಪತಿಯನ್ನು ಕಂಡು ಅಬ್ಬರಿಸಿ ಓಡಿಬಂದು ಎದುರಾಗಿ ನಿಂತು ತನ್ನವರನ್ನು ಕುರಿತು—ಎಲೆ, ಎಲೇ, ಹಂದಿ! ಹಂದಿ! ಮಜಭಾಪು! ಮೊದಲು ನಾವು ತಂದುಹಾಕಿದ ಭೂಮಿಯನ್ನು ಎತ್ತಿಕೊಂಡು ಹೋಗುತ್ತಿದೆ. ಹಿಡಿಯಿರಿ! ಹಿಡಿಯಿರಿ! ಹೊಡಿಯಿರಿ! ಹೊಡಿಯಿರಿ! ಹಿಂದಟ್ಟಿಹೋಗಿ ಬಡಿಯಿರಿ! ತಡಮಾಡಬೇಡಿರಿ! ಬಲೆಗಳನ್ನು ಹಾಕಿರಿ! ಕೆಡಹಿರಿ! ಹಾಸುಗಳನ್ನು ಕಳಚಿ ನಾಯಿಗಳನ್ನು ಬಿಡಿರಿ! ಇದು ನಮಗೆ ಇಂದಿನ ಆಹಾರಕ್ಕೆ ಸಾಕಾಗುವುದು. ಇದನ್ನು ಈ ಕ್ಷಣದಲ್ಲೇ ಕೊಲ್ಲದೆ ಬಿಡೆನೆಂದು ವರಾಹನೆದುರಿಗೆ ಬಂದು ನಿಂತು ಅದನ್ನು ಕುರಿತು—ಎಲಾ, ಕೊಬ್ಬಿದ ಹಂದಿಯೇ, ನಿನಗೀ ಬೊಬ್ಬೆ ಗಿಬ್ಬೆಗಳೇಕೆ? ಮಾರಿಯ ಹಬ್ಬದಲ್ಲಿ ತಲೆಗೊಡುವ ಸೂಕರನೇ ನನ್ನೊಡನೆ ನಿನ್ನ ಮೈಗೊಬ್ಬನ್ನು ತೋರಿಸೇಳು! ನಿನ್ನ ಬಲದ ಕೊಬ್ಬನ್ನು ನೆಗ್ಗುವೆನು. ನಿನ್ನ ಖಂಡವನ್ನು ತುಪ್ಪದಲ್ಲಿ ಹುರಿದು ತಿಂದು ತೇಗುವೆನು. ನಿನ್ನ ರಕ್ತವನ್ನು ಕುಡಿದು ಸಂತೋಷಿಸುವೆನು. ಅರಸುತ್ತಿರುವ ಬಳ್ಳಿಯು ಕಾಲ್ತೊಡರಿಕೊಂಡಂತೆ ರಕ್ತಮಾಂಸಗಳಿಂದ ಕೊಬ್ಬಿದ ನೀನೇ ನನಗೆ ಸಿಕ್ಕಿದುದು ಬಲು ಚೆನ್ನಾಯಿತು. ನಿಮೇಷಮಾತ್ರದಲ್ಲಿ ನಿನ್ನ ಅಸುಗಳನ್ನು ಹೊರಡಿಸಿ ಹಸನಾದ ಬಿಸಿಬಿಸಿ ನೆತ್ತರನ್ನು ಕುಡಿದು ತೃಪ್ತಿಯನ್ನು ಹೊಂದುವೆನು. ಇದೋ, ಇದನ್ನು ಸಹಿಸಿಕೋ ಎಂದು ತನ್ನ ತೋರವಾದ ಮಹಾ ಗದೆಯಿಂದ ವರಾಹವನ್ನು ಹೊಯ್ದನು. ಆಗಲಾ ಹಂದಿಯು ಕೆಲಕ್ಕೆ ಹಾರಿ ಆ ಮಹಾಘಾತವನ್ನು ತಪ್ಪಿಸಿಕೊಂಡು ತನ್ನ ಕೋರೆದಾಡೆಗಳ ಮೇಲಿದ್ದ ಭೂಮಿಯನ್ನು ಮಹಾಶೇಷನ ಹೆಡೆಯ ಮೇಲೂ ದಿಗ್ಗಜಗಳ ಮೇಲೂ ಇಟ್ಟು ಈ ರಕ್ಕಸನ ಬೊಬ್ಬಾಟವು ಬಲುವಾಗಿದೆ. ಇವನ ಉಕ್ಕನ್ನು ತಗ್ಗಿಸುವೆನು ಎಂದು ಸಿಡಿದು ಮೇಲಕ್ಕೆ ನೆಗೆದು ಹಾರಿ ಬಂದು ದೈತ್ಯನ ಹಲ್ಲುಗಳು ಮುರಿಯುವಂತೆ ಹೊಕ್ಕು ಹೊಯ್ಯಲು; ಅದನ್ನು ಕಂಡು ದಾನವನು ತಪ್ಪಿಸಿಕೊಂಡು ತನ್ನ ಕೈಯಲ್ಲಿದ್ದ ಗದೆಯಿಂದ ವರಾಹನ ಕೈಯಲ್ಲಿದ್ದ ಗದೆಯನ್ನು ಹೊಯ್ಯಲು; ಆ ಗದೆಯು ಮಹಾವರಾಹನ ಕೈಯಿಂದ ಕಳಚಿ ಕೆಳಗೆ ಬಿದ್ದಿತು.

ಆ ವೇಳೆಯಲ್ಲಿ ದಿತಿಸುತನು ಮತ್ತೂ ಮಹಾಕೋಪವೇಗಯುಕ್ತನಾಗಿ ಬಹುವಿಧಾಯುಧಗಳಿಂದ ವರಾಹನನ್ನು ಪ್ರಹರಿಸಿ ಮಾಯೆಯನ್ನವಲಂಬಿಸಿ ಮಿಂಚಾಗಿ

ಬೆಚ್ಚಿಸಿದನು. ಗುಡುಗಾಗಿ ಹೆದರಿಸಿದನು. ಮಳೆಯಾಗಿ ವರಾಹನ ಮೇಲೆ ಸುರಿದನು. ಗಿರಿಗಳಾಗಿ ವರಾಹನ ಮೇಲೆ ಬಿದ್ದುರುಳಿದನು. ಬಲ್ಕಲ್ಲುಗುಂಡುಗಳಾಗಿ ಸುರಿದು ಕಣ್ಗೆಡಿಸಿದನು. ಕತ್ತಲೆಯಾಗಿ ಕವಿದು ಮುಂಗೆಡಿಸಿದನು. ಹುಲಿ ಕರಡಿ ಸಿಂಗ ಮೊದಲಾದ ದುಷ್ಟ ಮೃಗಗಳಾಗಿ ಬಂದು ವರಾಹನನ್ನು ಪರಚಿದನು, ಕಚ್ಚಿದನು, ಕವರಿದನು. ವಿವಿಧವಾದ ವಿಷ ಸರ್ಪಗಳಾಗಿ ಮೊರೆಯುತ್ತ ಬಂದು ವರಾಹನನ್ನು ಮುತ್ತಿ ಸುತ್ತಿಕೊಂಡು ಕಚ್ಚಿ ಖಂಡಗಳನ್ನು ಕಿತ್ತು ಗಾಯಗಳಲ್ಲಿ ಮಹಾ ವಿಷವನ್ನು ಕಾರಿದನು. ಮತ್ತು ಕಾಡ್ಗಿಚ್ಚಾಗಿ ಕವಿದು ದಹಿಸಿದನು. ಭೂತ ಪ್ರೇತ ಪಿಶಾಚಗಳ ತಂಡಗಳಾಗಿ ಬಂದು ವರಾಹನನ್ನು ಮುತ್ತಿಕೊಂಡು--ಕೊಬ್ಬಿದ ಹಂದಿ ಬಲೆಗೆ ಸಿಕ್ಕಿತು. ಕವಿ! ಕವಿ! ತಿವಿ! ತಿವಿ! ಹೊಡಿ! ಹೊಡಿ! ಬಲ್ಬಸುರಿಂದ ಕರುಳುಗಳನ್ನು ಕೀಳು! ಕೀಳು! ರಕ್ತವನ್ನು ಹೀರು! ಎಂದು ಆರ್ಭಟಿಸುತ್ತ ಇನ್ನೂ ವಿವಿಧವಾಗಿ ವರಾಹನಿಗೆ ಹಿಂಸೆಯನ್ನುಂಟುಮಾಡುತ್ತ ತನ್ನ ಮಾಯಾಸಾಮರ್ಥ್ಯವನ್ನು ತೋರಿಸುತ್ತ ಮತ್ತೆ ತನ್ನ ಪೂರ್ವದ ದೈತ್ಯರೂಪವನ್ನೇ ಧರಿಸಿ—ಎಲಾ ಹಂದಿಯೇ, ಕಾದುಬಾರೋ; ಮುಷ್ಟಿಯುದ್ಧಕ್ಕೆ ನಿಲ್ಲು ಎಂದಬ್ಬರಿಸಿ ತಿವಿಯಲು; ಆಗ ವರಾಹನು ರೋಷಾವೇಶಕಷಾಯಿತಾಕ್ಷಿಗಳಿಂದ ಕೂಡಿ ತನ್ನ ವಜ್ರಮುಷ್ಟಿಯಿಂದ ಹಿರಣ್ಯಾಕ್ಷನ ಹಣೆಯನ್ನು ತಿವಿದನು. ಆ ಹೊಡೆತದಿಂದ ದೈತ್ಯನು ತಲೆಯೊಡೆದು ಕಣ್ಕಿವಿ ಬಾಯ್ಮೂಗುಗಳಲ್ಲಿ ಕೆನ್ನೀರ್ಸುರಿದು ಹಲ್ಲುಗಳುದುರಿ ಭೂಮಿಯಲ್ಲಿ ಬಿದ್ದು ಒದೆದಾಡಿ ಬಾಧೆಯಿಂದ ನರಳುತ್ತ ಮೈಮುರಿತು ಕಡೆಗೆ ಸತ್ತುಬಿದ್ದನು ಅನಂತರದಲ್ಲಿ ವರಾಹರೂಪಧಾರಿಯಾದ ಮಹಾವಿಷ್ಣುವು ಭೂಮಿಯನ್ನು ತೆಗೆದುಕೊಂಡು ಹೋಗಿ ಮೊದಲಿನಂತೆ ಸ್ಥಾಪಿಸಿ ಹವ್ಯಕವ್ಯಗಳು ಮೊದಲಿನಂತೆ ನಿರ್ವಿಘ್ನವಾಗಿ ನಡೆಯುವಂತೆ ಮಾಡಿ ದೇವತೆಗಳನ್ನೂ ಮುನಿಜನರನ್ನೂ ಸಜ್ಜನರನ್ನೂ ಸಲಹಿ ವೈಕುಂಠಲೋಕಕ್ಕೆ ಹೋದನು.

---

## 4. THE FOURTH OR MAN-LION INCARNATION.

### ೪. ನರಸಿಂಹಾವತಾರದ ಕಥೆ.

ಅನಂತರದಲ್ಲಿ ಹಿರಣ್ಯಕಶಿಪು ಹಿರಣ್ಯಾಕ್ಷರ ತಾಯಿಯಾದ ದಿತಿಯು ತನ್ನ ಕಿರಿಯ ಮಗನಾದ ಹಿರಣ್ಯಾಕ್ಷನು ವರಾಹರೂಪಧಾರಿಯಾದ ಮಹಾವಿಷ್ಣುವಿನಿಂದ ಸಂಹೃತನಾದ ಸುದ್ದಿಯನ್ನು ಕೇಳಿ ಸಿಡಿಲು ಬಡಿದು ಸಮೂಲವಾಗಿ ಮುರಿದಿಳೆಗುರುಳಿದ ದೊಡ್ಡ ಮರದಂತೆ ಭೂಮಿಯಲ್ಲಿ ಬಿದ್ದು ಮೂರ್ಛಿತಳಾಗಿ ಒಂದೆರಡು ಗಳಿಗೆಗಳಾದ ಮೇಲೆ ಚೇತರಿಸಿಕೊಂಡು ಮಹಾದುಃಖದಿಂದ ಹೊಟ್ಟೆಯನ್ನೂ ಬಾಯಿಯನ್ನೂ ಬಡಿದುಕೊಳ್ಳುತ್ತ ಅಡಿಗಡಿಗೆ ಮಗನ ಶಕ್ತಿ ಪರಾಕ್ರಮಗಳನ್ನು ನೆನನೆನದು ಹಂಬಲಿಸಿ ಮರುಗುತ್ತ ತಡೆಯಿಲ್ಲದೆ ಕಣ್ಣೀರುಗಳನ್ನು ಸುರಿಸುತ್ತ ತಲೆಯನ್ನು ಕೆದರಿಕೊಂಡು ಬಹು ಸಂತಾಪಯುಕ್ತಳಾಗಿ ಹಿರಿ ಮಗನಾದ ಹಿರಣ್ಯಕಶಿಪುವಿನ ಬಳಿಗೈತಂದು—ಅಪ್ಪಾ ಮಗನೇ, ಪಾಪಿಷ್ಠಳಾದ ನನ್ನೊಡಲು ಬೆಂದು ಬೆಂಡಾದುದು.

ನಾನೀ ಪ್ರಾಣಗಳನ್ನು ಧರಿಸಲಾರೆನು. ಅಸಹಾಯಶೂರನಾದ ನಿನ್ನ ತಮ್ಮನು ಬೇಡ ವೆಂದು ಎಷ್ಟು ವಿಧವಾಗಿ ಹೇಳಿದರೂ ಕೇಳದೆ ಭೂಮಿಯನ್ನು ತೆಗೆದುಕೊಂಡು ಹೋಗಿ ರಸಾತಲದಲ್ಲಿಟ್ಟನು. ಆ ನಿಮಿತ್ತದಿಂದ ವರಾಹಾಕಾರಧಾರಿಯಾಗಿ ಬಂದ ವಿಷ್ಣುವು ಆತನನ್ನು ಕೊಂದನು ಎಂದು ಬಹಳವಾಗಿ ರೋದಿಸುತ್ತ ಅವನ ಕೊರಳನ್ನು ತಬ್ಬಿಕೊಂಡು--ಎಲೈ ಕಂದಾ ! ಕೆಟ್ಟೆನು, ಕೆಟ್ಟೆನೈ, ಹಾ ! ಎಂದು ಮೊರೆಯಿಡಲು ;

ಆ ಮಾತುಗಳನ್ನು ಕೇಳಿ ಹಿರಣ್ಯಕಶಿಪುವು ಮಹಾರೋಷಪರವಶನಾಗಿ ಏಳಲು ; ಕೂಡಲೆ ಅವನ ಕಣ್ಣುಗಳೆರಡೂ ಕೆಂಡಗಳನ್ನು ಕಾರಿದುವು. ಮೀಸೆಗಳು ಕುಣಿ ಕುಣಿದಾಡಿದುವು. ತರುವಾಯ ಅವನು ಕೋಪಕಂಪಿತಾಧರನಾಗಿ ಈ ಕ್ಷಣದಲ್ಲಿಯೇ ಆ ನೀಚ ಸೂಕರನನ್ನು ಹಿಡಿದೆಳದುಕೊಂಡು ಬಂದು ಸತ್ತ ತಮ್ಮನ ಕಾಲುಗಳ ಬಳಿ ಯಲ್ಲಿ ಕೆಡಹಿ ತತ್ತರದರಿದು ದಿಗ್ಬಲಿಯನ್ನು ಕೊಡುವೆನು ಎಂದು ದಿಗ್ಭಿತ್ತಿಗಳೊಡೆಯು ವಂತೆ ಆರ್ಭಟಿಸುತ್ತ ಹೊರಟು ಕ್ರಮವಾಗಿ ದಶದಿಕ್ಕುಗಳನ್ನೂ ಸಮುದ್ರಗಳನ್ನೂ ಅವುಗಳೊಳಗಣ ದ್ವೀಪಾಂತರಗಳನ್ನೂ ತಲಾತಲರಸಾತಲ ಪಾತಾಳಾದಿ ಲೋಕಗ ಳನ್ನೂ ಪ್ರವೇಶಿಸಿ ಎಷ್ಟು ವಿಧವಾಗಿ ಹುಡುಕಿದಾಗ್ಯೂ ಮಹಾವಿಷ್ಣುವನ್ನು ಕಾಣದೆ ಆತನು ಧರ್ಮದ ಬಳಿಯಲ್ಲಿರುವನೆಂದು ತನ್ನ ಮನಸ್ಸಿನಲ್ಲಿ ಯೋಚಿಸಿ ವೇದಶಾಸ್ತ್ರಗ ಳನ್ನು ಓದುವವರ ಬಳಿಗಳಲ್ಲೂ ಜಪತಪೋಹೋಮನಿಯಮಗಳು ನಡೆಯುವ ಸ್ಥಳಗ ಳಲ್ಲೂ ಗಂಗಾದಿ ಮಹಾ ನದಿಗಳ ತೀರಗಳಲ್ಲೂ ಪುಣ್ಯಕ್ಷೇತ್ರಗಳಲ್ಲೂ ಹೋಗಿ ನೋಡಿ ನೋಡಿ ಸಾಕಾಗಿ ಎಲ್ಲೂ ವಿಷ್ಣುವನ್ನು ಕಾಣದೆ ಆ ಸುಜನರನ್ನೂ ಮುನಿಜನಗಳನ್ನೂ ಹೊಡೆದು ಬಾಧಿಸಿ ಅವರ ಸತ್ಕರ್ಮಗಳನ್ನೆಲ್ಲಾ ವಿನಾಶಮಾಡಿ ಅಲ್ಲಿ ಒಂದು ಸ್ಥಳದಲ್ಲಿ ನಿಂತು——ಈ ವರೆಗೂ ಎಷ್ಟು ಹುಡುಕಿದಾಗ್ಯೂ ಆ ಕಳ್ಳನಾದ ವಿಷ್ಣುವು ಸಿಕ್ಕಲಿಲ್ಲ. ಈ ಹುಡುಕುವಿಕೆಯು ಹಾಗಿರಲಿ. ಇನ್ನು ಮೇಲೆ ನನಗೆ ಯಾರಿಂದಲೂ ಮರಣವು ಸಂಭವಿಸದಂತೆ ಸರೋಜಸಂಭವನಿಂದ ವರವನ್ನು ಪಡೆದು ಆ ವರಬಲದಿಂದ ಆ ಕಪ ಟಿಯಾದ ವಿಷ್ಣುವು ಎಲ್ಲಿ ಹೊಕ್ಕಿದ್ದರೂ ಹಾವಾಡಿಗನು ಮಂತ್ರಬಲದಿಂದ ಹುತ್ತ ದಲ್ಲಿ ಹೊಕ್ಕಿದ್ದ ಹಾವನ್ನು ಹೊರಗೆ ತೆಗೆದು ಎಷದ ಹಲ್ಲನ್ನು ಮುರಿಯುವ ಹಾಗೆ ಅವನನ್ನು ಹಿಡಿದು ಬಡಿದು ಕೊಂದುಹಾಕಿ ನಿರ್ನಾಮಮಾಡಿಬಿಡುವೆನು ಎಂದು ತನ್ನ ಮನಸ್ಸಿಲ್ಲಿ ನಿಶ್ಚಯಿಸಿಕೊಂಡು ಹಿಂದಿರುಗಿ ತನ್ನತಾಯಿಯ ಬಳಿಗೆ ಬಂದು—— ತಾಯಿಯೇ, ಆ ಮಾಯಿಯಾದ ವಿಷ್ಣುವು ಈ ವರೆಗೂ ಎಷ್ಟು ಹುಡುಕಿದಾಗ್ಯೂ ಸಿಕ್ಕಲಿಲ್ಲ. ನನ್ನ ಆಯುಃಕಾಲವಿರುವ ವರೆಗೂ ಚೆನ್ನಾಗಿ ಅರಸಿ ಅವನು ಎಲ್ಲಿದ್ದರೂ ಬಿಡದೆ ಹಿಡಿದು ಅವನನ್ನು ಬಡಿದು ಕೊಲ್ಲದೆ ಬಿಡೆನು. ಆದರೆ ಈಗ ನನ್ನ ಪ್ರಾಣ ಗಳಿಗೆ ಭಯವಿಲ್ಲದಂತೆ ಮಹಾ ಘೋರತಪಸ್ಸನ್ನು ಮಾಡಿ ವರವನ್ನು ಪಡೆದುಕೊಂ ಡು ಬರುವೆನು. ಆ ವರೆಗೂ ನೀನು ದುಃಖಿಸದೆ ಇರು ಎಂದು ತನ್ನ ತಾಯಿ ಮೊದ ಲಾದ ಸಂಸಾರದ ಜನಗಳನ್ನೆಲ್ಲಾ ಸಮಾಧಾನಪಡಿಸಿ ಅಲ್ಲಿಂದ ಹೊರಟು ಅತಿ ಶೀಘ್ರ ಗತಿಯಿಂದ ಮಂದರಪರ್ವತಕ್ಕೆ ಬಂದು ಅಲ್ಲೊಂದು ಪ್ರಶಸ್ತವಾದ ಸ್ಥಳದಲ್ಲಿ ಕಾಲಿ ನ ಹೆಬ್ಬೆಟ್ಟನ್ನು ನೆಲಕ್ಕೂರಿ ನಿಂತು ಕತ್ತನ್ನು ಎತ್ತಿ ಕಣ್ಣು ಬಿಟ್ಟುಕೊಂಡು ಸೂರ್ಯ

ನನ್ನು ಅವಲೋಕಿಸುತ್ತ ಚಿತ್ತೈಕಾಗ್ರತೆಯಿಂದ ಕೂಡಿ ಸಂಪೂರ್ಣಭಕ್ತಿಯುಕ್ತ ನಾಗಿ ಬ್ರಹ್ಮದೇವನನ್ನು ಕುರಿತು ಅನೇಕ ಸಹಸ್ರ ಸಂವತ್ಸರಗಳ ವರೆಗೂ ತಪಸ್ಸನ್ನು ಮಾಡುತ್ತಿರಲು ; ಆಗ ಅವನ ಮೈಸುತ್ತಲೂ ಹುತ್ತ ಬಿದಿರು ಬೆತ್ತಗಳು ಬೆಳೆದು ಮುಚ್ಚಿಕೊಂಡುವು. ಅವನ ಗಡ್ಡ ಮೀಸೆಗಳು ಆಲದ ಬೀಳಲುಗಳು ನೆಲಕ್ಕಿಳಿಯು ವಂತೆ ಭೂಮಿಗಿಳಿದು ಬೇರುಹರಿದುವು. ಕಾಲು ಕೈಗಳ ಉಗುರುಗಳು ಬಹಳ ದೀರ್ಘವಾಗಿ ಬೆಳೆದುವು. ಗೆದ್ದಲು ಹುಳುಗಳು ಅವನ ಶರೀರದ ಚರ್ಮ ಮಾಂಸಗ ಳನ್ನು ತಿಂದುವು. ಆ ಮಹೋಗ್ರತಪೋದ್ಯುಕ್ತನಾದ ದೈತ್ಯನ ಶರೀರವು ಕೇವಲ ಅಸ್ಥಿಮಯವಾಗಿದ್ದಿತು.

ಅನಂತರದಲ್ಲಿ ಆ ಹಿರಣ್ಯಕಶಿಪುವಿನ ಉಗ್ರತಪೋಗ್ನಿಜ್ವಾಲೆಯು ಭುಗಿಲೆಂದುಬ್ಬಿ ನೆತ್ತಿಯನ್ನು ಭೇದಿಸಿಕೊಂಡು ಲೋಕಗಳನ್ನು ವಿನಾಶಮಾಡುವುದೋ ಎಂಬಂತೆ ಹೊರ ಹೊರಟಿತು. ಆಗ ಸಕಲಲೋಕಗಳವರೂ ಮಹಾಭಯದಿಂದ ಕಂಗೆಟ್ಟು ಕಳವಳ ಗೊಂಡು ಸರೋಜಸಂಭವನ ಬಳಿಗೆ ಓಡಿಹೋಗಿ ಸಾಷ್ಟಾಂಗಪ್ರಣತರಾಗಿ ಎದ್ದು ಕೈಮುಗಿದು ನಿಂತು—ಸ್ವಾಮಿ, ದಯಾಕರನೇ, ಯಾವನೋ ಒಬ್ಬನ ತಪೋಗ್ನಿಜ್ವಾ ಲೆಯು ಬೆನ್ನಟ್ಟಿ ಬಂದು ಲೋಕದ ಪ್ರಜೆಗಳನ್ನೆಲ್ಲಾ ಸುಟ್ಟು ಕೊಲ್ಲುತ್ತಿದೆ. ನಮಗೊ ದಗಿರುವ ಇಂಥ ವಿಪತ್ಕಾಲದಲ್ಲಿ ಮಹಾತ್ಮನೂ ದಯಾಸಮುದ್ರನೂ ಆದ ನೀನು ಶರ ಣಾಗತರಾದ ನಮ್ಮನ್ನು ಕೃಪೆಯಿಂದ ಕಾಪಾಡಬೇಕೆಂದು ಬಹು ದೈನ್ಯದಿಂದ ಬೇಡಿ ಕೊಂಡರು. ಆಗ ಸರೋಜಸಂಭವನು ತನ್ನ ಜ್ಞಾನದೃಷ್ಟಿಯಿಂದ ತಪಸ್ಸನ್ನು ಮಾಡು ವವನು ತನ್ನ ಮೊಮ್ಮಗನಾದ ಹಿರಣ್ಯಕಶಿಪುವೆಂದು ತಿಳಿದು ಆ ಜಗಜ್ಜನರನ್ನು ಕುರಿತು—ನೀವು ಭಯಪಡಬೇಡಿರಿ. ಆತನು ನನ್ನ ಮೊಮ್ಮಗನು. ನಾನು ಈ ಕೂಡಲೆ ಹೋಗಿ ಆತನ ಅಭೀಷ್ಟಾರ್ಥವನ್ನು ಕೊಟ್ಟು ಎಬ್ಬಿಸಿ ಕಳುಹಿಸುವೆನೆಂದು ಹೇಳಿ ಕಳು ಹಿಸಿ ತರುವಾಯ ತಾನು ತನ್ನ ವಾಹನವಾದ ಹಂಸೆಯನ್ನೇರಿಕೊಂಡು ಹಿರಣ್ಯಕಶಿಪುವು ತಪಸ್ಸುಮಾಡುವ ಸ್ಥಳಕ್ಕೆ ಬಂದು ಅಸ್ಥಿಪಂಜರ ಮಾತ್ರವಾಗಿರುವ ಆತನನ್ನು ನೋಡಿ ಈ ರೀತಿಯಾಗಿ ಕಾಯಕ್ಲೇಶವನ್ನು ಸಹಿಸಿಕೊಂಡು ಉಗ್ರತಪಸ್ಸನ್ನು ಮಾಡಿದವರು ಈ ವರೆಗೂ ಯಾರೂ ಇಲ್ಲವೆಂದು ಮೆಚ್ಚಿ ತನ್ನ ಕೈಯಲ್ಲಿದ್ದ ಕಮಂಡಲದ ಮಂತ್ರೋ ದಕವನ್ನು ತೆಗೆದು ಅವನ ಮೇಲೆ ಚಿಮುಕಿಸಲು ; ಆಗಲಾ ಹಿರಣ್ಯಕಶಿಪುವು ತನ್ನ ಸುತ್ತಲೂ ಬೆಳೆದಿದ್ದ ಹುತ್ತ ಬಿದಿರ್ಬೆತ್ತಗಳನ್ನು ಒಡೆದುಕೊಂಡು ಹೊರಗೆ ಹೊರಟು ಬಂದು ಸಮೀಪದಲ್ಲಿ ನಿಂತಿರುವ ಸರೋಜಸಂಭವನನ್ನು ನೋಡಿ ಬಹಳ ಸಂತೋಷ ಯುಕ್ತಮನಸ್ಕನಾಗಿ ಆತನ ಪಾದಗಳನ್ನು ಮುಟ್ಟಿ ನಮಸ್ಕರಿಸಿ ಹಾಗೆಯೇ ಭೂಮಿ ಯಲ್ಲಿ ಬಿದ್ದಿರಲು; ಆಗ ಸಂತುಷ್ಟನಾದ ವಾಣೀಮನೋವಲ್ಲಭನು—ಏಳು! ಕಂದನೇ, ಏಳು ! ಇನ್ನು ಮೇಲೆ ನಿನ್ನ ಉಗ್ರತಪಸ್ಸು ಸಾಕು ಏಳು ! ಬಹುಕಾಲದಿಂದ ಬಹಳಾ ಯಾಸಪಟ್ಟುದು ಸಾಲದೇ ? ನಿನ್ನ ಮನೋರಥವಾವುದು ? ಕೇಳು. ಈಗಲೇ ಅದನ್ನು ಕೊಡುವೆನು ಎನ್ನಲು; ಆಗ ಹಿರಣ್ಯಕಶಿಪುವು ಬೇಗನೆದ್ದು ಕೈಮುಗಿದು ನಿಂತುಕೊಂಡು —ಎಲೈ ಪಿತಾಮಹನೇ, ಸುರನರೋರಗಯಕ್ಷರಾಕ್ಷಸರಿಂದಲೂ ವಿವಿಧವಾದ ಮೃಗಗ

ಳಿಂದಲೂ ನಾನಾ ವಿಧಪ್ರಾಣಿಗಳಿಂದಲೂ ಮತ್ತು ಹಿಮ ಜಲ ಅಗ್ನಿ ಭೂಮಿ ಆಕಾಶ ಹಗಲು ರಾತ್ರಿ ಒಳಗೆ ಹೊರಗೆ ನಿದ್ರಿಸುವಾಗ ಸಿಡಿಲು ಶಿಲೆ ಅಖಿಳವಿಧಾಸ್ತ್ರ ತೃಣಕಾಷ್ಠ ಮಂತ್ರ ವ್ಯಾಧಿ ಇವು ಮೊದಲಾದುವುಗಳಿಂದಲೂ ನನಗೆ ಮರಣವುಂಟಾಗದಂತೆ ವರವನ್ನು ಕೊಡು. ಒಲುಮಾತುಗಳಿಂದೇನು ? ಸಮಸ್ತ ಲೋಕಗಳವರೂ ಬಂದು ಭಯ ಭಕ್ತಿಯಿಂದ ನನ್ನನ್ನು ಓಲೈಸಬೇಕು. ಈ ಪ್ರಕಾರವಾದ ವರವನ್ನು ಕೊಡಬೇಕೆಂದು ಕೇಳಿಕೊಂಡನು.

ಆಗ ಕಮಲಸಂಭವನು ತನ್ನ ಮನಸ್ಸಿನಲ್ಲಿ—ಇವನು ಮಹಾದುಷ್ಟನು. ಮೊದಲೇ ಲೋಕಗಳನ್ನೆಲ್ಲಾ ಹಿಡಿದು ತಿಕ್ಕಿ ಮುಕ್ಕುತ್ತಿರುವನು. ಇದರ ಮೇಲೆ ಇಂಥ ಮಹಾವರವನ್ನು ಕೊಟ್ಟರೆ ಕ್ಷಣಕಾಲದಲ್ಲಿ ಲೋಕಗಳನ್ನೆಲ್ಲಾ ಸುಟ್ಟು ಬೂದಿ ಮಾಡಿ ಬಿಡುವನು. ಅಸದೃಶವರಗಳನ್ನು ಕೇಳಿಕೊಂಡನಲ್ಲಾ ! ಇದಕ್ಕೆ ಏನು ಮಾಡಬೇಕು ? ಇವನು ನ್ಯಾಯವಾಗಿ ಮಹೋಗ್ರತಪಸ್ಸಿನಿಂದ ಕಷ್ಟಪಟ್ಟು ನನ್ನನ್ನು ಮೆಚ್ಚಿಸಿರುವನು. ವರವನ್ನು ಕೊಡದೆ ಹೋದರೆ ನನ್ನ ಭಕ್ತರು ನಗುವರು. ಮತ್ತು ಭಕ್ತಿಯಲ್ಲಿ ನಂಬಿಕೆಯನ್ನು ತೊರೆಯುವರು ಎಂದು ಯೋಚಿಸಿ ಕಡೆಗೆ—ಏನಾದರೂ ಆಗಲಿ. ಇವನು ಕೇಳಿಕೊಂಡಂತೆ ವರಗಳನ್ನು ಕೊಡತಕ್ಕುದು ಯುಕ್ತವಾಗಿದೆ ಎಂದು ನಿಶ್ಚಯಿಸಿ ಆ ಹಿರಣ್ಯಕಶಿಪುವನ್ನು ಕುರಿತು—ನಿನ್ನ ಮನಸ್ಸಿನ ಇಷ್ಟಪ್ರಕಾರವೇ ವರಗಳನ್ನು ಕೊಟ್ಟೆನು. ಸಂತೋಷದಿಂದ ಹೋಗು ಎಂದು ಹೇಳಿ ಅದೃಶ್ಯನಾದನು. ಆಗ ಹಿರಣ್ಯಕಶಿಪುವು ಮಹಾಸಂತೋಷದಿಂದ ಕೂಡಿದವನಾಗಿ ದೇವತೆಗಳ ಬಡಗಿಯಾದ ಮಯನನ್ನು ನೆನೆಯಲು; ಆ ಕೂಡಲೆ ಆತನು ಬಂದು ನಿಂತು ಕೈಮುಗಿದು—ನನಗೇನಪ್ಪಣೆ ? ಎಂದು ಕೇಳಲು ; ಅದಕ್ಕೆ ಹಿರಣ್ಯಕಶಿಪುವು—ನೀನು ಈ ಕ್ಷಣದಲ್ಲೇ ಹೋಗಿ ನನ್ನ ಪಟ್ಟಣವನ್ನು ಸರ್ವೋನ್ನತವಾಗಿ ದಿವ್ಯಾಲಂಕಾರಗಳಿಂದ ಶೃಂಗರಿಸು ಎಂದು ಅಪ್ಪಣೆಯನ್ನು ಕೊಟ್ಟು ಕಳುಹಿಸಿದನು. ಆ ಬಳಿಕ ಮಯನು ಅವನ ಅಪ್ಪಣೆಯನ್ನು ತಲೆಯಲ್ಲಿ ಆಂತು ಬಂದು ಆ ಪಟ್ಟಣವನ್ನೆಲ್ಲಾ ಜಾಗ್ರತೆಯಾಗಿ ಆಶ್ಚರ್ಯವಿಧದಿಂದ ಶೃಂಗರಿಸಿದನು. ಅನಂತರದಲ್ಲಿ ಹಿರಣ್ಯಕಶಿಪುವು ಸರ್ವಸಂವಿಧಾನದೊಡನೆ ಕೂಡಿ ಗೋಧೂಳೀಲಗ್ನದಲ್ಲಿ ಪುರವನ್ನು ಪ್ರವೇಶಿಸಿ ಒಂದು ದಿನ ಮಾತ್ರ ಅಲ್ಲಿದ್ದು ಮಾರಣೆಯ ದಿನವೇ ದೈತ್ಯಭಟರೊಡನೆ ಕೂಡಿ ಸರ್ವಲೋಕಗಳನ್ನೂ ಭಯಪಡಿಸುತ್ತ ಹೊರಟು ಇಂದ್ರಲೋಕಕ್ಕೆ ಹೋಗಿ ಆರ್ಭಟಿಸಿ ಇಂದ್ರಾದ್ಯಷ್ಟದಿಕ್ಪಾಲಕರನ್ನು ಯುದ್ಧಕ್ಕೆ ಕರೆಯಲು ; ಆ ಇಂದ್ರನು ಅಷ್ಟದಿಕ್ಪಾಲಕರೊಡನೆ ಕೂಡಿ ಹಿರಣ್ಯಕಶಿಪುವನ್ನು ಕುರಿತು—ಅಲ್ಪಶಕ್ತರಾದ ನಾವು ಮಹಾತ್ಮನಾದ ನಿನ್ನೊಡನೆ ಯುದ್ಧಮಾಡಲಾರೆವು, ನಾವೆಲ್ಲರೂ ನಿನಗೆ ಕಪ್ಪಗಳನ್ನು ಕೊಡುತ್ತ ನೀನು ಹೇಳಿದಂತೆ ಕೇಳಿಕೊಂಡು ಅಧೀನರಾಗಿರುವೆವು ಎಂದು ವಿನಯಪೂರ್ವಕವಾಗಿ ಬೇಡಿಕೊಂಡುದರಿಂದ ಆ ದೈತ್ಯನು ಅವರು ಭಯಭಕ್ತಿಯಿಂದ ತಂದೊಪ್ಪಿಸಿದ ಕಪ್ಪಗಳನ್ನು ತೆಗಿಸಿಕೊಂಡು ಅವರೆಲ್ಲರನ್ನೂ ಜತೆಯಲ್ಲಿ ಕರೆದುಕೊಂಡು ಹಿಂದಿರುಗಿ ತನ್ನ ಪಟ್ಟಣಕ್ಕೆ ಬಂದು ಸಿಂಹಾಸನದ ಮೇಲೆ ಕುಳಿತುಕೊಂಡು ಸರ್ವಲೋಕಗಳವರಿಂದ ಸೇವಿಸಲ್ಪಡುವವನಾಗಿ ತ್ರಿಭುವನಾಧಿಪತ್ಯವನ್ನು ಹೊಂದಿ—ಭೂಲೋಕದಲ್ಲಿ ಮಾಡುವ ಕರ್ಮಗಳಲ್ಲಿ ಸರ್ವರೂ ನನ್ನ ಹೆಸರನ್ನು

ಹೇಳಿ ಆಹುತಿಗಳನ್ನು ಕೊಡಬೇಕೇ ಹೊರತು ಇಂದ್ರನೇ ಮೊದಲಾದ ಯಾವ ದೇವತೆಗಳ ಹೆಸರನ್ನಾದರೂ ಹೇಳಿಕೊಡಕೂಡದು ಎಂದು ಎಲ್ಲರಿಗೂ ಕಟ್ಟುಮಾಡಿಸಿ ತಾನೇ ತಾನಾಗಿ ಸರ್ವರಿಂದಲೂ ಓಲೈಸಲ್ಪಡುತ್ತ ಅಖಂಡೈಶ್ವರ್ಯಸಂಪನ್ನನಾಗಿದ್ದನು.

ಹೀಗಿರುವಲ್ಲಿ ಒಂದಾನೊಂದು ದಿವಸ ಸಭೆಯಲ್ಲಿ ಕುಳಿತು ಸರ್ವಲೋಕಪ್ರಜಾಸೇವ್ಯಮಾನನಾಗಿ ಹಿರಣ್ಯಕಶಿಪುವು ಮಹಾ ವ್ಯಸನಾಕ್ರಾಂತನಾಗಿ—ನೀಚನಾದ ವಿಷ್ಣುವು ಮಹಾವೀರನಾದ ನನ್ನ ತಮ್ಮನನ್ನು ಕೊಂದನಲ್ಲಾ ಎಂದು ಹೇಳಿ ಅಂಥ ವಿಷ್ಣುವನ್ನು ಕೊಂದುಹಾಕದೆ ನಾನು ಬದುಕಿರುವುದೂ ಈ ಸಕಲ ಲೋಕದವರಿಂದ ಸೇವೆ ಮಾಡಿಸಿಕೊಳ್ಳುವುದೂ ಈ ನನ್ನ ತ್ರಿಲೋಕಾಧಿಪತ್ಯವೂ ವ್ಯರ್ಥವೆಂದು ಯೋಚಿಸಿ ಆ ನೀಚನಾದ ವಿಷ್ಣುವು ಎಲ್ಲಿದ್ದರೂ ಅವನನ್ನು ಹಿಡಿದು ಕೊಂದುಹಾಕಬೇಕೆಂದು ನಿರ್ಧರಿಸಿ ತನ್ನ ಚತುರಂಗಬಲದೊಡನೆ ಕೂಡಿ ಹೊರಟನು. ಆಗ ಆತನ ಮಹಾ ಸೇನೆಯ ರಭಸಕ್ಕೆ ಹದಿನಾಲ್ಕು ಲೋಕಗಳೂ ಅಲ್ಲೋಲಕಲ್ಲೋಲಗಳಾಗಿ ಬೆದರಿ ಕಳವಳಿಸಿ ಕ್ಷೀರಸಮುದ್ರತೀರಕ್ಕೆ ಓಡಿಹೋಗಿ ಮಹಾವಿಷ್ಣುವಿನೊಡನೆ ದೂರನ್ನು ಹೇಳಿಕೊಂಡುವು. ಆಗ ಆತನು—ಆ ದುಷ್ಟನಾದ ಹಿರಣ್ಯಕಶಿಪುವನ್ನು ತಿರುಗಿ ಅವನ ಪಟ್ಟಣಕ್ಕೆ ಹೋಗುವಂತೆ ಮಾಡುವೆನು ನೀವು ಭಯಪಡಬೇಡಿರಿ. ನಿಮ್ಮ ನಿಮ್ಮ ಲೋಕಗಳಿಗೆ ಹೋಗಿ ಸ್ವಸ್ಥವಾಗಿ ಇರಿ ಎಂದು ಹೇಳಿ ನಂಬಿಕೆಯನ್ನು ಕೊಟ್ಟು ಕಳುಹಿಸಿ ಆ ಮೇಲೆ ತಾನು ಹಿರಣ್ಯಕಶಿಪುವು ಬರುವ ಮಾರ್ಗದಲ್ಲಿ ಮಾಯೆಯಿಂದ ಒಂದು ಋಷ್ಯಾಶ್ರಮವನ್ನು ಕಲ್ಪಿಸಿ ತಾನು ಜಡೆಯನ್ನು ಧರಿಸಿಕೊಂಡು ಕಂಠದಲ್ಲಿ ರುದ್ರಾಕ್ಷೀಮಾಲಿಕೆಗಳನ್ನೂ ತಲೆಗೆ ರುದ್ರಾಕ್ಷಿಗಳಿಂದ ಮಾಡಿದ ಕುಲಾವಿಯನ್ನೂ ಕೈಗಳಿಗೆ ರುದ್ರಾಕ್ಷಿಗಳಿಂದ ಮಾಡಿದ ಕಂಕಣಗಳನ್ನೂ ಧರಿಸಿಕೊಂಡು ಬಲಗೈಯಿಯ ಅನಾಮಿಕಾಂಗುಳಿಗೆ ದರ್ಭೆಯ ಹುಲ್ಲಿನಿಂದ ಮಾಡಿದ ಪವಿತ್ರಾಂಗುಳೀಯಕವನ್ನು ಇಟ್ಟುಕೊಂಡು ಒಂದು ಕೌಪೀನವನ್ನು ಮಾತ್ರ ಧರಿಸಿ ಆಶ್ರಮದಲ್ಲಿರುವ ಒಂದು ನಿರ್ಮಲೋದಕಯುಕ್ತವಾದ ಕೊಳದ ದಡದಲ್ಲಿ ದೊಡ್ಡದಾದ ಹುಲಿಯ ಚರ್ಮವನ್ನು ಹಾಸಿ ಅದರ ಮೇಲೆ ಕುಳಿತುಕೊಂಡು ಆ ಕೊಳದ ಸಾವಟಿಗೆಯ ಕಲ್ಲಿನ ಮೇಲೆ ಮಳಲಿನಿಂದ ಒಂದು ದೊಡ್ಡ ಲಿಂಗವನ್ನು ಮಾಡಿ ಆ ಲಿಂಗವನ್ನು ತುಂಬೆ ಹೂವುಗಳಿಂದಲೂ ಗಣಿಗಲೆ ಹೂವುಗಳಿಂದಲೂ ಉಮ್ಮತ್ತದ ಹೂವುಗಳಿಂದಲೂ ಬಿಲ್ವಪತ್ರಗಳಿಂದಲೂ ಗಂಧಾಕ್ಷತೆಗಳಿಂದಲೂ ಚೆನ್ನಾಗಿ ಪೂಜೆಮಾಡಿ ಶಿವಧ್ಯಾನವನ್ನು ಮಾಡುತ್ತ ಪಾಶುಪತಮತಸ್ಥನಾದ ಮಹಾಮುನಿಯಂತೆ ಬಾಹ್ಯವ್ಯಾಪಾರವನ್ನು ಮರೆತು ಚಿತ್ತೈಕಾಗ್ರತೆಯಿಂದ ಕುಳಿತುಕೊಂಡಿದ್ದನು.

ಅನಂತರದಲ್ಲಿ ಹಿರಣ್ಯಕಶಿಪುವು ತನ್ನ ಚತುರಂಗಬಲ ಸಮೇತನಾಗಿ ದಾರಿಯಲ್ಲಿ ಬರುತ್ತ ಈ ಕಪಟ ಶಿವಯೋಗಿಯನ್ನು ಕಂಡು—ಇವನಾರೋ ಮಹಾತ್ಮನಾದ ಶಿವಯೋಗಿಯಾಗಿ ಕಾಣುತ್ತಾನೆ ಎಂದು ಯೋಚಿಸಿ ತಾನು ಹತ್ತಿಕೊಂಡಿದ್ದ ಅಂದಣದಿಂದಿಳಿದು ಶೀಘ್ರವಾಗಿ ಆ ಕಪಟ ಶಿವಯೋಗಿಯ ಬಳಿಗೆ ಬಂದು ವಿಶೇಷವಾದ ಭಯಭಕ್ತಿಯಿಂದ ಸಾಷ್ಟಾಂಗಪ್ರಣಾಮವನ್ನು ಮಾಡಿ ಎದ್ದು ಕೈಮುಗಿದು

ನಿಂತುಕೊಂಡು—ಎಲೈ ಮಹಾನುಭಾವನೇ, ಸರ್ವಜ್ಞನಾದ ನೀನು ಭೂತಭವಿಷ್ಯ ದ್ವರ್ತಮಾನ ವಿಷಯಗಳನ್ನೂ ಸ್ವರ್ಗಮರ್ತ್ಯಪಾತಾಳಾದಿ ಸಕಲಲೋಕಂಗಳಲ್ಲಿಯೂ ನಡೆಯುವ ವಿಷಯಗಳನ್ನೂ ಚೆನ್ನಾಗಿ ತಿಳಿದಂಥ ಮಹಾಜ್ಞಾನಸಿಧಿಯು ಎಂದು ತಿಳಿದು ನಿನ್ನನ್ನು ಕುರಿತು ಒಂದು ಸಂಗತಿಯನ್ನು ಬಿನ್ನವಿಸಿಕೊಳ್ಳುತ್ತೇನೆ. ಅದೇನೆಂದರೆ--ಮಾಯಾವಿಯಾದ ವಿಷ್ಣುವು ಹಂದಿಯ ರೂಪನ್ನು ಧರಿಸಿ ಬಂದು ನನ್ನ ತಮ್ಮನನ್ನು ಕೊಂದುಹಾಕಿದನು. ಆ ಮಹಾ ದುಃಖಪರಿಹಾರಾರ್ಥವಾಗಿ ನಾನು ಆತನನ್ನು ಕೊಂದುಹಾಕಬೇಕು ಎಂದು ನನ್ನ ಹೃದಯದಲ್ಲಿ ನಿಶ್ಚಯಿಸಿಕೊಂಡು ಈ ವರೆಗೂ ಎಷ್ಟು ವಿಧವಾಗಿ ಎಲ್ಲೆಲ್ಲಿ ಹುಡುಕಿದಾಗ್ಯೂ ಸಿಕ್ಕಲಿಲ್ಲ. ಈಗ ನಾನು ಸರೋಜಸಂಭವನ ವರಬಲದಿಂದ ಮರಣವಿಲ್ಲದವನಾಗಿದ್ದೇನೆ. ಅದುಕಾರಣ ಮಹಾತ್ಮನಾದ ನೀನು ಶರಣಾಗತನಾದ ನನ್ನ ಮೇಲೆ ದಯೆಯಿಟ್ಟು ಆ ಕಪಟಿಯಾದ ವಿಷ್ಣುವು ಎಲ್ಲಿರುವನೆಂಬುದನ್ನು ಜ್ಞಾನದೃಷ್ಟಿಯಿಂದ ನೋಡಿ ತಿಳಿದು ಹೇಳಿದರೆ ನಿನ್ನ ದಯೆಯಿಂದ ಆತನನ್ನು ಕೊಂದು ನನ್ನ ಒಡಲ್ಬೇಗೆಯನ್ನು ತೀರಿಸಿಕೊಂಡು ಸಂತೋಷದಿಂದಿರುವೆನು ಎಂದು ಹೇಳಿದನು.

ಆ ಮಾತುಗಳನ್ನು ಕೇಳಿ ಕಪಟಶಿವಯೋಗಿರೂಪಧಾರಿಯಾದ ವಿಷ್ಣುವು ಕೂಡಲೆ ಕಣ್ಣುಗಳನ್ನು ಮುಚ್ಚಿಕೊಂಡು ಒಂದು ಗಳಿಗೆಯ ವರೆಗೂ ಧ್ಯಾನಿಸುವವನ ಹಾಗಿದ್ದು ಆ ಮೇಲೆ ನಿಧಾನವಾಗಿ ಕಣ್ಣುಗಳನ್ನು ತೆರೆದು ಆ ಹಿರಣ್ಯಕಶಿಪುವನ್ನು ನೋಡಿ ನಸುನಗುತ್ತ—ಎಲೈ ದೈತ್ಯರಾಜನೇ, ನೀನು ಹೇಳಿದಂತೆ ಆ ವಿಷ್ಣುವು ಮಹಾಕಪಟಿಯೇ ಅಹುದು. ಆತನಿರುವ ಸ್ಥಳಗಳು ಮೂರು. ಅವು ಯಾವುವಂದರೆ ವೈಕುಂಠ, ಕ್ಷೀರಸಮುದ್ರ, ಸೂರ್ಯಮಂಡಲ, ಇವುಗಳು. ಈಗ ನೀನು ವರಬಲದಿಂದ ಅವಧ್ಯನಾಗಿರುವಿ ಎಂದು ತಿಳಿದು ವಿಶೇಷವಾಗಿ ನಿನ್ನ ಭಯದಿಂದ ಕೂಡಿದವನಾಗಿ ಈಗ ಆ ಮೂರು ಸ್ಥಳಗಳನ್ನೂ ಬಿಟ್ಟು ಬಂದು ನಿನ್ನ ಹೊಟ್ಟೆಯಲ್ಲೇ ಸೇರಿಕೊಂಡಿದ್ದಾನೆ ಅಂದನು. ಅದಕ್ಕೆ ಆಶ್ಚರ್ಯಯುಕ್ತನಾದ ಹಿರಣ್ಯಕಶಿಪುವು—ಎಲೈ ಮುನಿಪತಿಯೇ, ಅವನು ನನ್ನ ಹೊಟ್ಟೆಯನ್ನು ಪ್ರವೇಶಿಸುವುದು ಹೇಗೆ? ಈ ಮಾತು ಸುಳ್ಳಾಗಿ ತೋರುತ್ತಿರುವುದಲ್ಲಾ! ಎನ್ನಲು, ಆ ಮೇಲೆ ಕಪಟಶಿವಯೋಗಿಯು—ನಾನು ಎಂದಿಗಾದರೂ ಸುಳ್ಳು ಹೇಳತಕ್ಕವನಲ್ಲ. ಪಾರಮಾರ್ಥಿಕಜ್ಞಾನಿಯಾದ ನನಗೆ ಲೌಕಿಕರಲ್ಲಿ ನಿಕೃಷ್ಟರಿಗೆ ಯೋಗ್ಯವಾದ ಸುಳ್ಳಿನಿಂದ ಏನು ಪ್ರಯೋಜನವು? ಇದೋ, ನಿನಗೆ ಪರೀಕ್ಷೆಯಿಂದ ತೋರಿಸಿಕೊಡುವೆನು ಎಂದು ಹೇಳಿ ಆ ಕ್ಷಣದಲ್ಲಿಯೇ ಅದೃಶ್ಯನಾಗಿ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಹೊಕ್ಕು—ಎಲಾ, ಖೂಳನಾದ ರಕ್ಕಸನೇ, ನಾನು ದುಷ್ಟನಾದ ನಿನ್ನನ್ನು ಕೊಂದುಹಾಕುವ ವರೆಗೂ ಮತ್ತೆಲ್ಲಿಯೂ ಇರದೆ ನಿನ್ನ ಹೊಟ್ಟೆಯಲ್ಲಿಯೇ ಇರುವೆನು. ನೀನು ಎಷ್ಟು ಪ್ರಯಾಸಪಟ್ಟು ಎಲ್ಲೆಲ್ಲಿ ಹುಡುಕಿದಾಗ್ಯೂ ನಾನು ನಿನಗೆ ಸಿಕ್ಕುವುದಿಲ್ಲವು. ನೀನು ನನ್ನನ್ನು ನೋಡಬೇಕಾದರೆ ನೀನೇ ನಿನ್ನ ಹೊಟ್ಟೆಯನ್ನು ಸೀಳಿಕೊಂಡು ನೋಡು. ಆಗ ನಾನು ನಿನಗೆ ಕಾಣಿಸಿಕೊಳ್ಳುವೆನು. ಮಹಾತ್ಮನಾದ ಶಿವಯೋಗಿಯು ಹೇಳಿದ ಮಾತು ಎಂದಿಗೂ ಸುಳ್ಳಾಗ

ಲಾರದು, ನಿಜವೆಂದು ಸಂಪೂರ್ಣವಾಗಿ ನಂಬು ಎಂದು ಗರ್ಜಿಸಿ ಹೇಳುವುದರಿಂದ ಆ ಹಿರಣ್ಯಕಶಿಪುವು ಆ ಮಾತನ್ನು ಕೇಳಿ—ಅಹ! ನಾನು ಬುದ್ಧಿಯಿಲ್ಲದೆ ಮೋಸ ಹೋದೆನು. ನೀಚನಾದ ವಿಷ್ಣುವೇ ಶಿವಯೋಗಿಯ ವೇಷವನ್ನು ಧರಿಸಿ ನನಗೆ ಹೀಗೆ ಹೇಳಿ ನನ್ನ ಮುಂದೆಯೇ ಅದೃಶ್ಯನಾಗಿ ನನ್ನ ಹೊಟ್ಟೆಯನ್ನು ಹೊಕ್ಕನು ಶಿವಯೋಗಿಯಾಗಿದ್ದಾಗಲೇ ಅವನನ್ನು ಹಿಡಿದು ಕೊಂದುಹಾಕಬೇಕಾಗಿದ್ದಿತು. ತಿಳಿಯದೆ ಮೋಸವಾಯಿತು. ಕೆಲಸ ಕೆಟ್ಟಿತಲ್ಲಾ! ಮುಂದೆ ಮಾಡತಕ್ಕದೇನು? ಪಾಪಿಯೂ ಮಹಾಮಾಯಾವಿಯೂ ಆದ ಆ ವಿಷ್ಣುವು ನನ್ನ ಹೊಟ್ಟೆಯನ್ನು ಹೊಕ್ಕನಲ್ಲಾ! ಇನ್ನು ನಾನು ಇವನನ್ನು ಕೊಲ್ಲುವ ಬಗೆಯು ಯಾವುದು? ಎಂದು ಚಿಂತಾಕ್ರಾಂತನಾಗಿ ಹಿಂದಿರುಗಿ ಸೇನಾಸಮೇತನಾಗಿ ಬಂದು ತನ್ನ ಪಟ್ಟಣವನ್ನು ಸೇರಿದನು.

ಇತ್ತಲಾ ಮಹಾವಿಷ್ಣುವು ನಾರದಮಹರ್ಷಿಯನ್ನು ಕರೆದು—ಹಿರಣ್ಯಕಶಿಪುವಿನ ಹೆಂಡತಿಯು ಬಹಳ ಪರಿಶುದ್ಧಳು. ನೀನು ಈ ಕ್ಷಣದಲ್ಲಿಯೇ ಅವಳ ಬಳಿಗೆ ಹೋಗಿ—ಏಕಾಂತದಲ್ಲಿ ವಿಷ್ಣುವನ್ನೇ ಧ್ಯಾನಿಸುತ್ತ ಇದ್ದಲ್ಲಿ ನಿನ್ನ ಗರ್ಭದಲ್ಲಿ ಲೋಕೈಕವೀರನೂ ಪರಮಭಾಗವತಶಿರೋಮಣಿಯೂ ಆದ ಗಂಡುಮಗನು ಹುಟ್ಟುವನು ಎಂದು ಚೆನ್ನಾಗಿ ಬೋಧಿಸಿ ಹೇಗಾದರೂ ಆಕೆಯು ನನ್ನ ಧ್ಯಾನಾಸಕ್ತಳಾಗುವಂತೆ ಮಾಡಿ ಬಾ ಎಂದು ಹೇಳಲಾಗಿ; ಆತನು ಕೂಡಲೆ ಆಕೆಯ ಬಳಿಗೆ ಹೋಗಿ ಅದೇ ಮೇರೆಗೆ ರಹಸ್ಯವಾಗಿ ಆಕೆಗೆ ಉಪದೇಶಿಸಿ ಬಂದನು. ಆಕೆಯು ನಾರದಮಹರ್ಷಿಯ ಉಪದೇಶದಂತೆ ಸದಾಕಾಲದಲ್ಲಿಯೂ ಹೃದಯದಲ್ಲಿ ವಿಷ್ಣುವನ್ನೇ ಧ್ಯಾನಿಸುತ್ತ ಇದ್ದುದರಿಂದ ಕೂಡಲೆ ಗರ್ಭಿಣಿಯಾದಳು. ಹೀಗಿರುವಲ್ಲಿ ಹಿರಣ್ಯಕಶಿಪುವು ಮತ್ತೊಂದು ದಿವಸ ಸಮಸ್ತ ಪರಿವಾರದೊಡನೆ ಒಡ್ಡೋಲಗದಲ್ಲಿರುತ್ತ—ಆ ಕಪಟಿಯಾದ ವಿಷ್ಣುವನ್ನು ಹೇಗೆ ಕೊಲ್ಲಲಿ? ಅದಕ್ಕೆ ಏನು ಉಪಾಯವನ್ನು ಮಾಡಬೇಕು? ಎಂದು ಯೋಚಿಸುತ್ತ ಕಡೆಗೆ ಶಿವನನ್ನು ಕುರಿತು ತಪಸ್ಸು ಮಾಡಿ ಮೆಚ್ಚಿಸಿ ಆತನಿಂದ ಆ ವಿಷ್ಣುವು ಸುಲಭವಾಗಿ ನನ್ನ ಕೈಗೆ ಸಿಕ್ಕುವ ಹಾಗೆ ವರವನ್ನು ಪಡೆದುಕೊಂಡು ಆ ವರಬಲದಿಂದ ಮಾಯಾವಿಯಾದ ಆ ವಿಷ್ಣುವನ್ನು ಹಿಡಿದು ಕೊಂದುಹಾಕುವೆನು ಎಂದು ನಿಶ್ಚಯಿಸಿಕೊಂಡು ತನ್ನ ರಾಜ್ಯಭಾರವನ್ನು ಮಂತ್ರಿಗಳಲ್ಲಿರಿಸಿ ತಾನೊಬ್ಬನೇ ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿ ಶಿವನನ್ನು ಕುರಿತು ತಪಸ್ಸುಮಾಡುತ್ತ ಇದ್ದನು. ಅನಂತರದಲ್ಲಿ ಈ ವರ್ತಮಾನವನ್ನು ಕೇಳಿದ ಇಂದ್ರಾದ್ಯಷ್ಟದಿಕ್ಪಾಲಕರು ಸಮಸ್ತ ದೇವತಾಸಮೂಹದೊಡನೆ ಕೂಡಿ ಭಯಭ್ರಾಂತರಾಗಿ ಮಹಾವಿಷ್ಣುವಿನ ಬಳಿಗೆ ಬಂದು—ಎಲೈ ಸ್ವಾಮಿಯೇ, ಆ ದುಷ್ಟನಾದ ಹಿರಣ್ಯಕಶಿಪುವು ಪುನಃ ಶಿವನನ್ನು ಕುರಿತು ತಪಸ್ಸುಮಾಡುತ್ತ ಕುಳಿತಿದ್ದಾನೆ. ಈಗಲೇ ಅವನಿಂದ ಸಮಸ್ತ ಲೋಕಗಳೂ ಅಪಾರಕಷ್ಟವನ್ನನುಭವಿಸಿ ಧೂಳೀಪಟಲವಾಗಿ ಹೋದುವು. ಮತ್ತೆ ಅವನು ತಪಸ್ಸಿನಿಂದ ಶಿವನನ್ನು ಮೆಚ್ಚಿಸಿ ಎಂಥ ಭಯಂಕರವರವನ್ನು ಕೇಳಿಕೊಂಡು ಬಂದು ಶರಣಾಗತರಾದ ನಮ್ಮನ್ನೂ ಉಳಿದ ಲೋಕಗಳನ್ನೂ ಏನು ಮಾಡುವನೋ ತಿಳಿಯದು! ಸರ್ವಜ್ಞನಾದ ನೀನು ಇಲ್ಲಿಂದ ಮುಂದೆ ನಮಗೇನಪ್ಪಣೆಯನ್ನು ದಯಪಾ

ಲಿಸುವಿ ? ಎಂದು ಕೇಳಿಕೊಂಡರು. ಅದಕ್ಕೆ ವಿಷ್ಣುವು ಸ್ವಲ್ಪ ಯೋಚಿಸಿ ಇಂದ್ರನನ್ನು ಕರೆದು ಏಕಾಂತದಲ್ಲಿ ಒಂದು ಮಾತನ್ನು ಹೇಳಿದುದರಿಂದ ಅದರಿಂದ ದೇವೇಂದ್ರನು ಬಹಳವಾಗಿ ಸಂತೋಷಪಟ್ಟುಕೊಂಡು ಮಹಾವಿಷ್ಣುವಿಗೆ ದೀರ್ಘದಂಡನಮಸ್ಕಾರ ವನ್ನು ಮಾಡಿ ಸರ್ವದೇವತಾಸಮೂಹದೊಡನೆ ತಿರುಗಿ ತನ್ನ ನಗರವಾದ ಅಮರಾವತಿಗೆ ಬಂದು ವಿಷ್ಣುವು ಗುಟ್ಟಾಗಿ ತನ್ನೊಡನೆ ಹೇಳಿದಂತೆ ತನ್ನ ಸಮಸ್ತ ಪರಿವಾರದೊಡನೆ ಕೂಡಿ ರಾತ್ರಿ ವೇಳೆಯಲ್ಲಿ ಹೊರಟು ಹಿರಣ್ಯಕಶಿಪುವಿನ ರಾಜಧಾನಿಯಾದ ಶೋಣಿತ ಪುರಕ್ಕೆ ಒಮ್ಮಿಂದೊಮ್ಮೆ ಮುತ್ತಿಗೆಯನ್ನು ಹಾಕಿ ಪಟ್ಟಣವನ್ನು ಹೊಕ್ಕು ಸರ್ವರನ್ನೂ ವಿವಿಧವಾಗಿ ಹಿಂಸಿಸಿ ಮಂತ್ರಿ ಸೇನಾಪತಿ ಸೈನ್ಯಾದಿ ಸಕಲ ದೈತ್ಯರನ್ನೂ ಹೊಡೆದು ಸೋಲಿಸಿ ಅಂತಃಪುರವನ್ನು ಹೊಕ್ಕು ಪೂರ್ಣಗರ್ಭಿಣಿಯಾಗಿದ್ದ ಆ ಹಿರಣ್ಯಕಶಿಪುವಿನ ಪತ್ನಿಯನ್ನು ಸೆರೆಹಿಡಿದುಕೊಂಡು ಹಿಂದಿರುಗಿ ಬಂದು ಅಮರಾವತೀ ಪಟ್ಟಣವನ್ನು ಸೇರಿದನು.

ಆ ಕೂಡಲೆ ನಾರದಮಹಾಮುನೀಶ್ವರನು ದೇವೇಂದ್ರನ ಬಳಿಗೆ ಬಂದು— ಏನೈಯ್ಯಾ ಇಂದ್ರನೇ, ನೀನು ಸಕಲ ಧರ್ಮಶಾಸ್ತ್ರಗಳನ್ನೂ ತಿಳಿದು ಬುದ್ಧಿವಂತನಾಗಿ ಇಂಥ ಅನುಚಿತವಾದ ಕೆಲಸವನ್ನು ಮಾಡಬಹುದೇ? ಮಹಾಪತಿವ್ರತೆಯೂ ಸಕಲ ಲೋಕೋಪಕಾರಿಣಿಯೂ ಆದ ಈ ಹಿರಣ್ಯಕಶಿಪುವಿನ ಪಟ್ಟದರಸಿಯನ್ನು ಸೆರೆಯಾಗಿ ಹಿಡಿದುಕೊಂಡು ಬಂದುದು ಬಲುತಪ್ಪಾಯಿತು. ಇದರಿಂದ ನಿನಗೆ ಹಾನಿಯು ತಟ್ಟದೆ ಇರದು ಮತ್ತು ಈ ಮಹನೀಯಳ ಗರ್ಭದಲ್ಲಿ ಪರಮವೈಷ್ಣವಶಿಖಾಮಣಿಯು ಇದ್ದಾನೆ. ಈತನು ಹುಟ್ಟಿ ಆ ಹಿರಣ್ಯಕಶಿಪುವನ್ನು ಕೊಲ್ಲಿಸಿ ನಿಮ್ಮ ನಿಮ್ಮ ಪದವಿ ಗಳು ನಿಮಗೆ ಯಥಾಪ್ರಕಾರವಾಗಿ ದೊರೆಯುವ ಹಾಗೆ ಮಾಡಿ ಸರ್ವಲೋಕಗ ಳನ್ನೂ ಸಂತೋಷಪಡಿಸುವನು. ಆದುದರಿಂದ ಈ ಮಹಾಪತಿವ್ರತಾಶಿರೋಮಣಿಯಾದ ಈಕೆಯನ್ನು ನೀನೇ ಹಿಂದಿರುಗಿ ಸುರಕ್ಷಿತವಾಗಿ ಕರೆದುಕೊಂಡುಹೋಗಿ ಆಕೆಯ ಅಂತಃಪುರದಲ್ಲಿ ಬಿಟ್ಟು ಬಾ ಎಂದು ಹೇಳಿದನು. ತರುವಾಯ ಸುರೇಂದ್ರನು ನಾರದ ಮಹಾಮುನಿಯು ಹೇಳಿದ ಮಾತುಗಳಿಗೆ ಒಡಂಬಟ್ಟು ಆಕೆಯನ್ನು ಪಾಲಕಿಯಲ್ಲಿ ಕುಳ್ಳಿರಿಸಿಕೊಂಡು ಬಹಳ ಗೌರವದಿಂದ ಶೋಣಿತಪುರಕ್ಕೆ ಕರೆದುಕೊಂಡುಬಂದು ಆಕೆಯ ಅಂತಃಪುರದಲ್ಲಿ ಬಿಟ್ಟು ಹಿಂದಿರುಗಿ ಹೊರಟು ನಿಜನಗರವಾದ ಅಮರಾವತಿಗೆ ಬಂದನು. ಅಷ್ಟರೊಳಗೆ ದೇವತೆಗಳಿಂದ ಪರಾಜಿತರಾಗಿದ್ದ ಹಿರಣ್ಯಕಶಿಪುವಿನ ಮಂತ್ರಿ ಗಳು ಮಹಾ ಭಯವ್ಯಸನಗಳಿಂದ ಕೂಡಿದವರಾಗಿ ಹಿಮವತ್ಪರ್ವತಕ್ಕೆ ಓಡಿಹೋಗಿ ಅಲ್ಲಿ ತಪಸ್ಸನ್ನು ಮಾಡುತ್ತಿರುವ ನಿಜಸ್ವಾಮಿಯಾದ ಹಿರಣ್ಯಕಶಿಪುವನ್ನು ಕಂಡು ಮಹಾ ವ್ಯಸನದಿಂದ ಕೂಡಿ—ಮೋಸಗಾರರೂ ದುಷ್ಟರೂ ಆದ ದೇವತೆಗಳು ಸಮರಾತ್ರಿಯಲ್ಲಿ ಬಂದು ನಮ್ಮನ್ನೆಲ್ಲಾ ಜಯಿಸಿ ಅಂತಃಪುರವನ್ನು ಹೊಕ್ಕು ಪಟ್ಟದರಸಿಯನ್ನು ಕೈಸೆರೆ ಹಿಡಿದುಕೊಂಡು ಹೋದರು ಎಂದು ಹೇಳಿ ದುಃಖಿಸಲು ; ಆಗ ಹಿರಣ್ಯಕಶಿಪುವು ಪ್ರಳಯಕಾಲದ ಭೈರವನಂತೆ ರೌದ್ರಾಕಾರಧರನಾಗಿ—ಸಮಸ್ತ ದೇವಸಮೂಹವನ್ನೂ ಕ್ಷಣಕಾಲದಲ್ಲಿ ಸುಟ್ಟು ಬೂದಿಮಾಡಿ ಹಣೆಗೆ ಹತ್ತಿಸಿಕೊಳ್ಳುವೆನು. ಚತುರ್ದಶಭುವನ

ಗಳನ್ನೂ ಹಿಡಿದು ತಿಕ್ಕಿ ಮುಕ್ಕಿಬಿಡುವೆನು ಎಂದು ಗರ್ಜಿಸುತ್ತ ನಿಜನಗರವಾದ ಶೋಣಿತಪುರಕ್ಕೆ ಬರುವಷ್ಟರಲ್ಲೇ ಆ ಹಿರಣ್ಯಕಶಿಪುವಿನ ಪತ್ನಿಯು ಕೋಟಿಸೂರ್ಯಪ್ರಕಾಶದಿಂದ ಕೂಡಿರುವ ಒಂದು ಗಂಡು ಮಗುವನ್ನು ಹೆರಲು ; ಆಗ ಲೋಕೋಪಕಾರಿಯೂ ಲೋಕಾನಂದಕರನೂ ಆದ ಹರಿಭಕ್ತಾಗ್ರೇಸರನು ಹುಟ್ಟಿದನೆಂದು ಬಹಳ ಸಂತೋಷದಿಂದ ಇಂದ್ರಾದಿದೇವತೆಗಳು ದೇವದುಂದುಭಿಯನ್ನು ಬಾರಿಸಿದರು. ಗಂಧರ್ವರು ಮನೋಹರವಾಗಿ ಗಾನವನ್ನು ಮಾಡಿದರು. ಅಪ್ಸರಸ್ತ್ರೀಯರು ನರ್ತನವನ್ನು ಮಾಡಿ ನಲಿದರು. ಸುರಮುನಿಗಳೂ ಬ್ರಹ್ಮರ್ಷಿಗಳೂ ತಮ್ಮ ತಮ್ಮ ಸತ್ಕರ್ಮಗಳಿಗೆ ನಿರ್ವಿಘ್ನತೆಯುಂಟಾಗುವುದೆಂದು ಆ ಶಿಶುವನ್ನು ಹರ್ಷದಿಂದ ಹರಸಿದರು. ನಂದನವನದಲ್ಲಿರುವ ಕಲ್ಪವೃಕ್ಷ ಪಾರಿಜಾತಾದಿ ವೃಕ್ಷಗಳು ಪೂಮಳೆಯನ್ನು ಕರೆದುವು.

ಅನಂತರದಲ್ಲಿ ಮಹೋಗ್ರಕೋಪಯುಕ್ತನಾಗಿ ನಿಜನಗರಕ್ಕೆ ಬರುತ್ತಿದ್ದ ಹಿರಣ್ಯಕಶಿಪುವು ಇದನ್ನೆಲ್ಲಾ ಕಂಡು—ದೇವತೆಗಳಿಗೆ ಇಷ್ಟು ಸಂತೋಷವುಂಟಾಗುವುದಕ್ಕೆ ಕಾರಣವೇನಿರಬಹುದು ಎಂದು ಯೋಚಿಸುತ್ತ ಇರುವಲ್ಲಿ ದೇವೇಂದ್ರನು ಅಷ್ಟದಿಕ್ಪಾಲಕರೊಡನೆ ಕೂಡಿ ಆತನೆದುರಿಗೆ ಬಂದು ದೇವಲೋಕದ ಉನ್ನತವಸ್ತುಗಳನ್ನು ಕೈಗಾಣಿಕೆಯಾಗಿ ಒಪ್ಪಿಸಿ ಕೈಮುಗಿದು ನಿಂತುಕೊಂಡು—ಎಲೈ ಸರ್ವಲೋಕಾಧಿರಾಜನೇ, ಮಹಾತ್ಮನಾದ ನಿನಗೆ ಮಹಾ ಪುತ್ರೋತ್ಸವವಾಯಿತೆಂದು ತಿಳಿದು ನಮಗೆ ಪೂರ್ಣ ಸಂತೋಷವುಂಟಾದುದರಿಂದ ಹೀಗೆ ನಡೆದುಕೊಂಡೆವು ಎಂದು ಬಿನ್ನವಿಸಿದರು. ಆಗ ಹಿರಣ್ಯಕಶಿಪುವು ಆ ಮಾತುಗಳನ್ನು ಕೇಳಿದುದರಿಂದ ದೇವತೆಗಳ ಮೇಲಿದ್ದ ಕೋಪವೆಲ್ಲಾ ಶಾಂತವಾಗಿ ಪುತ್ರೋತ್ಸವವಾಯಿತೆಂಬ ಸಂತೋಷದಿಂದ ಹಿಗ್ಗುತ್ತ ಆ ಇಂದ್ರಾದಿ ದೇವತೆಗಳೊಡನೆ ಕೂಡಿ ನಗರವನ್ನು ಪ್ರವೇಶಿಸಿ ಕೂಡಲೆ ಅಂತಃಪುರಕ್ಕೆ ಹೋಗಿ ದಿವ್ಯತೇಜಃಪುಂಜರಂಜಿತನಾದ ಮಗನನ್ನು ನೋಡಿ ಅತ್ಯಾಶ್ಚರ್ಯಾನಂದಭರಿತಾಂತರಂಗನಾಗಿ ತನ್ನ ಸೆರೆಮನೆಯಲ್ಲಿಟ್ಟಿದ್ದ ಸರ್ವಜನರನ್ನೂ ಬಿಡಿಸಿ ದೀನಾನಾಥಾದಿಗಳಿಗೆಲ್ಲಾ ಸಕಲವಿಧವಾದ ದಾನಧರ್ಮಗಳನ್ನು ಮಾಡಿಸಿ ತೃಪ್ತಿಪಡಿಸಿ ಕೂಡಲೆ ತಮ್ಮ ಕುಲಗುರುವಾದ ಶುಕ್ರಾಚಾರ್ಯನನ್ನು ಕರಿಸಿ ಶಿಶುವಿಗೆ ಜಾತಕರ್ಮಾದಿಗಳನ್ನು ಸಾಂಗವಾಗಿ ನೆರವೇರಿಸಿ ಆ ಮಗುವು ಸಕಲ ಲೋಕಾಹ್ಲಾದಕರನಾಗಿದ್ದುದರಿಂದ ಹನ್ನೆರಡನೆಯ ದಿವಸದಲ್ಲಿ ಶುಕ್ರಾಚಾರ್ಯರಿಂದ ಮಹಾ ಸಂಭ್ರಮದೊಡನೆ ಪ್ರಹ್ಲಾದನೆಂದು ನಾಮಕರಣವನ್ನು ಮಾಡಿಸಿದನು.

ಆ ಪ್ರಹ್ಲಾದನು ಗರ್ಭದಲ್ಲಿರುವಾಗಲೇ ಹರಿಭಕ್ತಿರಸಮಯವಾದ ಶರೀರವುಳ್ಳವನಾದುದರಿಂದ ಭೂಮಿಯಲ್ಲಿ ಜನಿಸಿದಾಗ್ಗೂ ಅಜ್ಞಾನವನ್ನು ಹೊಂದದೆ ಆ ಶಿಶುತ್ವದಲ್ಲಿಯೂ ಹರಿಧ್ಯಾನಪರಾಯಣನಾಗಿ ನಿಜಮಾತೃವಿನ ಮೊಲೆಹಾಲನ್ನು ಹರಿಪಾದತೀರ್ಥವೆಂದೇ ಭಾವಿಸಿ ಪಾನಮಾಡುತ್ತ ಹರಿಗೆ ಈ ರೀತಿಯಾಗಿ ಅಡ್ಡಬೀಳಬೇಕೆಂದು ತೊಟ್ಟಲಿನಲ್ಲಿ ಮೊಗುಚಿಕೊಳ್ಳುತ್ತ ಹರಿಗೆ ಅರ್ಪಿಸದೆ ಹಾಲು ತುಪ್ಪ ಸಕ್ಕರೆ ಮೊದಲಾದುವುಗಳನ್ನು ಬಲಾತ್ಕಾರದಿಂದ ಕೈಹಿಡಿದು ತಿನ್ನಿಸುತ್ತಿರುವರಲ್ಲಾ ಎಂಬ ದುಃಖಾತಿಶಯದಿಂದ ರೋದಿಸುತ್ತ ಹರಿಮಾಹಾತ್ಮ್ಯವನ್ನು ಮನಸ್ಸಿನಲ್ಲಿ ನೆನನೆನೆದು ನಗುತ್ತ

ಕಣ್ಮುಚ್ಚಿ ನಿದ್ದೆ ಹೋಗುವವನಂತೆ ತದೇಕಚಿತ್ತನಾಗಿ ಹರಿಯ ಧ್ಯಾನವನ್ನು ಮಾಡುತ್ತ ಹರಿಯ ಮಂದಿರಕ್ಕೆ ಹೋಗಬೇಕೆಂದು ತಪ್ಪುಹೆಜ್ಜೆಗಳನ್ನು ಹಾಕುತ್ತ ಹರಿನಾಮ ಗಳನ್ನು ಪಠಿಸುತ್ತಿರಬೇಕೆಂದು ತೊದಲ್ನುಡಿಗಳನ್ನಾಡುತ್ತ ಸರಿಹುಡುಗರೊಡನೆ ಆಡುವುದಕ್ಕೆ ಹೋಗಿ ಚಂಡು ಬುಗುರಿ ಗಜ್ಜುಗ ಹಿಳ್ಳೆ ಮೊದಲಾದ ಆಟಗಳನ್ನು ಆಡದೆ ತುಲಸೀ ಗಿಡಗಳಿರುವೆಡೆಗೆ ಹೋಗಿ ಅವುಗಳ ಬುಡದಲ್ಲಿ ದಸಿಯಿಂದ ಕೆದಕಿ ಪಾತಿಕಟ್ಟಿ ನೀರನ್ನು ಹೊಯ್ದು ಭಕ್ತಿಯಿಂದ ಬಲಗೊಂಡು ನಮಸ್ಕರಿಸಿ ಅವುಗಳ ಮುಂಗಡೆಯಲ್ಲಿ ಸಂತೋಷದಿಂದ ಕುಣಿದಾಡುತ್ತ ಇನ್ನೂ ವಿವಿಧವಾದ ಹರಿಪ್ರಿಯ ಕೃತ್ಯಗಳನ್ನು ಮಾಡುತ್ತ ಅಹೋರಾತ್ರಿಗಳಲ್ಲೂ ಹರಿಧ್ಯಾನ ಹರಿಸ್ತುತಿ ಹರಿಕೀರ್ತನೆ ಹರಿವಂದನೆ ಹರಿದಾಸ್ಯ ಇತ್ಯಾದಿಗಳಿಂದ ಕೂಡಿ ಐದು ವರ್ಷಗಳ ವರೆಗೂ ಲೀಲೆ ಯಿಂದ ಬೆಳೆದನು.

ತರುವಾಯ ಹಿರಣ್ಯಕಶಿಪುವು ಮಗನನ್ನು ನೋಡಿ ಸಂತೋಷದಿಂದ ಕೂಡಿದವ ನಾಗಿ ಬಾಚಿ ತಬ್ಬಿಕೊಂಡು ಮುದ್ದಿಸಿ—ಇವನಿಗೆ ಓದುಬರಹಗಳನ್ನು ಕಲಿಯುವ ಕಾಲವಾಯಿತೆಂದು ತಿಳಿದು ಕೂಡಲೆ ಕುಲಗುರುವಾದ ಶುಕ್ರಾಚಾರ್ಯನನ್ನು ಕರಿಸಿ ಶುಭದಿವಸ ಯುಕ್ತವಾದ ಸುಲಗ್ನದಲ್ಲಿ ಹಣ್ಣು ಕಾಯಿ ಕಜ್ಜಾಯ ಈ ಮೊದಲಾದು ವುಗಳ ರಾಶಿಯನ್ನು ಊರಗಲಕ್ಕೆ ಸುರಿಸಿ ಮಗನ ವಿದ್ಯಾಭ್ಯಾಸಕ್ಕೆ ನಿರ್ವಿಘ್ನತೆಯುಂ ಟಾಗುವುದಕ್ಕೋಸ್ಕರವಾಗಿ ಪ್ರಥಮದಲ್ಲಿ ವಿನಾಯಕನ ಪೂಜೆಯನ್ನು ಮಾಡಿಸಿ ಪ್ರಹ್ಲಾದನನ್ನು ಗುರುವಾದ ಶುಕ್ರಾಚಾರ್ಯನ ವಶಕ್ಕೊಪ್ಪಿಸಿ ಓದುವ ಮಠಕ್ಕೆ ಕಳುಹಿಸಿಕೊಟ್ಟನು. ಆ ಮೇಲೆ ಶುಕ್ರಾಚಾರ್ಯನು ಪ್ರಹ್ಲಾದನನ್ನು ಕರೆದುಕೊಂಡು ಹೋಗಿ ಅವನಿಗೆ ನೆಲದ ಮೇಲೆ ಓಂ ನಮಶ್ಶಿವಾಯ ಎಂಬ ಅಕ್ಷರಗಳನ್ನು ಬರೆದು ಅವನ ಕೈ ಹಿಡಿದುಕೊಂಡು ಹತ್ತೆಂಟುಸಾರಿ ತಿದ್ದಿಸಿ—ಎಲ್ಲಿ? ನೋಡೋಣ ನಾನು ತೋರಿಸಿಕೊಟ್ಟಂತೆ ನೀನೇ ಬರೆ ಎಂದು ಹೇಳಲು, ಆಗಲಾ ಪ್ರಹ್ಲಾದನು—ಸರಸಿ ಜಾಂಬಕ ವಿಷ್ಣು ದಾಮೋದರ ಲಕ್ಷ್ಮೀಶ ಪೀತಾಂಬರ ಮುರಾರಿ ಶೌರಿ ಹರಿ ನಾರಾ ಯಣ ಅಸುರಾರಿ ಹೃಷೀಕೇಶ ಗರುಡವಾಹನ ಕೃಷ್ಣ ವಿಶ್ವಂಭರ ಜನಾರ್ದನ ಎಂದು ಬರೆದು ಸಂತೋಷದಿಂದ ಓದುತ್ತಿದ್ದನು. ಶುಕ್ರಾಚಾರ್ಯನು ಅದನ್ನು ಕಂಡು— ಓಹೋ! ಮೋಸವಾಯಿತು. ಇನ್ನೇನು ಗತಿ? ಇವನ ತಂದೆಯಾದ ಹಿರಣ್ಯಕಶಿಪುವು ಇವನು ಹೀಗೆ ಬರೆಯುವುದನ್ನು ಕಂಡರೆ ಏನನ್ನೂ ಅರಿಯದ ಈ ಹುಡುಗನಿಗೆ ವೂಾಂ ಯಾದ ಗುರುವು ನನಗೆ ಮಹಾ ವಿರೋಧಿಯಾದ ವಿಷ್ಣುವಿನ ಹೆಸರುಗಳನ್ನು ಬರೆದು ಓದಿಸಿ ಕಲಿಸಿದನು ಎಂದು ತಿಳಿದುಕೊಂಡು ನನ್ನನ್ನು ಸುಮ್ಮನೆ ಬಿಡನು ಎಂದು ಯೋಚಿಸಿ ಭಯದಿಂದ ಕೂಡಿದವನಾಗಿ ಆ ಪ್ರಹ್ಲಾದನನ್ನು ಕುರಿತು—ಅಪ್ಪಾ ಮಗುವೇ, ಹೀಗೆ ಬರೆಯಬೇಡ. ನಾನು ಹೇಳಿದಂತೆ ಚೆನ್ನಾಗಿ ಬರೆ ಎಂದು ಗದರಿಸಿ ಹೇಳಲು; ಪುನಃ ಪ್ರಹ್ಲಾದನು ಮರಳಿನ ಮೇಲೆ ಶಂಖಚಕ್ರಾದಿ ಧಾರಿಯಾದ ಹರಿಯ ಮೂರ್ತಿಯನ್ನು ಸ್ಪಷ್ಟವಾಗಿ ಬರೆದು ಭಕ್ತಿಯಿಂದ ನೋಡಿ ನಲಿಯುತ್ತ ವಂದಿಸುತ್ತ ಇರಲು; ಆಗ ಶುಕ್ರಾಚಾರ್ಯನು—ಇದು ಬೇಡವೆಂದು ಹೇಳಿ ಮಗ್ಗಿಯನ್ನು

ಬರೆದು ಇದನ್ನು ಕೂಡಿ ಕಳೆ ಎಂದು ಹೇಳಲು; ಆಗ ಪ್ರಹ್ಲಾದನು ವಿಷ್ಣುವನ್ನು ಮನಸ್ಸಿನಲ್ಲಿ ಕೂಡಿ ಸಕಲ ಪಾಪಗಳನ್ನೂ ಕಳೆಯುತ್ತ ಅಂತರಂಗದಲ್ಲಿ ಹರಿಯನ್ನೇ ಧ್ಯಾನಿಸುತ್ತ ಹೊರಗಣ ವ್ಯಾಪಾರಗಳನ್ನು ತೊರೆದು ಸುಮ್ಮನಿದ್ದನು.

ಅನಂತರದಲ್ಲಿ ಅದನ್ನು ನೋಡಿ ಶುಕ್ರಾಚಾರ್ಯನು—ಈ ಹುಡುಗನು ಯಾಕೆ ಹೀಗೆ ಮೊಂಕಾದನು? ಎಷ್ಟು ವಿಧದಿಂದ ಹೇಳಿದಾಗ್ಯೂ ಸ್ವಭಾವವನ್ನು ಬಿಡಲಿಲ್ಲ. ಇದಕ್ಕೇನು ಕಾರಣವಿರಬಹುದು? ಒಳ್ಳೆಯದು, ಹಸಿದನೋ ಏನೋ? ಉಂಡು ಬರಲಿ ಎಂದು ಯೋಚಿಸಿ ಜೊತೆಯ ಹುಡುಗರನ್ನು ಕರೆದು—ಈ ಹುಡುಗನು ಹಸಿದಿರುವನು. ಇವನನ್ನು ಕರೆದುಕೊಂಡು ಹೋಗಿ ಮನೆಯಲ್ಲಿ ಬಿಟ್ಟು ಬನ್ನಿರಿ ಎಂದು ಹೇಳಿ ಕಳುಹಿಸಲು; ಆಗ ಹರಿಭಕ್ತನಾದ ಪ್ರಹ್ಲಾದನು ಕಾಲು ಗೆಜ್ಜೆಗಳು ಉಲಿಯುತ್ತಿರಲು; ಕೆಂಪಗಿರುವ ಮುಂಗೂದಲುಗಳು ಕುಣಿಯುತ್ತಿರಲು; ಮಾಗಾಯಿ ಹುಲಿಯುಗುರುಗಳು ಒಲೆದಾಡುತ್ತಿರಲು; ನಳಿತೋಳುಗಳನ್ನು ಬೀಸುತ್ತ ನೋಡುವವರ ಮನಸ್ಸಿಗೆ ಆನಂದವನ್ನು ಬೀರುತ್ತ ನೋಟಗಳಿಂದ ಸರ್ವರಿಗೂ ಆಹ್ಲಾದವನ್ನುಂಟುಮಾಡುತ್ತ ಹುಡುಗರ ಜೊತೆಯಲ್ಲಿ ಬರುತ್ತಿರುವುದನ್ನು ಹಿರಣ್ಯಕಶಿಪುವು ದೂರದಿಂದಲೇ ಕಂಡು ಹರ್ಷಾತಿಶಯ ಮನಸ್ಕತ್ವದಿಂದ ರೋಮಾಂಚಕಂಚುಕಿತಾಂಗನಾಗಿ ಮುಂದೈತಂದು—ಎನ್ನ ಕಂದಾ, ನನ್ನ ಮದದಾನೆಯೇ, ನನ್ನ ವಂಶಾಬ್ಧಿ ಸುಧಾಕರನೇ, ಬಾ, ಬಾ ಎಂದು ಕೈನೀಡಿ ಕರೆದು ಅಪ್ಪಿಕೊಂಡು ಮುದ್ದಿಸಿ ಶಿರಸ್ಸನ್ನು ಆಘ್ರಾಣಿಸಿ ಸ್ವಲ್ಪ ಕಾಲದ ವರೆಗೂ ಪುತ್ರಾಲಿಂಗನ ಸುಖವನ್ನನುಭವಿಸುತ್ತ ಇದ್ದು ಆ ಮೇಲೆ ಅವನನ್ನು ಕುರಿತು—ಗುರುಗಳು ನಿನಗೆ ಏನೇನು ಹೇಳಿಕೊಟ್ಟರು? ನೀನು ಏನೇನು ಕಲಿತು ಬಂದಿ, ಹೇಳು, ನೋಡೋಣ ಎಂದು ಸಂತೋಷದಿಂದ ಕೇಳಲು; ಆಗ ಪ್ರಹ್ಲಾದನು—ಹರಿಯೇ, ಹರಿಯೇ, ರಕ್ಷಿಸು, ರಕ್ಷಿಸು ಎಂದು ಬರೆದು ಓದಲು; ಆಗ ಹಿರಣ್ಯಕಶಿಪುವು ಹರಿಶಬ್ದೋಚ್ಚಾರಣೆಯನ್ನು ಕೇಳಿ ಬೆಚ್ಚಿ ಭಯದಿಂದ ಕೂಡಿ—ಬಾಲಕನಾದ ಇವನಿಗೆ ಕಪಟಿಯಾದ ಹರಿನಾಮೋಚ್ಚಾರಣೆಯು ಎಲ್ಲಿಂದ ಬಂದಿತು? ಇದನ್ನು ಕಲಿಸಿಕೊಟ್ಟವರಾರು? ಎಂದು ಯೋಚಿಸಿ ಏನೋ ಶಿಶುತ್ವಚಾಪಲ್ಯದಿಂದ ಎಲ್ಲೋ ಅಕಸ್ಮಾತ್ತು ಕಿವಿಗೆ ಬಿದ್ದ ಶಬ್ದವನ್ನೇ ಸ್ಮೃತಿಯಲ್ಲಿಟ್ಟುಕೊಂಡು ಪೂರ್ವಾಪರ ವಿಚಾರವಿಲ್ಲದೆ ಹೀಗೆ ಹೇಳಿರಬಹುದು; ಇಷ್ಟು ಮಾತ್ರಕ್ಕೆ ತಪ್ಪೇನು? ಇವನಿಗೆ ಈ ಚಾಪಲ್ಯವನ್ನು ಬಿಡಿಸಬೇಕು ಎಂದು ನಿರ್ಧರಿಸಿ ಪುನಃ ಪ್ರಹ್ಲಾದನನ್ನು ಕುರಿತು—ಎಲೈ, ಕುಲದೀಪಕನಾದ ಪುತ್ರನೇ, ನೀನಾರು? ಕಪಟಿಯಾದ ಹರಿಯಾರು? ಆ ದುಷ್ಟನೂ ನೀಚನೂ ಆದ ಹರಿಯು ನಮಗೆ ಜನ್ಮವಿರೋಧಿಯು. ಅವನು ಮೊದಲು ದೇವತೆಗಳ ಮಾತುಗಳನ್ನು ಕೇಳಿ ಹಂದಿಯ ರೂಪವನ್ನು ಧರಿಸಿ ಬಂದು ನಿನ್ನ ಚಿಕ್ಕಪ್ಪನಾದ ಹಿರಣ್ಯಾಕ್ಷನನ್ನು ಕೊಂದುಹಾಕಿದ ದುರಾತ್ಮನು. ಅಂಥ ವಂಚಕನನ್ನು ಹೊಗಳುವುದು ನಮಗೆ ಎಂದಿಗೂ ಉಚಿತವಲ್ಲ. ಅದುಕಾರಣ ಹಾಗೆ ಹೇಳಬೇಡಪ್ಪಾ ಎಂದು ಹೇಳಿದನು.

ಆ ಮಾತುಗಳನ್ನು ಕೇಳಿ ಪ್ರಹ್ಲಾದನು—ಎಲೈ ತಂದೆಯೇ, ಕೇಳು, ಮಹನೀಯನಾದ ಹರಿಯಲ್ಲಿ ಇವರು ಹಗೆಗಳು, ಇವರು ಮಿತ್ರರು, ಇವರು ಬಂಧುಗಳು ಎಂಬ

ಭೇದವೇನೂ ಇರುವುದಿಲ್ಲ. ಆತನು ಸರ್ವಪ್ರಾಣಿಗಳಲ್ಲೂ ಏಕಪ್ರಕಾರವಾದ ದಯೆಯುಳ್ಳವನು. ಆತನು ವಿರೋಧದಿಂದ ನಿನ್ನ ತಮ್ಮನನ್ನು ಕೊಂದುಹಾಕಿದನೆಂದೂ ನಿನಗೆ ಹಗೆಯಾಗಿರುವನೆಂದೂ ಎಂದಿಗೂ ಯೋಚಿಸಬೇಡ. ತನ್ನ ಪುರಾಕೃತಪಾಪಫಲದಿಂದ ಅವನು ಅಳಿದನು. ನೀನು ಈ ವಿಷಯವನ್ನು ಚೆನ್ನಾಗಿ ಯೋಚಿಸಿ ನೋಡು. ಯುಕ್ತಾಯುಕ್ತಗಳನ್ನು ವಿಚಾರಿಸದೆ ಸುಮ್ಮನೆ ತೀರ್ಮಾನಿಸುವ ಯೋಚನೆಗಳಿಂದ ಅನರ್ಥವಲ್ಲದೆ ಫಲವೇನೂ ದೊರೆಯಲಾರದು ಎಂದು ಹೇಳಿದನು. ಈ ಮಾತುಗಳನ್ನು ಕೇಳಿ ಹಿರಣ್ಯಕಶಿಪುವು ಕೋಪಿಷ್ಠನಾಗಿ—ಇವನಿಗೆ ಯಾವ ವಿಧದಿಂದ ಹೇಳಿದಾಗ್ಯೂ ನನ್ನ ಹಗೆಯಾದ ವಿಷ್ಣುವಿನ ನೆನಹನ್ನು ಬಿಡುವುದಿಲ್ಲ. ಇಂಥ ಕುಲದ್ವೇಷಿಯೂ ಪಿತೃದ್ವೇಷಿಯೂ ಆದ ಕೆಟ್ಟ ಮಗನು ಇರುವುದರಿಂದ ಪ್ರಯೋಜನವೇನು ? ಇಂಥ ಪಾಪಿಯ ಶಿರಸ್ಸನ್ನು ಈಗಲೇ ಕಡಿದುಬಿಡುವೆನೆಂದು ಗರ್ಜಿಸಿ ಒರೆಯಿಂದ ಖಡ್ಗವನ್ನು ಹಿರಿದು ಕಡಿಯುವುದಕ್ಕೆ ಹೋಗಲು ; ಆಗ ಗುರುವಾದ ಶುಕ್ರಾಚಾರ್ಯನು ಶೀಘ್ರವಾಗಿ ಬಂದು ನಿಲ್ಲು ನಿಲ್ಲೆಂದು ಹಿರಣ್ಯಕಶಿಪುವಿನ ಕೈಯನ್ನು ಹಿಡಿದುಕೊಂಡು—ಬೇಡ ! ಈ ಕಾರ್ಯವನ್ನು ಮಾಡಬೇಡ ! ಶಿಶುವನ್ನು ಕೊಂದುದರಿಂದೇನು ಪ್ರಯೋಜನ ? ಹಾಲುಕುಡಿಯುವ ಬಾಲಕನೊಡನೆ ನಿನಗೆ ವಿರೋಧವೇ ? ಈ ಪ್ರಯತ್ನವನ್ನು ನಿಲ್ಲಿಸು. ಪ್ರಿಯಪುತ್ರನನ್ನು ಮುದ್ದಿಸಿ ಸಂತೋಷಿಸು. ನಾನು ಇವನಿಗೆ ಲೋಕವು ಮೆಚ್ಚುವಂತೆ ವಿದ್ಯಾ ಬುದ್ಧಿಗಳನ್ನು ಕಲಿಸುವೆನು. ನೀನು ಈ ಶಿಶುವಿನ ವಿಷಯದಲ್ಲಿ ಅನ್ಯಥಾ ಯೋಚಿಸಬೇಡ ಎಂದು ಹೇಳಿ ಹಿರಣ್ಯಕಶಿಪುವನ್ನು ಸಮಾಧಾನಪಡಿಸಿದನು. ಆಗ ದೈತ್ಯರಾಜನು ಶಾಂತಕೋಪನಾಗಿ ಪ್ರಹ್ಲಾದನನ್ನು ಗುರುವಿನ ವಶಕ್ಕೆ ಕೊಟ್ಟು—ನೀಚನಾದ ಹರಿಯನ್ನು ನೆನೆಯುತ್ತಿರುವ ಇವನ ಹುಚ್ಚುತನವನ್ನು ಬಿಡಿಸಿ ವಿದ್ಯಾ ಬುದ್ಧಿಗಳನ್ನು ಕಲಿಸು ಎಂದು ನೇಮಿಸಿ ಕಳುಹಿಸಿದನು.

ಶುಕ್ರಾಚಾರ್ಯನು ಯಥಾಪ್ರಕಾರವಾಗಿ ಪ್ರಹ್ಲಾದನನ್ನು ಮಠಕ್ಕೆ ಕರೆದುಕೊಂಡು ಬಂದು ಎಷ್ಟೆಷ್ಟು ಉಪಾಯಗಳಿಂದ ಒಡಂಬಡಿಸಿ ಹರಿಯ ನೆನಹನ್ನು ಬಿಡು ಎಂದು ತಿಳಿಸಿ ಹೇಳಿದಾಗ್ಯೂ ಕೇಳದೆ ಪ್ರಹ್ಲಾದನು ಹರಿಧ್ಯಾನಪರಾಯಣನಾಗಿಯೇ ಇರುತ್ತಿದ್ದನು. ಅನಂತರದಲ್ಲಿ ಗುರುವು ಕೋಪಿಸಿಕೊಂಡು ಹರಿಸ್ಮೃತಿಯನ್ನು ಬಿಡು ಎಂದು ಹೇಳಲು ; ಅವನು ಅನ್ಯಾದೃಶವಾದ ವಾಗ್ಜಾಲದಿಂದ ಗುರುವಿಗೇ ವೇದಾಂತವನ್ನು ಉಪದೇಶಿಸುತ್ತ ಬುದ್ಧಿಯನ್ನು ಹೇಳುವುದಕ್ಕೆ ಬಂದುದರಿಂದ ಆತನು ಸಾಕಾಗಿ ಬೇಸರಿಕೆಯನ್ನು ಹೊಂದಿ ಆ ಪ್ರಹ್ಲಾದನನ್ನು ಕರೆದುಕೊಂಡು ಹಿರಣ್ಯಕಶಿಪುವಿನ ಬಳಿಗೆ ಬಂದು—ಅಯ್ಯಾ, ಹಿರಣ್ಯಕಶಿಪುವೇ, ನಾನು ಎಷ್ಟು ವಿಧದಿಂದ ಒಳ್ಳೆಯ ಮಾತುಗಳನ್ನು ಉಪಯೋಗಿಸಿ ಬೋಧಿಸುವುದಕ್ಕೆ ತೊಡಗಿದರೂ ನಾನಾವಿಧದಿಂದ ಬೈದು ಹೊಡೆದು ಶಿಕ್ಷಿಸಿ ಹೇಳಿದಾಗ್ಯೂ ಮೂರ್ಖನಾದ ನಿನ್ನ ಮಗನು ಒಂದು ಕ್ಷಣಕಾಲವಾದರೂ ಹರಿಧ್ಯಾನವನ್ನು ಬಿಡದೆ ನಾನು ಹೇಳಿಕೊಟ್ಟುದನ್ನಾದರೂ ಓದಿ ಬರೆಯುವುದಿಲ್ಲ. ಇವನಿಗೆ ತಿಳಿವಳಿಕೆಯನ್ನು ಕಲಿಸುವುದಕ್ಕೆ ನನ್ನಿಂದಾಗುವುದಿಲ್ಲ. ಈತನನ್ನು ತಿದ್ದುವುದು ಅಸಾಧ್ಯವಾಗಿ ತೋರುತ್ತಿದೆ ಎಂದು ಖಂಡಿತವಾಗಿ ಹೇಳಿಬಿಟ್ಟನು.

ಈ ಮಾತುಗಳನ್ನು ಕೇಳಿ ಪ್ರಹ್ಲಾದನು—ಎಲೈ ತಂದೆಯೇ, ಪರಾತ್ಪರನೂ ಸರ್ವಾಂತರ್ಯಾಮಿಯೂ ಸಮಸ್ತದೇವತೋತ್ತಮನೂ ಆದ ಮಹಾವಿಷ್ಣುವು ನಿರಂತರದಲ್ಲೂ ನನ್ನ ಹೃದಯಾರವಿಂದದ ಕರ್ಣಿಕಾ ಮಧ್ಯದಲ್ಲಿ ನೆಲೆಗೊಂಡಿರುವಲ್ಲಿ ಈ ಮೂರ್ಖನಾದ ಗುರುವು ನನಗೆ ಹೇಳಿಕೊಡುವುದೇನು ? ದಡ್ಡನಾದ ಇವನಿಂದ ನಾನು ಕಲಿತುಕೊಳ್ಳುವುದೇನು ? ನನಗೆ ತಂದೆಯೂ ತಾಯಿಯೂ ಗುರುವೂ ಬಂಧುವೂ ಮಿತ್ರನೂ ಸಕಲೈಶ್ವರ್ಯವೂ ಸರ್ವೋಪನಿಷನ್ನಿತಂಬಿನೀಸೀಮಂತರತ್ನಪ್ರಾಯನಾದ ಶ್ರೀಹರಿಯೇ ಆಗಿರುವಲ್ಲಿ ನನಗೆ ಅನ್ಯರ ದ್ವೇಷದಿಂದಲೂ ಸ್ನೇಹದಿಂದಲೂ ಪ್ರಯೋಜನವೇನು ? ಅದುಕಾರಣ ನಾನು ಯಾರು ಏನನ್ನು ಹೇಳಿದಾಗ್ಯೂ ಕೇಳುವುದಿಲ್ಲ. ನನಗೆ ಒಬ್ಬರ ಲಕ್ಷ್ಯವೂ ಇಲ್ಲ ಎಂದು ನಿರ್ದಾಕ್ಷಿಣ್ಯದಿಂದ ಹೇಳಿಬಿಟ್ಟನು.

ಆ ಮಾತುಗಳನ್ನು ಕೇಳಿದ ಕೂಡಲೆ ಹಿರಣ್ಯಕಶಿಪುವು ಮಹೋಗ್ರಕೋಪ ಕಂಪಿತಾಧರನಾಗಿ ಕಟಕಟನೆ ಹಲ್ಲಡಿದು ಆರ್ಭಟಿಸಿ ಕಟುಕರನ್ನು ಕರಿಸಿ—ಈ ಪಾಪಿಷ್ಠನಾದ ಹುಡುಗನನ್ನು ಶೀಘ್ರವಾಗಿ ಶ್ಮಶಾನಕ್ಕೆ ತೆಗೆದುಕೊಂಡು ಹೋಗಿ ಕಡಿದು ಹಾಕಿ ಬನ್ನಿರೆಂದು ಅಪ್ಪಣೆಯನ್ನು ಕೊಡಲು ; ಆ ಕೂಡಲೆ ಕಟುಕರು ಆ ಪ್ರಹ್ಲಾದನನ್ನು ಹಿಡಿದುಕೊಂಡು ಶ್ಮಶಾನಕ್ಕೆ ತೆಗೆದುಕೊಂಡು ಹೋಗಿ ಅಲ್ಲೂ ಎಡೆಬಿಡದೆ ಹರಿನಾಮಕೀರ್ತನೆಯನ್ನು ಮಾಡುತ್ತಿರುವ ಪ್ರಹ್ಲಾದನನ್ನು ಹಿಡಿದು ಸಕಲ ವಿಧವಾದ ಆಯುಧಗಳಿಂದಲೂ ಕಡಿದು ತಿವಿದು ಕೆತ್ತಿ ಕೊತ್ತಿದಾಗ್ಯೂ ಆ ಆಯುಧಗಳೆಲ್ಲಾ ಮುರಿದು ತುಂಡು ತುಂಡಾಗಿ ಹೋದುವಲ್ಲದೆ ಅವನ ಶರೀರಕ್ಕೆ ಸ್ವಲ್ಪವೂ ಗಾಯವಾದರೂ ನೋವಾದರೂ ಆಗದೆ ಅವನು ಸಂತೋಷದಿಂದ ಹರಿಸ್ತೋತ್ರವನ್ನು ಮಾಡುತ್ತ ಇರುವುದನ್ನು ನೋಡಿ ಅವರೆಲ್ಲರೂ ಆಶ್ಚರ್ಯಾನ್ವಿತರಾಗಿ ಹಿರಣ್ಯಕಶಿಪುವಿನ ಬಳಿಗೆ ಬಂದು ನಡೆದ ಸಂಗತಿಯನ್ನೆಲ್ಲಾ ಯಥಾಪ್ರಕಾರವಾಗಿ ತಿಳಿಸಿ ಈತನನ್ನು ಕೊಲ್ಲುವುದಕ್ಕೆ ಖಂಡಿತವಾಗಿ ನಮ್ಮಿಂದಾಗುವುದಿಲ್ಲವೆಂದು ಹೇಳಿದರು. ಆಗ ಹಿರಣ್ಯಕಶಿಪುವು ಭಯಾಶ್ಚರ್ಯಯುಕ್ತನಾಗಿ—ನನಗೆ ಹಗೆಯಾದ ಹರಿಯೇ ಈ ಮಗನ ರೂಪದಿಂದ ಹುಟ್ಟಿರಬೇಕು. ಏಕೆಂದರೆ ಅವನು ಮಹಾಮಾಯಾವಿಯು. ಈಗ ಇವನನ್ನು ಕೊಂದುಹಾಕಿಬಿಟ್ಟರೆ ಆ ವಂಚಕನಾದ ಹರಿಯನ್ನೇ ಕೊಂದುಹಾಕಿದ ಹಾಗೆ ಆಗುವುದು. ಇದರಲ್ಲಿ ಯಾವ ಸಂದೇಹವೂ ಇಲ್ಲ ಎಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ ದೂತರನ್ನು ಕರಿಸಿ—ಇವನ ಕೈಕಾಲುಗಳನ್ನು ಕಟ್ಟಿ ಸಮುದ್ರ ಮಧ್ಯದಲ್ಲಿ ಹಾಕಿಬಿಡಿರಿ ಎಂದು ನೇಮಿಸಿದನು. ಅವರು ಅದೇ ಮೇರೆಗೆ ಅವನನ್ನು ಹಿಡಿದು ನೂಲು ಹಗ್ಗಗಳಿಂದ ಕೈಕಾಲುಗಳನ್ನು ಕಟ್ಟಿ ಬಿಗಿದು ಹೊತ್ತುಕೊಂಡು ಹೋಗಿ ಸಮುದ್ರದಲ್ಲಿ ಹಾಕಿದರು. ಆ ಕೂಡಲೆ ಸಮುದ್ರರಾಜನು ಪ್ರತ್ಯಕ್ಷನಾಗಿ ಬಂದು ಪರಮಭಾಗವತ ಶಿರೋಮಣಿಯಾದ ಪ್ರಹ್ಲಾದನಿಗೆ ನಮಸ್ಕರಿಸಿ ಅನರ್ಘ್ಯವಾದ ರತ್ನಾಭರಣಗಳಿಂದ ಮನೋಹರವಾಗಿ ಅಲಂಕರಿಸಿ ತಾನೇ ಎತ್ತಿಕೊಂಡು ಬಂದು ದಡದಲ್ಲಿರುವ ರಾಕ್ಷಸ ದೂತರ ವಶಕ್ಕೆ ಕೊಟ್ಟು ಅದೃಶ್ಯನಾದನು. ಆ ಮೇಲೆ ಆ ರಾಜದೂತರು ಆ ಪ್ರಹ್ಲಾದನ ಮಹಾತ್ಮ್ಯೆಗೆ ಬೆಚ್ಚಿಬೆರಗಾಗಿ—ಇವನು ಸಾಮಾನ್ಯಪುರುಷನಲ್ಲ. ದೇವಾಂಶ

ಸಂಭೂತನಾದ ಪುರುಷನಾಗಿರುವನು. ಇದು ನಿಶ್ಚಯವು ಎಂದು ಯೋಚಿಸಿಕೊಂಡು ಪ್ರಹ್ಲಾದನನ್ನು ಕರೆದುಕೊಂಡು ಹಿರಣ್ಯಕಶಿಪುವಿನ ಬಳಿಗೆ ಬಂದು ನಡೆದ ಸಂಗತಿಯು ನ್ನೆಲ್ಲಾ ವ್ಯತ್ಯಾಸವಿಲ್ಲದಂತೆ ಹೇಳಿದರು. ಹಿರಣ್ಯಕಶಿಪುವು ಆ ಮಾತುಗಳನ್ನು ಕೇಳಿ ಪ್ರಳಯಾಗ್ನಿಗೆ ಸಮಾನವಾದ ಕೋಪದಿಂದ ಸಂತಪ್ತನಾಗಿ ಹುಬ್ಬುಗಳನ್ನು ಹಾರಿಸುತ್ತ ತುಟಿಗಳನ್ನು ಕುಣಿಸುತ್ತ ಆ ದೂತರನ್ನು ಕುರಿತು—ದೊಡ್ಡ ದೊಡ್ಡವುಗಳಾದ ಒಣ ಮರಗಳನ್ನು ತೆಗೆದುಕೊಂಡು ಬಂದು ಒಟ್ಟಿ ನಾಲ್ಕು ಕಡೆಗಳಿಗೂ ಅಗ್ನಿಯನ್ನು ಹೊತ್ತಿಸಿ ಚೆನ್ನಾಗಿ ಉರಿಸಿ ಈ ನೀಚನ ಕೈಕಾಲುಗಳನ್ನು ಕಟ್ಟಿ ಆ ಮಹಾಗ್ನಿಮಧ್ಯ ದಲ್ಲಿ ಹಾಕಿಬಿಡಿರಿ ಎಂದು ನೇಮಿಸಿ ಕಳುಹಿಸಿದನು. ಅವರೆಲ್ಲರೂ ಅದೇ ಮೇರೆಗೆ ಬಲ್ಲೊರಡುಗಳನ್ನು ತಂದು ಒಟ್ಟಿ ಅದಕ್ಕೆ ಬೆಂಕಿಯನ್ನು ಹಾಕಿ ಹೊತ್ತಿಸಿ ಚೆನ್ನಾಗಿ ಉರಿಯುವಂತೆ ಮಾಡಲು ; ಆಗ ಮಹಾಜ್ವಾಲೆಯು ಮೇಘಮಂಡಲವನ್ನು ಹೊಯ್ದು ಪ್ಪಳಿಸಿ ಮೇಲುಲೋಕಗಳನ್ನು ನೆಕ್ಕಿ ಮುಕ್ಕುವುದೋ ಎಂಬಂತಿರುವ ಮಹಾಗ್ನಿಯಲ್ಲಿ ಕೈಕಾಲುಗಳನ್ನು ಕಟ್ಟಿ ಪ್ರಹ್ಲಾದನನ್ನು ತೆಗೆದುಕೊಂಡು ಬಂದು ಹಾಕಿದರು. ಆ ಕೂಡಲೆ ಅಗ್ನಿದೇವತೆಯು ಪ್ರತ್ಯಕ್ಷನಾಗಿ ಬಂದು ಕೋಟಿಸೂರ್ಯ ಪ್ರಕಾಶಯುಕ್ತನೂ ಮಹಾಮಹಿಮೆಯುಳ್ಳವನೂ ಆದ ಪ್ರಹ್ಲಾದನನ್ನು ದಹಿಸುವುದಕ್ಕೆ ಶಕ್ತಿಸಾಲದುದ ರಿಂದ ಅವನನ್ನು ಬಹಳವಾಗಿ ಉಪಚರಿಸಿ ಸಂತೋಷದಿಂದಲೂ ಭಕ್ತಿಯಿಂದಲೂ ಎತ್ತಿ ಕೊಂಡು ಬಂದು ಆ ರಾಜದೂತರ ವಶಕ್ಕೆಕೊಟ್ಟು ಆ ಬೆಂಕಿಯಲ್ಲಿಯೇ ಹೊಕ್ಕು ಮರಿ ಸಿಕೊಂಡನು. ಅನಂತರದಲ್ಲಿ ದೂತರು ಬಂದು ಹಿರಣ್ಯಕಶಿಪುವಿಗೆ ಈ ವರ್ತಮಾನ ವನ್ನೂ ಹೇಳಲು ; ಕೂಡಲೆ ಕೋಪೋಗ್ರನಾದ ಹಿರಣ್ಯಕಶಿಪುವು—ಆ ಪಾಪಿಯನ್ನು ಘಟಸರ್ಪಗಳಿಂದ ಕಚ್ಚಿಸಿ ಕೊಂದುಹಾಕಿರಿ ಎಂದು ಅಪ್ಪಣೆಯನ್ನು ಕೊಡಲು ; ಅವರು ಶೀಘ್ರವಾಗಿ ದೊಡ್ಡ ದೊಡ್ಡ ಹಾವುಗಳನ್ನು ತೆಗೆದುಕೊಂಡು ಬಂದು ಆ ಪ್ರಹ್ಲಾದನ ಮೇಲೆ ಬಿಟ್ಟು ಹೊಡೆದು ತಿವಿದು ಕೋಪಗೊಳಿಸಲು ; ವಿವಿಧವಾದ ಆ ಸರ್ಪಗಳೆಲ್ಲವೂ ಅವನನ್ನು ಸ್ವಲ್ಪವಾದರೂ ಮುಟ್ಟದೆ ಹಿಂದಿರುಗಿ ಆ ರಾಜದೂತರನ್ನೇ ಕಚ್ಚಿ ಕೊಲ್ಲುವುದಕ್ಕೆ ಮೊರೆಯುತ್ತ ಓಡಿಸಿಕೊಂಡು ಬಂದುವು. ಆಗ ಅವರೆಲ್ಲರೂ ಹೆದರಿಕೊಂಡು ಪ್ರಾಣಭೀತಿಯಿಂದ ಕೂಡಿದವರಾಗಿ ದಿಕ್ಕುದಿಕ್ಕಿಗೆ ಓಡಿ ಕಡೆಗೆ ಹಿರ ಣ್ಯಕಶಿಪುವಿನ ಬಳಿಯನ್ನು ಸೇರಿ ಬದುಕಿದೆವೆಂದುಕೊಂಡು ನಡೆದ ಸಂಗತಿಯನ್ನೆಲ್ಲಾ ಸ್ವಲ್ಪವನ್ನಾದರೂ ಬಿಡದೆ ಅವನೊಡನೆ ಹೇಳಿದರು. ಅನಂತರದಲ್ಲಿ ಹಿರಣ್ಯಕಶಿಪುವು ಮಹಾಕೋಪಸಂತಾಪಯುಕ್ತನಾಗಿ ಪರ್ವತಾಗ್ರಗಳಿಂದ ನೂಕಿಸುವುದೇ ಮೊದಲಾದ ಕೃತ್ಯಗಳನ್ನು ಮಾಡಿಸಿದಾಗ್ಯೂ ಅವನಿಗೆ ಮರಣವುಂಟಾಗದಿದ್ದುದನ್ನು ಕಂಡು ಮತ್ತೂ ಕೋಪದಿಂದ ಹೆಚ್ಚಾದ ದ್ವೇಷವುಳ್ಳವನಾಗಿ ದೂತರನ್ನು ನೋಡಿ—ಆ ಪ್ರಹ್ಲಾದ ನನ್ನು ನಮ್ಮ ಚಾವಡಿಗೆ ಹಿಡಿದುಕೊಂಡು ಬನ್ನಿರೆಂದು ಆಜ್ಞಾಪಿಸಲು ; ಅವರು ಶೀಘ್ರ ವಾಗಿ ಅವನನ್ನು ಹಿಡಿದುಕೊಂಡು ಬರಲು ; ಆಗ ಹಿರಣ್ಯಕಶಿಪುವು ವೇಗದಿಂದವನ ಬಳಿಗೆ ಹೋಗಿ ಅವನ ಜುಟ್ಟನ್ನು ಹಿಡಿದುಕೊಂಡು ಕತ್ತಿಯನ್ನು ತೆಗೆದುಕೊಂಡು— ಎಲಾ, ಪರಮವಿರೋಧಿಯೂ ಕುಲದ್ರೋಹಿಯೂ ಆದ ಪಾಪಿಷ್ಠನೇ! ನೀನು ಹೇಳುವ

ಹರಿಯು ಎಲ್ಲಿದ್ದಾನೆ? ತೋರಿಸು ಎನ್ನಲು; ಆಗ ಪ್ರಹ್ಲಾದನು—ಎಲೈ ತಂದೆಯೇ, ಸರ್ವಾಂತರ್ಯಾಮಿಯಾದ ಹರಿಯು ಸಕಲಸ್ಥಳಗಳಲ್ಲಿಯೂ ಅಣುರೇಣುತೃಣಕಾಷ್ಠಗಳಲ್ಲಿಯೂ ಪರಿಪೂರ್ಣನಾಗಿದ್ದಾನೆ. ಸಮಸ್ತಲೋಕಗಳಲ್ಲಿಯೂ ಅವನಿಲ್ಲದ ಸ್ಥಳವು ಎಲ್ಲೂ ಇಲ್ಲ ಎನ್ನಲು; ಆಗ ಹಿರಣ್ಯಕಶಿಪುವು—ಹಾಗಾದರೆ ನಿನ್ನ ಹರಿಯನ್ನು ಈ ನನ್ನ ಚಾವಡಿಯ ಉಕ್ಕಿನ ಕಂಬದಲ್ಲಿ ತೋರಿಸಿದರೆ ಸರಿ. ಇಲ್ಲದಿದ್ದರೆ ಅಜ್ಞಾನಿಯಾದ ನಿನ್ನನ್ನು ಈ ಕ್ಷಣದಲ್ಲೇ ತುಂಡುತುಂಡಾಗಿ ಕತ್ತರಿಸಿ ನಿನ್ನ ಶರೀರವನ್ನು ನಾಯ್ನರಿಗಳಿಗೆ ಆಹಾರವನ್ನಾಗಿ ಮಾಡುವೆನು ಎಂದು ಹೇಳುತ್ತ ನಾನಾ ಪ್ರಕಾರವಾಗಿ ಪ್ರಹ್ಲಾದನನ್ನು ಬಾಧಿಸುತ್ತಿದ್ದನು. ಆಗ ಮಹಾವಿಷ್ಣುವು ನಿಜಭಕ್ತನಾದ ಪ್ರಹ್ಲಾದನಿಗಾಗುತ್ತಿರುವ ಹಿಂಸೆಯನ್ನು ನೋಡಿ ಸಹಿಸಲಾರದೆ ಆ ಹಿರಣ್ಯಕಶಿಪುವಿಗೆ ಮೊದಲು ಚತುರ್ಮುಖನು ಕೊಟ್ಟಿದ್ದ ವರವು ವ್ಯರ್ಥವಾಗದ ಹಾಗೆ ಈ ದುಷ್ಟನನ್ನು ಹೇಗೆ ಕೊಂದುಹಾಕಬೇಕೆಂದು ಯೋಚಿಸಿ ಆಗ ಕಂಠದಿಂದ ಮೇಲಕ್ಕೆ ಸಿಂಹಾಕಾರವೂ ಅಲ್ಲಿಂದ ಕೆಳಗೆ ಮನುಷ್ಯಾಕಾರವೂ ಉಳ್ಳ ತ್ರಿಲೋಕಭಯಂಕರವಾದ ನರಸಿಂಹರೂಪವನ್ನು ಧರಿಸಿ ಆ ಚಾವಡಿಯ ಉಕ್ಕಿನ ಕಂಬವನ್ನು ಕೋಟಿ ಸಿಡಿಲು ಆರ್ಭಟಿಸಿದಂತೆ ಎರಡು ಭಾಗವಾಗಿ ಸೀಳಿ ಹೊರಗೆ ಬಂದು ನಿಲ್ಲಲು; ಆ ರಭಸಕ್ಕೆ ಹಿರಣ್ಯಕಶಿಪುವು ಹೆದರಿ ಕೆಳಕ್ಕೆ ಬಿದ್ದು ಮೂರ್ಛಿತನಾದನು. ಅಲ್ಲಿದ್ದ ಅಸಂಖ್ಯಾತವಾದ ರಾಕ್ಷಸಬಲದೊಳಗೆ ಒಬ್ಬನಾದರೂ ಉಳಿಯದೆ ನರಸಿಂಹನ ಉಗ್ರತೇಜಸ್ಸಿನಿಂದ ಸುಟ್ಟು ಭಸ್ಮೀಭೂತರಾಗಿ ಹೋದರು. ಆಗ ಪ್ರಹ್ಲಾದನು ಮುಂದೆ ಬಂದು ಭಯಭರಿತಭಕ್ತಿಯಿಂದ ನರಸಿಂಹನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಎದ್ದು ಕೈಮುಗಿದು ನಿಂತುಕೊಂಡು ಅನೇಕ ವಿಧವಾಗಿ ಸ್ತೋತ್ರಮಾಡುತ್ತಿದ್ದನು. ಅನಂತರದಲ್ಲಿ ನರಸಿಂಹನು ಹಗಲಿರುಳಲ್ಲದ ಮುಚ್ಚಂಜೆಯ ವೇಳೆಯಲ್ಲಿ ಆ ಹಿರಣ್ಯಕಶಿಪುವನ್ನು ಎತ್ತಿಕೊಂಡು ಒಳಗೂ ಹೊರಗೂ ಅಲ್ಲದ ಹೊಸ್ತಿಲ ಮೇಲೆ ಕೂತುಕೊಂಡು ಆಕಾಶವೂ ಭೂಮಿಯೂ ಅಲ್ಲದ ತನ್ನ ತೊಡೆಯ ಮೇಲೆ ಕೆಡಹಿಕೊಂಡು ಯಾವ ಆಯುಧಗಳೂ ಅಲ್ಲದ ತನ್ನ ಉಗುರುಗಳಿಂದ ಅವನ ಹೊಟ್ಟೆಯನ್ನು ಬಗೆದು ಕರುಳುಗಳನ್ನು ತೆಗೆದುಕೊಂಡು ತುಲಸೀಮಾಲೆಗಳಂತೆ ತನ್ನ ಕೊರಳುಗಳಿಗೆ ಹಾಕಿಕೊಂಡು ಅತ್ಯುಗ್ರವಾದ ತನ್ನ ನರಸಿಂಹರೂಪದಿಂದ ಒಪ್ಪಿದನು.

ಆ ಸಮಯದಲ್ಲಿ ನರಸಿಂಹನು ಅತ್ಯಂತ ಕೋಪಾವೇಶದಿಂದ ರೌದ್ರಾಕಾರವುಳ್ಳವನಾಗಿ ಕೋಪಾಗ್ನಿಯಿಂದ ಮೂರು ಲೋಕಗಳನ್ನೂ ಸುಡುತ್ತ ಇದ್ದಾಗ್ಗೂ ಶಾಂತನಾಗದೆ ಇರಲು; ಆಗ ಬ್ರಹ್ಮಾದಿ ದೇವತೆಗಳೆಲ್ಲಾ ವ್ಯಸನಾಕ್ರಾಂತರಾಗಿ ಒಂದುಗೂಡಿ ಮಹಾಲಕ್ಷ್ಮಿಯನ್ನು ಪ್ರಾರ್ಥಿಸಿ ನರಸಿಂಹನ ಬಳಿಗೆ ಕಳುಹಿಸಲು; ಆ ಕೂಡಲೆ ಲಕ್ಷ್ಮೀ ದೇವಿಯು ಬಂದು ತಾನೂ ಕೂಡ ಭಯಂಕರಾಕಾರಧರನಾದ ನರಸಿಂಹನ ಬಳಿಗೆ ಹೋಗುವುದಕ್ಕೆ ಭಯಪಟ್ಟು ಪರಮಭಕ್ತನಾದ ಪ್ರಹ್ಲಾದನನ್ನು ಮುಂದುಮಾಡಿಕೊಂಡು ಮೆಲ್ಲಮೆಲ್ಲನೆ ಹೋಗಿ ನರಸಿಂಹನ ಮುಂದೆ ನಿಲ್ಲಲು; ಆಗ ಆತನು ಅವರಿಬ್ಬರನ್ನೂ ನೋಡಿ ಶಾಂತನಾಗಿ ಅವರನ್ನು ಬರಸೆಳೆದು ತನ್ನೆರಡು ತೊಡೆ

ಗಳ ಮೇಲೆ ಕುಳ್ಳಿರಿಸಿಕೊಂಡನು. ಆಗ ಬ್ರಹ್ಮಾದಿ ದೇವತೆಗಳು ಸಂತೋಷದಿಂದ ನರ ಸಿಂಹನ ಮೇಲೆ ಪೂಮಳೆಗರೆದು ನರಸಿಂಹನ ಸನ್ನಿಧಿಗೆ ಬಂದು ಸಾಷ್ಟಾಂಗನಮಸ್ಕಾರ ವನ್ನು ಮಾಡಿ ಬಹು ವಿಧದಿಂದ ಸ್ತುತಿಸಿದರು. ಅನಂತರದಲ್ಲಿ ನರಸಿಂಹಮೂರ್ತಿಯು ಸಂತುಷ್ಟನಾಗಿ ಚತುರ್ಮುಖಾದಿ ದೇವತೆಗಳೊಡನೆ ಕೂಡಿ ಭಕ್ತನಾದ ಪ್ರಹ್ಲಾದನಿಗೆ ದೈತ್ಯರಾಜ್ಯಾಭಿಷೇಕವನ್ನು ಮಾಡಿ ಸ್ಥಿರಜೀವಿಯಾಗಿರು ಎಂದು ಹರಸಿ ತಾನು ಲಕ್ಷ್ಮೀಸಮೇತನಾಗಿ ವೈಕುಂಠಲೋಕಕ್ಕೆ ತೆರಳಿದನು. ಬ್ರಹ್ಮಾದಿ ದೇವತೆಗಳೂ ಕೂಡ ತಮ್ಮ ತಮ್ಮ ನಿವಾಸಸ್ಥಾನಗಳಿಗೆ ತೆರಳಿದರು. ಆ ಮೇಲೆ ಪ್ರಹ್ಲಾದನು ನಿರಂತರವೂ ಪರಮಭಕ್ತಿಯಿಂದ ಹರಿಧ್ಯಾನವನ್ನು ಮಾಡುತ್ತ ಧರ್ಮದಿಂದ ರಾಜ್ಯಪರಿ ಪಾಲನೆಯನ್ನು ಮಾಡಿಕೊಂಡು ಸುಖದಿಂದಿದ್ದನು.

---

## 5. THE FIFTH OR DWARF INCARNATION.

### ೫. ವಾಮನಾವತಾರದ ಕಥೆ.

ಅನಂತರದಲ್ಲಿ ಭಾಗವತಶಿರೋಮಣಿಯಾದ ಪ್ರಹ್ಲಾದನು ಶೋಣಿತಪುರದಲ್ಲಿ ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತ ಹರಿಯೇ ಪರಮೋತ್ಕೃಷ್ಟ ದೇವತೆ ಯೆಂದೂ ಹರಿಯೇ ಸರ್ವಪಾಪನಿವಾರಕನೆಂದೂ ಹರಿಯೇ ಶರಣಾಗತ ರಕ್ಷಕನೂ ಸರ್ವಜಗದ್ವ್ಯಾಪಕನೂ ಎಂದೂ ಚೆನ್ನಾಗಿ ತಿಳಿದು ಅದೇ ಪ್ರಕಾರವಾಗಿ ಸಕಲ ಜನ ರಿಗೂ ಸಮಾಧಾನದಿಂದ ಉಪದೇಶಮಾಡುತ್ತ ಇದ್ದನು. ಹೀಗೆ ಬಹು ಕಾಲವು ಗತಿಸಿ ಹೋದ ಮೇಲೆ ರಾಜ್ಯದಲ್ಲಿ ವಿರಕ್ತತೆಯನ್ನು ಹೊಂದಿ ಒಂದಾನೊಂದು ದಿವಸ ತನ್ನ ಮೊಮ್ಮಗನಾದ ಬಲಿಯು ರಾಜ್ಯಭಾರಕ್ಕೆ ಯೋಗ್ಯವಾದ ಪ್ರಾಯವುಳ್ಳವನಾಗಿರುವು ದನ್ನು ತಿಳಿದು ಆತನನ್ನು ಕರೆದು ಏಕಾಂತದಲ್ಲಿ ಕುಳ್ಳಿರಿಸಿಕೊಂಡು—ಎಲೈ ಬುದ್ಧಿ ಶಾಲಿಯಾದ ಮೊಮ್ಮಗನೇ, ನಿನ್ನ ತಂದೆಯಾದ ವಿರೋಚನನು ಬುದ್ಧಿಹೀನತೆಯಿಂದ ಸಕಲ ದೇವತೆಗಳ ಗಂಡನೂ ಸರ್ವಲೋಕೈಕನಾಥನೂ ಆದ ಮಹಾವಿಷ್ಣುವಿಗೆ ದ್ರೋಹವನ್ನು ಮಾಡಿ ಕಾಲಗತಿಯನ್ನು ಹೊಂದಿದನು. ಬುದ್ಧಿಶಾಲಿಯಾದ ನೀನು ಒಂದು ಕಾಲದಲ್ಲಿಯಾದರೂ ಆ ರೀತಿಯಾಗಿ ಮಾಡದೆ ಮಹಾವಿಷ್ಣುವಿನಲ್ಲಿ ಪರಮ ಭಕ್ತಿಯುಳ್ಳವನಾಗಿ ಸದಾಕಾಲದಲ್ಲೂ ಏಕಚಿತ್ತದಿಂದ ಆತನ ಧ್ಯಾನವನ್ನು ಮಾಡುತ್ತ ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡಿಕೊಂಡು ಸಕಲ ಪ್ರಾಣಿಗಳಲ್ಲೂ ದಯೆಯುಳ್ಳವನಾಗಿ ಸುಖದಿಂದಿರು. ನಾನು ನಿನಗೆ ರಾಜ್ಯಾಭಿಷೇಕವನ್ನು ಮಾಡಿ ತಪಸ್ಸಿಗೆ ಹೋಗುವೆನು. ಆದರೆ ದೈತ್ಯರಲ್ಲಿ ದೇವತೆಗಳಿಗೆ ಆಜನ್ಮಸಿದ್ಧವಾದ ಜಾತಿವೈ ರವಿರುವುದರಿಂದ ವಿವೇಕಶಾಲಿಯಾದ ನೀನು ವಿಷ್ಣುಭಕ್ತಿಯಿಂದಲೂ ಧರ್ಮದಿಂದಲೂ ವರಬಲದಿಂದಲೂ ದೇವತೆಗಳನ್ನು ತಲೆಯೆತ್ತದಂತೆ ಅಡಗಿಸಿಕೊಂಡು ಬಾಳು ಎಂದು ಬುದ್ಧಿಯನ್ನು ಹೇಳಿ ಸುಲಗ್ನದಲ್ಲಿ ಆತನಿಗೆ ಸಂಭ್ರಮದಿಂದ ರಾಜ್ಯಾಭಿಷೇಕವನ್ನು ಮಾಡಿ ತಾನು ಪಾರಮಾರ್ಥಿಕ ಬುದ್ಧಿಯಿಂದ ಪುಣ್ಯಾರಣ್ಯವನ್ನು ಕುರಿತು ತಪಸ್ಸಿಗೆ ಹೊರಟುಹೋದನು.

ಅನಂತರದಲ್ಲಿ ಬಲಿಯು ತನ್ನ ಅಧೀನವಾದ ರಾಜ್ಯಭಾರವನ್ನು ತನ್ನ ಬುದ್ಧಿವಂತರಾದ ಮಂತ್ರಿಗಳಲ್ಲಿಟ್ಟು—ಎಳ್ಳಷ್ಟಾದರೂ ಧರ್ಮಕ್ಕೆ ಲೋಪಬಾರದಂತೆಯೂ ದೇಶದ ಸರ್ವಜನರೂ ಪರಮಭಕ್ತಿಯಿಂದ ಕೂಡಿ ಮಹಾವಿಷ್ಣುವನ್ನೇ ಆರಾಧಿಸುವಂತೆಯೂ ಸರ್ವರಿಗೂ ಕಟ್ಟು ಮಾಡಿಸಿ—ನೀವು ಧರ್ಮಿಷ್ಠರಾಗಿ ವಿಚಾರಿಸಿಕೊಳ್ಳುತ್ತ ಸತ್ಯದಿಂದಿರಿ ಎಂದು ಆ ಮಂತ್ರಿಗಳಿಗೆ ಹೇಳಿ ತಾನು ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿ ಸರ್ವಲೋಕಪಿತಾಮಹನಾದ ಬ್ರಹ್ಮದೇವನನ್ನು ಕುರಿತು ಅನೇಕ ಸಂವತ್ಸರಗಳ ವರೆಗೂ ಕಠಿಣತರವಾದ ತಪಸ್ಸನ್ನು ಮಾಡಿದುದರಿಂದ ಹಿರಣ್ಯಗರ್ಭನು ಮೆಚ್ಚಿ ಆತನ ಬಳಿಗೆ ಬಂದು— ಎಲೈ ಸುಶೀಲನಾದ ಬಲಿಯೇ, ನಾನು ನಿನ್ನ ತಪಸ್ಸಿಗೆ ಮೆಚ್ಚಿದೆನು. ನಿನಗೆ ಬೇಕಾದ ವರಗಳನ್ನು ಬೇಡಿಕೋ, ಕೊಡುವೆನು ಎಂದು ಹೇಳಲು; ಆಗ ಬಲಿಯು ಆತನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ ಭಯಭಕ್ತಿಯಿಂದ ಕೈಮುಗಿದು ನಿಂತುಕೊಂಡು—ಸ್ವಾಮಿಾ, ಜಗತ್ಕರ್ತನೇ, ಮೊದಲು ನನಗೆ ಎಂಥ ಎಡರು ಬಂದ ಕಾಲದಲ್ಲೂ ಮಹಾವಿಷ್ಣುವಿನಲ್ಲಿ ಅಚಂಚಲವಾದ ಭಕ್ತಿಯೂ ಧರ್ಮದಲ್ಲಿ ಬುದ್ಧಿಯೂ ಸ್ವಲ್ಪವಾದರೂ ತಪ್ಪದ ಹಾಗೆ ಕೊಡತಕ್ಕ ವರ ಒಂದು. ನಾನು ಆಳುವ ರಾಜ್ಯಗಳಲ್ಲಿ ಸಕಲ ಪ್ರಜೆಗಳೂ ಸಂತತಿ ಸಂಪತ್ತುಗಳಿಂದ ಕೂಡಿ ಸದಾ ಸಂತೋಷಚಿತ್ತರಾಗಿರುವ ಹಾಗೆ ಕೊಡಬೇಕಾದ ವರ ಒಂದು. ನಾನು ಸ್ಥಿರಜೀವಿಯಾಗಿರತಕ್ಕ ವರ ಒಂದು. ಸಕಲ ದೇವತೆಗಳೂ ದಾನವರೂ ಮತ್ತು ಯಕ್ಷಗರುಡಗಂಧರ್ವ ಕಿನ್ನರೋರಗರೇ ಮುಂತಾದವರಲ್ಲಿರುವ ಸಕಲ ಮಂತ್ರಾಸ್ತ್ರಗಳೂ ವೈಷ್ಣವಪಾಶುಪತಬ್ರಹ್ಮಾಸ್ತ್ರಗಳೂ ನನಗೆ ಸಿದ್ಧಿಸುವಂತೆ ಅನುಗ್ರಹಮಾಡುವ ವರ ಒಂದು. ಇವುಗಳನ್ನು ನನಗೆ ದಯಪಾಲಿಸಬೇಕೆಂದು ದೀನತೆಯಿಂದ ಬೇಡಿಕೊಳ್ಳಲು; ಬ್ರಹ್ಮದೇವನು ಬಹಳವಾಗಿ ಸಂತೋಷಿಸಿ—ಎಲೈ ಮಗನೇ, ನಿನ್ನ ಸುಗುಣಗಳಿಗೆ ನಾನು ಬಹಳವಾಗಿ ಮೆಚ್ಚಿದೆನು. ನೀನು ಕೇಳಿಕೊಂಡ ನಾಲ್ಕು ವರಗಳನ್ನೂ ಸಂತೋಷದಿಂದ ನಿನಗೆ ಕೊಟ್ಟಿದ್ದೇನೆ. ಅವಿಚ್ಛಿನ್ನವಾದ ಸುಖದಿಂದ ಬಾಳು ಎಂದು ಆತನ ತಲೆಯ ಮೇಲೆ ಕೈಯಿಟ್ಟು ಹರಸಿ ಹಂಸೆಯನ್ನೇರಿ ಸತ್ಯಲೋಕಕ್ಕೆ ಹೊರಟುಹೋದನು.

ಅನಂತರದಲ್ಲಿ ಬಲಿಯು ಸಂತೋಷದಿಂದ ಕೂಡಿದವನಾಗಿ ನಿಜನಗರವಾದ ಶೋಣಿತಪುರಕ್ಕೆ ಬಂದು ಆಚಾರ್ಯನಾದ ಶುಕ್ರಾಚಾರ್ಯನಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ ಷೋಡಶೋಪಚಾರಗಳಿಂದ ಪೂಜೆಸಿ ತಾನು ತಪಸ್ಸಿನಿಂದ ಬ್ರಹ್ಮನನ್ನು ಮೆಚ್ಚಿಸಿ ಆತನಿಂದ ಪಡೆದುಕೊಂಡು ಬಂದ ನಾಲ್ಕು ವರಗಳ ವಿವರಗಳನ್ನು ಕ್ರಮವಾಗಿ ಬಿನ್ನವಿಸಿ—ಸ್ವಾಮಿಾ, ನಾನು ಇಲ್ಲಿಂದ ಮುಂದೆ ಮಾಡಬೇಕಾದ ಕಾರ್ಯವೇನು ? ಅಪ್ಪಣೆಯಾಗಬೇಕು ಎಂದು ಕೇಳಲಾಗಿ; ಆಗ ಸಂತುಷ್ಟಾಂತರಂಗನಾದ ಶುಕ್ರಾಚಾರ್ಯನು—ಎಲೈ ಸುಗುಣಾಭರಣ ಭೂಷಿತನಾದ ಬಲಿಯೇ, ನೀನು ಅನ್ಯಾದೃಶವಾದ ತಪಸ್ಸಿನಿಂದ ಇಂಥ ಅಮೋಘವಾದ ವರಗಳನ್ನು ಪಡೆದ ಮೇಲೆ ನೀನೇ ತ್ರಿಲೋಕಾಧಿಪತಿಯಾಗಿರಬೇಕೇ ಹೊರತು ಇಂಥ ಅನನ್ಯಸಾಧಾರಣಶೌರ್ಯಧುರಂಧರನಾದ ನಿನ್ನ ಮುಂದೆ ಅಲ್ಪಬಲನಾದ ದೇವೇಂದ್ರನು ತ್ರಿಲೋಕಾಧಿಪತಿಯಾಗಿರು

ವುದೂ ನೀನು ಅವನ ಅಧೀನದಲ್ಲಿರುವ ಕೆಲವು ದೇಶಗಳಿಗೆ ಮಾತ್ರ ಅರಸನೆನ್ನಿಸಿಕೊಂಡಿರುವುದೂ ನಿನ್ನ ಯೋಗ್ಯತೆಗೆ ಬಹಳ ನ್ಯೂನತೆಯಾಗಿರುವುದು. ಇದರಿಂದ ನೀನು ಪಡೆದ ಮಹಾವರಗಳಿಗೆ ಸಾಫಲ್ಯವುಂಟಾಗದೆ ಹೋಗುವುದು ಎಂದು ಹೇಳಿದನು. ಅದನ್ನು ಕೇಳಿ ಬಲಿಯು ಯೋಚಿಸಿ ಯುಕ್ತವೆಂದು ತಿಳಿದು ಆಚಾರ್ಯರನ್ನು ಕುರಿತು—ಸ್ವಾಮಿಾ, ಪುತ್ರನಾದ ನನ್ನಲ್ಲಿ ನಿರಂತರವೂ ಪೂರ್ಣದಯೆಯುಳ್ಳವರಾದ ನೀವೇ ಸುರಲೋಕಕ್ಕೆ ಬಿಜಯಂಗೆಯ್ದು ಮೊದಲು ಸುರಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಕಂಡು ಅವರಡಿದಾವರೆಗಳಿಗೆ ನನ್ನ ಭಯಭಕ್ತಿಪೂರ್ವಕಗಳಾದ ವಂದನೆಗಳನ್ನು ತಿಳಿಸಿ ಅನಂತರದಲ್ಲಿ ಈ ಮಾತುಗಳನ್ನು ತಿಳಿಸಬೇಕು. ಅವು ಯಾವುವೆಂದರೆ—ಮಹಾತ್ಮರಾದ ನೀವು ದೇವೇಂದ್ರನಿಗೆ ಗುರುಗಳಾಗಿ ಹೇಗೆ ಮಾನ್ಯರಾಗಿದ್ದೀರೋ ಅದೇ ಮೇರೆಗೆ ನನಗೂ ಗುರುಗಳೂ ಮಾನ್ಯರೂ ಆಗಿದ್ದೀರಿ. ದೇವತೆಗಳಿಗೂ ದೈತ್ಯರಿಗೂ ಆಜನ್ಮಸಿದ್ಧವಾದ ವೈರವುಂಟೆಂದು ಸರ್ವಜ್ಞರಾದ ತಮಗೆ ವೇದ್ಯವಾಗಿಯೇ ಇದೆ. ನಮ್ಮ ಮುತ್ತಜ್ಜನಾದ ಹಿರಣ್ಯಕಶಿಪುವು ಸ್ವಾತಂತ್ರ್ಯದಿಂದ ಆಳುತ್ತಿದ್ದ ತ್ರಿಲೋಕಾಧಿಪತ್ಯವನ್ನು ಆತನು ಸತ್ತುಹೋದ ಮೇಲೆ ದೇವೇಂದ್ರನು ಬಲಾತ್ಕಾರದಿಂದ ಆಳುತ್ತ ಬಂದಿದ್ದಾನೆ. ಈಗ ದೇವರ ದಯೆಯಿಂದ ಆ ಸುರೇಂದ್ರನನ್ನು ಜಯಿಸಿ ಆ ತ್ರಿಲೋಕಾಧಿಪತ್ಯವನ್ನು ಅನುಭವಿಸುವುದಕ್ಕೆ ಯೋಗ್ಯವಾದ ಶಕ್ತಿಯು ನನಗೆ ಉಂಟಾಗಿದೆ. ಸಾಮದಾನಭೇದದಂಡಗಳೆಂಬ ಚತುರೋಪಾಯಗಳು ರಾಜನೀತಿಯಲ್ಲಿ ಹೇಳಲ್ಪಟ್ಟಿರುವುವು. ಬುದ್ಧಿಶಾಲಿಗಳಾದ ಅರಸುಗಳು ಅವುಗಳಲ್ಲಿ ಮೊದಲನೆಯದಾದ ಸಾಮೋಪಾಯವನ್ನೇ ವಿಶೇಷವಾಗಿ ಉಪಯೋಗಿಸಿ ರಾಜ್ಯಗಳನ್ನು ಸಂಪಾದಿಸಬೇಕೆಂದೂ ಅದು ವ್ಯರ್ಥವಾದರೆ ದಾನೋಪಾಯ ; ಅದೂ ನಿಷ್ಫಲವಾಗುವ ಪಕ್ಷದಲ್ಲಿ ಭೇದೋಪಾಯ ; ಕಡೆಗೆ ಅದೂ ನಡೆಯದೆಹೋಗುವ ಪಕ್ಷದಲ್ಲಿ ದಂಡೋಪಾಯವನ್ನು ಆಚರಣೆಗೆ ತರತಕ್ಕದೆಂದು ತಮ್ಮಂಥ ಮಹರ್ಷಿಯರು ಅಪ್ಪಣೆಕೊಡಿಸಿರುವರು. ಅದುಕಾರಣ ಈಗ ನಾನು ತಮ್ಮ ಚರಣಸನ್ನಿಧಿಯಲ್ಲಿ ಬಿನ್ನವಿಸುವುದೇನೆಂದರೆ—ದೇವೇಂದ್ರನು ತನ್ನ ಪುತ್ರ ಮಿತ್ರಕಳತ್ರಾದಿಗಳೊಡನೆ ಕೂಡಿ ಭಗವಂತನಿಂದ ಇಂದ್ರಪದವಿಗೆ ನೇಮಿಸಲ್ಪಟ್ಟಿರುವ ಐರಾವತ ಕಾಮಧೇನು ಕಲ್ಪವೃಕ್ಷ ವಜ್ರಾಯುಧ ಇವು ಮೊದಲಾದ ವಸ್ತುಗಳನ್ನು ಬಿಟ್ಟು ಸ್ವಕೀಯವಾದ ಪದಾರ್ಥಗಳನ್ನು ಮಾತ್ರ ತೆಗೆದುಕೊಂಡು ತನಗೆ ಬೇಕಾದ ಕಡೆಗೆ ಹೋಗಿ ಸುಖವಾಗಿ ಬಾಳುವುದು ಉತ್ತಮ ಪಕ್ಷವು. ಅದು ಆತನ ಮನಸ್ಸಿಗೆ ಒಡಂಬಡದೆ ಹೋದರೆ ನನ್ನೊಡನೆ ಯುದ್ಧಕ್ಕೆ ನಿಂತು ತನಗೆ ಸೇರಿದ ಜನರಿಗೂ ವೃಥಾಶ್ರಮವನ್ನು ಕೊಟ್ಟು ನನ್ನಿಂದ ತಾನೂ ಪರಾಜಿತನಾಗಿ ಕಾರಾಗೃಹದಲ್ಲಿ ಸೇರಿ ಕಷ್ಟವನ್ನೂ ಅಪಮಾನವನ್ನೂ ಅನುಭವಿಸುವುದು ಎರಡನೆಯ ಪಕ್ಷವು. ತಾವು ಈ ಎರಡು ಪಕ್ಷಗಳನ್ನೂ ಇಂದ್ರನಿಗೆ ತಿಳಿಸಿ ಆತನಿಗೆ ಸಮ್ಮತವಾದ ಪಕ್ಷವನ್ನು ನನಗೆ ಅಪ್ಪಣೆಕೊಟ್ಟು ಕಳುಹಿಸಬೇಕೆಂದು ನಾನು ಹೇಳಿದುದಾಗಿ ತಿಳಿಸಿ ಅವರ ಮನೋಭಿಪ್ರಾಯಗಳನ್ನು ತಿಳಿದು ಬಂದು ನನಗೆ ಅಪ್ಪಣೆಕೊಡಿಸಬೇಕೆಂದು ಹೇಳಿ ಬಲಿಯು ಶುಕ್ರಾಚಾರ್ಯನನ್ನು ಸುರಲೋಕಕ್ಕೆ ಕಳುಹಿಸಿಕೊಟ್ಟನು.

ಅನಂತರದಲ್ಲಿ ಶುಕ್ರಾಚಾರ್ಯರು ಶಿಷ್ಯನಾದ ಬಲಿಯ ನಯಭಯೋಕ್ತಿಗಳನ್ನು ಕೇಳಿ ಮನಸ್ಸಿನಲ್ಲಿ ಸಂಪೂರ್ಣವಾಗಿ ಸಂತೋಷಪಡುತ್ತ ಇಂದ್ರನಿವಾಸಸ್ಥಾನವಾದ ಅಮರಾವತಿಗೆ ಬಂದು ಮೊದಲು ಬೃಹಸ್ಪತ್ಯಾಚಾರ್ಯರನ್ನು ರಹಸ್ಯದಲ್ಲಿ ಕಂಡು ಅವರಿಂದ ಪೂಜಿತರಾಗಿ ಬಲಿಯು ಹೇಳಿದ ಮಾತುಗಳಲ್ಲಿ ಸ್ವಲ್ಪವೂ ತಪ್ಪದಂತೆ ಅವರೊಡನೆ ಹೇಳಿದರು. ಬೃಹಸ್ಪತ್ಯಾಚಾರ್ಯರು ಆ ಮಾತುಗಳನ್ನೆಲ್ಲಾ ಕೇಳಿ ತಮ್ಮ ಮನಸ್ಸಿನಲ್ಲಿ ಚೆನ್ನಾಗಿ ಪರಿಭಾವಿಸಿ ನೋಡಿ ಶುಕ್ರಾಚಾರ್ಯರನ್ನು ಭೋಜನಾದಿಗಳಿಂದ ಸತ್ಕರಿಸುವ ಹಾಗೆ ತಮ್ಮ ಮನೆಯ ಜನಗಳಿಗೆ ನೇಮಿಸಿ ತಾವು ದೇವೇಂದ್ರನ ಬಳಿಗೆ ಬಂದು ಏಕಾಂತದಲ್ಲಿ ಕುಳಿತು ಬಲಿಯು ಶುಕ್ರಾಚಾರ್ಯರೊಡನೆ ಹೇಳಿಕಳುಹಿಸಿರುವ ಮಾತುಗಳನ್ನೆಲ್ಲಾ ಆತನೊಡನೆ ಹೇಳಿದರು. ದೇವರಾಜನು ಆ ಮಾತುಗಳನ್ನೆಲ್ಲಾ ಕೇಳಿ ಬಹಳ ವ್ಯಸನಾಕ್ರಾಂತನಾಗಿ ಬೃಹಸ್ಪತ್ಯಾಚಾರ್ಯರನ್ನು ಕುರಿತು—ಎಲೈ ಆಚಾರ್ಯರೇ, ಬಲಿಯು ವರಬಲದಿಂದ ಅಜೇಯನಾದ ಬಲಿಷ್ಠನಾಗಿದ್ದಾನೆ. ಈ ವಿಷಯದಲ್ಲಿ ಏನು ಯೋಚನೆಯನ್ನು ಮಾಡಬೇಕೋ ನನಗೆ ಸ್ವಲ್ಪವೂ ತೋಚುವುದಿಲ್ಲ. ಅದುಕಾರಣ ಹೀಗೆ ನಡೆಯೆಂದು ತಾವು ಅಪ್ಪಣೆಯನ್ನು ಕೊಟ್ಟ ಮೇರೆಗೆ ನಾನು ನಡೆದುಕೊಳ್ಳುವೆನು ಎಂದು ಹೇಳಿದನು. ಅದಕ್ಕೆ ಬೃಹಸ್ಪತ್ಯಾಚಾರ್ಯರು ಇಂದ್ರನನ್ನು ಕುರಿತು—ಎಲೈ ದೇವೇಂದ್ರನೇ, ಬುದ್ಧಿಶಾಲಿಯು ಆಲೋಚಿಸಿ ಯಾವ ಕಾರ್ಯವನ್ನಾದರೂ ಮಾಡಬೇಕೇ ಹೊರತು ಅವಿಚಾರದಿಂದ ದುಡುಕಬಾರದು. ತತ್ರಾಪಿ ಅಶುಭವಾದ ಕಾರ್ಯಗಳಿಗೆ ಕಾಲಹರಣವನ್ನು ಮಾಡಿ ನೋಡಬೇಕೆಂದು ನೀತಿಶಾಸ್ತ್ರವಚನವಿರುವುದು. ಅದುಕಾರಣ ಇನ್ನೊಂದು ತಿಂಗಳಲ್ಲಿ ದೈತ್ಯರಾಜನಾದ ಬಲಿಯ ಮಾತುಗಳಿಗೆ ಪ್ರತ್ಯುತ್ತರನ್ನು ಹೇಳಿಕಳುಹಿಸುವೆನೆಂದು ಈಗ ಶುಕ್ರಾಚಾರ್ಯರಿಗೆ ಹೇಳಿಕಳುಹಿಸಿಬಿಟ್ಟು ತಿರುಗಿ ಬರುವೆನು. ಆ ಮೇಲೆ ಮುಂದೆ ನಡೆಯತಕ್ಕ ಕಾರ್ಯಕ್ಕೆ ತಕ್ಕ ಯೋಚನೆಯನ್ನು ಮಾಡಿ ನೋಡೋಣ ಎಂದು ಹೇಳಿ ಅಲ್ಲಿಂದ ತಿರುಗಿ ಮನೆಗೆ ಬಂದು ಭೋಜನಾದ್ಯುಪಚಾರಗಳಿಂದ ಸತ್ಕೃತರಾಗಿ ದಿವ್ಯಪೀಠದಲ್ಲಿ ಕುಳಿತಿರುವ ಶುಕ್ರಾಚಾರ್ಯರನ್ನು ಕಂಡು—ಬಲಿರಾಜನು ತಮ್ಮೊಡನೆ ಹೇಳಿಕಳುಹಿಸಿದ ಮಾತಿಗೆ ಇನ್ನೊಂದು ತಿಂಗಳಲ್ಲಿ ಪ್ರತ್ಯುತ್ತರವನ್ನು ಹೇಳುವೆನು ಎಂದು ಇಂದ್ರನು ಹೇಳಿದನೆನಲು; ತರುವಾಯ ಶುಕ್ರಾಚಾರ್ಯರು ಅಲ್ಲಿಂದ ಹೊರಟು ಬಲಿಯ ಬಳಿಗೆ ಬಂದು ಬೃಹಸ್ಪತ್ಯಾಚಾರ್ಯರು ಹೇಳಿದ ಮಾತನ್ನು ಆತನಿಗೆ ತಿಳಿಸಲು; ಆತನು ಬಹಳ ವಿಚಾರಪರನೂ ಸತ್ಯಸಂಧನೂ ಆದುದರಿಂದ ಹಾಗೇ ಆಗಲಿ ಎಂದು ಒಡಂಬಟ್ಟು ಸಮಾಧಾನವಿಂದಿದ್ದನು.

ಅತ್ತಲಾ ಬೃಹಸ್ಪತ್ಯಾಚಾರ್ಯರು ಇಂದ್ರನನ್ನು ಕರೆದುಕೊಂಡು ಸತ್ಯಲೋಕಕ್ಕೆ ಹೋಗಿ ಬ್ರಹ್ಮದೇವರನ್ನು ವಂದಿಸಿ—ಸ್ವಾಮಿ, ಚತುರ್ಮುಖನೇ, ಒಂದು ಮನ್ವಂತರದ ವರೆಗೂ ಈ ಇಂದ್ರನು ತ್ರಿಲೋಕಾಧಿಪತ್ಯವನ್ನು ಮಾಡಿಕೊಂಡಿರತಕ್ಕುದೆಂದು ಮೊದಲು ನೀನೇ ಕಟ್ಟುಮಾಡಿ ನೇಮಿಸಿದಿ. ಈಗ ಮಧ್ಯಕಾಲದಲ್ಲಿ ವರಬಲ

ಗರ್ವಿತನಾದ ಬಲಿಯು ಇವನ ಸ್ವರ್ಗಪದವಿಯನ್ನು ಕಿತ್ತುಕೊಂಡು ತಾನು ಅನುಭವಿಸಬೇಕೆಂದು ಹೇಳಿ ಕಳುಹಿಸಿದ್ದಾನೆ. ಮಹೋನ್ನತ ತೇಜೋವಿರಾಜಮಾನನಾದ ನಿನ್ನ ಕಣ್ಣುಗಳ ಮುಂದೆಯೇ ನಿನ್ನ ಆಜ್ಞೆಗೆ ಭಂಗವುಂಟಾದರೆ ಅದರಿಂದುಂಟಾಗುವ ಅಪಮಾನವು ನಿನಗೇ ಹೊರತು ಇಂದ್ರನಿಗೇನೂ ಇಲ್ಲವಷ್ಟೆ! ಈ ಭಾಗದಲ್ಲಿ ಸರ್ವಜ್ಞಚಿತ್ತಕ್ಕೆ ಸಮಾಧಾನವಾದ ವಿಷಯವಾವುದು? ಮತ್ತು ಶರಣಾಗತನಾದ ಈ ಇಂದ್ರನಿಗೆ ಅಪ್ಪಣೆಯೇನು? ಎಂದು ಕೇಳಿದನು. ಆ ಮಾತುಗಳನ್ನು ಕೇಳಿ ಚತುರ್ಮುಖ ಬ್ರಹ್ಮನು—ಇದಕ್ಕೆ ನಾನೇನು ಮಾಡಲಿ? ನಾನು ಹೇಳತಕ್ಕ ಉತ್ತರವು ತಾನೆ ಯಾವುದಿರುವುದು? ತಪಸ್ಸನ್ನು ಮಾಡಿದವರಿಗೆ ಬೇಕಾದ ವರಗಳನ್ನು ಕೊಡುವುದು ಮಾತ್ರ ನನ್ನ ಧರ್ಮವು. ಹಾಗೆ ಕೊಡುವುದಕ್ಕೆ ಮಾತ್ರ ನನಗೆ ಶಕ್ತಿಯುಂಟೇ ಹೊರತು ನಿಗ್ರಹಿಸುವ ಶಕ್ತಿಯಿಲ್ಲ. ಅದುಕಾರಣ ನೀವು ಜಗದೀಶ್ವರನಾದ ಶಿವನ ಸನ್ನಿಧಿಗೆ ಹೋಗಿ ಆತನೊಡನೆ ಈ ಸಂಗತಿಯನ್ನು ಹೇಳಿಕೊಳ್ಳಿರಿ. ಒಂದು ವೇಳೆ ಆತನೇನಾದರೂ ಒಂದು ಉಪಾಯದಿಂದ ನಿಮಗೆ ಸಹಾಯವನ್ನು ಮಾಡಿದರೂ ಮಾಡಬಹುದು. ಹೋಗಿರಿ ಎಂದು ಕಳುಹಿಸಿಬಿಟ್ಟನು. ಆ ಮೇಲೆ ಅವರು ಕೈಲಾಸಕ್ಕೆ ಬಂದು ಪರಮೇಶ್ವರನನ್ನು ಕಂಡು ನಮಸ್ಕರಿಸಿ ತಮಗೆ ಬಲಿಯು ಹೇಳಿ ಕಳುಹಿಸಿದುದನ್ನೂ ತಾವು ಆ ಸಂಗತಿಯನ್ನು ಚತುರ್ಮುಖ ಬ್ರಹ್ಮನಲ್ಲಿ ಹೇಳಿಕೊಂಡುದಕ್ಕೆ ಆತನು ಹೇಳಿದುದನ್ನೂ ಹೇಳಿ—ಇಲ್ಲಿಂದ ಮುಂದೆ ಸರ್ವಜ್ಞನಾದ ನೀನು ಏನು ಅಪ್ಪಣೆಯನ್ನು ಕೊಡುವಿ? ಎಂದು ಕೇಳಿಕೊಂಡರು. ಆಗ ಈಶ್ವರನು—ನಾನೂ ಸರೋಜಸಂಭವನಂತೆ ಕೊಡುವುದಲ್ಲದೆ ನಿಗ್ರಹಿಸುವುದನ್ನು ಅನುಮೋದಿಸಲಾರೆನು. ಇಂಥ ಸಂದರ್ಭದಲ್ಲಿ ಪ್ರಾಪ್ತವಾದ ಮೃತ್ಯುವನ್ನು ಯಾವುದಾದರೂ ಒಂದು ಉಪಾಯದಿಂದ ತಪ್ಪಿಸಿ ಕಾಪಾಡುವ ಶಕ್ತಿಯು ವಿಷ್ಣುವನ್ನೇ ಹೊಂದಿರುವುದಲ್ಲದೆ ಮತ್ತಾರಿಂದಲೂ ತೀರದು. ಆದುದರಿಂದ ನೀವು ಆತನ ಬಳಿಗೆ ಹೋಗಿ ಈ ಸಂಗತಿಯನ್ನು ಹೇಳಿಕೊಳ್ಳಿರಿ ಎಂದು ಅಪ್ಪಣೆಯನ್ನು ಕೊಟ್ಟು ಅವರನ್ನು ಕಳುಹಿಸಿದನು. ಆ ಮೇಲೆ ಅವರು ಕ್ಷೀರಸಾಗರಕ್ಕೆ ಬಂದು ಮಹಾವಿಷ್ಣುವನ್ನು ಕಂಡು ನಮಸ್ಕರಿಸಿ ನಡೆದಿರುವ ಸಂಗತಿಗಳನ್ನೆಲ್ಲಾ ಯಥಾವತ್ತಾಗಿ ವಿಜ್ಞಾಪಿಸಿ ಕಾಪಾಡಬೇಕೆಂದು ಬೇಡಿಕೊಂಡರು.

ಅನಂತರದಲ್ಲಿ ಮಹಾವಿಷ್ಣುವು ಬೃಹಸ್ಪತ್ಯಾಚಾರ್ಯನನ್ನು ಕುರಿತು—ಎಲೈ ಸುರರಾಜಗುರುವೇ, ಬಲಿಯು ಮಹಾ ಧರ್ಮಿಷ್ಠನು. ಇದಲ್ಲದೆ ಅವನು ನನಗೆ ಪರಮ ಭಕ್ತನು. ಆತನನ್ನು ನಿಗ್ರಹಿಸುವ ಕಾರ್ಯವು ನನ್ನಿಂದ ಎಷ್ಟು ಮಾತ್ರವೂ ಆಗಲಾರದು. ನೀನು ಮಹಾ ಬುದ್ಧಿಸಂಪನ್ನನು. ನಿನಗೆ ತಿಳಿಯುವಂಥ ಉಪಾಯಗಳು ಯಾರಿಗೂ ತಿಳಿಯುವುದಿಲ್ಲವು. ಅದುಕಾರಣ ನೀನೇ ಈ ಕಾರ್ಯವನ್ನು ನಿರ್ವಹಿಸತಕ್ಕ ಯೋಚನೆಯನ್ನು ಮಾಡಿ ಈ ಇಂದ್ರನನ್ನು ಕಾಪಾಡು ಎಂದು ಹೇಳಿ ಅದೃಶ್ಯನಾದನು. ಆ ಮೇಲೆ ಬೃಹಸ್ಪತ್ಯಾಚಾರ್ಯನು ತುಂಬಿದ ದುಃಖದಿಂದ ಕಂದಿದ ಮುಖವುಳ್ಳ ಇಂದ್ರನನ್ನು ಕರೆದುಕೊಂಡು ಹಿಂದಿರುಗಿ ಅಮರಾವತಿಗೆ ಬಂದು ಇಂದ್ರನನ್ನೂ ಆತನ ಪಟ್ಟದರಸಿಯಾದ ಶಚೀದೇವಿಯನ್ನೂ ಆತನ ಮಗನಾದ ಜಯಂತನನ್ನೂ ಈ

ಮೂರು ಜನರನ್ನು ಮಾತ್ರ ಸ್ವರ್ಗದಿಂದ ಹೊರಡಿಸಿಕೊಂಡು ಬಂದು ಇಂದ್ರನ ತಂದೆಯಾದ ಕಶ್ಯಪರ್ಷಿಯ ಆಶ್ರಮದಲ್ಲಿ ಒಂದೆಡೆಯಲ್ಲಿರಿಸಿ—ನೀವು ಇಲ್ಲಿರತಕ್ಕದು. ನಾನು ಬೇಗ ಬರುವೆನು ಎಂದು ಹೇಳಿ ಅಲ್ಲಿಂದ ಹೊರಟು ಶೀಘ್ರವಾಗಿ ಶೋಣಿತಪುರಕ್ಕೆ ಬಂದು ಮೊದಲು ಶುಕ್ರಾಚಾರ್ಯರನ್ನು ಕಂಡು ಅವರಿಂದ ಪೂಜಿತನಾಗಿ ಅವರನ್ನು ಸಂಗಡ ಕರೆದುಕೊಂಡು ಬಲಿಯ ಬಳಿಗೆ ಬರಲು ; ಆತನು ಇವರು ಒರುವುದನ್ನು ಕಂಡು ಸಿಂಹಾಸನದಿಂದ ಝಗ್ಗನೆದ್ದು ಎದುರಾಗಿ ಬಂದು ಬೃಹಸ್ಪತ್ಯಾಚಾರ್ಯರನ್ನು ವಂದಿಸಿ ಕೈಹಿಡಿದು ಕರೆದುಕೊಂಡು ಬಂದು ನವರತ್ನಖಚಿತವಾದ ಚಿನ್ನದ ಕಾಲ್ಮಣೆಯ ಮೇಲೆ ಕುಳ್ಳಿರಿಸಿ ಸಂತೋಷದಿಂದ ಕೂಡಿ ಷೋಡಶೋಪಚಾರಗಳಿಂದ ಪೂಜಿಸಿ ಕೈಮುಗಿದು ನಿಂತುಕೊಂಡು—ಸ್ವಾಮಿಾ, ಈ ದಿವಸ ತಾವು ನನ್ನ ಮನೆಗೆ ದಯಮಾಡಿಸಿದುದು ಬಡವನ ಮನೆಗೆ ಭಾಗ್ಯನಿಧಿಯು ಬಂದಂತಾಯಿತು. ಮಹಾತ್ಮರಾದ ತಮ್ಮ ಆಗಮನದಿಂದಲೂ ಪುಣ್ಯದಾಯಕವಾದ ತಮ್ಮ ದರ್ಶನದಿಂದಲೂ ನಾನು ಧನ್ಯನಾದೆನು, ಮತ್ತು ಕೃತಕೃತ್ಯನಾದೆನು. ನನ್ನ ಕುಲಕೋಟಿಯೆಲ್ಲಾ ಪಾವನವಾಯಿತು ಎಂದು ವಿವಿಧವಾಗಿ ಕೊಂಡಾಡಿದನು. ಅನಂತರದಲ್ಲಿ ಬೃಹಸ್ಪತ್ಯಾಚಾರ್ಯನು ಬಲಿಯನ್ನು ಕುರಿತು—ಎಲೈ ದೈತ್ಯರಾಜೇಂದ್ರನೇ, ನಿನ್ನ ಸುಗುಣಗಳಿಗೂ ನಿನ್ನ ಸತ್ಕಾರಕ್ಕೂ ನಾನು ಸಂತುಷ್ಟನಾದೆನು. ಇಂದ್ರನು ನೀತಿಸಂಪನ್ನನಾದ ನಿನ್ನ ಸಾಮೋಕ್ತಿಗಳಿಗೆ ವಿಶೇಷವಾಗಿ ಸಂತೋಷಪಟ್ಟು ತನ್ನ ಹೆಂಡತಿಯಾದ ಶಚೀದೇವಿಯನ್ನೂ ಪುತ್ರನಾದ ಜಯಂತನನ್ನೂ ಜತೆಯಲ್ಲಿ ಕರೆದುಕೊಂಡು ಇಂದ್ರಪದವಿಗೆ ಉಚಿತವಾದ ಸಕಲೈಶ್ವರ್ಯವನ್ನೂ ನಿನಗೋಸ್ಕರ ಬಿಟ್ಟು ಹೊರಟು ಈ ಸಂಗತಿಯನ್ನು ನಿನಗೆ ತಿಳಿಸುವಂತೆ ನನ್ನನ್ನು ಇಲ್ಲಿಗೆ ಕಳುಹಿಸಿ ಹೋದನು ಎಂದು ಹೇಳಿದನು. ಆ ಮಾತುಗಳನ್ನು ಕೇಳಿ ದೈತ್ಯರಾಜನಾದ ಬಲಿಯು ಸಂತುಷ್ಟನಾಗಿ ಸಕಲದೈತ್ಯಬಲದೊಡನೆ ಕೂಡಿ ಗುರುಶುಕ್ರರನ್ನೂ ಸಂಗಡ ಕರೆದುಕೊಂಡು ಅತಿಸಂಭ್ರಮದಿಂದ ಅಮರಾವತಿಗೆ ಬಂದನು.

ಅನಂತರದಲ್ಲಿ ಬೃಹಸ್ಪತ್ಯಾಚಾರ್ಯರು ಅಗ್ನಿಯೇ ಮೊದಲಾದ ದಿಗೀಶರನ್ನೂ ವಸುಗಳು ಮರುತ್ತುಗಳು ಆದಿತ್ಯರು ಇವರೇ ಮೊದಲಾದ ಸರ್ವ ದೇವತೆಗಳನ್ನೂ ಯಕ್ಷ ಕಿನ್ನರ ಕಿಂಪುರುಷ ಗರುಡ ಗಂಧರ್ವ ಅಪ್ಸರೋರಗರೇ ಮುಂತಾದವರನ್ನೂ ಕರಿಸಿ ಸುಮುಹೂರ್ತದಲ್ಲಿ ಸುಧರ್ಮಾನಾಮಕವಾದ ಮಹಾ ಸಭೆಯಲ್ಲಿ ಪರಿಶೋಭಿಸುತ್ತಿರುವ ದಿವ್ಯಸಿಂಹಾಸನಾಗ್ರದಲ್ಲಿ ಬಲಿಯನ್ನು ಕುಳ್ಳಿರಿಸಿ ತ್ರಿಲೋಕಾಧಿಪತ್ಯೋಚಿತವಾದ ಪಟ್ಟಾಭಿಷೇಕವನ್ನು ಮಾಡಿ ಬಲೀಂದ್ರನೆಂದೂ ಹೆಸರುಕೊಟ್ಟು ಆಶೀರ್ವಾದವನ್ನು ಮಾಡಿದನು. ಆ ಬಳಿಕ ಸರ್ವರೂ ಬಂದು ಬಲಿಚಕ್ರವರ್ತಿಗೆ ಕೈಗಾಣಿಕೆಗಳನ್ನು ಕೊಟ್ಟು ಕಾಣಿಸಿಕೊಂಡರು. ಆಗ ತ್ರಿಭುವನಾಧಿಪತ್ಯಾತಿಸಂತುಷ್ಟನಾದ ಬಲೀಂದ್ರನು ವಶಿಷ್ಠಾದಿ ಬ್ರಹ್ಮರ್ಷಿಗಳಿಗೂ ನಾರದಾದಿ ದೇವರ್ಷಿಗಳಿಗೂ ರಾಜರ್ಷಿಗಳಿಗೂ ಸಮಸ್ತ ದಿಕ್ಪಾಲಕರೇ ಮೊದಲಾದವರಿಗೂ ಯಥಾಯೋಗ್ಯವಾಗಿ ದಿವ್ಯಭೋಜನ ಧನಕನಕವಸ್ತ್ರಾಭರಣ ಗಂಧಮಾಲ್ಯಾದಿಗಳಿಂದ ಸತ್ಕಾರವನ್ನು ಮಾಡಿಸಿ ಸಂತೋಷಪಡಿಸಿ ಸರ್ವಸಮ್ಮತಿಯಿಂದ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳ

ಲ್ಲಿಯೂ ಎಳ್ಳಷ್ಟಾದರೂ ಅಧರ್ಮವು ನಡೆಯದಂತೆಯೂ ಧರ್ಮವು ನಾಲ್ಕು ಕಾಲುಗಳನ್ನೂರಿ ನಿರರ್ಗಳವಾಗಿ ಸಂಚರಿಸುವಂತೆಯೂ ಸರ್ವರೂ ವಿಷ್ಣುವಿನಲ್ಲಿ ಅಚಂಚಲಭಕ್ತಿಯುಳ್ಳವರಾಗಿ ವಿಷ್ಣುವನ್ನು ಪೂಜಿಸಿ ಸೇವಿಸುತ್ತ ಇರುವಂತೆಯೂ ಕಟ್ಟುಮಾಡಿಸಿ ಸುಖದಿಂದ ತ್ರಿಲೋಕಾಧಿಪತ್ಯವನ್ನು ಮಾಡುತ್ತ ಬಂದನು. ಆ ಮಹಾತ್ಮನಾದ ಬಲಿಚಕ್ರವರ್ತಿಯು ಸತ್ಯದಿಂದ ರಾಜ್ಯಭಾರವನ್ನು ಮಾಡುತ್ತಿರುವಲ್ಲಿ ಮೂರುಲೋಕಗಳಲ್ಲಿಯೂ ಸಂತತಿ ಸಂಪತ್ತುಗಳು ಪೂರ್ಣಚಂದ್ರೋದಯಕಾಲದ ಸಾಗರದಂತೆ ಹೆಚ್ಚಿದುವು. ಭೂಮಿಯಲ್ಲಿ ಬೆಳೆಯು ಹೆಚ್ಚಾಗಿ ಬೆಳೆದು ದೇಶದಲ್ಲಿ ಸಂಪೂರ್ಣ ಧಾನ್ಯ ಸಮೃದ್ಧಿಯುಂಟಾಯಿತು. ಕಾರ್ಮುಗಿಲುಗಳು ಸ್ವಲ್ಪವಾದರೂ ಕಾಲವನ್ನತಿಕ್ರಮಿಸದೆ ಸುವೃಷ್ಟಿಯನ್ನು ಕರೆಯುತ್ತ ಬಂದುವು. ಬಲೀಂದ್ರರಾಜ್ಯದಲ್ಲಿ ಬಡತನದ ಹುಟ್ಟೇ ಹಾಳಾಯಿತು. ಸರ್ವಪ್ರಜೆಗಳೂ ಧರ್ಮವನ್ನು ಮೀರದೆ ನಡೆದುಕೊಂಡು ಹರಿಭಕ್ತಿಪರಾಯಣರಾಗಿ ಸುಖದಿಂದಿದ್ದರು.

ಹೀಗಿರಲು ಒಂದಾನೊಂದು ದಿವಸ ಬೃಹಸ್ಪತ್ಯಾಚಾರ್ಯರು ರಹಸ್ಯವಾಗಿ ಬಲಿಚಕ್ರವರ್ತಿಯ ಬಳಿಗೆ ಬಂದು ಆತನಿಂದ ಪೂಜಿತರಾಗಿ ದಿವ್ಯಪೀಠದಲ್ಲಿ ಕುಳಿತುಕೊಂಡು ಆತನನ್ನು ಕುರಿತು—ನೀನು ಸ್ವಲ್ಪವಾದರೂ ಧರ್ಮಮಾರ್ಗವನ್ನತಿಕ್ರಮಿಸದೆ ತ್ರಿಲೋಕಾಧಿಪತ್ಯವನ್ನು ಮಾಡುತ್ತ ಬರುತ್ತಿರುವುದನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ನೀನು ಇನ್ನು ಮೇಲೆ ಮಹಾತ್ಮರಾದ ಶುಕ್ರಾಚಾರ್ಯರನ್ನು ಇಟ್ಟುಕೊಂಡು ಅವರ ಆಜ್ಞಾನುಸಾರವಾಗಿ ನಡೆದುಕೊಳ್ಳುತ್ತ ಸುಖದಿಂದ ಬಾಳುವವನಾಗು. ಈಗ ನೀನು ಅಪ್ಪಣೆಯನ್ನು ಕೊಟ್ಟರೆ ನಾನು ತಪಸ್ಸುಮಾಡುವುದಕ್ಕಾಗಿ ತಪೋವನವನ್ನು ಕುರಿತು ಹೋಗುವೆನು ಎಂದು ಹೇಳಿದನು. ಆ ಮಾತುಗಳನ್ನು ಕೇಳಿ ಬಲಿಚಕ್ರವರ್ತಿಯು ತುಂಬಿದ ವ್ಯಾಕುಲದಿಂದ ಬಹಳ ಖಿನ್ನನಾಗಿ ಬೃಹಸ್ಪತ್ಯಾಚಾರ್ಯರನ್ನು ಕುರಿತು—ಎಲೈ ಮಹಾತ್ಮರಾದ ಸುರರಾಜರುಗಳೇ, ಶುಕ್ರಾಚಾರ್ಯರು ದೈತ್ಯರಿಗೆ ಗುರುಗಳೇ ಹೊರತು ಈ ಇಂದ್ರಪದವಿಗೆ ಗುರುಗಳಲ್ಲ. ಈ ಪದವಿಗೆ ಬಂದವರಿಗೆ ಪೂಜ್ಯರಾದ ನೀವೇ ಗುರುಗಳಾಗಿ ಸದ್ಧರ್ಮಗಳನ್ನು ಬೋಧಿಸುತ್ತ ಸಮೀಪದಲ್ಲೇ ಇರಬೇಕು. ಅದುಕಾರಣ ಈಗ ತಾವು ತಪಶ್ಚರಣೆಗೆ ಹೋಗುವುದು ಹೇಗಾದೀತು? ಬ್ರಹ್ಮಾದಿ ಸರ್ವದೇವತೆಗಳೂ ಮಹಾವಿಷ್ಣುವಿನಿಂದ ನೇಮಿಸಲ್ಪಟ್ಟು ತಮ್ಮ ತಮ್ಮ ಅಧಿಕಾರವನ್ನು ಬಿಟ್ಟು ಹೋಗುವುದಕ್ಕೆ ಹೇಗೆ ಶಕ್ತರಲ್ಲವೋ ಹಾಗೆಯೇ ಮಹಾವಿಷ್ಣುವು ನಿಮಗೆ ಸುರಗುರುತ್ವದ ಪದವಿಯನ್ನು ಕೊಟ್ಟಿರುವುದರಿಂದ ನೀವೂ ಇದನ್ನು ಬಿಟ್ಟುಹೋಗಕೂಡದು ಎಂದು ಹೇಳಿದನು. ಅದಕ್ಕೆ ಬೃಹಸ್ಪತ್ಯಾಚಾರ್ಯರು ಬಲಿಚಕ್ರವರ್ತಿಯನ್ನು ಕುರಿತು—ಅಯ್ಯಾ ನೀತಿವಿಶಾರದನಾದ ಬಲೀಂದ್ರನೇ, ನೀನು ಹೇಳಿದ ಮಾತು ಯುಕ್ತವಾದುದೇ ಸರಿ. ಆದರೆ ಈ ಭಾಗದಲ್ಲಿ ಅನಿವಾರ್ಯವಾದ ಒಂದು ಕುಂದಕವಿರುವುದು. ಅದಾವುದೆಂದರೆ, ನೀನು ಪ್ರಥಮದಲ್ಲಿ ಮಹಾವಿಷ್ಣುವಿನಿಂದ ನಿಯಮಿಸಲ್ಪಟ್ಟು ಈ ಇಂದ್ರಪದವಿಯನ್ನು ಅನುಭವಿಸುತ್ತಿರುವವನಲ್ಲ. ನಿನ್ನ ತಪಸ್ಸಿನಿಂದ ಪಡೆದ ವರಬಲದಿಂದಲೂ ಧರ್ಮದಿಂದಲೂ ಸದ್ಗುಣಗಳಿಂದಲೂ ಈ ಪದವಿಯನ್ನು

ಅನುಭವಿಸುತ್ತಿರುವಿ. ಆದುದರಿಂದ ಮೊದಲೇ ವಿಷ್ಣುವಿನಿಂದ ಈ ಪದವಿಯಲ್ಲಿ ನಿಯಮಿತನಾಗಿ ಇದನ್ನು ಅನುಭವಿಸುತ್ತಿದ್ದ ಇಂದ್ರನು ತಪಸ್ಸಿಗೆ ಹೋದ ಮೇಲೆ ಆತನಿಗೆ ಗುರುವಾದ ನಾನೂ ತಪಸ್ಸಿಗೆ ಹೋಗತಕ್ಕದು ಯುಕ್ತವಾಗಿಯೂ ನಿರ್ವಿವಾದವಾಗಿಯೂ ಇದೆ. ಅದು ಕಾರಣ ಪರಮ ವಿವೇಕಿಯಾದ ನೀನು ಈ ಭಾಗದಲ್ಲಿ ಸ್ವಲ್ಪವಾದರೂ ಚಿಂತಿಸದೆ ನನಗೆ ಅನುಜ್ಞೆ ಮಾಡಬೇಕೆಂದು ಹೇಳಿ ವಿವಿಧವಾದ ನೀತಿಗಳಿಂದ ಒಡಂಬಡಿಸಿ ಆತನಿಂದ ಅಪ್ಪಣೆಯನ್ನು ಹೊಂದಿ ಅಲ್ಲಿಂದ ಹೊರಟು ಶೀಘ್ರವಾಗಿ ಕಶ್ಯಪರ ಆಶ್ರಮಕ್ಕೆ ಬಂದು ಮೊದಲು ಅವರ ಸಹಧರ್ಮಿಣಿಯಾದ ಅದಿತಿದೇವಿಯನ್ನು ಕಂಡು ಆಕೆಯೊಡನೆ ಈ ಸಂಗತಿಗಳನ್ನೆಲ್ಲಾ ಆದ್ಯಂತವಾಗಿ ತಿಳಿಸಲು ; ಆಗ ಆಕೆಯು ಮಹಾದುಃಖಾಕ್ರಾಂತೆಯಾಗಿ ಬೃಹಸ್ಪತ್ಯಾಚಾರ್ಯರನ್ನು ಕುರಿತು—ಎಲೈ ಬೃಹಸ್ಪತಿಯೇ, ನೀನು ನನ್ನ ಮಗನಾದ ಇಂದ್ರನಿಗೆ ಅಹೋರಾತ್ರಿಗಳಲ್ಲೂ ಹಿತಾಪೇಕ್ಷಿಯಾದ ಗುರುವಾಗಿದ್ದು ಅವನು ತ್ರಿಲೋಕಾಧಿಪತ್ಯವನ್ನು ಕಳೆದುಕೊಂಡು ಹೀಗೆ ಮಹಾಕಷ್ಟ ವ್ಯಥೆಗಳನ್ನನುಭವಿಸುತ್ತ ಇರುವುದು ನಿನಗೆ ಸಮ್ಮತವೇ ? ಮತ್ತು ಮಾನವೇ ? ಮುಂದೆ ಈ ವಿಷಯದಲ್ಲಿ ಯಾವ ಯೋಚನೆಯನ್ನು ಮಾಡಬೇಕು ? ನೀನು ಯೋಚಿಸಿ ನನಗೆ ಹೇಳಿದರೆ ನಾನು ಅದೇ ಮೇರೆಗೆ ನಡೆಯುವೆನು. ಪುತ್ರಶ್ರೇಯಶ್ಚಿಂತನೆಗಿಂತಲೂ ನನಗೆ ಬೇರೆ ಕಾರ್ಯವಾವುದಿರುವುದು ? ಎಂದು ಹೇಳಲು ; ಆಗ ಬೃಹಸ್ಪತ್ಯಾಚಾರ್ಯರು ಯೋಚಿಸಿ ಮುಂದೆ ಮಾಡಬೇಕಾದ ಕಾರ್ಯದ ವಿಷಯವಾಗಿ ಆಕೆಯ ಕಿವಿಯಲ್ಲಿ ಹೇಳಿ—ಇಂದ್ರ ಶಚಿ ಜಯಂತ ಇವರೊಡನೆ ಕೂಡಿ ನಾನು ನಿಮ್ಮ ಆಶ್ರಮದಲ್ಲಿ ಇಂಥ ಕಡೆ ಇರುವೆನೆಂದು ಸೂಚಿಸಿ ಆಕೆಯ ಅಪ್ಪಣೆಯನ್ನು ತೆಗೆದುಕೊಂಡು ಆ ಸ್ಥಳದಿಂದ ಹೊರಟು ಇಂದ್ರನ ಬಳಿಗೆ ಬಂದು ಆತನಿಗೆ ವೈಷ್ಣವಮಂತ್ರವನ್ನು ಉಪದೇಶಿಸಿ ಸರ್ವಕಾಲದಲ್ಲೂ ಸದ್ಭಕ್ತಿಯಿಂದ ಕೂಡಿ ವಿಷ್ಣುವನ್ನು ಭಜಿಸುತ್ತಿರುವಂತೆ ನೇಮಿಸಿ ತಾನೂ ವಿಷ್ಣುಧ್ಯಾನಪರಾಯಣನಾಗಿರುತ್ತಿದ್ದನು.

ಇತ್ತಲಾ ಅದಿತಿದೇವಿಯು ಮಹಾವ್ಯಥಾದುಃಖಾಕ್ರಾಂತಳಾಗಿ ಆ ಸ್ಥಳದಿಂದ ಹೊರಟು ಪ್ರಾತರಾಹ್ನಿಕಗಳನ್ನು ನೆರವೇರಿಸಿಕೊಂಡು ಸುಖಾಸೀನನಾಗಿರುವ ನಿಜಪತಿಯಾದ ಕಶ್ಯಪ ಪ್ರಜಾಪತಿಯ ಬಳಿಗೆ ಶೀಘ್ರದಿಂದ ಬಂದು ರೋದಿಸುತ್ತ ಅವನ ಪಾದಗಳ ಮೇಲೆ ಬಿದ್ದು ಧಾರಾಕಾರವಾಗಿ ಹರಿಯುತ್ತಿರುವ ತನ್ನ ಕಣ್ಣೀರುಗಳಿಂದ ಅವನ ಅಡಿದಾವರೆಗಳನ್ನು ತೊಳೆದು ಹಾಗೇ ದುಃಖಿಸುತ್ತಿರಲು ; ಅದನ್ನು ನೋಡಿ ಕಶ್ಯಪರು ದಯಾರ್ದ್ರಹೃದಯರಾಗಿ—ಎಲೈ ಪ್ರಾಣವಲ್ಲಭೆಯೇ, ನಿನಗೆ ಈ ಪ್ರಕಾರವಾದ ಅಪಾರದುಃಖವು ಸಂಭವಿಸುವುದಕ್ಕೆ ಕಾರಣವೇನು ? ಹೇಳು. ನಾನು ಅದನ್ನು ಹೇಗಾದರೂ ಪರಿಹರಿಸಿಕೊಡುವೆನು ಎಂದು ಹೇಳಲು ; ಆಗ ಅದಿತಿದೇವಿಯು ಎದ್ದು ಕೈಮುಗಿದು ನಿಂತುಕೊಂಡು—ಎಲೈ ಮಹಾತ್ಮನಾದ ಪ್ರಾಣಪ್ರಿಯನೇ, ಆಪದ್ರಕ್ಷಕನೇ, ಶರಣಾಗತಳಾದ ನನಗೆ ನಿನ್ನ ಚರಣಕಮಲಗಳೇ ಗತಿಯಲ್ಲದೆ ಅನ್ಯಥಾ ಗತಿಯಿಲ್ಲವು. ಈಗ ನನ್ನ ಮಗನ ಇಂದ್ರಪದವಿಯನ್ನು ಬಲಿಯೆಂಬ ದೈತ್ಯನು ಬಲಾತ್ಕಾರದಿಂದ ಕಿತ್ತುಕೊಂಡುದರಿಂದ ಅವನು ನನ್ನ ಸೊಸೆಯಾದ ಶಚಿಯನ್ನೂ

ನನ್ನ ಮೊಮ್ಮಗನಾದ ಜಯಂತನನ್ನೂ ಕೈಹಿಡಿದು ಕರೆದುಕೊಂಡು ಮಹಾದುಃಖ ವ್ಯಥೆಗಳಿಂದ ಕೂಡಿದವನಾಗಿ ಅಪಾರವಾದ ಕಷ್ಟವನ್ನನುಭವಿಸುತ್ತ ಅನಾಥನ ಹಾಗೆ ಸ್ವರ್ಗವನ್ನು ಬಿಟ್ಟು ಹೊರಟು ಎಲ್ಲೋ ಹೋದನು. ಮಹಾವಿಷ್ಣುವಿನಿಂದ ನಿಯಮಿತವಾದ ನಿನ್ನ ಮಗನ ಇಂದ್ರಪದವಿಯು ಅನ್ಯಾಕ್ರಾಂತವಾದ ಮೇಲೆ ಈ ಜಗತ್ತಿನಲ್ಲಿ ಇನ್ನಾವುದು ತಾನೆ ನೆಲೆಯಾಗಿ ನಿಲ್ಲುವುದೆಂದು ನಂಬಬಹುದು ? ನೀನು ಸರ್ವಜ್ಞನು. ನೀನು ತಿಳಿಯದೆ ಇರುವುದು ಮೂರು ಲೋಕಗಳಲ್ಲಿ ಯಾವುದುಂಟು ? ಎಂದು ಹೇಳಿ ತಿರಿಗಿ ಗಂಡನ ಕಾಲುಗಳ ಮೇಲೆ ಬಿದ್ದು ದುಃಖಿಸುತ್ತ ಹೊರಳುತ್ತಿರಲು ; ಆಗ ಕಶ್ಯಪನು—ಎಲೈ ಪ್ರಾಣಪ್ರಿಯೆಯಾದ ಅದಿತಿಯೇ, ನೀನು ಇದಕ್ಕಾಗಿ ಭಯಪಡಬೇಡ. ನಿನ್ನ ಮಗನಿಗೆ ಇಂದ್ರ ಪದವಿಯು ಯಥಾಪ್ರಕಾರವಾಗಿ ಉಂಟಾಗುವಂತೆ ಮಾಡುವೆನು ಎಂದು ಹೇಳಿ ಆಕೆಗೆ ಅಭಯವನ್ನು ಕೊಟ್ಟು ಆಕೆಯನ್ನೂ ಜೊತೆಯಲ್ಲಿ ಕರೆದುಕೊಂಡು ಅಲ್ಲಿಂದ ಹೊರಟು ಸಿದ್ಧಾಶ್ರಮವೆಂಬ ಒಂದು ಪುಣ್ಯಾಶ್ರಮಕ್ಕೆ ಬಂದು ಅಲ್ಲಿ ತಾನು ಶುಚಿರ್ಭೂತನಾಗಿ ಮಹಾವಿಷ್ಣುವನ್ನು ಕುರಿತು ಅನೇಕ ಸಹಸ್ರ ಸಂವತ್ಸರಗಳ ವರೆಗೂ ಏಕಾಗ್ರಚಿತ್ತದಿಂದ ಕೂಡಿ ತಪಸ್ಸನ್ನು ಮಾಡುತ್ತ ಇದ್ದನು. ಆ ಕಾಲದಲ್ಲಿ ಅದಿತಿದೇವಿಯು ಶುಚಿರ್ಭೂತಳಾಗಿ ನಿರಂತರದಲ್ಲೂ ಪತಿಶುಶ್ರೂಷೆಯನ್ನು ಮಾಡಿಕೊಂಡಿರುತ್ತಿದ್ದಳು.

ಹೀಗಿರುತ್ತಿರಲು ಕ್ಷೀರಸಮುದ್ರದಲ್ಲಿ ಶೇಷಶಾಯಿಯಾದ ಮಹಾವಿಷ್ಣುವು ತನ್ನ ಪ್ರಾಣಪ್ರಿಯೆಯಾದ ಲಕ್ಷ್ಮೀದೇವಿಯನ್ನು ಕುರಿತು—ಎಲೈ ದೇವಿಯೇ, ನನಗೆ ಪರಮಭಕ್ತನಾದ ಬಲೀಂದ್ರನು ನನ್ನಿಂದ ಶಚೀಪತಿಗೆ ನಿಯಮಿತವಾದ ಸ್ವರ್ಗಾಧಿಪತ್ಯವನ್ನು ಕಿತ್ತುಕೊಂಡು ಆತನನ್ನು ಸ್ವರ್ಗಲೋಕದಿಂದ ಓಡಿಸಿದ್ದಾನೆ. ಅದುಕಾರಣ ಆ ಇಂದ್ರನ ತಂದೆಯಾದ ಕಶ್ಯಪನು ತಿರಿಗಿ ಬಲಿಯಿಂದ ಸ್ವರ್ಗಾಧಿಪತ್ಯವನ್ನು ಕಿತ್ತುಕೊಂಡು ತನ್ನ ಮಗನಿಗೆ ಕೊಡಿಸುವುದಕ್ಕೋಸ್ಕರ ನನ್ನನ್ನು ಕುರಿತು ಮಹಾ ನಿಯಮದಿಂದ ಉಗ್ರ ತಪಸ್ಸನ್ನು ಮಾಡುತ್ತಿದ್ದಾನೆ. ಈಗ ಇಂಥ ಅನಿವಾರ್ಯಕಾರ್ಯವು ಸಂಘಟಿಸಿದೆ. ಇದಕ್ಕೆ ಏನುಪಾಯವನ್ನು ಮಾಡಬೇಕು ಎಂದು ಕೇಳಲು ; ಆಗ ಮಹಾಲಕ್ಷ್ಮಿಯು ಸ್ವಲ್ಪ ಯೋಚಿಸಿ—ಎಲೈ ಪ್ರಾಣವಲ್ಲಭನೇ, ನೀನು ಮಹಾ ಮಾಯಾವಂತನು ! ಏನೂ ಅರಿಯದವನ ಹಾಗೆ ಈ ರೀತಿಯಾಗಿ ನನ್ನನ್ನು ಕೇಳುತ್ತಿರುವಿ ! ಸರ್ವಜ್ಞನಾದ ನೀನರಿಯದಿರುವ ತಂತ್ರೋಪಾಯಗಳನ್ನು ಯಾರಾದರೂ ಬಲ್ಲರೇ ? ಸರ್ವಶಕ್ತನಾದ ನೀನು ನೆಂಟು ರತ್ನ ಇವೆರಡೂ ಉಳಿಯುವ ಹಾಗೆ ಮಾಡಿ ನಿನ್ನ ಅಪ್ರತಿಹತವಾದ ಆಜ್ಞೆಗೆ ಭಂಗವುಂಟಾಗದಂತೆ ನಡೆ ಎಂದು ಹೇಳಿದಳು. ಮಹಾವಿಷ್ಣುವು ಆ ಮಾತುಗಳನ್ನು ಕೇಳಿ ಮಂದಸ್ಮಿತ ಮನೋಹರವದನನಾಗಿ ಕೂಡಲೆ ಗರುಡಾರೂಢನಾಗಿ ಹೊರಟು ಕಶ್ಯಪಮುನಿಯ ಬಳಿಗೆ ಬಂದು—ಎಲೈ ಮಹಾತ್ಮನಾದ ಮುನಿಯೇ, ಏಕೆ ನನ್ನನ್ನು ಕುರಿತು ತಪಸ್ಸು ಮಾಡುತ್ತಿರುವಿ ? ನನ್ನಿಂದ ನಿನಗೆ ಆಗಬೇಕಾದ ಕಾರ್ಯವಾವುದು ? ಅದನ್ನು ಬೇಗ ಹೇಳು. ಸಂತೋಷದಿಂದ ನಡಿಸಿಕೊಡುವೆನು ಎಂದು ಹೇಳಿದನು.

ಆ ಮಾತುಗಳನ್ನು ಕೇಳಿ ಕಶ್ಯಪಮುನಿಯು ಸಂತೋಷಯುಕ್ತನಾಗಿ ಮಹಾವಿಷ್ಣುವಿಗೆ ದೀರ್ಘದಂಡನಮಸ್ಕಾರವನ್ನು ಮಾಡಿ ಎದ್ದು ನಿಂತು—ಮಹಾತ್ಮನಾದ

ನೀನು ಅದಿತಿಯ ಗರ್ಭಸಂಭೂತನಾಗಿ ಇಂದ್ರನೊಡನೆ ಸಹೋದರತ್ವವನ್ನು ಹೊಂದಿ ಉಪೇಂದ್ರನೆನ್ನಿಸಿಕೊಂಡು ಪ್ರಸಿದ್ಧನಾಗಿರುವಿ. ಹೀಗಿರುವಲ್ಲಿ ಬಲಿಚಕ್ರವರ್ತಿಯು ಕಿತ್ತುಕೊಂಡಿರುವ ಇಂದ್ರಪದವಿಯನ್ನು ತಿರಿಗಿ ಆತನಿಂದ ತೆಗೆದು ನಿನ್ನ ಪ್ರಿಯಸಹೋದರನಾದ ಇಂದ್ರನಿಗೆ ಕೊಟ್ಟು ನಿನ್ನ ಅಪ್ಪಣೆಯು ನೆಲೆಯಾಗಿ ನಿಲ್ಲುವ ಹಾಗೆ ಮಾಡಿಕೊಳ್ಳುವವನಾಗು ಎಂದು ನಾನು ವಿಶೇಷವಾಗಿ ಹೇಳಿಕೊಳ್ಳಬೇಕೇ ? ಈ ಕಾರ್ಯವು ನಿನ್ನದಲ್ಲವೇ ? ಎಂದು ಬಹುತರವಾಗಿ ಬೇಡಿಕೊಂಡನು. ಆಗ ಮಹಾವಿಷ್ಣುವು ಆತನಿಗೆ ಒಳ್ಳೆಯದೆಂದು ಅಭಯವನ್ನು ಕೊಟ್ಟು ಅಂತರ್ಧಾನನಾಗಿ ಕೂಡಲೆ ಅದಿತಿದೇವಿಯ ಗರ್ಭವನ್ನು ಹೊಕ್ಕನು. ಅನಂತರದಲ್ಲಿ ಅವನು ವಾಮನನಾಗಿ ಹುಟ್ಟಲು; ಕಶ್ಯಪನು ಮಹಾಸಂತೋಷದಿಂದ ಕೂಡಿದವನಾಗಿ ಅವನಿಗೆ ಶಾಸ್ತ್ರೋಕ್ತವಿಧ್ಯನುಸಾರವಾಗಿ ಕ್ರಮದಿಂದ ಜಾತಕರ್ಮ ನಾಮಕರಣ ಉಪನಯನಾದಿಗಳನ್ನು ಮಾಡಿ ಆ ಮೇಲೆ ಅವನನ್ನು ಕುರಿತು—ಎಲೈ ಪುತ್ರನೇ, ನೀನು ಇನ್ನು ಮೇಲೆ ಮಾಡಬೇಕಾದ ಕಾರ್ಯವನ್ನು ನೆರವೇರಿಸು ಎಂದು ಹೇಳಲು; ಆಗ ವಾಮನನು ಮೌಂಜಿಯ ಉಡಿದಾರವನ್ನೂ ದಂಡಕೃಷ್ಣಾಜಿನಗಳನ್ನೂ ಧರಿಸಿ ಶ್ವೇತವಸ್ತ್ರದ್ವಯವನ್ನು ತೆಗೆದುಕೊಂಡು ಒಂದನ್ನುಟ್ಟು ಇನ್ನೊಂದನ್ನು ಹೊದೆದುಕೊಂಡು ಒಂದು ಚಿಕ್ಕಗಿಂಡಿಯನ್ನು ಕೈಯಲ್ಲಿ ಹಿಡಿದುಕೊಂಡು ಒಂದು ಗಜದ ಪ್ರಮಾಣವಾದ ಎತ್ತರವುಳ್ಳ ದೇಹವುಳ್ಳವನಾಗಿ ತಂದೆತಾಯಿಗಳಿಗೆ ಸಮಸ್ಕರಿಸಿ ಅಲ್ಲಿಂದ ಬಲೀಂದ್ರನ ಬಳಿಗೆ ಹೋಗುವುದಕ್ಕೆ ಹೊರಟನು.

ಅಷ್ಟರಲ್ಲಿ ಬಲಿಚಕ್ರವರ್ತಿಯು ತನ್ನ ಗುರುಗಳಾದ ಶುಕ್ರಾಚಾರ್ಯರನ್ನು ವರಿಸಿ ವೈಷ್ಣವಯಾಗವನ್ನು ಮಾಡುತ್ತ ಹೋಮಾದಿನಿತ್ಯಕರ್ಮಗಳನ್ನು ನೆರವೇರಿಸಿ ಯಜ್ಞಶಾಲೆಯಲ್ಲಿ ಮಹಾಮುನಿಗಳೊಡನೆ ಕುಳಿತು ವಿಷ್ಣುಚರಿತ್ರೆಗಳನ್ನು ಕೇಳುತ್ತ ಭಯಭಕ್ತಿಯಿಂದ ಕೂಡಿದ ಹೃದಯದಲ್ಲಿ ವಿಷ್ಣುವನ್ನು ಸಂಭಾವಿಸುತ್ತ ಸತ್ಕಾಲಕ್ಷೇಪವನ್ನು ಮಾಡುತ್ತಿದ್ದನು ಆ ಸಮಯದಲ್ಲಿ ಈ ವಾಮನನು ಅಲ್ಲಿಗೆ ಹೋಗಲು; ಬಲೀಂದ್ರನು ಆತನ ಅಮಾನುಷತೇಜಸ್ಸನ್ನು ನೋಡಿ ಭಯದಿಂದ ಝುಗ್ಗನೆದ್ದು ಬಂದು ಸಾಷ್ಟಾಂಗನಮಸ್ಕಾರವನ್ನು ಮಾಡಿ ಕರೆದುಕೊಂಡು ಬಂದು ಒಂದು ಮಣೆಯ ಮೇಲೆ ಕುಳ್ಳಿರಿಸಿ ವಿಧಿವತ್ತಾಗಿ ಸತ್ಕಾರವನ್ನು ಮಾಡಿ ಕೈಮುಗಿದು ನಿಂತುಕೊಂಡು—ಎಲೈ ಮಹಾತ್ಮನೇ, ನಿನ್ನ ಬರುವಿಕೆಯು ಅಪೂರ್ವವು. ಮಹನೀಯನಾದ ನಿನ್ನ ಸಂದರ್ಶನದಿಂದ ನನ್ನ ಜನ್ಮವು ಸಾರ್ಥಕವಾಯಿತು. ಈ ನನ್ನ ಯಾಗವು ನಿರ್ವಿಘ್ನತೆಯಿಂದ ಸಂಪೂರ್ಣವಾಗಿ ಮುಗಿಯಿತು. ನಾನು ಕೃತಕೃತ್ಯನಾದೆನು ಎಂದು ಅನೇಕ ವಿಧವಾಗಿ ಸ್ತುತಿಸುತ್ತಿರಲು; ಆಗ ಶುಕ್ರಾಚಾರ್ಯನು ಬಂದು ಬಲೀಂದ್ರನ ಕಿವಿಯಲ್ಲಿ—ಈತನು ಮಹಾಮಾಯಿಯಾದ ವಿಷ್ಣುವು ಈ ವಾಮನರೂಪವನ್ನು ಧರಿಸಿ ಕಾರ್ಯಾಂತರಾಪೇಕ್ಷೆಯಿಂದ ನಿನ್ನ ಬಳಿಗೆ ಬಂದಿದ್ದಾನೆ. ಅಂದರೆ, ಈತನು ನಿನ್ನಿಂದ ಈ ತ್ರಿಲೋಕಾಧಿಪತ್ಯವನ್ನು ತೆಗೆದು ತಿರಿಗಿ ಅದನ್ನು ಇಂದ್ರನಿಗೆ ಕೊಡಬೇಕೆಂಬ ಉದ್ದೇಶದಿಂದ ಬಂದಿದ್ದಾನೆ. ಆದುಕಾರಣ ಇವನೇನನ್ನಾದರೂ ಕೇಳಿದರೆ ಕೊಡುತ್ತೇನೆಂದು ಹೇಳಬೇಡ ಎಂದು ಹೇಳಲು; ಆಗ ಬಲೀಂದ್ರನು ಆತನನ್ನು ಕುರಿತು—

ನೀವು ಅಹೋರಾತ್ರಿಗಳಲ್ಲೂ ನನಗೆ ಶ್ರೇಯಶ್ಚಿಂತಕರಾದ ಗುರುಗಳಾಗಿದ್ದುಕೊಂಡು ಈ ಸಮಯದಲ್ಲಿ ನನಗೆ ಇಂಥ ಮಾತುಗಳನ್ನು ಹೇಳಬಹುದೇ? ನನ್ನೊಡೆಯನಾದ ಮಹಾವಿಷ್ಣುವು ಪ್ರತ್ಯಕ್ಷನಾಗಿ ಬಂದು ನನ್ನನ್ನು ಕೇಳಿದರೆ ಈ ಅಶಾಶ್ವತವಾದ ತ್ರಿಲೋಕಾಧಿಪತ್ಯವು ಒಂದು ಮಾತ್ರವೇ ಅಲ್ಲ. ನನ್ನ ಪತ್ನೀಪುತ್ರ ಪ್ರಾಣಗಳನ್ನಾದರೂ ಸಂತೋಷದಿಂದ ಆತನ ಪಾದಗಳಿಗೆ ಒಪ್ಪಿಸಿಬಿಡುವೆನು. ಇದಕ್ಕಿಂತಲೂ ಸಂತೋಷಕರವಾದ ಕಾರ್ಯವು ಯಾವುದೂ ಇಲ್ಲವೆಂದು ನಾನು ನಿಶ್ಚಯವಾಗಿ ನಂಬಿದ್ದೇನೆ ಎಂದು ಹೇಳಿ ತಿರಿಗಿ ವಾಮನನನ್ನು ಕುರಿತು—ಎಲೈ ಮಹಾ ತೇಜಸ್ವಿಯಾದ ಬ್ರಹ್ಮಚಾರಿಯೇ. ಈಗ ಮಹಾತ್ಮನಾದ ನೀನು ಈ ನನ್ನ ಯಾಗಶಾಲೆಗೆ ಯಾವ ಅಪೇಕ್ಷೆಯಿಂದ ಬಂದಿರುವಿ? ನನ್ನ ಪ್ರಾಣಗಳೇ ಮೊದಲಾದ ಸಮಸ್ತವಸ್ತುಗಳೂ ನಿನ್ನ ಅಧೀನವಾಗಿರುವುವು. ನಿನಗೆ ಬೇಕಾದುದನ್ನು ಸಂತೋಷದಿಂದ ಕೇಳಬಹುದು ಎಂದನು. ಆಗ ವಾಮನನು—ಎಲೈ ಸುಗುಣಮಣಿಗಣಭೂಷಿತನಾದ ದೈತ್ಯಚಕ್ರೇಶ್ವರನೇ, ಬ್ರಹ್ಮಚರ್ಯಾಶ್ರಮದಲ್ಲಿದ್ದುಕೊಂಡು ಸದಾಕಾಲದಲ್ಲೂ ಬ್ರಹ್ಮದಲ್ಲಿ ಅನುರಕ್ತಿಯುಳ್ಳವನಾದ ನನಗೆ ನಿನ್ನ ಸಕಲವಿಧವಸ್ತುಗಳಿಂದ ಏನೂ ಪ್ರಯೋಜನವಿಲ್ಲ. ನಾನು ಇತರರ ಬಾಧೆಯಿಲ್ಲದಂತೆ ಸ್ವತಂತ್ರದಿಂದ ತಪಸ್ಸುಮಾಡಿಕೊಂಡಿರುವುದಕ್ಕೋಸ್ಕರ ಈ ನನ್ನ ಪುಟ್ಟ ಹೆಜ್ಜೆಗಳಲ್ಲಿ ಮೂರು ಹೆಜ್ಜೆಗಳಷ್ಟು ಭೂಮಿಯನ್ನು ಮಾತ್ರ ನನಗೆ ಧಾರೆಯೆರೆದುಕೊಟ್ಟರೆ ಸಾಕು. ಅದರಿಂದ ಸಂತೃಪ್ತನಾಗುವೆನು ಎಂದು ಹೇಳಿದನು. ಆಗ ಬಲೀಂದ್ರನು ಪರಮಸಂತೋಷದಿಂದ ಕೂಡಿದವನಾಗಿ ತನ್ನ ಹೆಂಡತಿಯನ್ನು ಕರೆದು ಗಿಂಡಿಯಲ್ಲಿ ನೀರನ್ನು ತೆಗೆದುಕೊಂಡು ಬಾ ಎಂದು ಹೇಳಿ ತರಿಸಿ ತನ್ನ ಕೈಯಲ್ಲಿ ಶ್ರೀತುಲಸೀದಳವನ್ನು ಹಿಡಿದುಕೊಂಡು ವಾಮನನ ಕೈಯ ಮೇಲೆ ತನ್ನ ಕೈಯನ್ನಿಟ್ಟು—ಇದೋ, ನಿನ್ನ ಅಡಿಯಲ್ಲಿ ಮೂರಡಿಯಷ್ಟು ಭೂಮಿಯನ್ನು ಸತ್ಯವಾಗಿ ಕೊಟ್ಟಿದ್ದೇನೆ ಎಂದು ಹೇಳಿ, ನೀರನ್ನು ಬಿಡು ಎಂದು ತನ್ನ ಹೆಂಡತಿಗೆ ಹೇಳಲು; ಆಕೆಯು ನೀರನ್ನು ಸುರಿಯುವುದಕ್ಕೆ ಪ್ರಯತ್ನಿಸಿದಾಗ ಶುಕ್ರಾಚಾರ್ಯನು ಆ ಗಿಂಡಿಯ ನೀರು ಬರುವ ದ್ವಾರದಲ್ಲಿ ಹೋಗಿ ಕುಳಿತುಕೊಂಡುದರಿಂದ ನೀರು ಬೀಳದೆ ಹೋಯಿತು. ವಾಮನನು ಅದನ್ನು ಕಂಡು—ಓಹೋ! ಈ ಗಿಂಡಿಯ ನೀರು ಹೊರಗೆ ಬರುವ ಕನ್ನದಲ್ಲಿ ಏನೋ ಕಸವು ಸಿಕ್ಕಿಕೊಂಡಿರಬೇಕೆಂದು ಹೇಳಿ ಒಂದು ದರ್ಭೆಯನ್ನು ತೆಗೆದುಕೊಂಡು ಅದರ ಕನ್ನದಲ್ಲಿ ಚುಚ್ಚಲು; ಆ ದರ್ಭಾಗ್ರವು ಶುಕ್ರಾಚಾರ್ಯನ ಕಣ್ಣಿಗೆ ತಗುಲಿದುದರಿಂದ ಆತನದೊಂದು ಕಣ್ಣು ಕುರುಡಾಯಿತು. ಅನಂತರದಲ್ಲಿ ಆತನು ಹೊರಟು ಹೊರಗೆ ಬಂದನು. ನೀರು ಸರಿಯಾಗಿ ಬಿದ್ದಿತು.

ಅನಂತರದಲ್ಲಿ ವಾಮನನು ತನ್ನ ಕುಬ್ಜರೂಪನ್ನು ಬಿಟ್ಟು ಮಹತ್ತರವಾದ ತ್ರಿವಿಕ್ರಮರೂಪನ್ನು ಧರಿಸಿ ಆಕಾಶಕ್ಕೂ ಭೂಮಿಗೂ ಒತ್ತುಕೊಟ್ಟ ಹಾಗೆ ಬೆಳೆದು ಒಂದು ಅಡಿಯಿಂದ ಭೂಲೋಕವನ್ನೆಲ್ಲಾ ಅಳೆದು ಮತ್ತೊಂದಡಿಯಿಂದ ಊರ್ಧ್ವಲೋಕವನ್ನೆಲ್ಲಾ ಅಳೆಯುವುದಕ್ಕೆ ತೊಡಗಿದಾಗ ಬ್ರಹ್ಮಾಂಡ ಕಟಾಹಕ್ಕೆ ಈತನ ಹೆಬ್ಬೆಟ್ಟಿನ ತುದಿಯುಗುರು ತಗುಲಿದುದರಿಂದ ನಿರ್ಮಲವಾದ ಗಗನ ಗಂಗೋದಕವು ಹೊರಟು

ಬಂದಿತು. ಆಗ ಚತುರ್ಮುಖಬ್ರಹ್ಮನು ಶೀಘ್ರವಾಗಿ ಬಂದು ಆ ಉದಕವನ್ನೆಲ್ಲಾ ತನ್ನ ಕಮಂಡಲದಲ್ಲಿ ತುಂಬಿಕೊಂಡು ಸಮಸ್ತರಾದ ದೇವತೆಗಳ ಮೇಲೂ ಮುನಿಗಳ ಮೇಲೂ ಪ್ರೋಕ್ಷಿಸಿ ಆ ಮೇಲೆ ತಾನೂ ಪ್ರೋಕ್ಷಿಸಿಕೊಂಡು ತರುವಾಯ ಮಿಕ್ಕ ಗಂಗಾಜಲವನ್ನು ಕಮಂಡಲದಲ್ಲೇ ತೆಗೆದುಕೊಂಡು ಹೋಗಿ ತನ್ನ ಮನೆಯಲ್ಲಿಟ್ಟು ಕೊಂಡನು. ಅನಂತರದಲ್ಲಿ ತ್ರಿವಿಕ್ರಮಮೂರ್ತಿಯು ಬಲಿಚಕ್ರವರ್ತಿಯನ್ನು ಕುರಿತು— ಎಲೈ ಔದಾರ್ಯಗುಣಮಣಿಹಾರನೇ, ದಾನಶೀಲನೇ, ಎರಡಡಿಗಳಷ್ಟು ಭೂಮಿಯು ಸಿಕ್ಕಿತು. ಇನ್ನೊಂದಡಿ ನೆಲವೆಲ್ಲಿರುವುದು ? ತೋರಿಸು ಎಂದು ಕೇಳಲು ; ಆಗ ಬಲೀಂದ್ರನು ವಾಮನನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ—ಎಲೈ ಸರ್ವಾಂತ ರ್ಯಾಮಿಯೇ, ಜಗನ್ನಾಥನೇ, ನಿನ್ನ ಇನ್ನೊಂದಡಿಗೆ ಸಾಕಾಗುವಷ್ಟು ಭೂಮಿ ಯನ್ನು ನಾನು ಇನ್ನೆಲ್ಲಿಂದ ತರಲಿ ? ಇದೋ, ಈ ನನ್ನ ಬೆನ್ನಿನ ಮೇಲಿಟ್ಟು ಇನ್ನೊಂ ದಡಿಯಷ್ಟು ನೆಲವನ್ನು ಅಳೆದುಕೋ ಎಂದು ಹೇಳಲು ; ಆಗ ವಾಮನನು ಸಮ್ಮತಿ ಪಟ್ಟು ತನ್ನ ಮಹಾಪಾದವನ್ನು ಆತನ ಬೆನ್ನಿನ ಮೇಲಿಟ್ಟು ಆತನನ್ನು ಮೆಟ್ಟಿದನು. ಅಲ್ಲಿ ಅಷ್ಟು ಹೊತ್ತಿಗೆ ಭಗವದಾಜ್ಞೆಯಿಂದ ವಿಶ್ವಕರ್ಮನು ಸರ್ವಾಲಂಕಾರಭೂಷಿತ ವಾಗಿ ದಿವ್ಯವಾದ ಅರಮನೆಯನ್ನು ನಿರ್ಮಿಸಿದ್ದನು. ಆ ಮೇಲೆ ತ್ರಿವಿಕ್ರಮನು ತನ್ನ ಮಹಾರೂಪನ್ನು ಬಿಟ್ಟು ಜಗದಾಹ್ಲಾದಕರವಾದ ದಿವ್ಯಮಂಗಳರೂಪನ್ನು ಧರಿಸಿ ಶಂಖಚಕ್ರಗದಾಧರನಾಗಿ ಬಲಿಚಕ್ರವರ್ತಿಗೆ ದರ್ಶನವನ್ನು ಕೊಟ್ಟು ಆತನನ್ನು ತೆಗೆದಾ ಲಿಂಗಿಸಿ ಕೈಹಿಡಿದು ಆ ಮಹಾಸುಂದರರಾಜಾಲಯದೊಳಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಅತ್ಯುತ್ತಮವಾಗಿ ಕೋಟಿ ಸೂರ್ಯಪ್ರಕಾಶಮಾನವಾದ ದಿವ್ಯಸಿಂಹಾಸನದ ಮೇಲೆ ಕುಳ್ಳಿರಿಸಿ ಮುನಿಜನಗಳೊಡನೆ ಕೂಡಿ ಆತನಿಗೆ ಮುಂದಣ ಇಂದ್ರಪದವಿಗೆ ಪಟ್ಟಾಭಿಷೇಕವನ್ನು ಮಾಡಿ ಸಂತೋಷದಿಂದ ಕುಳಿತಿರುವ ಆತನನ್ನು ಕುರಿತು— ಎಲೈ ಪರಮಭಾಗವತನೇ, ನಾನು ಮಹಾತ್ಮನಾದ ನಿನ್ನ ಭಕ್ತಿಗೆ ಬಹಳವಾಗಿ ಮೆಚ್ಚಿದೆನು. ಈ ದಿವಸ ಕಾರ್ತಿಕಶುದ್ಧಪಾಡ್ಯಮಿಯಾದುದರಿಂದ ಸಮಸ್ತಜನರೂ ಪ್ರತಿಸಂವತ್ಸರದಲ್ಲೂ ಸಂಭವಿಸುವ ಈ ದಿನದಲ್ಲಿ ಸಂತೋಷದಿಂದ ನಿನ್ನನ್ನು ಪೂಜಿ ಸಲಿ. ಮತ್ತು ನೀನು ಮನಸ್ಸಿನಲ್ಲಿ ಕೋರಿದ ಕೋರಿಕೆಗಳೆಲ್ಲಾ ನಿರ್ವಿಘ್ನವಾಗಿ ಸಿದ್ಧಿಸಲಿ ಎಂದು ಪ್ರೀತಿಯಿಂದ ವರವನ್ನು ಕೊಟ್ಟನು. ಆಗ ಬಲಿಚಕ್ರವರ್ತಿಯು—ಸ್ವಾಮಿಾ, ಮಹಾವಿಷ್ಣುವೇ, ನಿನ್ನ ಭಕ್ತನಾದ ನನಗೆ ಯಾವ ವಿಧವಾದ ಎಡರೂ ಸಂಭವಿಸದಂತೆ ನೀನು ನನ್ನರಮನೆಯ ಬಾಗಿಲಲ್ಲಿ ಸದಾಕಾಲದಲ್ಲೂ ಕಾದುಕೊಂಡಿರಬೇಕೆಂದು ಬೇಡಿ ಕೊಂಡುದರಿಂದ ಮಹಾವಿಷ್ಣುವು ಸಂತೋಷವುಳ್ಳವನಾಗಿ ಹಾಗೇ ಆಗಲಿ ಎಂದು ಒಪ್ಪಿ ಗದಾದಂಡವನ್ನು ಧರಿಸಿದವನಾಗಿ ಆತನ ಮನೆಯ ಬಾಗಿಲಲ್ಲಿರುತ್ತ ಆತನ ಭಕ್ತಿಪೂರ್ವಕವಾದ ಪೂಜೆಯನ್ನು ಸ್ವೀಕರಿಸುತ್ತ ಇರುತ್ತಿದ್ದನು.

ತರುವಾಯ ಸರ್ವಗತನಾದ ಮಹಾವಿಷ್ಣುವು ಯಥಾಪ್ರಕಾರ ವಾಮನನಾಗಿ ಬಂದು ತಾಯ್ತಂದೆಗಳಿಗೆ ನಮಸ್ಕರಿಸಿ ಇಂದ್ರನನ್ನು ಕರಿಸಿ ಸ್ವರ್ಗಲೋಕಕ್ಕೆ ಕರೆದು ಕೊಂಡು ಹೋಗಿ ಆತನಿಗೆ ತ್ರಿಲೋಕಾಧಿಪತ್ಯವನ್ನು ನೇಮಿಸಿ ತಾನು ವೈಕುಂಠ ಲೋಕವನ್ನು ಕುರಿತು ತೆರಳಿದನು.

## 6. THE SIXTH OR PARASHU RAMA INCARNATION.

## ೬. ಪರಶುರಾಮಾವತಾರದ ಕಥೆ.

ಶ್ರೀ ಮಹಾವಿಷ್ಣುವು ಶಂಖಚಕ್ರಗದೆಗಳನ್ನು ಧರಿಸಿ ಕ್ಷೀರಸಮುದ್ರದಲ್ಲಿ ಶೇಷ ಶಾಯಿಯಾಗಿ ಯೋಗನಿದ್ರೆಯನ್ನು ಮಾಡುತ್ತಿದ್ದನು. ಹೀಗಿರುವಲ್ಲಿ ಒಂದು ದಿವಸ ಆ ಮಹಾವಿಷ್ಣುವಿನ ಆಯುಧವಾದ ಸುದರ್ಶನವೆಂದು ಪರ್ಯಾಯನಾಮವುಳ್ಳ ಚಕ್ರವು ತನ್ನ ಮನಸ್ಸಿನಲ್ಲಿ—ಈ ವಿಷ್ಣುವು ಮಹಾಬಲಗರ್ವಿತರಾದ ಮಧುಕೈಟಭಾದಿ ದೈತ್ಯರನ್ನು ನನ್ನ ಬಲಸಹಾಯದಿಂದ ಜಯಿಸಿ ದೈತ್ಯಾಂತಕನೆಂದು ಸರ್ವಲೋಕಗಳಿಂದಲೂ ಕೊಂಡಾಡಿಸಿಕೊಳ್ಳುತ್ತಿದ್ದಾನೆ. ನನ್ನ ಸಹಾಯವಿಲ್ಲದಿದ್ದರೆ ಈತನು ದೈತ್ಯರನ್ನು ಹೇಗೆ ಜಯಿಸುವನು ? ಎಂದಿಗೂ ಜಯಿಸಲಾರನು ಎಂದು ಯೋಚಿಸಿಕೊಂಡು ಮಹಾಗರ್ವದಿಂದ ಕೂಡಿ ತಾನೇ ಮಹಾ ಬಲಸಂಪನ್ನನೆಂದು ತಿಳಿದುಕೊಂಡಿತು. ಆ ಸಂಗತಿಯು ಸರ್ವಾಂತರ್ಯಾಮಿಯಾದ ವಿಷ್ಣುವಿಗೆ ತಿಳಿದುದರಿಂದ ಆತನು— ಈ ಚಕ್ರದ ಗರ್ವವನ್ನು ಪರಿಹರಿಸಬೇಕು. ಏಕೆಂದರೆ ಲೋಕದಲ್ಲಿ ಪ್ರಭುತ್ವಮಾಡುವವರ ಪ್ರಭಾವಶಕ್ತಿಯಿಂದ ಆ ಪ್ರಭುವಿನ ಕೈಕೆಳಗಿರುವ ಉದ್ಯೋಗಿಗಳು ತಮ್ಮ ತಮ್ಮ ಅಧಿಕಾರಗಳಲ್ಲಿ ಸ್ವಲ್ಪವಾದರೂ ನ್ಯೂನತೆಗಳಿಲ್ಲದೆ ಎಚ್ಚರಿಕೆಯಿಂದಿದ್ದುಕೊಂಡು ಎಲ್ಲಾ ಕೆಲಸಗಳಲ್ಲೂ ಬಲ್ಲಿದರಾಗಿದ್ದಾಗ್ಯೂ ಅಂಥವರನ್ನು ನೋಡಿ ಇತರರು—ನೀವು ಬಲ್ಲಿದರು, ನೀವು ಪಂಡಿತರು. ನೀವು ಚತುರೋಪಾಯಗಳನ್ನೂ ಬಲ್ಲವರೆಂದು ಹೊಗಳಿದರೆ ಆಗ ಆ ಅಧಿಕಾರಿಗಳು ಅವರನ್ನು ಕುರಿತು—ನಾವು ಎಷ್ಟುಮಾತ್ರದವರು ? ಈ ಕಾರ್ಯಗಳೆಲ್ಲಾ ನಮ್ಮ ಪ್ರಭುಗಳ ಮಹಿಮೆಯಿಂದ ನಡೆಯುವುವೇ ಹೊರತು ಅಲ್ಪಜ್ಞರೂ ಅಲ್ಪಶಕ್ತರೂ ಆದ ನಮ್ಮಿಂದ ಅಣುಮಾತ್ರವಾದಗೂ ನಡೆಯುವುದಿಲ್ಲ. ಲೋಕದಲ್ಲಿ ಕೇವಲ ಮೂಢನೂ ಬಡವನೂ ಅಶಕ್ತನೂ ಆಗಿರುವ ಒಬ್ಬ ಕಿಂಕರನ ಮೇಲೆ ಸರ್ವಾಭೀಷ್ಟಾರ್ಥದಾಯಕವಾದ ಪ್ರಭುವಿನ ಕಟಾಕ್ಷವು ಬಿದ್ದರೆ ಆ ಕೂಡಲೆ ಅವನು ಮಹಾಧೀರನೂ ಪಂಡಿತನೂ ಕಾರ್ಯದಕ್ಷನೂ ಸಾಮರ್ಥ್ಯವುಳ್ಳವನೂ ಆಗುವುದಲ್ಲದೆ ಸಕಲವಿಧ ಕಾರ್ಯಗಳನ್ನೂ ಲೋಪವಿಲ್ಲದಂತೆ ತಾನೇ ನಿರ್ವಹಿಸಿ ಪ್ರಭುವಿನ ರಾಜ್ಯಕೋಶಗಳನ್ನು ಅಭಿವೃದ್ಧಿಮಾಡಿ ಆ ಪ್ರಭುವಿನಿಂದಲೇ ಹೊಗಳಿಸಿಕೊಳ್ಳುವನು. ಎಂಥ ಪಂಡಿತನೂ ಸರ್ವಶಕ್ತನೂ ಮಹಾ ಬಲಸಂಪನ್ನನೂ ಆದಾಗ್ಯೂ ಅವನಿಗೆ ಪ್ರಭುವಿನ ಬಲ ತಪ್ಪಿದರೆ ಇವನು ಕೈಲಾಗದವನು, ಹೇಡಿಯು, ಮೂಢನು ಎಂದು ಎಲ್ಲರಿಂದಲೂ ತಿರಸ್ಕಾರವನ್ನು ಹೊಂದುವನು. ಇದರಲ್ಲಿ ಯಾವ ಸಂದೇಹವೂ ಇಲ್ಲ ಎಂದು ತನ್ನ ಮನಸ್ಸಿನಲ್ಲಿ ಯೋಚಿಸಿಕೊಳ್ಳುತ್ತ ಪ್ರಭುವಿನ ವಿಷಯದಲ್ಲಿ ತಾಗಿ ಬಾಗಿ ನಡೆದರೆ ಅವನು ಯೋಗ್ಯತೆಯನ್ನು ವಿಚಾರಿಸಿ ಅವನು ಮತ್ತೂ ಗಟ್ಟಿಗನೆನ್ನಿಸಿಕೊಳ್ಳುವಂತೆ ಅವನಲ್ಲಿ ಕೃಪೆಮಾಡಿ ನಡಿಸಿಕೊಡಬೇಕು. ಹಾಗೆ ನಡೆಯದೆ ಪ್ರಭುವಿಗೆ ಉಂಟಾಗಿರುವ ಸರ್ವ ಸಂಪತ್ತುಗಳೂ ತನ್ನಿಂದಲೇ ಉಂಟಾದುವೆಂದು ತಿಳಿದು ಕೊಬ್ಬಿ ಅಹಂ ಬ್ರಹ್ಮತ್ವದಿಂದ ಕೂಡಿ ತನ್ನಿಂದಲೇ ತನ್ನ ಪ್ರಭುವಿಗೆ ಪ್ರಭುತ್ವವುಂಟಾಯಿತೆಂದು ಹೊಗಳಿ

ಕೊಳ್ಳುವ ದುಷ್ಟ ಸೇವಕನಿಗೆ ಅವನ ಕೊಬ್ಬಡಗುವಂತೆ ಶಿಕ್ಷೆಮಾಡಿ ವಿಧೇಯತೆಯಿಂದ ನಡೆದು ತನಗೂ ತನ್ನ ಸ್ವಾಮಿಗೂ ಮೇಲನ್ನುಂಟುಮಾಡಿಕೊಳ್ಳುವಂತೆ ಮಾಡಿಕೊಂಡು ತಿರಿಗಿ ತನ್ನಲ್ಲಿ ಸೇರಿಕೊಂಡರೆ ಪ್ರಭುತ್ವವು ಚೆನ್ನಾಗಿ ನಡೆದು ರಾಜಪ್ರಜಾಸುಖಸಮ್ಮತಿ ಗಳುಂಟಾಗುವುವು. ಹಾಗೆ ಮಾಡದೆ ಔದಾಸೀನ್ಯದಿಂದಿದ್ದರೆ ಆತನ ಪ್ರಭುತ್ವವೇ ಕ್ಷೀಣವಾಗಿ ಹೋಗುವುದು ಎಂದು ತನ್ನ ಮನಸ್ಸಿನಲ್ಲಿ ಆಲೋಚಿಸಿ ನಿಶ್ಚಯಿಸಿ ಆ ಸುದರ್ಶನವನ್ನು ಕುರಿತು—ಎಲೈ ಮಹಾಬಲಸಂಪನ್ನನಾದ ಚಕ್ರರಾಜನೇ, ನಾನು ಸಮಸ್ತ ದೈತ್ಯರನ್ನೂ ಸಂಹರಿಸುವುದು ನಿನ್ನ ಶಕ್ತಿಯಿಂದಲೋ? ಅಥವಾ ನನ್ನ ಶಕ್ತಿ ಯಿಂದಲೋ? ಎಂದು ನನ್ನ ಮನಸ್ಸಿನಲ್ಲಿ ಒಂದು ವಿಧವಾದ ಸಂಶಯವುಂಟಾಗಿದೆ. ಆದುಕಾರಣ ಈ ವಿಷಯವನ್ನು ಪರೀಕ್ಷಿಸಿ ತಿಳಿದುಕೊಳ್ಳಬೇಕೆಂದು ನನಗೆ ಸಂಪೂರ್ಣ ಕುತೂಹಲವುಂಟು. ಆದುದರಿಂದ ನೀನು ನಿನ್ನ ಸಾವಿರ ಅರಗಳನ್ನೂ ಸಾವಿರ ತೋಳು ಗಳನ್ನಾಗಿ ಮಾಡಿಕೊಂಡು ಹೇಹಯ ದೇಶದ ಅರಸಾದ ಕೃತವೀರ್ಯನ ಪಟ್ಟದರಸಿಯ ಗರ್ಭದಲ್ಲಿ ಜನಿಸಿ ಲೋಕದಲ್ಲಿ ಮಹಾ ಪರಾಕ್ರಮಶಾಲಿಯಾಗಿ ಚಕ್ರವರ್ತಿಯೆನ್ನಿಸಿ ಕೊಂಡು ಮಹೋನ್ನತನಾಗಿ ಕ್ಷತ್ರಿಯ ಸಾರ್ವಭೌಮನೆನ್ನಿಸಿಕೊಂಡು ಸುಖದಿಂದಿರು. ಅನಂತರದಲ್ಲಿ ನಾನು ಎರಡು ತೋಳುಗಳಿಂದ ಒಬ್ಬ ಮುನಿಗೆ ಮಗನಾಗಿ ಹುಟ್ಟಿ ಯಾವುದೋ ಒಂದು ಕಾರಣದಿಂದ ನಿನ್ನೊಡನೆ ವಿರೋಧವನ್ನು ಬೆಳಸಿ ಯುದ್ಧಕ್ಕೆ ಬರುವೆನು. ಆ ಯುದ್ಧರಂಗದಲ್ಲಿ ಹೆಣಗುವ ನಮ್ಮಿಬ್ಬರಲ್ಲಿ ಯಾರಿಗೆ ಜಯವುಂಟಾಗು ವುದೋ ಆತನೇ ಶಕ್ತನೆಂದು ತಿಳಿಯಬರುವುದು. ಆಗ ನನ್ನ ಮನಸ್ಸಿನ ಸಂಶಯವು ನಿವಾರಣೆಯಾಗಿ ಸಮಾಧಾನವುಂಟಾಗುವುದೆಂದು ಹೇಳಿದನು

ಆ ಮಾತುಗಳನ್ನು ಕೇಳಿ ಚಕ್ರರಾಜನು ನನ್ನ ಯೋಚನೆಯಂತೆಯೇ ಈತನೂ ಹೇಳಿದನೆಂದು ಬಹಳವಾಗಿ ಸಂತೋಷಿಸಿ ಹೆಮ್ಮೆಯಿಂದ ಕೂಡಿ ವಿಷ್ಣುವಿನೊಡನೆ ಹಾಗೆಯೇ ಆಗಲೆಂದು ಹೇಳಿ ವೈಕುಂಠದಿಂದ ಹೊರಟು ಮಾಹಿಷ್ಮತೀನಗರದ ಅರಸ ನಾದ ಕೃತವೀರ್ಯನ ಧರ್ಮಪತ್ನಿಯ ಗರ್ಭವನ್ನು ಪ್ರವೇಶಿಸಿ ತರುವಾಯ ಸಾವಿರ ತೋಳುಗಳುಳ್ಳ ಮಗನಾಗಿ ಹುಟ್ಟಿ ಕಾರ್ತವೀರ್ಯಾರ್ಜುನನೆಂಬ ಪ್ರಖ್ಯಾತಿಯನ್ನು ಹೊಂದಿ ಸಕಲ ವಿದ್ಯಾಬುದ್ಧಿಗಳನ್ನೂ ಕಲಿತು ಪ್ರಾಯದವನಾಗಿ ತಂದೆಯ ಅಪ್ಪಣೆ ಯನ್ನು ತೆಗೆದುಕೊಂಡು ಹೊರಟು ಸಕಲದಿಗ್ದೇಶಗಳನ್ನೂ ಇಂದ್ರಾದಿ ದಿಕ್ಪಾಲಕ ರನ್ನೂ ಯುದ್ಧರಂಗದಲ್ಲಿ ಜಯಿಸಿ ಅವರೆಲ್ಲರಿಂದ ಕಪ್ಪಗಳನ್ನು ತೆಗೆದುಕೊಂಡು ನಿರ್ವೈ ರಿಯಾಗಿ ತಿರಿಗಿ ತನ್ನ ಪಟ್ಟಣಕ್ಕೆ ಬಂದು ತಂದೆಗೆ ನಮಸ್ಕರಿಸಿ ತಾನು ಹೋದಂದಿನಿಂದ ನಡೆದ ಸಕಲ ವೃತ್ತಾಂತವನ್ನೂ ಆತನಿಗೆ ತಿಳಿಸಲು ; ಆಗ ಆತನು ಮಹಾಸಂತೋಷ ದಿಂದ ಕೂಡಿದವನಾಗಿ ಕಾರ್ತವೀರ್ಯಾರ್ಜುನನನ್ನು ತೆಗೆದು ಆಲಿಂಗಿಸಿಕೊಂಡು ಆನಂದ ಪಟ್ಟನು. ಅನಂತರದಲ್ಲಿ ಕೃತವೀರ್ಯನು ತನ್ನ ಮಗನಿಗೆ ಹೇಹಯರಾಜ್ಯಾಭಿಷೇಕ ವನ್ನು ಮಾಡಿ ತಾನು ತನ್ನ ಧರ್ಮಪತ್ನಿಯೊಡನೆ ಕೂಡಿ ಪುಣ್ಯಾರಣ್ಯವನ್ನು ಕುರಿತು ತಪಸ್ಸಿಗೆ ಹೊರಟುಹೋದನು. ಆ ಮೇಲೆ ಕಾರ್ತವೀರ್ಯಾರ್ಜುನನು ಕೃತಯುಗಕ್ಕೆ ಚಕ್ರವರ್ತಿಯೆನ್ನಿಸಿಕೊಂಡು ಜಗದೇಕವೀರನಾದ ರಾವಣಾಸುರನನ್ನು ಜಯಿಸಿ ಲೋಕೈಕವಿಖ್ಯಾತನಾಗಿದ್ದನು.

ಈ ರೀತಿಯಾಗಿ ಬಹು ಕಾಲದ ವರೆಗೂ ನಡೆಯುತ್ತಿರುವಲ್ಲಿ ಭೂಮಿದೇವಿಯು ದುಷ್ಟ ಕ್ಷತ್ರಿಯರ ಭಾರವನ್ನು ತಾಳಲಾರದೆ ಮಹಾವಿಷ್ಣುವಿನ ಬಳಿಗೆ ಹೋಗಿ ಅಡ್ಡ ಬಿದ್ದು—ಎಲೈ ಸರ್ವಲೋಕೇಶ್ವರನಾದ ಸ್ವಾಮಿಯೇ, ದುರ್ಜನರಾದ ಅರಸುಗಳು ಬಹಳವಾಗಿ ಹೆಚ್ಚಿರುವುದರಿಂದ ಪರಮಪಾಪಿಷ್ಠರಾದ ಅವರ ಭಾರವನ್ನು ನಾನು ತಡೆಯಲಾರೆನು. ಸರ್ವಶಕ್ತನೂ ಸರ್ವಪ್ರಾಣಿದಯಾಕರನೂ ಆದ ನೀನು ಅವರನ್ನೆಲ್ಲಾ ಸಂಹರಿಸಿ ನನ್ನ ಹೊರೆಯನ್ನಿಳಿಸಿ ಶರಣಾಗತಳಾದ ನನ್ನನ್ನು ಕಾಪಾಡಬೇಕು ಎಂದು ಬೇಡಿಕೊಳ್ಳಲು ; ಆಗ ವಿಷ್ಣುವು ಆ ಮಾತುಗಳನ್ನು ಕೇಳಿ—ಒಳ್ಳೆಯದು, ಹಾಗೇ ಮಾಡುವೆನು, ಭಯಪಡಬೇಡವೆಂದು ಹೇಳಿ ಭೂದೇವಿಗೆ ಅಭಯವನ್ನು ಕೊಟ್ಟು ಸಮಾಧಾನಪಡಿಸಿದನು. ಅನಂತರದಲ್ಲಿ ಭೂದೇವಿಯು ಮಹಾವಿಷ್ಣುವಿಗೆ ವಂದಿಸಿ ಆತನ ಅಪ್ಪಣೆಯನ್ನು ತೆಗೆದುಕೊಂಡು ಯಥಾಸ್ಥಾನವನ್ನು ಕುರಿತು ಹೊರಟುಹೋದಳು. ಅಷ್ಟರಲ್ಲಿ ಭೂಲೋಕದಲ್ಲಿ ಭೃಗುಮಹಾಮುನಿಯ ವಂಶೀಯನಾದ ಜಮದಗ್ನಿಯೆಂಬ ಮಹರ್ಷಿಯು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳನ್ನು ಕುಶಿಕಕುಲಸಂಭೂತನಾದ ಗಾಧಿರಾಜನೆಂಬವನಿಗೆ ಮದುವೆಮಾಡಿಕೊಟ್ಟು ಸಂತೋಷದಿಂದಿದ್ದನು. ಆ ಮಗಳು ಕೆಲದಿನಗಳ ವರೆಗೂ ತನ್ನ ಪತಿಯ ಮನೆಯಲ್ಲಿದ್ದು ತರುವಾಯ ತಾಯ್ತಂದೆಗಳನ್ನು ನೋಡುವ ಉದ್ದೇಶದಿಂದ ತವರುಮನೆಗೆ ಬಂದಳು. ಆ ಮೇಲೆ ಒಂದು ಸಮಯದಲ್ಲಿ ಜಮದಗ್ನಿಯ ಹೆಂಡತಿಯು ತನ್ನ ಗಂಡನ ಬಳಿಗೆ ಬಂದು ಸಾಷ್ಟಾಂಗವಾಗಿ ನಮಸ್ಕರಿಸಿ—ಸ್ವಾಮಿ, ನಿನ್ನ ಪತ್ನಿಯಾದ ನನಗೂ ನನ್ನ ಮಗಳಾದ ಗಾಧಿರಾಜನ ಪತ್ನಿಗೂ ಸಮಸ್ತ ಸುಗುಣ ಸಂಪನ್ನರಾದ ಗಂಡುಮಕ್ಕಳು ಆಗುವಂತೆ ಅನುಗ್ರಹಿಸಬೇಕೆಂದು ನಯವಿನಯೋಕ್ತಿಗಳಿಂದ ಬೇಡಿಕೊಂಡಳು. ಆಗ ಮಹರ್ಷಿಯಾದ ಜಮದಗ್ನಿಯು ಪತ್ನಿಯ ಮಾತುಗಳನ್ನು ಕೇಳಿ ಒಳ್ಳೆಯದೆಂದು ಹೇಳಿ ಎರಡು ಬಟ್ಟಲುಗಳಲ್ಲಿ ನೀರನ್ನು ತರಿಸಿ ಅದನ್ನು ಅಭಿಮಂತ್ರಿಸಿ ಹೆಂಡತಿಯ ಕೈಯಲ್ಲಿ ಕೊಟ್ಟು—ಈ ಬಟ್ಟಲಿನ ನೀರನ್ನು ನಿನ್ನ ಮಗಳಿಗೆ ಕೊಡು. ಈ ಬಟ್ಟಲಿನ ಉದಕವನ್ನು ನೀನು ಕುಡಿ. ಈ ಮಂತ್ರೋದಕಪ್ರಭಾವದಿಂದ ನಿಮ್ಮಿಬ್ಬರಿಗೂ ಮಹಾತೇಜಸ್ವಿಗಳಾದ ಗಂಡು ಮಕ್ಕಳುಗಳು ಆಗುವರೆಂದು ಹೇಳಿ ಕೊಟ್ಟುಕಳುಹಿಸಿದನು. ಆ ಮೇಲೆ ಆಕೆಯು ಮಂತ್ರೋದಕಪೂರಿತಗಳಾದ ಆ ಎರಡು ಬಟ್ಟಲುಗಳನ್ನು ತೆಗೆದುಕೊಂಡು ತನ್ನ ಮಗಳ ಬಳಿಗೆ ಬಂದು ಆಕೆಯನ್ನು ನೋಡಿ—ಇದೋ, ಅಮ್ಮಾ! ಮಹಾತ್ಮನಾದ ನಿನ್ನ ತಂದೆಯು ಈ ಎರಡು ಬಟ್ಟಲುಗಳಲ್ಲಿರುವ ನೀರನ್ನು ಅಭಿಮಂತ್ರಿಸಿ ಆ ಪಾತ್ರೆಯ ನೀರನ್ನು ನಾನು ಕುಡಿಯುವಂತೆಯೂ ಈ ಪಾತ್ರೆಯ ನೀರನ್ನು ನೀನು ಕುಡಿಯುವಂತೆಯೂ ಹೇಳಿ ಕೊಟ್ಟಿದ್ದಾನೆ. ಅದುಕಾರಣ ಇದನ್ನು ನೀನು ತೆಗೆದುಕೋ ಎಂದು ಹೇಳಿ ಕೊಟ್ಟಳು. ಆಗ ಆ ಮಗಳು ತನ್ನ ತಂದೆಯು ಹೆಂಡತಿಗೆ ಏನೋ ವಿಶೇಷವಾಗಿ ಮಂತ್ರಿಸಿ ಕೊಟ್ಟಿರಬಹುದು ಎಂದು ಮನಸ್ಸಿನಲ್ಲಿ ಯೋಚಿಸಿ ತಾಯಿಯನ್ನು ಕುರಿತು—ಅಮ್ಮಾ, ತಂದೆಯು ಅಭಿಮಂತ್ರಿಸಿ ನಿನಗೆ ಕೊಟ್ಟಿರುವ ಪಾತ್ರೆಯ ಉದಕವನ್ನು ನನಗೆ ಕೊಡು. ನನಗೋಸ್ಕರವಾಗಿ ಕೊಟ್ಟಿರುವ ಮಂತ್ರೋದಕವನ್ನು ನೀನು

ತೆಗೆದುಕೋ ಎಂದು ಹೇಳಲು ; ಆಗ ತಾಯಿಯು ಪುತ್ರಿಯ ಮೇಲಣ ವ್ಯಾಮೋಹ ದಿಂದ ಹಾಗೇ ಆಗಲಿ ಎಂದು ಹೇಳಿ ಆ ಪಾತ್ರೆಯನ್ನು ಅವಳಿಗೆ ಕೊಟ್ಟುಬಿಟ್ಟಳು. ಆ ಮೇಲೆ ಇಬ್ಬರೂ ಆ ಉದಕವನ್ನು ಕುಡಿದರು. ಅನಂತರದಲ್ಲಿ ಆ ಮುನಿಪತಿಯ ಮಂತ್ರೋದಕಪ್ರಭಾವದಿಂದ ಅವರಿಬ್ಬರೂ ದಿವ್ಯತೇಜಃಪುಂಜರಂಜಿತರಾದ ಗಂಡುಮ ಕ್ಕಳುಗಳನ್ನು ಹೆತ್ತರು. ಈ ವರ್ತಮಾನವನ್ನು ಕೇಳಿದ ಜಮದಗ್ನಿ ಮುನಿಯು ಪರಮ ಸಂತೋಷಯುಕ್ತನಾಗಿ ಜಾತಕರ್ಮವನ್ನು ನೆರವೇರಿಸಿ ಹನ್ನೆರಡನೆಯ ದಿವಸದಲ್ಲಿ ತನ್ನ ಮೊಮ್ಮಗನೂ ಕ್ಷತ್ರಿಯೋತ್ತಮನೂ ಆದ ಗಾಧಿರಾಜನ ಕುಮಾರನಿಗೆ ವಿಶ್ವಾಮಿತ್ರ ನೆಂದೂ ತನ್ನ ಧರ್ಮಪತ್ನಿಯ ಗರ್ಭದಲ್ಲಿ ಭೂಭಾರನಿವಾರಣಾರ್ಥವಾಗಿ ಮಹಾವಿಷ್ಣು ವಿನ ಅಂಶದಿಂದ ಅವತರಿಸಿದ ಮಗನಿಗೆ ರಾಮನೆಂದೂ ನಾಮಕರಣವನ್ನು ಮಾಡಿದನು.

ಅನಂತರದಲ್ಲಿ ಗಾಧಿರಾಜನು ಪುತ್ರೋತ್ಸವವಾದ ವರ್ತಮಾನವನ್ನು ಕೇಳಿ ಅಮಂದಾನಂದಭರಿತಾಂತರಂಗನಾಗಿ ಕೂಡಲೆ ಮಾವನ ಮನೆಗೆ ಬಂದು ಅತ್ತೆಮಾ ವಂದಿರಿಗೆ ನಮಸ್ಕರಿಸಿ ಕೆಲವು ದಿನಗಳ ವರೆಗೂ ಸಂತೋಷದಿಂದಿದ್ದು ಆ ಮೇಲೆ ತನ್ನ ಹೆಂಡತಿಯನ್ನೂ ಮಗನನ್ನೂ ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗಿ ಸಕಲವಿದ್ಯಾ ಪಾರಂಗತನಾಗಿ ಯೌವನವಂತನಾದ ಮಗನಿಗೆ ಪಟ್ಟಾಭಿಷೇಕವನ್ನು ಮಾಡಿ ತಾನು ಧರ್ಮಸಂಪಾದನಾರ್ಥವಾಗಿ ಮುನಿವನವನ್ನು ಕುರಿತು ತಪಸ್ಸಿಗೆ ಹೊರಟುಹೋದನು. ಆ ಮೇಲೆ ವಿಶ್ವಾಮಿತ್ರ ರಾಜನು ಅನೇಕ ಸಹಸ್ರ ಸಂವತ್ಸರಗಳ ವರೆಗೂ ಧರ್ಮದಿಂದ ರಾಜ್ಯಭಾರವನ್ನು ಮಾಡಿ ಮುನಿಮಂತ್ರೋದಕ ಮಹಿಮೆಯಿಂದ ತಾನು ಬ್ರಾಹ್ಮಣ ನಾಗಬೇಕೆಂಬ ಬುದ್ಧಿ ಹುಟ್ಟಿದುದರಿಂದ ಪ್ರಬುದ್ಧನಾದ ತನ್ನ ಮಗನಿಗೆ ಪಟ್ಟಾಭಿಷೇ ಕವನ್ನು ಮಾಡಿ ಸಕಲ ರಾಜನೀತಿಗಳನ್ನೂ ಬೋಧಿಸಿ ತಪೋವನಕ್ಕೆ ಹೋಗಿ ಚಿತ್ತೈ ಕಾಗ್ರತೆಯನ್ನು ಹೊಂದಿ ಅನೇಕ ಸಂವತ್ಸರಗಳ ವರೆಗೂ ತಪಸ್ಸನ್ನು ಮಾಡಿ ಬ್ರಹ್ಮದೇವ ನನ್ನು ಮೆಚ್ಚಿಸಿ ಬ್ರಹ್ಮರ್ಷಿತ್ವವನ್ನು ಪಡೆದು ಜಗದ್ವಿಖ್ಯಾತನಾದನು.

ಇತ್ತಲಾ ಜಮದಗ್ನಿಯ ಮಗನಾದ ರಾಮನು ಬ್ರಹ್ಮಕ್ಷೇತ್ರದಲ್ಲಿ ಹುಟ್ಟಿದವ ನಾದಾಗ್ಯೂ ಕ್ಷತ್ರಿಯ ಮಂತ್ರೋದಕಪ್ರಭಾವದಿಂದ ತಾನು ಜಗದೇಕವೀರನೆನ್ನಿಸಿ ಕೊಳ್ಳಬೇಕೆಂಬ ಬುದ್ಧಿ ಹುಟ್ಟಿದುದರಿಂದ ಕೈಲಾಸಪರ್ವತಕ್ಕೆ ಹೋಗಿ ಘೋರವಾದ ತಪಸ್ಸನ್ನು ಮಾಡಿ ಪರಮೇಶ್ವರನನ್ನು ಮೆಚ್ಚಿಸಿ ಆತನಿಂದ ಸಕಲ ಧನುರ್ವೇದಗಳನ್ನೂ ಕಲಿತು ಸಕಲವಿಧ ಮಂತ್ರಾಸ್ತ್ರಗಳ ಪ್ರಯೋಗೋಪಸಂಹಾರಕ್ರಮಗಳನ್ನೂ ತಿಳಿದು ಆತನ ಸೇವೆಯನ್ನು ಮಾಡುತ್ತ ಕೆಲವು ದಿವಗಳ ವರೆಗೂ ಅಲ್ಲೇ ಇದ್ದುಕೊಂಡಿರಲು; ಪರಮೇಶ್ವರನು ಶಿಷ್ಯನಾದ ರಾಮನ ಸುಗುಣಗಳಿಗೆ ಬಹಳವಾಗಿ ಸಂತೋಷಿಸಿ ಇವನ ಸಾಮರ್ಥ್ಯವನ್ನು ಪ್ರತ್ಯಕ್ಷವಾಗಿ ನೋಡಬೇಕೆಂದು ಯೋಚಿಸಿ ಒಂದು ದಿವಸ ಮಹಾ ಶೂರಾಗ್ರೇಸರನಾದ ತನ್ನ ಮಗನಾದ ಷಣ್ಮುಖನನ್ನೂ ಮಹಾವೀರಾಗ್ರಗಣ್ಯನಾಗಿ ತನ್ನ ಶಿಷ್ಯನಾದ ರಾಮನನ್ನೂ ಸಮೀಪಕ್ಕೆ ಕರೆದು—ಎಲೈ ಶೂರರೇ, ನೀವಿಬ್ಬರೂ ಯುದ್ಧವನ್ನು ಮಾಡಿ ನಿಮ್ಮಿಬ್ಬರ ಶಕ್ತಿಯ ಹೆಚ್ಚುಕುಂದುಗಳನ್ನು ನನಗೂ ಪಾರ್ವ ತಿಗೂ ತೋರಿಸಬೇಕೆಂದು ಹೇಳಲು ; ಆಗ ಆ ಮಹಾವೀರರಿಬ್ಬರೂ ಸ್ವಾಮಿಯ

ಅಪ್ಪಣೆಯಂತೆ ಯುದ್ಧಕ್ಕೆ ತೊಡಗಿ ಸೋಲುಗೆಲುವುಗಳಿಲ್ಲದೆ ಏಳು ದಿವಸಗಳ ವರೆಗೂ ತ್ರಿಭುವನವೂ ಕಂಪಿಸುವಂತೆ ಮಹಾಯುದ್ಧವನ್ನು ಮಾಡಿ ಕಡೆಗೆ ರಾಮನ ಜೃಂಭ ಣಾಸ್ತ್ರಪ್ರಯೋಗದಿಂದ ಷಣ್ಮುಖನು ಸ್ತಂಭೀಭೂತನಾದುದನ್ನು ನೋಡಿ ಪಾರ್ವತೀ ಪರಮೇಶ್ವರರು ಸಂತೋಷದಿಂದ ಕೂಡಿದವರಾಗಿ ರಾಮನನ್ನು ತೆಗೆದು ಆಲಂಗಿಸಿ ಕೊಂಡು ಮುದ್ದಿಸಿ ಅವನಿಗೆ ಅಮೋಘವಾದ ಒಂದು ಕೊಡಲಿಯನ್ನು ಕೊಟ್ಟು— ನೀನು ಈ ಆಯುಧವನ್ನು ಸದಾಕಾಲದಲ್ಲೂ ಧರಿಸಿಕೊಂಡು ಲೋಕದಲ್ಲಿ ಪರಶು ರಾಮನೆಂಬ ಹೆಸರನ್ನು ಹೊಂದಿ ಜಗದ್ವಿಖ್ಯಾತನಾಗಿ ಬಾಳು ಎಂದು ಹರಸಿ ಇನ್ನು ಮೇಲೆ ನಿನ್ನ ತಾಯ್ತಂದೆಗಳ ಬಳಿಗೆ ಹೋಗಿ ಭಕ್ತಿಯಿಂದ ಶುಶ್ರೂಷೆಯನ್ನು ಮಾಡಿ ಕೊಂಡಿರು ಎಂದು ಹೇಳಿ ಕಳುಹಿಸಿದರು. ತರುವಾಯ ಪರಶುರಾಮನು ಪಾರ್ವತೀ ಪರಮೇಶ್ವರರಿಗೆ ವಂದಿಸಿ ಸಂತೋಷಾಂತರಂಗನಾಗಿ ಆ ಕೈಲಾಸಸೀಮಾಪ್ರದೇಶದಿಂದ ಹೊರಟು ತನ್ನ ತಾಯ್ತಂದೆಗಳ ಬಳಿಗೆ ಬಂದು ಭಯಭರಿತಭಕ್ತಿಯಿಂದ ಅವರಿಗೆ ನಮಸ್ಕಾರವನ್ನು ಮಾಡಿ ತನ್ನಲ್ಲಿ ಪಾರ್ವತೀಪರಮೇಶ್ವರರು ಅನುಗ್ರಹಮಾಡಿದುದನ್ನೂ ತಾನು ಷಣ್ಮುಖನನ್ನು ಜಯಿಸಿದುದನ್ನೂ ಅವರಿಗೆ ತಿಳಿಸಿ ನಿರಂತರವೂ ಅವರ ಶುಶ್ರೂ ಷೆಯನ್ನು ಮಾಡಿಕೊಂಡು ಅಲ್ಲೇ ಇರುತ್ತಿದ್ದನು.

ಹೀಗಿರುತ್ತ ಪರಶುರಾಮನು ಒಂದು ದಿವಸ ತಂದೆಯ ಯಜ್ಞಾಹುತಿಗೆ ದರ್ಭೆ ಸಮಿತ್ತು ಇವುಗಳನ್ನು ತೆಗೆದುಕೊಂಡು ಬರುವುದಕ್ಕಾಗಿ ಕೊಡಲಿಯನ್ನು ಧರಿಸಿ ಅರ ಣ್ಯಕ್ಕೆ ಹೋದ ಸಮಯದಲ್ಲಿ ಕಾರ್ತವೀರ್ಯಾರ್ಜುನನು ದಿಗ್ವಿಜಯಾರ್ಥವಾಗಿ ಚತು ರಂಗಬಲದೊಡನೆ ಹೋಗಿದ್ದು ತಿರಿಗಿ ತನ್ನ ಪಟ್ಟಣವಾದ ಮಾಹಿಷ್ಮತೀನಗರಕ್ಕೆ ಬರು ತ್ತಿರುವಾಗ ನಡುದಾರಿಯಲ್ಲಿ ಜಮದಗ್ನಿಯ ಆಶ್ರಮವನ್ನು ಕಂಡು ಅದರೊಳಗೆ ಬಂದು ಮಹರ್ಷಿಯನ್ನು ಕಂಡು ಆತನಿಗೆ ಪಾದಾಭಿವಂದನೆಯನ್ನು ಮಾಡಿದನು. ಆ ಮೇಲೆ ಜಮದಗ್ನಿಯು ಚಕ್ರವರ್ತಿಯಾದ ಕಾರ್ತವೀರ್ಯಾರ್ಜುನನಿಗೆ ಅರ್ಘ್ಯಪಾದ್ಯಾಸನಾ ದಿಗಳಿಂದ ಅತಿಥಿಪೂಜೆಯನ್ನು ಮಾಡಿ ಸವಿನುಡಿಗಳಿಂದ ಕುಶಲಪ್ರಶ್ನೆಗಳನ್ನು ಕೇಳಿ ಆತನನ್ನು ಕುರಿತು—ಅಯ್ಯಾ ರಾಜೇಂದ್ರನೇ, ನೀನು ನಿನ್ನ ಚತುರಂಗಬಲದೊಡನೆ ಈ ದಿವಸ ಇಲ್ಲಿದ್ದು ನಾನು ಮಾಡುವ ಅತಿಥಿಸತ್ಕಾರವನ್ನು ಕೈಕೊಂಡು ನಾಳಿನ ದಿನ ಸಂತೋಷದಿಂದ ತೆರಳಬಹುದು ಎಂದು ಬಹುತರವಾಗಿ ಪ್ರಾರ್ಥಿಸಿಕೊಳ್ಳಲು ; ಆಗ ಕಾರ್ತವೀರ್ಯಾರ್ಜುನನು—ಹಾಗೇ ಆಗಲಿ ಎಂದು ಹೇಳಿ ಆ ಮುನಿಯ ಪರ್ಣಶಾ ಲೆಗೆ ಸ್ವಲ್ಪದೂರದಲ್ಲಿ ಗುಡಾರಗಳನ್ನು ಹೊಡಿಸಿ ಚತುರಂಗಬಲವನ್ನೆಲ್ಲಾ ಅಲ್ಲಿಳಿಸಿ ಕೊಂಡು ತಾನೂ ಅಲ್ಲಿ ನಿಂತನು. ಆ ಮೇಲೆ ಜಮದಗ್ನಿಯು ತನ್ನ ಹೋಮಧೇನು ವಾದ ಕಾಮಧೇನುವನ್ನು ಕರೆದು—ಎಲೈ ಸುರಭಿಯೇ, ಚಕ್ರವರ್ತಿಯಾದ ಕಾರ್ತವೀ ರ್ಯಾರ್ಜುನನನ್ನು ಸತ್ಕಾರಮಾಡುವೆನೆಂದು ಅವನನ್ನು ಚತುರಂಗ ಬಲದೊಡನೆ ಇಲ್ಲಿ ನಿಲ್ಲಿಸಿಕೊಂಡಿದ್ದೇನೆ. ನೀನು ಅವನ ದಂಡಿಗೆ ಹೋಗಿ ಅಲ್ಲಿರುವ ಸಕಲ ಶರೀರಿಗಳಿಗೂ ಅವರವರ ಅಭೀಷ್ಟವಿದ್ದಂತೆ ಅನ್ನಪಾನವಸ್ತ್ರಾಭರಣ ಗಂಧಮಾಲ್ಯಾದಿಗಳಿಂದ ತೃಪ್ತಿಪ ಡಿಸಬೇಕೆಂದು ಅಪ್ಪಣೆಯನ್ನು ಕೊಟ್ಟನು. ಸುರಭಿಯು ಆ ಕೂಡಲೆ ದಂಡಿಗೆ ಬಂದು

ಅಲ್ಲಿರುವ ಆನೆ ಒಂಟೆ ಕುದುರೆ ಎತ್ತು ದನ ಕರು ಮೊದಲಾದ ಸಮಸ್ತ ಪಶುಪ್ರಾಣಿಗಳಿಗೂ ವಿವಿಧ ಭೋಗ್ಯಪದಾರ್ಥಾಪೇಕ್ಷಿಗಳಾದ ರಾಜಸೇನಾಜನಗಳಿಗೂ ಅಗತ್ಯವಾದ ಪದಾರ್ಥಗಳನ್ನು ಯಥೇಚ್ಛವಾಗಿ ಒದಗಿಸಿಕೊಟ್ಟು ಅವರವರ ಇಷ್ಟದಂತೆ ಸೇವೆಮಾಡುವುದಕ್ಕೆ ಅಸಂಖ್ಯಾತ ದಾಸ ದಾಸೀಜನರನ್ನೂ ಉಂಟುಮಾಡಿ ಕಾರ್ತವೀರ್ಯಾರ್ಜುನನಿಗೂ ಆತನ ಸಂಗಡ ಬಂದಿದ್ದ ಸಾಮಂತರಾಜಮಂಡಲಿಗೂ ವಾಚಾತೀತವಾದ ರಾಜೋಪಚಾರಗಳಿಂದ ತೃಪ್ತಿಪಡಿಸಿ ಸರ್ವರೂ ಸಂತೋಷಪಟ್ಟುದನ್ನು ತಿಳಿದು ಅಲ್ಲಿಂದ ಮುನಿಯ ಬಳಿಗೆ ಬಂದು ತಾನು ನಡಿಸಿದ ವಿದ್ಯಮಾನವನ್ನೆಲ್ಲಾ ಯಥಾವತ್ತಾಗಿ ತಿಳಿಸಿ ಅವರ ಸನ್ನಿಧಿಯಲ್ಲಿ ಇರುತ್ತಿದ್ದಿತು.

ತರುವಾಯ ಸರ್ವೋಪಚಾರಗಳಿಂದ ಸಂತೃಪ್ತನಾದ ಕಾರ್ತವೀರ್ಯಾರ್ಜುನನು ಸಂತೋಷದಿಂದ ಕುಳಿತುಕೊಂಡು ಅರಣ್ಯವಾಸಿಯಾದ ಒಬ್ಬ ಮುನಿಯು ನಮ್ಮ ಈ ಅಪಾರವಾದ ಸೇನೆಗೆಲ್ಲಾ ಸಂತೃಪ್ತಿಯುಂಟಾಗುವಂತೆ ವಿವಿಧವಾದ ರಾಜೋಪಚಾರಗಳನ್ನು ಮಾಡಿಸಿದನಲ್ಲಾ ! ಲೋಕದಲ್ಲಿ ಯಾವ ಸಾಮ್ರಾಜ್ಯಾಧಿಪತಿಯಾದರೂ ಮಾಡಿಸಬಲ್ಲನೇ ? ಎಂದಿಗೂ ಮಾಡಿಸಲಾರನು. ಇದೆಲ್ಲಾ ಆ ಧೇನುವಿನ ಸಾಮರ್ಥ್ಯವು. ನಾನು ಅದನ್ನು ತೆಗೆದುಕೊಂಡು ಹೋದರೆ ನನ್ನ ಚಕ್ರವರ್ತಿತ್ವವು ಲೋಕದಲ್ಲಿ ಬಹಳ ಪ್ರಸಿದ್ಧವಾಗುವುದು ಎಂದೆಣಿಸಿ ಕೂಡಲೆ ಜಮದಗ್ನಿಯ ಬಳಿಗೆ ಬಂದು —ಎಲೈ ಮುನಿಯೇ, ಈಗ ನೀನು ಮಾಡಿಸಿದ ಸತ್ಕಾರದಿಂದ ನನ್ನ ಪರಿವಾರಗಳೊಡನೆ ನಾನೂ ಸಂತುಷ್ಟನಾದೆನು. ಇಂಥ ರಾಜೋಪಚಾರವು ನನ್ನ ಅರಮನೆಯಲ್ಲೂ ದುರ್ಲಭವೆಂದು ಯೋಚಿಸುತ್ತೇನೆ. ಮತ್ತು ಆಶ್ಚರ್ಯಪಡುತ್ತೇನೆ. ಆದರೆ ಈ ಭಾಗದಲ್ಲಿ ನನ್ನದೊಂದು ಮಾತಿರುವುದು. ಅದೇನೆಂದರೆ, ನಿರಂತರವಾಗಿ ನಿನ್ನ ಬಳಿಯಲ್ಲಿದ್ದುಕೊಂಡು ನೀನು ಹೇಳಿದಂತೆ ಸಕಲಾಭೀಷ್ಟವಸ್ತುಗಳನ್ನೂ ಉಂಟುಮಾಡುತ್ತಿರುವ ಈ ಕಾಮಧೇನುವನ್ನು ನನಗೆ ಕೊಡಬೇಕು. ಇದಕ್ಕೆ ಬದಲಾಗಿ ನೀನು ಅಪೇಕ್ಷಿಸಿದಷ್ಟು ಧನಕನಕ ವಸ್ತ್ರಾಭರಣ ದೇಶಕೋಶಗಳನ್ನು ಕೊಡುವೆನು ಎನ್ನಲು ; ಆಗ ಜಮದಗ್ನಿಯು ಕಾರ್ತವೀರ್ಯಾರ್ಜುನನನ್ನು ಕುರಿತು—ಇದನ್ನು ಯಾರಿಗಾದರೂ ಕೊಡುವುದಕ್ಕೆ ನಾನು ಬಾಧ್ಯನಲ್ಲ. ಇದು ಮಹಾತಪಸ್ವಿಗಳಾದ ಮುನಿಗಳು ಮಾಡತಕ್ಕ ಯಜ್ಞೀಯವಾದ ಕರ್ಮಗಳಿಗೆ ಅಗತ್ಯವಾದ ಹಾಲು ಮೊಸರು ಬೆಣ್ಣೆ ತುಪ್ಪ ಮೊದಲಾದ ವಸ್ತುಗಳನ್ನು ಒದಗಿಸಿಕೊಡುವುದಕ್ಕಾಗಿ ದೇವೇಂದ್ರನ ಅಪ್ಪಣೆಯಿಂದ ಈ ರೀತಿಯಾಗಿದ್ದುಕೊಂಡು ಮುನಿಜನಗಳ ಸೇವೆಯನ್ನು ಮಾಡುತ್ತಿರುವುದು ಎನ್ನಲು ; ಆ ಮೇಲೆ ಕಾರ್ತವೀರ್ಯಾರ್ಜುನನು—ಆಗಲಿ, ಇದನ್ನು ಕೊಡುವುದಕ್ಕೆ ನಿನಗೆ ಸಾಮರ್ಥ್ಯವಿಲ್ಲದಿದ್ದರೆ ನಾನೇ ಹಿಡಿದುಕೊಂಡು ಹೋಗುವೆನು ಎಂದು ಹೇಳಿ ಬಲಾತ್ಕಾರದಿಂದ ಆ ಸುರಭಿಯನ್ನು ಹಿಡಿದುಕೊಂಡು ತನ್ನ ಪಟ್ಟಣಕ್ಕೆ ತೆಗೆದುಕೊಂಡು ಹೋದನು.

ಇತ್ತ ಯಜ್ಞಕರ್ಮ ಸಾಧನವಾದ ಸಮಿದ್ದರ್ಭೆಗಳನ್ನು ತೆಗೆದುಕೊಂಡು ಬರುವುದಕ್ಕೋಸ್ಕರ ಅರಣ್ಯಕ್ಕೆ ಹೋಗಿದ್ದ ಪರಶುರಾಮನು ಸಮಿದ್ದರ್ಭೆಗಳನ್ನೂ ಗೋಗ್ರಾ

ಸವನ್ನೂ ತೆಗೆದುಕೊಂಡು ಆಶ್ರಮಕ್ಕೆ ಬಂದು ದರ್ಭೆ ಸಮಿತ್ತು ಇವುಗಳನ್ನು ಯಾಗ ಶಾಲೆಯಲ್ಲಿಟ್ಟು ಗೋಗ್ರಾಸವನ್ನು ತೆಗೆದುಕೊಂಡು ಎಂದಿನಂತೆ ಗೋವು ಇರುವ ಸ್ಥಳಕ್ಕೆ ಹೋಗಿ ನೋಡಲು ; ಅಲ್ಲಿ ಗೋವು ಇಲ್ಲದಿದ್ದುದರಿಂದ ಆಶ್ಚರ್ಯಾವಿಷ್ಟ ನಾಗಿ ಶೀಘ್ರದಿಂದ ತಂದೆಯಾದ ಜಮದಗ್ನಿಯ ಬಳಿಗೆ ಬಂದು—ಎಲೈ ತಂದೆಯೇ, ಈಗ ನಾನು ಧೇನುವಿಗೋಸ್ಕರ ಎಳೆ ಹುಲ್ಲನ್ನು ಬಹಳವಾಗಿ ತಂದಿದ್ದೇನೆ. ಗೋವು ಎಲ್ಲಿರುವುದು ? ಕಾಣುವುದಿಲ್ಲವಲ್ಲಾ ಎಂದು ಕೇಳಲು ; ಆಗ ಜಮದಗ್ನಿಯು— ಗೋವಿನ ವಿಷಯದಲ್ಲಿ ಕಾರ್ತವೀರ್ಯಾರ್ಜುನನು ಮಾಡಿದ ಬಲಾತ್ಕಾರದ ಸಂಗತಿ ಯನ್ನು ಯಥಾವತ್ತಾಗಿ ತಿಳಿಸಿದನು. ಅದನ್ನು ಕೇಳಿ ಪರಶುರಾಮನು ಮಹಾ ಕೋಪಸಂತಾಪಾವಿಷ್ಟನಾಗಿ—ಅಕಟಕಟಾ ! ನೀಚರಾದ ಅರಸುಗಳಿಗೆ ಮುನಿಜನಗಳ ವಸ್ತುವನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಹೋಗುವ ಶಕ್ತಿಯುಂಟಾಯಿತೇ ? ಕಂದಮೂಲಾದ್ಯಾಹಾರಗಳನ್ನು ಮಾಡಿಕೊಂಡು ಕೃಶಾಂಗಿಗಳಾಗಿ ಅರಣ್ಯವಾಸಿಗ ಳಾಗಿರುವವರು ಏನು ಮಾಡಬಲ್ಲರೆಂದು ಯೋಚಿಸಿದನೇ ? ಮೂಢನಾದ ಅವನು ತನ್ನ ಚಕ್ರವರ್ತಿತ್ವದ ಹೆಮ್ಮೆಯನ್ನು ನಮ್ಮಲ್ಲಿ ತೋರಿಸಿದನೇ ? ಯಾವ ಪ್ರಾಣಿಗಾದರೂ ಉಪದ್ರವವನ್ನುಂಟುಮಾಡದೆ ಕಾಡಿನಲ್ಲಿ ಎಲೆಮನೆಯೊಳಗೆ ವಾಸಮಾಡಿಕೊಂಡಿರುವ ಮಹಾತ್ಮರಾದ ತಪಸ್ವಿಗಳನ್ನು ಸಾಧಾರಣರೆಂದು ಬಗೆದನೇ ? ಒಳ್ಳೆಯದು ! ಆಗಲಿ ! ಅವನ ಪರಾಕ್ರಮವನ್ನು ನೋಡುವೆನೆಂದು ಹೇಳಿ ಅಮೋಘವಾದ ಕವಚವನ್ನು ತೊಟ್ಟುಕೊಂಡು ಬಿಲ್ಲು ಬತ್ತಳಿಕೆ ಕೊಡಲಿಗಳನ್ನು ತೆಗೆದುಕೊಂಡು ಮಹಾ ಕೋಪ ದಿಂದ ಪರವಶನಾಗಿ ಆ ಕ್ಷಣದಲ್ಲಿಯೇ ಆಶ್ರಮದಿಂದ ಹೊರಟು ಮಾಹಿಷ್ಮತೀನಗರದ ಬಳಿಗೆ ಬಂದು ಊರು ಬಾಗಿಲನ್ನು ಅತಿಕ್ರಮಿಸಿ ಗೋಪುರದ್ವಾರವನ್ನು ದಾಟಿ ಬಂದು ರಾಜದ್ವಾರದ ಬಳಿಯನ್ನು ಸೇರಿ ಅಲ್ಲಿ ನಿಂತು ಬಾಗಿಲು ಕಾಯುವವರನ್ನು ಕರೆದು— ಎಲೈ ದ್ವಾರಪಾಲಕರೇ, ನೀವು ನಿಮ್ಮ ಅರಸನ ಬಳಿಗೆ ಹೋಗಿ ನಾವು ಹೇಳಿದುದಾಗಿ ಹೇಳತಕ್ಕುದೇನೆಂದರೆ, ಲೋಕದಲ್ಲಿ ಜನರಿಗೆ ವಿನಾಶಕಾಲದಲ್ಲಿ ವಿಪರೀತ ಬುದ್ಧಿಗಳು ಹುಟ್ಟುವುವೆಂದು ದೊಡ್ಡವರು ಹೇಳುವ ಮಾತು ಈಗ ನಿನ್ನಲ್ಲಿ ಯಥಾರ್ಥವಾಯಿತು. ನಮ್ಮ ತಂದೆಯು ಪ್ರೀತಿಯಿಂದ ಕರೆದು ನಿನಗೆ ಸತ್ಕಾರಮಾಡಿದುದು ಪಥ್ಯವನ್ನಿಕ್ಕಿ ಉಣ್ಣಿಸಿದವನ ಬೆರಳನ್ನು ಕಚ್ಚಿದನೆಂಬ ಗಾಥೆಗೆ ಸರಿಯಾಗಿ ನಮ್ಮ ಹೋಮಧೇನು ವನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಬಂದೆಯಲ್ಲಾ! ಇದು ನಿನಗೆ ನ್ಯಾಯವೇ? ಸತ್ತ ದನದ ಚರ್ಮದಲ್ಲಿ ಮಾಡಿದ ತಿದಿಯ ದೆಸೆಯಿಂದ ಹೊರಡುವ ಉಸಿರುಗಳು ಕಠಿಣತರವಾದ ಪಂಚಲೋಹಗಳನ್ನು ಸುಟ್ಟು ಬೂದಿಮಾಡುವುವು ಹೀಗಿರುವಲ್ಲಿ ತಪಸ್ವಿಗಳಾಗಿಯೂ ತೇಜಸ್ವಿಗಳಾಗಿಯೂ ಇರುವ ಬ್ರಹ್ಮಜ್ಞಾನಿಗಳ ಸಂತಾಪದ ನಿಟ್ಟುಸಿರುಗಳು ಅಪರಾಧಿಯ ಕುಲಕೋಟಿಗಳನ್ನು ನಿಮೇಷಮಾತ್ರದಲ್ಲಿ ಸುಟ್ಟು ಭಸ್ಮೀಭೂತಮಾಡದೆ ಇರುವುವೇ ? ಇದೋ, ನೀನು ನಮ್ಮ ತಂದೆಯಾದ ಜಮ ದಗ್ನಿಗೆ ದ್ರೋಹವನ್ನು ಮಾಡಿ ವ್ಯಸನದಿಂದ ಆತನಿಗೆ ನಿಟ್ಟುಸಿರುಗಳು ಹೊರಡುವ ಹಾಗೆ ಮಾಡಿದ ನಿನ್ನ ಪ್ರಾಣಗಳನ್ನು ನಿನ್ನ ಮೂಗಿನ ಮೂಲಕ ಹೊರಡಿಸುವುದಕ್ಕೆ

ಆ ಮಹಾತ್ಮನಾದ ಜಮದಗ್ನಿಯ ಹೊಟ್ಟೆಯಲ್ಲಿ ಹುಟ್ಟಿದ ಪರಶುರಾಮನಾಮಕನಾದ ನಾನು ಬಂದಿದ್ದೇನೆ. ನಿನಗೆ ಪುತ್ರಮಿತ್ರಕಳತ್ರಾದಿಗಳೊಡನೆ ಕೂಡಿ ಇನ್ನೂ ಭೂಲೋಕದಲ್ಲಿ ಬಾಳಬೇಕೆಂಬ ಅಪೇಕ್ಷೆಯಿದ್ದರೆ ಬೇಗದಿಂದ ನಮ್ಮ ಧೇನುವನ್ನು ತೆಗೆದುಕೊಂಡು ಬಂದು ಒಪ್ಪಿಸಿ ಶರಣಾಗತನಾದರೆ ಮನ್ನಿಸಿಬಿಡುವೆನು. ಅದು ನಿನ್ನ ಮನಸ್ಸಿಗೆ ಸರಿಬಾರದೆ ಸಾಯುವುದಕ್ಕೆ ಆಶೆಯಿದ್ದರೆ ನಿನ್ನ ಚತುರಂಗಬಲ ದೊಡನೆ ಕೂಡಿ ನಮ್ಮೊಡನೆ ಯುದ್ಧಕ್ಕೆ ಬರಬೇಕು ಎಂಬುದೇ ಎಂದು ಹೇಳಿ ಕಳುಹಿಸಲು; ಅವರು ಶೀಘ್ರವಾಗಿ ಕಾರ್ತವೀರ್ಯಾರ್ಜುನನ ಬಳಿಗೆ ಬಂದು ಅವನೊಡನೆ— ಪರಶುರಾಮನು ಹೇಳಿದ ಮಾತುಗಳಲ್ಲಿ ಸ್ವಲ್ಪವಾದರೂ ಹೆಚ್ಚುಕಡಮೆಯಾಗದಂತೆ ಹೇಳಿದರು.

ಆ ಮಾತುಗಳನ್ನು ಕೇಳಿ ಕಾರ್ತವೀರ್ಯಾರ್ಜುನನು ನಸುನಕ್ಕು—ಅಹಹ! ತಿಥಿಕಾಲಗಳಲ್ಲಿ ಅಂದವಾಗಿ ಕುಳಿತುಕೊಂಡು ಪರಾನ್ನವನ್ನು ಮಿತಿಮೀರಿ ತಿಂದು ಹೊಟ್ಟೆ ಹೊರೆಯುವ ಹಾರವರಿಗೆ ಪರಮತೇಜಸ್ವಿಗಳಾಗಿ ಚಕ್ರವರ್ತಿಗಳಾದ ನಮ್ಮಂಥ ಕ್ಷತ್ರಿಯೋತ್ತಮರೊಡನೆ ಸೆಣಸುವ ಶಕ್ತಿಯುಂಟಾದುದಲ್ಲಾ! ಇದೇನೋ ಕಾಲಗತಿಯೇ ಸರಿ. ಈ ದುಷ್ಟನೂ ಅವಿವೇಕಿಯೂ ಆದ ಮುನಿವಟುವಿನ ಕೆಟ್ಟ ಮಾತುಗಳಿಂದ ಕೋಪವುಳ್ಳವನಾಗಿ ನಾನು ಯುದ್ಧಕ್ಕೆ ಹೋದರೆ ಆ ಯುದ್ಧದಲ್ಲಿ ಮಹಾ ಕೋಪಪರವಶನಾದ ನನ್ನಿಂದ ಅವನು ಹತನಾದರೆ ನನಗೆ ಬ್ರಹ್ಮಹತ್ಯೆಯು ಬಂದು ಸಂಘಟಿಸುವುದು. ಅದಲ್ಲದೆ ಬ್ರಾಹ್ಮಣನ ಪದಾರ್ಥವು ನಮಗೇಕೆ? ಆ ಧೇನುವನ್ನು ಹಿಂದಕ್ಕೆ ಕೊಟ್ಟುಬಿಟ್ಟರೆ ಚಕ್ರವರ್ತಿಯಾದ ಕಾರ್ತವೀರ್ಯಾರ್ಜುನನು ಬ್ರಾಹ್ಮಣವಟುವಿನೊಡನೆ ಯುದ್ಧಮಾಡುವುದಕ್ಕೆ ಕೈಲಾಗದೆ ಹೆದರಿ ಹಿಡಿದುತಂದ ಧೇನುವನ್ನು ತಿರಿಗಿ ಅವನಿಗೆ ಕೊಟ್ಟುಬಿಟ್ಟನು ಎಂದು ಲೋಕದಲ್ಲಿ ಅಪಕೀರ್ತಿಯುಂಟಾಗುವುದು. ಈ ಅಸಂಗತವಾದ ಕಾರ್ಯಕ್ಕೆ ಏನು ಮಾಡಬೇಕು? ಎಂದು ಒಂದು ಗಳಿಗೆಯ ವರೆಗೂ ಯೋಚಿಸಿ ಆ ಹುಡುಗನನ್ನು ಕೊಂದುಹಾಕದೆ ಅವನ ಅವಿವೇಕಜನ್ಯವಾದ ಕೊಬ್ಬನ್ನು ಮುರಿದು ಅವನನ್ನು ಹಿಡಿದುತಂದು ಸೆರೆಯಲ್ಲಿಟ್ಟುಬಿಡಬೇಕು. ತರುವಾಯ ಅವನ ತಂದೆಯಾದ ಜಮದಗ್ನಿಯು ಬಂದು ಬೇಡಿಕೊಂಡರೆ ಬಿಟ್ಟುಬಿಡೋಣ ಎಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ತನ್ನ ದಳಪತಿಗಳನ್ನು ಕರೆದು—ನೀವು ನಿಮ್ಮ ಸೇನೆಗಳೊಡನೆ ಕೂಡಿ ಆ ಮುನಿಪುತ್ರನ ಬಳಿಗೆ ಹೋಗಿ ಅವನೊಡನೆ ಜಗಳವಾಡಿ ಅವನನ್ನು ಕೈಸೆರೆಯಾಗಿ ಹಿಡಿದುಕೊಂಡು ಬನ್ನಿರೆಂದು ಅಪ್ಪಣೆಕೊಟ್ಟು ಕಳುಹಿಸಿದನು.

ಅವರು ಆ ಕೂಡಲೆ ಚತುರಂಗಬಲಸಮೇತರಾಗಿ ಬಂದು ಪರಶುರಾಮನನ್ನು ಮುತ್ತಿಕೊಳ್ಳಲು; ಆಗ ಪರಶುರಾಮನು ಮಹೋಗ್ರಕೋಪಕಷಾಯಿತಾಕ್ಷನಾಗಿ ಬಂದ ಶತ್ರುಸೇನೆಯಲ್ಲಿ ಹಿಂದಿರುಗಿ ಹೋಗಿ ಸುದ್ದಿಯನ್ನು ಹೇಳುವುದಕ್ಕೆ ಒಬ್ಬನಾದರೂ ಉಳಿಯದಂತೆ ಎಲ್ಲರನ್ನೂ ತನ್ನ ಕೈಕೊಡಲಿಯಿಂದ ಕಡಿದು ಮಲಗಿಸಿದನು. ಕಾರ್ತವೀರ್ಯಾರ್ಜುನನು ಆ ಸುದ್ದಿಯನ್ನು ಕೇಳಿ ಪ್ರಳಯಾಗ್ನಿಗೆ ಸಮಾನವಾದ

ಕೋಪವುಳ್ಳವನಾಗಿ ಸಮಸ್ತಾಯುಧಗಳನ್ನೂ ಧರಿಸಿ ಬಂದು ಪರಶುರಾಮನೊಡನೆ ಯುದ್ಧಕ್ಕೆ ನಿಂತು ಅಹೋರಾತ್ರಿಗಳಲ್ಲೂ ಎಡೆಬಿಡದೆ ಇಪ್ಪತ್ತೇಳು ದಿನಗಳ ವರೆಗೂ ಘೋರ ಯುದ್ಧವನ್ನು ಮಾಡಿ ಕಡೆಗೆ ಮಹಾ ಶೂರನಾದ ಪರಶುರಾಮನ ಕೊಡಲಿ ಯಿಂದ ಕಡಿಯಲ್ಪಟ್ಟ ತೋಳು ತಲೆಗಳುಳ್ಳವನಾಗಿ ನೆಲದಲ್ಲಿ ಒರಗಿ ಪ್ರಾಣಗಳನ್ನು ಬಿಟ್ಟನು. ಅದನ್ನು ನೋಡಿ ಆ ನಗರದ ಜನರೆಲ್ಲರೂ ಭಯದಿಂದ ಗಾಬರಿಯಾಗಿ ದಿಕ್ಕುದಿಕ್ಕಿಗೆ ಓಡಿಹೋದರು. ತರುವಾಯ ಶೂರಕುಲತಿಲಕನಾದ ಪರಶುರಾಮನು ಕಾರ್ತವೀರ್ಯಾರ್ಜುನನ ಅರಮನೆಯನ್ನು ಹೊಕ್ಕು ಅಲ್ಲಿ ಕಟ್ಟಿರುವ ತನ್ನ ಹೋಮ ಧೇನುವನ್ನು ನೋಡಿ ಅದರ ಮೈಯನ್ನೆಲ್ಲಾ ತುರಿಸಿ ಗೊಂತಿನಿಂದ ಬಿಚ್ಚಿ ತನ್ನ ಆಶ್ರ ಮಕ್ಕೆ ಹೊರಟುಬಂದನು. ಆ ಧೇನವೂ ಅವನೊಡನೆಯೇ ಆಶ್ರಮಕ್ಕೆ ಬಂದಿತು. ಅದನ್ನು ನೋಡಿ ಜಮದಗ್ನಿಯು ಪರಮಸಂತೋಷಯುಕ್ತನಾಗಿ ತನ್ನ ಮಗನನ್ನೂ ಆ ಧೇನುವನ್ನೂ ಬೇರೆ ಬೇರೆಯಾಗಿ ಆಲಿಂಗಿಸಿಕೊಂಡು ಮುದ್ದಿಸಿ ನಲಿದಾಡಿದನು.

ಅನಂತರದಲ್ಲಿ ಇತ್ತ ಮಾಹಿಷ್ಮತೀ ಪಟ್ಟಣದಲ್ಲಿ ಕಾರ್ತವೀರ್ಯಾರ್ಜುನನ ಮಕ್ಕಳು ತಂದೆಯು ಸತ್ತುಹೋದುದರಿಂದ ಬಹಳ ವ್ಯಸನಾಕ್ರಾಂತರಾಗಿ—ಒಬ್ಬ ಬ್ರಹ್ಮಚಾರಿಯಾದ ಹುಡುಗನು ಬಂದು ದಿಗ್ವಿಜಯವನ್ನು ಮಾಡಿದ ಮಹಾಶೂರನೂ ಚಕ್ರವರ್ತಿಯೂ ಆದ ನಮ್ಮ ತಂದೆಯನ್ನು ಕೊಂದುಹಾಕಿದನಲ್ಲಾ ! ಅವನ ಪರಾಕ್ರ ಮವನ್ನು ಎಷ್ಟೆಂದು ಹೇಳೋಣ ? ಆದರೂ ಕ್ಷತ್ರಿಯರಾದ ನಾವು ವೈರನಿರ್ಯಾತ ನಾರ್ಥವಾಗಿ ಹೋಗಿ ಆತನ ತಂದೆಯನ್ನು ಕೊಂದುಹಾಕಿದ ಹೊರತು ನಮ್ಮ ದುಃಖವು ತೀರುವುದಿಲ್ಲ. ನಾವು ಈ ಕೆಲಸವನ್ನು ಮಾಡುವುದು ಆ ದುಷ್ಟ ನಾದ ಪರಶುರಾಮನು ಆಶ್ರಯದಲ್ಲಿರುವ ಕಾಲದಲ್ಲಿ ಎಂದಿಗೂ ಸಾಧ್ಯವಾಗುವು ದಿಲ್ಲ. ಅವನು ಮಹಾದುಷ್ಟನು. ನಾವು ಈ ರೀತಿಯಾಗಿ ಮಾಡಿದ ಯೋಚನೆಯು ಸ್ವಲ್ಪಮಟ್ಟಿಗೆ ತಿಳಿದಾಗ್ಯೂ ಕೂಡಲೆ ಆ ಪರಶುರಾಮನು ಬಂದು ನಮ್ಮನ್ನು ಮೂಲೋತ್ಪಾಟನ ಮಾಡದೆ ಬಿಡುವುದಿಲ್ಲ. ನಾವು ರಹಸ್ಯದಿಂದ ಅವನ ತಂದೆಯನ್ನು ಕೊಂದುಹಾಕಿದ ಮೇಲೆ ಆ ಪರಶುರಾಮನು ಬಂದು ನಮ್ಮನ್ನು ಕೊಂದುಹಾಕಿದರೂ ಹಾಕಲಿ ಎಂದು ತಮ್ಮ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಕೂಡಲೆ ಜಮದಗ್ನಿಯ ಆಶ್ರಯಕ್ಕೆ ಬಂದು ಪರಶುರಾಮನು ಆಶ್ರಮವನ್ನು ಬಿಟ್ಟು ಹೊರಗೆ ಹೋಗುವ ವರೆಗೂ ಒಂದು ಸ್ಥಳದಲ್ಲಿ ರಹಸ್ಯವಾಗಿ ಅವಿತುಕೊಂಡಿದ್ದು ಒಂದು ದಿವಸ ಅವನು ಗೋಗ್ರಾಸಾ ರ್ಥವಾಗಿ ಕಾಡಿಗೆ ಹೋದುದನ್ನು ತಿಳಿದು ಜಮದಗ್ನಿಯ ಪರ್ಣಶಾಲೆಯನ್ನು ಹೊಕ್ಕು ಕಣ್ಣುಗಳನ್ನು ಮುಚ್ಚಿಕೊಂಡು ಯೋಗಧ್ಯಾನಾಸಕ್ತನಾಗಿದ್ದ ಜಮದಗ್ನಿಯ ತಲೆ ಯನ್ನು ಕತ್ತಿಯಿಂದ ಕಡಿದು ಕೆಡಹಿ ಓಡಿಹೋದರು.

ಆ ತರುವಾಯ ರಾಮನು ಎಂದಿನಂತೆ ಗೋಗ್ರಾಸವನ್ನು ತೆಗೆದುಕೊಂಡು ಆಶ್ರ ಮಕ್ಕೆ ಬಂದು ಮಹಾ ದುಃಖಸಾಗರದಲ್ಲಿ ಮುಳುಗಿ ಗಟ್ಟಿಯಾಗಿ ರೋದಿಸುತ್ತಿರುವ ತಾಯಿ ಮೊದಲಾದವರನ್ನು ಕಂಡು ಭಯಾಶ್ಚರ್ಯಗ್ರಸ್ತನಾಗಿ ಕಡೆಗೆ ದುರಾತ್ಮರಾದ ಕಾರ್ತವೀರ್ಯಾರ್ಜುನನ ಮಕ್ಕಳು ಮಾಡಿದ ದುಷ್ಕೃತ್ಯವೆಂದು ನೋಡಿ ತಿಳಿದು—

ಅಕಟಕಟಾ! ಈ ಭೂಲೋಕದಲಿ ದುರಾತ್ಮರಾದ ಕ್ಷತ್ರಿಯರು ಕರ್ತವ್ಯಾಕರ್ತವ್ಯಗಳನ್ನು ತಿಳಿಯದೆ ಉನ್ಮತ್ತರಾಗಿ ಸಜ್ಜನರನ್ನು ಬಹಳವಾಗಿ ಬಾಧಿಸುತ್ತಿದ್ದಾರೆ. ಈ ಪಾಪಾತ್ಮರ ಹುಟ್ಟನ್ನೇ ಹಾಳುಮಾಡಿ ಈ ಭೂಮಂಡಲವನ್ನೆಲ್ಲಾ ಬ್ರಾಹ್ಮಣರ ಸ್ವಾಧೀನಮಾಡುವೆನು ಎಂದು ಹೇಳಿ ಮೃತನಾದ ತಂದೆಗೆ ಮಾಡಬೇಕಾದ ಕರ್ಮಗಳನ್ನೆಲ್ಲಾ ವಿಧಿವತ್ತಾಗಿ ನೆರವೇರಿಸಿ ಕೂಡಲೆ ಪ್ರಳಯಕಾಲದ ರುದ್ರನಂತೆ ಮೊರೆದು ಕೊಡಲಿಯನ್ನು ತೆಗೆದುಕೊಂಡು ಹೊರಟು ಭೂಲೋಕದಲ್ಲಿರುವ ಕ್ಷತ್ರಿಯಜಾತಿಯ ಒಂದು ಗಂಡುಪಿಳ್ಳೆಯನ್ನಾದರೂ ಬಿಡದೆ ಇಪ್ಪತ್ತೊಂದು ಸಾರಿ ಪುನಃ ಪುನಃ ಹುಡುಕಿಕೊಂಡು ಸುತ್ತಿ ಕೊಡಲಿಯಿಂದ ಕಡಿದು ಆ ಕ್ಷತ್ರಿಯರ ರಕ್ತನದೀಪ್ರವಾಹದಲ್ಲಿ ಮಿಂದು ಆ ರಕ್ತಜಲದಿಂದಲೇ ಸತ್ತ ತಂದೆಗೆ ತರ್ಪಣವನ್ನು ಕೊಟ್ಟು ಭೂಮಂಡಲವನ್ನೆಲ್ಲಾ ಕಶ್ಯಪರಿಗೆ ದಾನಮಾಡಿ ದಾನವಾಗಿ ಕೊಟ್ಟ ಮೇಲೆ ಆ ಭೂಮಿಯಲ್ಲಿ ತಾನಿರಬಾರದೆಂದು ಯೋಚಿಸಿ ಪಡುವಣ ಕಡಲ ಬಳಿಗೆ ಬಂದು ಸಮುದ್ರರಾಜನಿಗೆ ಹನ್ನೆರಡು ಗಾವುದಗಳಷ್ಟು ಹಿಂದಕ್ಕೆ ಹೋಗುವಂತೆ ಹೇಳಲು ; ಅವನು ಅದರಂತೆ ಬಿಟ್ಟು ಹಿಂದಕ್ಕೆ ಹೋದ ಸ್ಥಳದಲ್ಲಿರುವ ಮಹೇಂದ್ರ ಪರ್ವತದಲ್ಲಿ ತಪಸ್ಸುಮಾಡಿಕೊಂಡು ನಿರ್ವ್ಯಸನದಿಂದಿದ್ದನು.

ಇತ್ತಲಾ ಕಶ್ಯಪಮುನಿಯು—ಪರಶುರಾಮನು ತನಗೆ ದಾನವಾಗಿ ಕೊಟ್ಟ ಭೂಮಂಡಲವನ್ನು ಯಾರಿಗೆ ಕೊಡಬೇಕೆಂದು ಯೋಚಿಸಿ ಭೂಮಂಡಲದಲ್ಲಿ ಯಾರಾದರೂ ಕ್ಷತ್ರಿಯರಿದ್ದಾರೋ ಎಂದು ಹುಡುಕುತ್ತ ಅಯೋಧ್ಯಾಪಟ್ಟಣಕ್ಕೆ ಬಂದು ಅಲ್ಲಿ ಪರಶುರಾಮನ ಸಂಹಾರಕಾಲದಲ್ಲಿದ್ದ ಒಬ್ಬ ಹತ್ತು ವರುಷದ ಗಂಡುಮಗನಿಗೆ ಹೆಂಗಸರೆಲ್ಲಾ ಕೂಡಿ ಸ್ತ್ರೀವೇಷವನ್ನು ಹಾಕಿ ಸೀರೆಯನ್ನುಡಿಸಿ ಪುರುಷರೂಪನ್ನು ಮರಿಸಿಟ್ಟಿದ್ದುದರಿಂದ ಭೂಮಂಡಲವನ್ನೆಲ್ಲಾ ಅವನಿಗೆ ಕೊಟ್ಟು ತಾನು ತಪಸ್ಸಿಗೆ ಹೋದನು. ಆ ಸೂರ್ಯವಂಶದಲ್ಲಿ ಮಹಾವಿಷ್ಣುವು ತನ್ನ ಪೂರ್ಣಾಂಶದಿಂದ ರಾವಣಸಂಹಾರಾರ್ಥವಾಗಿ ರಾಮನಾಮದಿಂದ ಅವತರಿಸಿ ಶಿವಧನಸ್ಸನ್ನು ಮುರಿದು ಸೀತೆಯನ್ನು ಮದುವೆಯಾಗಿ ಬರುವ ದಾರಿಯಲ್ಲಿ ಪರಶುರಾಮನು ರಾಮನೊಡನೆ ಯುದ್ಧಕ್ಕೆ ನಿಂತು ತನ್ನ ವಿಷ್ಣ್ವಂಶವನ್ನು ಅವನಿಗೆ ಒಪ್ಪಿಸಿ ತಾನು ತಪಸ್ಸಿಗೆ ಹೊರಟುಹೋದನು. ತರುವಾಯ ಚಕ್ರರಾಜನು ಕಾರ್ತವೀರ್ಯಾರ್ಜುನನ ಜನ್ಮವನ್ನು ನೀಗಿ ಅಹಂಕಾರಶೂನ್ಯನಾಗಿ ವೈಕುಂಠವನ್ನು ಹೊಕ್ಕು ಮಹಾವಿಷ್ಣುವಿಗೆ ನಮಸ್ಕರಿಸಿ—ಎಲೈ ಮಹಾತ್ಮನೇ, ನಾನು ಅಲ್ಪನು, ಮೂಢನು ಮತ್ತು ದುರಹಂಕಾರಿಯು. ಮಹಾತ್ಮನಾದ ನಿನ್ನ ಪಾದ ಸನ್ನಿಧಾನದಲ್ಲಿ ಕೇವಲ ಅಜ್ಞಾನಿಯಾದ ನಾನು ಮಾಡಿದ ಅಪರಾಧವನ್ನು ಕ್ಷಮಿಸಿ ನನ್ನನ್ನು ಕಾಪಾಡಬೇಕೆಂದು ಬೇಡಿಕೊಂಡುದರಿಂದ ಕರುಣಾಳುವಾದ ವಿಷ್ಣುವು ಹಾಗೆಯೇ ಅವನ ಅಪರಾಧವನ್ನು ಮನ್ನಿಸಿ ಯಥಾಪ್ರಕಾರವಾಗಿ ಆ ಚಕ್ರಾಯುಧವನ್ನು ತನ್ನ ಬಲಗೈಯಲ್ಲಿ ಧರಿಸಿಕೊಂಡನು.

---

*For the Seventh or Rama Incarnation, see pages 32—209.*

**ರಾಮಾವತಾರದ ಕಥೆ. ಪುಟ ೩೨—೨೦೯ ನೋಡಿರಿ.**

## 7. THE EIGHTH OR KRISHNA INCARNATION.

### ೭. ಕೃಷ್ಣಾವತಾರದ ಕಥೆ.

ದ್ವಾಪರಯುಗದಲ್ಲಿ ದುಷ್ಟರಾದ ದಾನವರೂ ದೈತ್ಯರೂ ಧರಣೀಪಾಲಕರೂ ಹೆಚ್ಚಿ ಪಾಪವು ಬಹಳವಾದುದರಿಂದ ಭೂದೇವಿಯು ಆ ಭಾರವನ್ನು ಸಹಿಸಲಾರದೆ ತನ್ನನ್ನು ಸೃಷ್ಟಿಸಿದ ಚತುರ್ಮುಖಬ್ರಹ್ಮನ ಬಳಿಗೆ ಬಂದು ಆತನಿಗೆ ನಮಸ್ಕರಿಸಿ— ಎಲೈ ಸೃಷ್ಟಿಕರ್ತನೇ, ಈಗ ಅನೇಕ ದುಷ್ಟರು ಹುಟ್ಟಿ ದುರ್ಮಾರ್ಗಪ್ರವರ್ತಕರಾಗಿದ್ದಾರೆ. ನಾನು ಅವರ ಭಾರವನ್ನು ಸಹಿಸಲಾರೆನು, ಅದುಕಾರಣ ಲೋಕರಕ್ಷಕನಾದ ನೀನು ಅವರನ್ನು ಸಂಹರಿಸಿ ನನಗೆ ಭಾರವು ತಪ್ಪುವ ಹಾಗೆ ಮಾಡಬೇಕೆಂದು ಬೇಡಿಕೊಳ್ಳಲು ; ಆಗ ಬ್ರಹ್ಮನು ಆ ಭೂದೇವಿಯನ್ನು ಸಂಗಡ ಕರೆದುಕೊಂಡು ಸಕಲ ದೇವಗಣಸಮೇತನಾಗಿ ಹೊರಟು ಕ್ಷೀರಸಮುದ್ರವನ್ನು ಸೇರಿ ಅಲ್ಲಿ ಮಹಾವಿಷ್ಣುವನ್ನು ಅನೇಕ ವಿಧವಾಗಿ ಸ್ತುತಿಸಿ ದುಷ್ಟರಿಂದ ಧರಣಿಗೆ ಉಂಟಾಗಿರುವ ಭಾರವನ್ನು ಪರಿಹರಿಸಿ ಕಾಪಾಡಬೇಕೆಂದು ಬೇಡಿಕೊಂಡನು.

ಆಗ ಗರುಡಾರೂಢನಾದ ಶ್ರೀ ಮಹಾವಿಷ್ಣುವು ಬ್ರಹ್ಮಾದಿಗಳಿಗೆ ಪ್ರತ್ಯಕ್ಷನಾಗಿ ಮುಗುಳ್ನಗೆಯಿಂದ ಕೂಡಿ ಆ ಸರೋಜಸಂಭವನನ್ನು ಕುರಿತು—ಎಲೈ ಕಮಲಜನೇ, ನಾನು ಕೃತಯುಗದಲ್ಲಿ ಅನೇಕಾವತಾರಗಳನ್ನು ಮಾಡಿ ಕೊಂದುಹಾಕಿದಂಥ ದೈತ್ಯ ದಾನವರೂ ತ್ರೇತಾಯುಗದಲ್ಲಿ ಸಂಹರಿಸಿದ ದೈತ್ಯರೂ ಈ ಕಲಿಯುಗದಲ್ಲಿ ತಿರಿಗಿ ಹುಟ್ಟಿ ಭೂಭಾರಕರಾಗಿರುವುದನ್ನು ಬಲ್ಲೆನು. ಈ ವಿಷಯದಲ್ಲಿ ನಾನು ನಿಮಗೆ ಹೇಳುವೆನು. ಕೇಳಿರಿ. ಕಾಲನೇಮಿಯೆಂಬ ದೈತ್ಯನು ಕಂಸಾಸುರನಾಗಿಯೂ ವರಾಹಾವತಾರದಲ್ಲಿ ನನ್ನ ಸಂಬಂಧದಿಂದ ಭೂಮಿಗೆ ಉಂಟಾದ ಮಗನು ನರಕಾಸುರನಾಗಿಯೂ ಕುಂಭಕರ್ಣನು ದಂತವಕ್ರನಾಗಿಯೂ ರಾವಣನು ಶಿಶುಪಾಲನಾಗಿಯೂ ಪೂರ್ವದಲ್ಲಿ ನಾನು ರಸಾತಲಕ್ಕೆ ಮೆಟ್ಟಿದ ಬಲಿಚಕ್ರವರ್ತಿಯ ಮಗನು ಬಾಣಾಸುರನಾಗಿಯೂ ಇನ್ನೂ ಅನೇಕರಾದ ದೈತ್ಯರು ಸಾಲ್ವ ಮಗಧಾದಿ ದುಷ್ಟರಾಗಿಯೂ ಹುಟ್ಟಿರುವರು. ದ್ವಾದಶಾದಿತ್ಯರ ತಾಯಿತಂದೆಗಳಾದ ದಿತಿಯೂ ಕಶ್ಯಪನೂ ವರುಣನ ಶಾಪದಿಂದ ವಸುದೇವನೆಂದೂ ದೇವಕೀದೇವಿಯೆಂದೂ ಭೂಲೋಕದಲ್ಲಿ ಹುಟ್ಟಿ ಗಂಡಹೆಂಡಿರಾಗಿರುವರು. ನಾನು ಮೊದಲು ಅವರನ್ನು ಕುರಿತು—ನಾನು ನಿಮಗೆ ಮಗನಾಗಿ ಹುಟ್ಟುವೆನೆಂದು ಅವರಿಗೆ ವರವನ್ನು ಕೊಟ್ಟಿರುವೆನು. ಅದೇ ಪ್ರಕಾರ ನಾನು ಅವರಿಗೆ ಮಗನಾಗಿ ಹುಟ್ಟಿ ಕಂಸಾದಿ ದುಷ್ಟರನ್ನು ಕೊಲ್ಲುವೆನು. ನೀವೆಲ್ಲರೂ ದೇವತೆಗಳ ಅಂಶದಿಂದ ನನಗೆ ಸಹಾಯಕರಾಗಿ ಹುಟ್ಟಿರಿ ಎಂದು ಹೇಳಿ ಅಭಯವನ್ನು ಕೊಟ್ಟು ಕಳುಹಿಸಲು ; ಅವರೆಲ್ಲರೂ ಅಲ್ಲಿಂದ ಹೊರಟು ತಮ್ಮ ತಮ್ಮ ಲೋಕಗಳಿಗೆ ತೆರಳಿದರು.

ಇತ್ತಲು ಆರ್ಯಾವರ್ತವೆಂಬ ಪುಣ್ಯದೇಶದಲ್ಲಿ ಪ್ರಸಿದ್ಧವಾದ ಮಧುರಾ ಪಟ್ಟಣದಲ್ಲಿ ಧರ್ಮದಿಂದ ರಾಜ್ಯಭಾರವನ್ನು ಮಾಡುತ್ತಿದ್ದ ಯದುವಂಶೋತ್ಪನ್ನನಾದ

ಉಗ್ರಸೇನನೆಂಬ ರಾಜನಿಗೆ ಕ್ಷೀರಸಮುದ್ರದಲ್ಲಿ ವಿಷವು ಹುಟ್ಟಿದಂತೆ ಕಂಸನೆಂಬ ಒಬ್ಬ ದುಷ್ಟನಾದ ಮಗನು ಹುಟ್ಟಿ ಯೌವನವನ್ನು ಹೊಂದಿ ಮಹಾ ಪರಾಕ್ರಮಶಾಲಿಯಾಗಿ ಕೇವಲ ದುರ್ಮಾರ್ಗಿಯಾದುದರಿಂದ ತಂದೆಯಾದ ಉಗ್ರಸೇನನನ್ನು ನಿರ್ಬಂಧಿಸಿ ತಾನೇ ರಾಜ್ಯಭಾರವನ್ನು ಮಾಡುತ್ತ ದುಷ್ಟರಿಗೆ ಸಂತೋಷದಾಯಕನಾಗಿಯೂ ಸತ್ಪುರುಷರಿಗೆ ಎದೆಯ ಶೂಲಪ್ರಾಯನಾಗಿಯೂ ಇರುತ್ತ ದೇವಕೀದೇವಿಯೆಂಬ ತನ್ನ ತಂಗಿಯು ಪ್ರಾಯದವಳಾದುದನ್ನು ನೋಡಿ ಆಕೆಯನ್ನು ವಸುದೇವನೆಂಬವನಿಗೆ ಕೊಟ್ಟು ಅತಿಸಂಭ್ರಮದಿಂದ ವಿವಾಹವನ್ನು ಮಾಡಿ ನಾಕಬಲಿಯ ದಿವಸ ಆ ವಧೂವರರನ್ನು ದಿವ್ಯರಥದ ಮೇಲೆ ಕುಳ್ಳಿರಿಸಿ ತಾನೇ ಸಾರಥ್ಯವನ್ನು ಮಾಡುತ್ತ ಅತಿಸಂಭ್ರಮದಿಂದ ರಾಜವೀಥಿಯಲ್ಲಿ ಮೆರವಣಿಗೆಯನ್ನು ಮಾಡಿಸಿಕೊಂಡು ಮಹಾಸಂತೋಷದಿಂದ ಕೂಡಿದವನಾಗಿ ಬರುತ್ತಿದ್ದನು. ಆ ಸಮಯದಲ್ಲಿ—ಎಲೈ ಬುದ್ಧಿಶೂನ್ಯನಾದ ಕಂಸನೇ, ಮೂಢತ್ವದಿಂದ ಏಕೆ ಇಷ್ಟು ಸಂತೋಷಪಡುತ್ತಿರುವಿ? ಈ ನಿನ್ನ ತಂಗಿಯಾದ ದೇವಕಿಯ ಎಂಟನೆಯ ಬಸುರಿನಲ್ಲಿ ನಿನ್ನನ್ನು ಕೊಂದುಹಾಕುವ ಮಗನು ಹುಟ್ಟುವನು ಎಂದು ಆಕಾಶವಾಣಿಯು ಕೇಳಿಬಂದುದರಿಂದ ಆ ಕಂಸಾಸುರನು ಚಿಂತಾಕ್ರಾಂತನಾಗಿ ಮುಂತೋಚದೆ ಸ್ವಲ್ಪಕಾಲದ ವರೆಗೂ ದಿಗ್ಭ್ರಾಂತನಾಗಿದ್ದು ಕ್ರೂರಕರ್ಮಿಯಾದುದರಿಂದ—ಈ ದೇವಕಿಯು ಇದ್ದರಷ್ಟೆ ನನ್ನನ್ನು ಕೊಲ್ಲುವ ಮಕ್ಕಳು ಹುಟ್ಟುವುದು? ಈ ಕ್ಷಣದಲ್ಲೇ ಇವಳನ್ನೇ ಕಡಿದುಹಾಕುವೆನೆಂದು ಶೀಘ್ರವಾಗಿ ಒರೆಯಿಂದ ಕತ್ತಿಯನ್ನು ಹಿರಿಯಲು; ಆಗ ವಸುದೇವನು ಮಹಾ ವ್ಯಾಕುಲಿತಾಂತರಂಗನಾಗಿ ಕಂಸಾಸುರನನ್ನು ಕುರಿತು—ಎಲೈ ಮಹಾ ಪರಾಕ್ರಮಶಾಲಿಯೇ, ನೀನು ಇಂಥ ಶ್ರೇಷ್ಠವಾದ ಯದುವಂಶದಲ್ಲಿ ಹುಟ್ಟಿ ಅಪ್ರತಿಮಶೂರಪುರುಷನಾಗಿ ಹೇಡಿಗಳಂತೆ ಸ್ತ್ರೀಹತ್ಯೆಗೆ ಎಳೆಸಬಹುದೇ? ಈ ಸಾಮಾನ್ಯಕಾರ್ಯವು ಲೋಕಭೀಕರವಾದ ನಿನ್ನ ವಿಕ್ರಮಕ್ಕೆ ಅಪಮಾನಕರವಾಗಿಲ್ಲವೇ? ಅದುಕಾರಣ ಮಹಾ ವೀರಾಗ್ರೇಸರನಾದ ನೀನು ಇಂಥ ಅಲ್ಪಕೃತ್ಯವನ್ನು ಬಿಡು. ಈಕೆಯ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳಷ್ಟೆ ನಿನ್ನನ್ನು ಕೊಂದುಹಾಕತಕ್ಕವರು? ಈಕೆಯು ಬೇರೆ ನಿನ್ನನ್ನು ಕೊಲ್ಲುವುದಿಲ್ಲವಷ್ಟೆ? ಆದುದರಿಂದ ಇವಳ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನೆಲ್ಲಾ ಹುಟ್ಟಿದ ಕ್ಷಣದಲ್ಲೇ ನಿನ್ನ ವಶಕ್ಕೆ ಕೊಡುವೆನು. ಅವುಗಳನ್ನು ನೀನು ತೆಗೆದುಕೊಂಡು ನಿನ್ನ ಮನಸ್ಸಿಗೆ ಬಂದ ಹಾಗೆ ಮಾಡಿಕೊಂಡು ನೀನು ಚೆನ್ನಾಗಿ ಬದುಕುವ ದಾರಿಯನ್ನು ನೋಡಿಕೊಳ್ಳಬಹುದು ಎಂದು ವಿವಿಧವಾಗಿ ಸಾಮವಚನಗಳನ್ನು ಹೇಳಿದನು. ಆಗ ಕಂಸನು ಆ ಮಾತುಗಳಿಗೆ ಒಪ್ಪಿ ಅವರನ್ನು ಯಥಾಪ್ರಕಾರವಾಗಿ ಮೆರವಣಿಗೆಯಿಂದ ಕರೆದುಕೊಂಡು ಬಂದು ಅರಮನೆಯಲ್ಲಿರಿಸಿ ಅವರು ಒಂದು ಕ್ಷಣಕಾಲವಾದರೂ ಹೊರಗೆ ಹೋಗದ ಹಾಗೆ ಅತಿ ಜಾಗರೂಕತೆಯಿಂದಿರುವಂತೆ ನಂಬಿಕೆಯುಳ್ಳವರಾದ ಕಾವಲುಗಾರರನ್ನು ನೇಮಿಸಿ ಅವಳು ಗರ್ಭಿಣಿಯಾಗಿ ಹೆತ್ತ ಕ್ಷಣದಲ್ಲೇ ಬಂದು ತನಗೆ ತಿಳಿಸುವಂತೆ ಆಪ್ತರಾದ ಜನರನ್ನು ಕಟ್ಟುಮಾಡಿಸಿ ತಾನು ಬಂದು ಎಂದಿನಂತೆ ರಾಜ್ಯಭಾರವನ್ನು ಮಾಡುತ್ತ ನಿಶ್ಚಿಂತ

ನಾಗಿದ್ದನು. ಅಲ್ಲಿ ವಸುದೇವ ದೇವಕಿಯರು ಪರಸ್ಪರಾನುರಾಗದಿಂದ ಕೂಡಿರುತ್ತಿರು ವಲ್ಲಿ ಕೆಲಕಾಲದ ಮೇಲೆ ದೇವಕಿಯು ಗರ್ಭಿಣಿಯಾಗಿ ಗಂಡುಮಗುವನ್ನು ಹೆತ್ತಳು. ಕಂಸಾಸುರನು ಆ ವರ್ತಮಾನವನ್ನು ಕೇಳಿ ತತ್‌ಕ್ಷಣದಲ್ಲೇ ಹೊಲೆಮನೆಯ ಬಳಿಗೆ ಬಂದು ಆ ಶಿಶುವನ್ನು ತೆಗೆದುಕೊಂಡು ಕಾಲನ್ನು ಹಿಡಿದು ಒಂದು ದೊಡ್ಡ ಕಲ್ಬಂ ಡೆಯ ಮೇಲೆ ಬಡಿದು ಕೊಂದು ನಿರ್ನಾಮಮಾಡಿದನು. ಈ ರೀತಿಯಾಗಿ ಹುಟ್ಟಿದ ಆರು ಮಕ್ಕಳುಗಳ ವರೆಗೂ ಕಾಲು ಹಿಡಿದು ಕಲ್ಬಂಡೆಯ ಮೇಲೆ ಒಗೆದು ಕೊಲ್ಲುತ್ತ ಬಂದನು.

ಇತ್ತಲಾ ಮಹಾವಿಷ್ಣುವು ಬ್ರಹ್ಮಾದಿ ದೇವತೆಗಳಿಗೆ ಮೊದಲು ಅಭಯವಚನ ವನ್ನು ಕೊಟ್ಟ ಮೇರೆಗೆ ಭೂಲೋಕದಲ್ಲಿರುವ ವಸುದೇವದೇವಕಿಯರಿಗೆ ಪುತ್ರನಾಗಿ ಹುಟ್ಟಿ ದುಷ್ಟರನ್ನು ಸಂಹರಿಸಬೇಕೆಂದು ಯೋಚಿಸಿ ಮೊದಲು ತನಗೆ ಹಾಸಿಗೆಯಾಗಿ ರುವ ಮಹಾ ಶೇಷನನ್ನು ನೋಡಿ—ಎಲೈ ಫಣಿರಾಜನೇ, ನೀನು ಈಗಲೇ ಭೂಲೋ ಕಕ್ಕೆ ಹೋಗಿ ಮಧುರಾಪುರದಲ್ಲಿರುವ ವಸುದೇವನ ಹೆಂಡತಿಯಾದ ದೇವಕೀದೇವಿಯ ಬಸುರನ್ನು ಹೊಗುವವನಾಗು ಎಂದು ಅಪ್ಪಣೆಯನ್ನು ಕೊಟ್ಟುದರಿಂದ ಅವನು ಅದೇ ಮೇರೆಗೆ ನಡೆದುಕೊಂಡನು. ಅನಂತರದಲ್ಲಿ ತನ್ನ ಮಾಯೆಯನ್ನು ಕುರಿತು—ಎಲೈ ಮಾಯೆಯೇ, ಈಗ ನನ್ನ ಹಾಸಿಗೆಯಾದ ಮಹಾ ಶೇಷನು ಹೋಗಿ ದೇವಕೀದೇವಿಯ ಗರ್ಭವನ್ನು ಹೊಕ್ಕು ಅಲ್ಲಿ ಶಿಶುವಿನಾಕಾರದಿಂದಿರುವನು. ನೀನು ಮೊದಲು ಅಲ್ಲಿಗೆ ಹೋಗಿ ಆತನನ್ನು ದೇವಕೀದೇವಿಯ ಬಸುರಿನಿಂದ ಸೆಳೆದು ನಂದಗೋಕುಲದಲ್ಲಿರುವ ಆ ವಸುದೇವನ ಜ್ಯೇಷ್ಠಪತ್ನಿಯಾದ ರೋಹಿಣೀದೇವಿಯ ಹೊಟ್ಟೆಯಲ್ಲಿಟ್ಟು ಆ ಮೇಲೆ ಅದೇ ಗೋಕುಲದಲ್ಲಿರುವ ನಂದಗೋಪನೆಂಬ ಗೊಲ್ಲರೊಡೆಯನ ಮಡದಿಯಾದ ಯಶೋದೆ ಎಂಬವಳ ಹೊಟ್ಟೆಯಲ್ಲಿ ಶ್ರಾವಣಬಹುಳ ಅಷ್ಟಮಿಯ ಅರ್ಧರಾತ್ರಿಯಲ್ಲಿ ಹೆಣ್ಣು ಶಿಶುವಾಗಿ ಹುಟ್ಟು. ನೀನು ನನಗೆ ತಂಗಿಯಾಗಿರುವುದರಿಂದ ದುರ್ಗಿ ಚಾಮುಂಡಿ ಪಾರ್ವತಿ ಕಾತ್ಯಾಯಿನಿ ಕಾಳಿ ಎಂಬ ಈ ಮೊದಲಾದ ಹೆಸರುಗಳನ್ನು ಧರಿಸಿ ಶಿವನಿಗೆ ಪತ್ನಿಯಾಗಿ ಕೋಣ ಕುರಿ ಕೋಳಿ ಮುಂತಾದ ಪ್ರಾಣಿಬಲಿಯನ್ನು ಕೊಟ್ಟು ಯಾರು ನಿನ್ನನ್ನು ಭಕ್ತಿಯಿಂದ ಆರಾಧಿಸುವರೋ ಅಂಥವರಿಗೆ ನೀನು ಬೇಕಾದ ವರಗಳನ್ನು ಕೊಡುತ್ತ ಲೋಕದ ಜನರಿಂದ ಪೂಜಿಸಿಕೊಂಡಿರು ಎಂದು ಅಪ್ಪ ಣೆಯನ್ನು ಕೊಟ್ಟು ಕಳುಹಿಸಲು ; ಆಕೆಯು ಅದೇ ಮೇರೆಗೆ ಅಲ್ಲಿಂದ ಹೊರಟು ಮಧುರಾಪಟ್ಟಣಕ್ಕೆ ಬಂದು ದೇವಕಿಯ ಬಸುರಿನಿಂದ ಶಿಶುವನ್ನು ಸೆಳೆದು ರೋಹಿ ಣಿಯ ಗರ್ಭದಲ್ಲಿರಿಸಿ ತಾನು ಯಶೋದೆಯ ಉದರವನ್ನು ಹೊಕ್ಕಳು.

ಇತ್ತಲಾ ಮಧುರಾಪುರದಲ್ಲಿ ದೇವಕೀದೇವಿಯು ಏಳನೆಯ ಸಾರಿ ಬಸುರಾ ಗಿದ್ದು ಮೈಯಿಳಿದಳೆಂದು ನೋಡಿದ ಹೆಂಗಸರು ಬಂದು ಕಂಸಾಸುರನಿಗೆ ತಿಳಿಸಿದರು. ತರುವಾಯ ಕೆಲವು ದಿನಗಳ ಮೇಲೆ ಮಹಾವಿಷ್ಣುವು ದೇವಕೀದೇವಿಯ ಗರ್ಭವನ್ನು ಪ್ರವೇಶಿಸಲು ; ಆಕೆಯು ಎಂಟನೆಯ ಸಾರಿ ಬಸುರಾದಳೆಂಬ ಸುದ್ದಿಯು ಕಂಸನಿಗೆ ತಿಳಿ ದು ಅವನು ಈ ಸಾರಿ ಹುಟ್ಟುವ ಕೂಸೇ ನನ್ನನ್ನು ಕೊಲ್ಲುವಂಥದು. ಇದನ್ನು ಕೊಂದು

ಬಿಟ್ಟರೆ ನಾನು ಯಾವ ಭಯವೂ ಇಲ್ಲದೆ ಸುಖದಿಂದಿರಬಹುದು ಎಂದು ಯೋಚಿಸಿ
ಮೊದಲಿಗಿಂತಲೂ ಬಹು ಜಾಗರೂಕತೆಯಾಗಿ ಆಕೆಯ ಬಳಿಯಲ್ಲಿ ಕಾವಲಿಟ್ಟು ತಾನೂ
ಬಹಳ ಜಾಗರೂಕತೆಯಿಂದ ವಿಚಾರಿಸಿಕೊಳ್ಳುತ್ತಿದ್ದನು.

ಇತ್ತಲಾ ನಂದಗೋಕುಲದಲ್ಲಿ ವಸುದೇವನ ಹಿರಿಯ ಹೆಂಡತಿಯಾದ ರೋಹಿಣೀ
ದೇವಿಯು ಪೂರ್ಣಗರ್ಭವತಿಯಾಗಿ ಶುಭಮುಹೂರ್ತದಲ್ಲಿ ಮಹಾಶೇಷನು ಮುಂದೆ ಹು
ಟ್ಟುವ ಭಗವಂತನಿಗೆ ಸಹಾಯಭೂತನಾಗಿ ಶುಭ್ರವರ್ಣವುಳ್ಳ ಶಿಶುರೂಪದಿಂದ ಹುಟ್ಟಲು
ನೋಡಿದ ಸಮಸ್ತಜನರು ಮೇಘಮಾರ್ಗದಲ್ಲಿ ಪ್ರತಿಸಮಯದಲ್ಲೂ ನಡೆದು ನಡೆದು
ಆಲಸ್ಯವನ್ನು ಹೊಂದಿ ವಿಶ್ರಮಿಸಿಕೊಳ್ಳುವುದಕ್ಕೋಸ್ಕರವಾಗಿ ಅಮೃತಕಿರಣನಾದ ಚಂ
ದ್ರನು ಭೂಲೋಕದಲ್ಲಿ ಈ ಶಿಶುರೂಪದಿಂದ ಹುಟ್ಟಿರುವನೆಂದು ಯೋಚಿಸುತ್ತಿದ್ದರು.
ತರುವಾಯ ಮಧುರಾನಗರದಲ್ಲಿ ಶ್ರಾವಣ ಬಹುಳ ಅಷ್ಟಮಿಯ ಸಮರಾತ್ರಿಯಲ್ಲಿ
ಎಳ್ಳಗಸೆ ಹೂವಿನಂತೆ ನೀಲವಾದ ಮೈಬಣ್ಣವುಳ್ಳವನಾಗಿ ಹೊಂಬಟ್ಟೆಯನ್ನು ಧರಿಸಿ
ಕೌಸ್ತುಭರತ್ನದಿಂದ ಹೊಳೆಯುವ ಎದೆಯೂ ಶಂಖಚಕ್ರಗದಾಪದ್ಮಗಳೆಂಬ ಆಯುಧ
ಗಳಿಂದ ಒಪ್ಪುತ್ತಿರುವ ಕೈಗಳೂ ಉಳ್ಳವನಾಗಿ ದೈತ್ಯಸಮೂಹವೆಂಬ ಮಹಾರಣ್ಯಕ್ಕೆ
ದಾವಾಗ್ನಿಪ್ರಾಯನಾದ ಮಹಾವಿಷ್ಣುವು ಆ ವಸುದೇವ ದೇವಕಿಯರಿಗೆ ಪ್ರತ್ಯಕ್ಷ
ನಾಗಿ ಕಾಣಿಸಿಕೊಂಡನು.

ಆತನನ್ನು ನೋಡಿ ವಸುದೇವನು ಸಂತೋಷಸಮುದ್ರದಲ್ಲಿ ಮುಳುಗಿ ಕಣ್ಣುಗ
ಳಿಂದ ಆನಂದಬಾಷ್ಪವನ್ನು ಸುರಿಸುತ್ತ ಬಾರಿ ಬಾರಿಗೂ ಅಡ್ಡಬಿದ್ದು ವಿವಿಧವಾಗಿ
ಹೊಗಳುತ್ತ ಎದ್ದು ಕೈಮುಗಿದು ನಿಂತುಕೊಂಡು ರೋಮಾಂಚಕಂಚುಕಿತಾಂಗನಾಗಿ
ಆ ಮಹಾವಿಷ್ಣುವನ್ನು ಕುರಿತು ದುರಾತ್ಮನಾದ ಕಂಸನು ತಮಗೆ ಮಾಡಿದ ದ್ರೋಹ
ಗಳನ್ನೆಲ್ಲಾ ಹೇಳಿಕೊಳ್ಳಲು ; ಆಗ ಕಮಲನಾಭನು ಕರುಣಾಸಾರಹೃದಯನಾಗಿ—
ಮೊದಲು ನಿಮಗೆ ಹುಟ್ಟಿದ ಆರು ಮಕ್ಕಳುಗಳು ಪಾತಾಳಲೋಕದಲ್ಲಿರುವ ಹಿರಣ್ಯಕ
ಶಿಪುವಿನ ಮಕ್ಕಳುಗಳು. ಅವರು ನನ್ನ ಅಪ್ಪಣೆಯಿಂದಲೇ ನಿಮ್ಮಲ್ಲಿ ಹುಟ್ಟಿ ಮೃತರಾ
ದರು. ಏಳನೆಯ ಬಸುರಿನಲ್ಲಿದ್ದ ಶಿಶುವನ್ನು ಕಂಸನು ಕೊಲ್ಲುವೆನೆಂಬ ಯೋಚನೆಯಿಂದ
ನಾನೇ ನನ್ನ ಮಾಯೆಯಿಂದ ತೆಗಿಸಿ ನಿನ್ನ ಹಿರೀ ಹೆಂಡತಿಯಾದ ರೋಹಿಣಿಯಲ್ಲಿ ನಿಲ್ಲಿ
ಸಿದೆನು. ಆ ಮಹಾತ್ಮನು ಗೋಕುಲದಲ್ಲಿ ಹುಟ್ಟಿ ಬೆಳೆಯುತ್ತಿರುವನು. ನನ್ನ ಒಡಹು
ಟ್ಟುಗಳಾದ ಶಿಶುಗಳನ್ನು ಕೊಂದು ತನ್ನ ತಂದೆಯಾದ ಉಗ್ರಸೇನನನ್ನು ಬಂಧನದಲ್ಲಿರಿಸಿ
ನಿಮ್ಮನ್ನು ಹಿಂಸಿಸುತ್ತ ಲೋಕಕಂಟಕನಾಗಿರುವ ಈ ಕಂಸನನ್ನು ಕೊಂದುಹಾಕಿ ನಿಮ್ಮೆ
ಲ್ಲರಿಗೂ ಸಮಾಧಾನವನ್ನುಂಟುಮಾಡುವೆನು. ನೀನು ಶಿಶುರೂಪದಿಂದಿರುವ ನನ್ನನ್ನು
ತೆಗೆದುಕೊಂಡು ಹೋಗಿ ನಂದಗೋಕುಲದಲ್ಲಿ ಒಂದು ಹೆಣ್ಣು ಕೂಸನ್ನು ಹೆತ್ತು ನನ್ನ
ಮಾಯೆಯಿಂದ ಜ್ಞಾನತಪ್ಪಿ ಬಿದ್ದಿರುವ ನಂದಗೋಪನ ಹೆಂಡತಿಯಾದ ಯಶೋದೆಯ
ಮಗ್ಗುಲಲ್ಲಿಟ್ಟು ಅಲ್ಲಿ ಹುಟ್ಟಿರುವ ಹೆಣ್ಣು ಶಿಶುವನ್ನು ತೆಗೆದುಕೊಂಡು ತಿರಿಗಿ ಬಂದು
ದೇವಕೀದೇವಿಗೆ ಕೊಡು. ಈ ಕೆಲಸವನ್ನು ಮಾಡುತ್ತಿರುವ ನಿನ್ನನ್ನು ಒಬ್ಬರೂ ಅರಿ
ಯದಂತೆ ನನ್ನ ಮಾಯೆಯು ಸಹಾಯಮಾಡುವುದು ಎಂದು ಹೇಳಿ ಆ ದಿವ್ಯರೂಪ

ವನ್ನು ಅಡಗಿಸಿ ಶಿಶುರೂಪವನ್ನು ಕೈಕೊಂಡು ವಸುದೇವದೇವಕಿಯರನ್ನು ತನ್ನ ಮಾಯೆಯಿಂದ ಮರುಳ್ಗೊಳಿಸಲು ; ಅವರು ಬಹಿರ್ವ್ಯಾಪಾರ ವಿರಹಿತರಾಗಿ—ಈಗ ನಾವು ಯಾರೊಡನೆ ಮಾತನಾಡಿದೆವು ? ನಮಗೆ ಯಾರು ಉತ್ತರವನ್ನು ಕೊಟ್ಟರು ? ಈ ಶಿಶು ಬೇರೆ ಅಲ್ಲ. ಸಾಕ್ಷಾನ್ನಾರಾಯಣನೇ ಬಂದು ನುಡಿದು ಹೋದನೋ ಏನೋ ಎಂದು ಭ್ರಾಂತಿಗೊಂಡರು.

ಆ ಬಳಿಕ ಕಂಸನು ವಸುದೇವನ ಕಾಲಿಗೆ ಹಾಕಿದ್ದ ಸಂಕೋಲೆಯು ತನಗೆ ತಾನೆ ಕಳಚಿ ನೆಲಕ್ಕೆ ಬಿದ್ದುದರಿಂದ ವಸುದೇವನು ಬಂದು ಶಿಶುವನ್ನು ಬೇಗ ಎತ್ತಿಕೊಂಡು ಹೊರಡುವಲ್ಲಿ ಕಾವಲುಗಾರರೆಲ್ಲರೂ ವಿಷ್ಣುಮಾಯೆಯಿಂದ ಮೋಹಿತರಾಗಿ ಎಚ್ಚರವಿಲ್ಲದೆ ಬಿದ್ದಿದ್ದರು. ಅಗುಳಿಗಳಿಂದ ಭದ್ರಪಡಿಸಿದ್ದ ಊರುಬಾಗಿಲ ಕದಗಳು ತಮ್ಮಿಂದ ತಾನೇ ತೆರೆದು ನಿಂತುವು. ಆಕಾಶವು ಮೇಘಗಳಿಂದ ತುಂಬಲ್ಪಟ್ಟು ತುಂತುರು ಹನಿಗಳನ್ನು ಸುರಿಸುತ್ತಿದ್ದಿತು. ವಸುದೇವನು ಈ ಪ್ರಕಾರವಾದ ಅದ್ಭುತ ವ್ಯಾಪಾರಗಳನ್ನು ನೋಡುತ್ತ ಕಾರ ಕಗ್ಗತ್ತಲೆಯಲ್ಲಿ ಊರನ್ನು ಬಿಟ್ಟು ಹೊರಗೆ ಬರಲು ; ಆಗ ಮಹಾಶೇಷನು ಬಂದು ಶಿಶುವು ಮಳೆಯಿಂದ ನೆನೆಯದ ಹಾಗೆ ತನ್ನ ಸಾವಿರ ಹೆಡೆಗಳನ್ನು ಆ ವಸುದೇವನ ಮೇಲೆ ಕೊಡೆಯಂತೆ ಹಿಡಿದು ತನ್ನ ಹೆಡೆಗಳ ಮಾಣಿಕ್ಯಗಳ ಪ್ರಕಾಶದಿಂದ ಗೋಕುಲಕ್ಕೆ ಹೋಗುವ ದಾರಿಯನ್ನು ಚೆನ್ನಾಗಿ ಕಾಣಿಸುವ ಹಾಗೆ ಮಾಡಿದನು. ಆ ಮೇಲೆ ವಸುದೇವನು ವಿಷ್ಣುಮಾಯಾಶಕ್ತಿಯಿಂದ ಕ್ಷಣಮಾತ್ರದಲ್ಲಿ ಗೋಕುಲದ ಬಳಿಗೆ ಬರಲು; ಅಲ್ಲಿ ಎರಡು ದಡಗಳನ್ನೂ ಮೀರಿ ಹರಿಯುತ್ತಿರುವ ಯಮುನಾನದಿಯು ಕಾಲುಹೊಳೆಯಂತಾಗಿ ದಾರಿಯನ್ನು ಕೊಡಲು; ಅದನ್ನು ದಾಟಿಬಂದು ನಂದಗೋಪನ ಹೆಂಡತಿಯಾದ ಯಶೋದೆಯು ಹೆತ್ತಿದ್ದ ಮನೆಯನ್ನು ಹೊಕ್ಕು ಆ ಶಿಶುವನ್ನು ಅಲ್ಲಿಟ್ಟು ಒಬ್ಬರೂ ಅರಿಯದಂತೆ ಅಲ್ಲಿದ್ದ ಹೆಣ್ಣು ಶಿಶುವನ್ನು ಎತ್ತಿಕೊಂಡು ಯಮುನಾ ನದಿಯನ್ನು ದಾಟಿ ಈಚೆಯ ದಡಕ್ಕೆ ಬಂದ ಕೂಡಲೆ ಆ ನದಿಯು ಮೊದಲಿನಂತೆ ನೀರುತುಂಬಿ ಹರಿಯಿತು. ವಸುದೇವನು ಅಲ್ಲಿಂದ ಹೊರಟು ಮಧುರಾಪುರಿಯನ್ನು ಪ್ರವೇಶಮಾಡಲು ; ಊರುಬಾಗಿಲ ಕದಗಳೂ ಅಗಣಿಗಳೂ ಮೊದಲಿನಂತೆ ಹಾಕಿಕೊಂಡುವು. ಅಲ್ಲಿಂದ ಬಂದು ಅರಮನೆಯನ್ನು ಸೇರಿ ಆ ಹೆಣ್ಣುಮಗುವನ್ನು ತನ್ನ ಹೆಂಡತಿಯಾದ ದೇವಕೀದೇವಿಯ ಕೈಯಲ್ಲಿ ಕೊಟ್ಟು ಕಳಚಿಹೋಗಿದ್ದ ಸಂಕೋಲೆಯನ್ನು ತೆಗೆದು ತನ್ನ ಕಾಲುಗಳಿಗೆ ತೊಡಿಸಿಕೊಳ್ಳಲು ಅವು ಯಥಾಪ್ರಕಾರವಾಗಿ ಸೇರಿಕೊಂಡುವು

ಅತ್ತ ಗೋಕುಲದಲ್ಲಿ ಯಶೋದೆಯು ಎಚ್ಚೆತ್ತು ತನ್ನ ಮಗ್ಗುಲಲ್ಲಿರುವ ಪುರುಷ ಶಿಶುವನ್ನು ನೋಡಿ ಬಹಳವಾಗಿ ಸಂತೋಷಪಟ್ಟಳು. ಇತ್ತ ಮಧುರಾ ನಗರದಲ್ಲಿ ಈ ಹೆಣ್ಣುಕೂಸು ಆರ್ಭಟಿಸಿ ಅಳುತ್ತಿರುವುದನ್ನು ಕೇಳಿ ಕಾವಲುಗಾರರೆಲ್ಲರೂ ಎದ್ದು ಶೀಘ್ರವಾಗಿ ಓಡಿಬಂದು ಮಲಗಿದ್ದ ಕಂಸನನ್ನು ಎಬ್ಬಿಸಿ—ದೇವಕಿಯು ಹೆತ್ತಳೆಂದು ಹೇಳಲು ; ಅತನು ಆ ಕೂಡಲೆ ಎಡವಿ ಬೀಳುವುದನ್ನೂ ಕಾಣದೆ ವೇಗದಿಂದ ಓಡಿಬಂದು ಆ ಹೆಣ್ಣು ಮಗುವನ್ನು ಸೆಳೆದುಕೊಂಡು ವಧ್ಯಸ್ಥಾನದ ಅರೆಬಂ

ಡೆಯ ಬಳಿಗೆ ತೆಗೆದುಕೊಂಡು ಬಂದು ಶಿಶುವಿನೆರಡುಕಾಲುಗಳನ್ನೂ ಕೈಯಲ್ಲಿ ಹಿಡಿದು ಕೊಂಡು ಬಂಡೆಯ ಮೇಲೆ ಬಡಿಯುವುದಕ್ಕೆ ಎತ್ತಲು; ಆಗ ಆ ಶಿಶುವು ಇವನ ಕೈಯಿಂದ ನುಣುಚಿಕೊಂಡು ಆಕಾಶಕ್ಕೆ ಹಾರಿ ಅಲ್ಲಿ ಮಹಾ ಭಯಂಕರವಾದ ದುರ್ಗಿಯ ರೂಪವನ್ನು ತಾಳಿ ಎಂಟು ತೋಳುಗಳುಳ್ಳ ಆಕಾರವನ್ನು ಧರಿಸಿ ಅಟ್ಟಹಾಸವನ್ನು ಮಾಡಿ—ಎಲೈ ಹೆಡ್ಡನಾದ ಕಂಸನೇ, ನಾನು ನಿನ್ನ ಪ್ರಾಣಗಳನ್ನು ಕೊಲ್ಲುವುದಿಲ್ಲ. ನಿನ್ನ ಪ್ರಾಣಗಳಿಗೆ ಮುನಿಯುವವನು ಆಗಲೇ ಹುಟ್ಟಿ ಭೂಮಿಯಲ್ಲಿ ಬೆಳೆಯುತ್ತಿದ್ದಾನೆ ಎಂದು ಹೇಳಿತು.

ತರುವಾಯ ಕಂಸನು ದುರ್ಗಿಯ ಮಾತುಗಳನ್ನು ಕೇಳಿ ಬಹಳವಾಗಿ ಆಶ್ಚರ್ಯಪಟ್ಟು ಬಹು ಚಿಂತಾಕ್ರಾಂತನಾಗಿ—ಅಯ್ಯೋ, ಸುಳ್ಳಾದ ಆಕಾಶವಾಣಿಯನ್ನು ಕೇಳಿ ನನ್ನ ತಂಗಿಯಾದ ದೇವಕೀದೇವಿಯನ್ನೂ ವಸುದೇವನನ್ನೂ ಬಹಳವಾಗಿ ಹಿಂಸಿಸಿ ಅನ್ಯಾಯವಾಗಿ ಅವರ ಶಿಶುಗಳನ್ನು ಕೊಂದೆನು ಎಂದು ಪಶ್ಚಾತ್ತಾಪಗೊಂಡು ಅವರ ಬಳಿಗೆ ಹೋಗಿ ಒಳ್ಳೆಯ ಮಾತುಗಳಿಂದ ಅವರನ್ನು ಸಮಾಧಾನಪಡಿಸಿ ವಸುದೇವನ ಕಾಲುಗಳ ಸಂಕೋಲೆಯನ್ನು ತೆಗಿಸಿ ಸೆರೆಯಿಂದ ಬಿಡಿಸಿ—ಸುಖದಿಂದ ಬಾಳಿರಿ ಎಂದು ಹೇಳಿ ತಾನು ಏಕಾಂತದಲ್ಲಿ ಕುಳಿತುಕೊಂಡು ತನಗೆ ಆಪ್ತರಾದ ಪೂತನಿ ಶಕಟಾಸುರ ಧೇನುಕಾಸುರ ಪ್ರಲಂಬಾಸುರ ಅರಿಷ್ಟಾಸುರ ಕೇಶಿರಾಕ್ಷಸ ಎಂಬಿವರೇ ಮೊದಲಾದವರನ್ನು ಕುಳ್ಳಿರಿಸಿಕೊಂಡು—ನನ್ನ ಶತ್ರುವು ಯಾವುದೋ ಒಂದು ಸ್ಥಾನದಲ್ಲಿ ಹುಟ್ಟಿ ಬೆಳೆಯುತ್ತಿರುವನಂತೆ ಮಹಾಶಕ್ತರಾದ ನೀವೆಲ್ಲರೂ ಒಂದೊಂದು ಕಾರಣದಿಂದ ಒಂದೊಂದು ವಿಧವಾದ ವೇಷವನ್ನು ತಾಳಿಕೊಂಡು ಲೋಕದಲ್ಲಿ ಎಲ್ಲಾ ಕಡೆಗಳಲ್ಲೂ ತಿರುಗುತ್ತ ಹುಟ್ಟಿರುವ ಶಿಶುಗಳನ್ನೆಲ್ಲಾ ಬಿಡದೆ ಕೊಂದುಹಾಕುತ್ತ ಒಂದುವೇಳೆ ಏನಾದರೂ ಕಾರಣದಿಂದ ತಪ್ಪಿಸಿಕೊಂಡಿದ್ದರೆ ಆ ಶಿಶುಗಳನ್ನು ಮತ್ತೊಂದುವೇಳೆ ಬಂದು ಕೊಲ್ಲುತ್ತ ಈ ಪ್ರಕಾರ ಈಗ ಲೋಕದಲ್ಲಿ ಹುಟ್ಟಿರುವ ಶಿಶುಗಳನ್ನೆಲ್ಲಾ ಕೊಂದುಹಾಕಿರಿ ಎಂದು ಹೇಳಿಕಳುಹಿಸಿ ತಾನು ಮಹಾ ಶಂಕಾತಂಕಹೃದಯನಾಗಿದ್ದನು.

ಹೀಗಿರುವಲ್ಲಿ ಈ ಕಂಸನಿಗೆ ಕಟ್ಟಳೆಯ ಮೇರೆಗೆ ಪ್ರತಿ ಸಂವತ್ಸರವೂ ಕೊಡುವ ಪೊಗದಿಯನ್ನು ತೆಗೆದುಕೊಂಡು ಗೋಕುಲದಿಂದ ಬಂದು ಆ ಕಪ್ಪವನ್ನು ಕಂಸನಿಗೆ ಒಪ್ಪಿಸಿ ಬೀಡಾರದಲ್ಲಿಳಿದುಕೊಂಡಿರುವ ನಂದಗೋಪನ ಬಳಿಗೆ ವಸುದೇವನು ರಹಸ್ಯವಾಗಿ ಬಂದು—ಎಲೈ ಪ್ರಿಯನೇ, ನಿನ್ನ ಹೆಂಡತಿಯಾದ ಯಶೋದಾದೇವಿಯು ಗಂಡುಮಗುವನ್ನು ಹೆತ್ತಳೆಂದು ವರ್ತಮಾನವನ್ನು ಕೇಳಿ ನನಗೆ ಬಹಳ ಸಂತೋಷವಾಯಿತು. ಅಲ್ಲಿ ನನ್ನ ಹಿರಿಯಹೆಂಡತಿಯಾದ ರೋಹಿಣೀದೇವಿಯು ಹೆತ್ತಿರುವ ನನ್ನ ಮಗನನ್ನೂ ಕೂಡ ನಿಮ್ಮ ಮಗನ ಜೊತೆಯಲ್ಲಿ ಇವನೊಬ್ಬ ಮಗನೆಂದೆಣಿಸಿ ನನ್ನ ಮಗನು ಪರಾಕ್ರಮಿಯಾಗುವವರೆಗೂ ಪ್ರೀತಿಯಿಂದ ಕಾಪಾಡಬೇಕೆಂದು ಹೇಳಲು; ನಂದಗೋಪನು ಆ ಮಾತುಗಳನ್ನು ಕೇಳಿ ಬಹಳವಾಗಿ ಸಂತೋಷಪಟ್ಟು ವಸುದೇವನನ್ನು ಕುರಿತು—ಅಯ್ಯಾ ಪರಮಪ್ರಿಯನೇ, ಈ ಭಾಗದಲ್ಲಿ ಸಂದೇಹವುಂಟೇ?

ನಿಮ್ಮ ಮಗನನ್ನು ನನ್ನ ಮಗನಿಗಿಂತಲೂ ಹೆಚ್ಚೆಂದು ಸಹಜವಾಗಿ ಭಾವಿಸಿಕೊಂಡಿರುವೆನು. ಆದುಕಾರಣ ನಿಮ್ಮ ಮನಸ್ಸಿನಲ್ಲಿ ಸ್ವಲ್ಪವಾದರೂ ಸಂಶಯಪಡಬೇಡಿರಿ ಎಂದು ನಂಬುಗೆಯನ್ನು ಕೊಟ್ಟು ಸನ್ಮಾನಿಸಿ ಮನೆಗೆ ಕಳುಹಿಸಿ ತಾನು ಕಂಸನ ಅಪ್ಪಣೆಯನ್ನು ತೆಗೆದುಕೊಂಡು ಗೋಕುಲಕ್ಕೆ ಬಂದು ಯಶೋದಾರೋಹಿಣಿಯರ ಮಕ್ಕಳುಗಳನ್ನು ನೋಡಿ ಸಂತೋಷಪಟ್ಟುಕೊಂಡಿರುತ್ತಿದ್ದನು.

ಹೀಗಿರುವಲ್ಲಿ ಮೊದಲು ಕಂಸಾಸುರನು ಕಳುಹಿಸಿದ್ದ ಪೂತನಿಯೆಂಬ ರಾಕ್ಷಸಿಯು ಯಶೋದಾದೇವಿಯು ಹೊರಗೆಹೋಗಿದ್ದ ವೇಳೆಯಲ್ಲಿ ಆಕೆಯ ಆಕಾರವನ್ನು ತಾಳಿ ಮನೆಯೊಳಗೆ ಹೋಗಿ ಆರು ದಿನಗಳ ಮಗುವನ್ನು ಎತ್ತಿಕೊಂಡು ವಿಷಸ್ತನ್ಯವನ್ನು ಕುಡಿಸಿ ಕೊಂದುಹಾಕುವೆನೆಂದು ಯೋಚಿಸಿ ಮೊಲೆಯನ್ನು ಉಣ್ಣಗೊಡಲು ; ಆ ಬಾಲಕನು ತನ್ನ ಬಾಯಿಯಿಂದ ಮೊಲೆಯ ತುದಿಯನ್ನು ಕಚ್ಚಿ ಅವಳ ಶರೀರಗತವಾದ ನೆತ್ತಿರ ನೆಣ ಮಾಂಸ ಇವು ಮೊದಲಾದುವುಗಳನ್ನೆಲ್ಲಾ ಹೀರಿಬಿಟ್ಟನು. ಆ ಮೇಲೆ—ಅಯ್ಯೋ ಬಿಡು ಬಿಡು ಎಂದು ಒರಲುತ್ತ ಕೆಳಗೆ ಬಿದ್ದ ಅವಳ ಪ್ರಾಣಗಳನ್ನೂ ಹೀರಿಬಿಟ್ಟನು. ಆಗ ಮಹಾಘೋರವಾದ ರಾಕ್ಷಸಿಯ ಆಕಾರದ ಹೆಣವನ್ನೂ ಆ ಹೆಣದ ಮೊಲೆಯ ತೊಟ್ಟನ್ನು ತುದಿಯ ಬಾಯಿಯಲ್ಲಿ ಕಚ್ಚಿಕೊಂಡಿರುವ ಶಿಶುವನ್ನೂ ಯಶೋದೆಯು ಕಂಡು ಬೆದರಿ ಬೆಬ್ಬರಗೊಂಡು ಬೇಗ ಹೋಗಿ ಆ ಶಿಶುವನ್ನು ಎತ್ತಿಕೊಂಡು ಗಂಡನಿಗೆ ಹೇಳಿ ಆ ಹೆಣವನ್ನು ಹೊರಗೆ ಹಾಕಿಸಿಬಿಟ್ಟು ಕೂಡಲೆ ಮಂತ್ರಜ್ಞರನ್ನು ಕರಿಸಿ ಆ ಶಿಶುವಿಗೆ ಭೀತಿಶಂಕೆಯು ಪರಿಹಾರವಾಗುವ ಹಾಗೆ ಯಂತ್ರವನ್ನು ಕಟ್ಟಿಸಿ ಮಂತ್ರಿಸಿ ಹಣೆಗೆ ವಿಭೂತಿಯನ್ನಿಡಿಸಿದಳು. ಆ ಮೇಲೆ ನೆಂಟತಿಯರಾದ ವೃದ್ಧಸ್ತ್ರೀಯರು ಬಂದು ಮಗುವನ್ನು ತೂಪಿರಿದು ನೆಟ್ಟಿಗೆಗಳನ್ನು ಮುರಿದು ಹರಸಿಹೋದರು. ತರುವಾಯ ಯದುವಂಶೀಯರ ಪುರೋಹಿತನಾದ ಗಾರ್ಗ್ಯನೆಂಬುವನು ವಸುದೇವನ ಅಪ್ಪಣೆಯಿಂದ ಹನ್ನೆರಡನೆಯ ದಿನದಲ್ಲಿ ರಹಸ್ಯವಾಗಿ ವೇಷವನ್ನು ಮರಿಸಿಕೊಂಡು ಗೋಕುಲಕ್ಕೆ ಬಂದು ರೋಹಿಣೀದೇವಕಿಯರ ಮಕ್ಕಳುಗಳಿಗೆ ರಾಮ ಕೃಷ್ಣ ಎಂದು ಹೆಸರನ್ನಿಟ್ಟು ಹರಸಿ ಹೊರಟುಹೋದನು. ಅನಂತರದಲ್ಲಿ ಯಶೋದೆಯು ನೆಂಟರೂ ಇಷ್ಟರೂ ಆದ ಮುತ್ತೈದೆಯರನ್ನು ಕರಿಸಿ ಬಾಗಿನಗಳನ್ನು ಕೊಟ್ಟು ಮಗುವನ್ನು ಚಿನ್ನದ ತೊಟ್ಟಲಿನಲ್ಲಿ ಮಲಗಿಸಿ ಉಡಿದಾರವನ್ನು ಕಟ್ಟಿ ತೊಟ್ಟಲನ್ನು ತೂಗುತ್ತ ಜೋಗುಳಗಳನ್ನು ಹಾಡಿ ಆ ಮಗುವನ್ನು ತೊಟ್ಟಲಲ್ಲಿ ಮಲಗಿಸಿ ತೂಗುವುದಕ್ಕೆ ಆರಂಭಿಸಿದಳು. ಕೃಷ್ಣನು ಬೆಳೆಯುತ್ತ ಕೆಲವು ದಿವಸಗಳಿಗೆ ಅಕಾರಣವಾದ ನಗೆಯುಳುವಿಕೆಗಳಿಂದಲೂ ಉತ್ಥಾನಶಯನಗಳಿಂದಲೂ ತಾಯಿತಂದೆಗಳನ್ನು ನಗಿಸಿ ಸಂತೋಷಪಡಿಸುತ್ತಿದ್ದನು.

ಹೀಗಿರುವಲ್ಲಿ ಒಂದು ದಿವಸ ಯಶೋದೆಯು ಮಗುವನ್ನು ತೊಟ್ಟಲಿನಲ್ಲಿ ಮಲಗಿಸಿ ಪರಿಚಾರಕಳನ್ನು ಕರೆದುಕೊಂಡು ಸ್ನಾನಾರ್ಥವಾಗಿ ಕಾಳಿಂದೀನದಿಗೆ ಹೋದ ಕಾಲದಲ್ಲಿ ಶಕಟಾಸುರನು ನಂದಗೋಪನ ಮನೆಯಲ್ಲಿ ನಿಲ್ಲಿಸಿರುವ ಗಾಡಿಯಲ್ಲಿ ಸೇರಿಕೊಂಡು ತೊಟ್ಟಲಿನಲ್ಲಿ ಮಲಗಿರುವ ಮಗುವನ್ನು ಕೊಂದುಹಾಕುವೆ

ನೆಂದು ಆ ಗಾಡಿಯನ್ನು ತೊಟ್ಟಿಲಿನ ಮೇಲೆ ನೂಕಲು; ಆ ಗಾಡಿಗೆ ಮಗುವಿನ ಕಾಲಿನ ಉಂಗುಟವು ತಗುಲಿ ಆ ಶಕಟಾಸುರನು ಸತ್ತು ಬಿದ್ದುದರಿಂದ ಅವನ ಹೆಣವು ಒಂದು ಮಹಾಪರ್ವತದಂತೆ ಕಾಣಿಸಲು; ಈ ಹಸುಗೂಸಿನ ಸಾಹಸವೆಷ್ಟೋ ಎಂದು ನೋಡಿದವರು ಆಶ್ಚರ್ಯಪಟ್ಟಾರೆಂದು ಯೋಚಿಸಿ ಆ ಅಸುರನ ಹೆಣವನ್ನು ಆ ಶಿಶುರೂಪನಾದ ಹರಿಯೇ ಮಾಯಮಾಡಿ ತೊಟ್ಟಿಲಲ್ಲಿ ಕಾಲ ಹೆಬ್ಬೆರಳನ್ನು ಬಾಯಿಯಲ್ಲಿಟ್ಟುಕೊಂಡು ಚೀಪುತ್ತ ಆಡುತ್ತಿದ್ದನು. ಅಷ್ಟರಲ್ಲಿ ಗೋಪಿಯು ಬಂದು ನುಚ್ಚುನುರಿಯಾಗಿರುವ ಬಂಡಿಯನ್ನು ನೋಡಿ—ಇದೇನು ಮಹಾಶ್ಚರ್ಯವು? ಈ ಬಂಡಿಯು ಇದ್ದುದಕ್ಕಿದ್ದ ಹಾಗೆಯೇ ಚೂರುಚೂರಾಗಿರುವುದು! ಮಗುವು ಎಷ್ಟು ಹೆದರಿಕೊಂಡಿತೋ! ಎಂದು ಮಗುವನ್ನು ಎತ್ತಿಕೊಂಡು ಗಂಡನಿಗೆ ಹೇಳಿ ಆ ಶಿಶುವಿಗೆ ಬಹಳವಾಗಿ ಶಾಂತಿಕರ್ಮವನ್ನು ಮಾಡಿಸಿದಳು.

ಆ ಮೇಲೆ ಕೃಷ್ಣನು ಮನೆಯಲ್ಲಿ ನಿಲ್ಲದೆ ಬೀದಿಗೇ ಓಡಿಯೋಡಿ ಹೋಗುತ್ತಿರಲು; ಗೋಪಿಯು ಕೋಪಗೊಂಡು—ಏನು ಮಾಡಿದರೂ ಮನೆಯನ್ನು ಬಿಟ್ಟು ಹೋಗುವುದನ್ನು ಬಿಡುವುದಿಲ್ಲವಲ್ಲಾ! ಎಂದು ಅವನ ಸೊಂಟಕ್ಕೆ ಒಂದು ಹಗ್ಗವನ್ನು ಕಟ್ಟಿ ಆ ಹಗ್ಗದ ತುದಿಯನ್ನು ಒಂದು ಒರಳುಕಲ್ಲಿಗೆ ಬಿಗಿದು ಮನೆಗೆಲಸಕ್ಕೆ ಹೋಗಲು; ಆ ಸಮಯದಲ್ಲಿ ಕೃಷ್ಣನು ಆ ಒರಳುಕಲ್ಲನ್ನು ಎಳೆದುಕೊಂಡು ಹೊರಗೆ ಹೋಗಿ ಮನೆಯ ಮುಂದೆ ನಾರದ ಮಹರ್ಷಿಯ ಶಾಪದಿಂದ ಕುಬೇರನ ಇಬ್ಬರು ಮಕ್ಕಳು ಎರಡು ಮತ್ತೀಮರಗಳ ರೂಪದಿಂದಿರಲು, ಅವುಗಳ ನಡುವೆ ಹೋಗಲು; ಆಗ ಆ ಮರಗಳಿಗೆ ಈ ಒರಳುಕಲ್ಲು ತಗುಲಿದುದರಿಂದ ಎರಡು ಮರಗಳೂ ಬೇರಿನೊಡನೆ ಮುರಿದುಬಿದ್ದುವು. ಆ ವೇಳೆಯಲ್ಲಿ ಹೊರಗೆ ಹೋಗಿದ್ದ ನಂದಗೋಪನು ಬರುತ್ತ ಬಿದ್ದಿರುವ ಆ ದೊಡ್ಡ ಮರಗಳನ್ನೂ ಅವುಗಳ ನಡುವೆ ಸಂತೋಷದಿಂದ ಆಡುತ್ತ ಒರಳುಕಲ್ಲಿನೊಡನೆ ಕೂಡಿ ಸೊಂಟದಲ್ಲಿ ಹಗ್ಗವುಳ್ಳ ಕೃಷ್ಣನನ್ನೂ ಕಂಡು ಕೌತುಕಾನಂದಭರಿತನಾಗಿ ನೋಡುತ್ತಿರುವಷ್ಟರಲ್ಲೇ ಮನೆಯಲ್ಲಿ—ಯಶೋದೆಯು ತಾನು ಕಟ್ಟಿಹಾಕಿದ್ದ ಸ್ಥಳದಲ್ಲಿ ಕೃಷ್ಣನನ್ನೂ ಒರಳುಕಲ್ಲನ್ನೂ ಕಾಣದೆ ಹೊರಗೆ ಓಡಿಬಂದು ಬಿದ್ದಿರುವ ಮರಗಳ ಸಂದಿನಲ್ಲಿರುವ ಕೃಷ್ಣನನ್ನು ಕಂಡು ಬೇಗನೆ ಎತ್ತಿಕೊಂಡು ಮುದ್ದಿಸಿ ಮನೆಗೆ ಕರೆದುಕೊಂಡು ಹೋದಳು.

ಅನಂತರದಲ್ಲಿ ಹೀಗೆ ಕೆಲವು ದಿವಸಗಳು ಕಳೆಯಲು; ಒಂದಾನೊಂದು ದಿವಸ ಬಲರಾಮನು ಬಂದು ಕೃಷ್ಣನು ಬೀದಿಯ ಮಣ್ಣನ್ನು ತಿಂದನು ಎಂದು ಗೋಪಿಯ ಸಂಗಡ ಚಾಡಿಹೇಳಲು; ಆಗ ಗೋಪಿದೇವಿಯು—ಏನೋ ಕೃಷ್ಣಾ, ಮಣ್ಣು ತಿಂದಿಯಾ? ಎಂದು ಕೇಳಿದುದಕ್ಕೆ ಅವನು—ಇಲ್ಲಮ್ಮಾ, ಅಣ್ಣನು ನನ್ನ ಮೇಲೆ ಚಾಡಿಹೇಳುತ್ತಾನೆ, ನೋಡು ಎಂದು ಬಾಯಿಯನ್ನು ತೆರೆದು ತೋರಿಸಲು; ಆ ಬಾಯಿಯೊಳಗೆ ಸಪ್ತಸಾಗರಗಳೂ ಸಪ್ತಕುಲಾಚಲಗಳೂ ಸಪ್ತದ್ವೀಪಗಳೂ ಸಪ್ತಲೋಕಗಳೂ ಕಂಡುಬಂದುದರಿಂದ ಈತನೇ ಮಹಾವಿಷ್ಣುವೆಂದು ಆತನ ಮಾಯಾಶಕ್ತಿಯಿಂದ ಅರಿಯಲಾರದೆ ಬಾಯಿಯನ್ನು ಮುಚ್ಚಿಕೋ ಎಂದು ಹೇಳಿ ಸಮಾಧಾನಪಡಿಸಿದಳು.

ಅನಂತರದಲ್ಲಿ ಒಂದಾನೊಂದು ದಿವಸ ನಂದಗೋಪನು ಮುದುಕರಾದ ಗೊಲ್ಲರನ್ನು ಕೂಡಿಸಿಕೊಂಡು—ಈ ಗೋಕುಲದಲ್ಲಿ ನಮಗೆ ಏನೇನೋ ದೈವಿಕವಾದ ತೊಂದರೆಗಳು ವಿವಿಧವಾಗಿ ಸಂಭವಿಸುತ್ತ ಇವೆ. ನಾವು ಇಲ್ಲೇ ಇದ್ದರೆ ಮುಂದೆಯೂ ಇದೇ ರೀತಿಯಾಗಿ ಕಷ್ಟಗಳು ಉಂಟಾಗುವುವು. ಅದುಕಾರಣ ನಾವೆಲ್ಲರೂ ಈ ಸ್ಥಳವನ್ನು ಬಿಟ್ಟು ಬೇರೆ ಸ್ಥಳಕ್ಕೆ ಹೋಗುವುದು ಉಚಿತವಾಗಿದೆ. ಇಲ್ಲಿಗೆ ಸ್ವಲ್ಪದೂರದಲ್ಲಿರುವ ಕಾಳಿಂದೀ ತೀರದ ಬೃಂದಾವನವೆಂಬ ಸ್ಥಳವು ಹುಲ್ಲು ನೀರು ಕಟ್ಟಿಗೆಗಳಿಂದ ಕೂಡಿ ನಮಗೂ ನಮ್ಮ ದನಕರುಗಳಿಗೂ ಬಹಳ ಕ್ಷೇಮಕರವಾಗಿರುವುದು. ಅಲ್ಲಿಗೆ ಹೋಗೋಣ ಎಂದು ಹೇಳಿ ಅವರನ್ನೆಲ್ಲಾ ಒಡಂಬಡಿಸಿ ಸಾಮಾನುಗಳನ್ನೆಲ್ಲಾ ಕಿತ್ತು ಬಂಡಿಗಳ ಮೇಲೆ ಹೇರಿಸಿಕೊಂಡು ದನಕರುಗಳನ್ನು ಜೊತೆಯಲ್ಲಿ ಹೊಡೆದುಕೊಂಡು ಬೃಂದಾವನಕ್ಕೆ ಬಂದು ಅಲ್ಲಿ ಹಳ್ಳಿಗಳನ್ನು ಕಟ್ಟಿಕೊಂಡು ಸುಖದಿಂದಿದ್ದರು. ಆ ಮೇಲೆ ಕೃಷ್ಣನು ಎಂದಿನಂತೆ ಕರುಗಳನ್ನು ಕಾಯುವ ಜೊತೆಯ ಹುಡುಗರ ಸಂಗಡ ತನ್ನ ಮನೆಯ ಕರುಗಳನ್ನು ಹೊಡೆದುಕೊಂಡು ಮೇಯಿಸುವುದಕ್ಕೆ ಹೋಗಿ ಕಾಳಿಂದೀ ನದಿಯ ತೀರದಲ್ಲಿ ಎಳೇಹುಲ್ಲುಗಳನ್ನು ಮೇಯಿಸುತ್ತ ಸಂಗಡಿಗರಾದ ಬಾಲಕರೊಡನೆ ಗೋಲಿ ಗಜ್ಜುಗ ಕಣ್ಣುಮುಚ್ಚಾಟ ಕುದುರೆಚಂಡು ಪುಟಚಂಡು ಲಗ್ಗೆಚಂಡು ಮುಂತಾದ ಆಟಗಳನ್ನಾಡುತ್ತ ಹಸಿವಾದಾಗ ಕಲ್ಲಿಗಳಲ್ಲಿರುವ ಮೊಸರನ್ನದ ಬುತ್ತಿಯನ್ನುಣ್ಣುತ್ತ ಈ ರೀತಿಯಿಂದ ಕಾಲವನ್ನು ಕಳೆಯುತ್ತಿರುವಲ್ಲಿ ಒಂದಾನೊಂದು ದಿವಸ ಕರುಗಳನ್ನು ಅಟ್ಟಿಕೊಂಡು ಅವುಗಳನ್ನು ಮೇಯಿಸುವುದಕ್ಕಾಗಿ ಕಾಳಿಂದೀನದಿಯ ಮತ್ತೊಂದು ಮಡುವಿನ ಬಳಿಗೆ ಹೊಡೆದುಕೊಂಡು ಹೋಗುತ್ತಿರಲು ; ಜೊತೆಯ ಹುಡುಗರು ಕಂಡು—ಕೃಷ್ಣಾ ! ಕೃಷ್ಣಾ ! ಅಲ್ಲಿಗೆ ಕರುಗಳನ್ನು ಅಟ್ಟಿಕೊಂಡು ಹೋಗಬೇಡ. ಹೋದರೆ ಕರುಗಳೊಡನೆ ಅನ್ಯಾಯವಾಗಿ ನೀನೂ ಸತ್ತು ಹೋಗುವಿ. ಏಕೆಂದರೆ ಆ ಮಡುವಿನಲ್ಲಿ ಕಾಳಿಂಗನೆಂಬ ಭಯಂಕರವಾದ ಒಂದು ಘಟಸರ್ಪವು ತನ್ನ ಕುಟುಂಬದೊಡನೆ ವಾಸಮಾಡುತ್ತ ಅಲ್ಲೆಲ್ಲಾ ಸಂಚರಿಸಿಕೊಂಡು ಇರುವುದು. ಅದರ ಘೋರವಾದ ನಂಜಿನಿಂದ ಈ ಕಾಳಿಂದಿಯ ಜಲವನ್ನು ಹನ್ನೆರಡು ಗಾವುದಗಳ ವರೆಗೂ ಯಾವ ಪ್ರಾಣಿಗಳು ಕುಡಿದಾಗ್ಗೂ ವಿಶೇಷವೇಕೆ ! ಆ ನೀರಿನ ವಾಯುವು ಸೋಂಕಿದಾಗ್ಗೂ ಆ ಪ್ರಾಣಿಗಳೆಲ್ಲಾ ತತ್‍ಕ್ಷಣದಲ್ಲೇ ಮೃತಿಯನ್ನು ಹೊಂದುವುವು. ಅದುಕಾರಣ ಮೃಗಪಕ್ಷಿಗಳೇ ಮೊದಲಾದ ಯಾವ ಪ್ರಾಣಿಗಳೂ ಒಂದು ಕ್ಷಣಕಾಲವಾದರೂ ಇಲ್ಲಿ ಬಂದಿರುವುದಿಲ್ಲವೆಂದು ಹೇಳಿದರು. ಕೃಷ್ಣನು ಆ ಮಾತುಗಳನ್ನು ಕೇಳಿ —ಓಹೋ ! ಹಾಗೋ ? ಹಾಗಾದರೆ ನಾನು ಈಗಲೇ ಹೋಗಿ ಆ ಕೆಟ್ಟ ಹಾವನ್ನು ಅಲ್ಲಿಂದ ಓಡಿಸಿ ಸಕಲ ಜೀವರಾಶಿಗಳೂ ಆ ನೀರನ್ನು ಕುಡಿದು ಸಂತೋಷಿಸುವ ಹಾಗೆ ಮಾಡುವೆನೆಂದು ಹೇಳಿ ಆ ಮಡುವಿನ ಬಳಿಗೆ ಓಡಿ ಹೋಗಿ ಅದರೊಳಗೆ ಧುಮ್ಮನೆ ದುಮುಕಲು ; ಕೂಡಲೆ ಆ ಕಾಳಿಂಗನು ಬಂದು ಕೃಷ್ಣನನ್ನು ಸುತ್ತಿಕೊಂಡಿತು. ಆಗ ಕೃಷ್ಣನು ಅದರ ಬಾಲವನ್ನು ಕೈಯಿಂದ ಹಿಡಿದುಕೊಂಡು ಅದರ ಹೆಡೆಯ ಮೇಲೆ ತನ್ನ ಎರಡು ಕಾಲುಗಳನ್ನೂ ಊರಿ ಕುಣಿಯುವುದಕ್ಕಾರಂಭಿ

ಸಿದನು. ಆ ಮೇಲೆ ಆ ಸರ್ಪವು ಕೃಷ್ಣನ ತುಳಿತವನ್ನು ತಡೆಯಲಾರದೆ ಕಂಗೆಟ್ಟು ಬಲ ಹೀನತೆಯನ್ನುಹೊಂದಿ ಸಾಯುವ ಅವಸ್ಥೆಗೆ ಬಂದಿತು. ಅಷ್ಟರಲ್ಲಿ ಕಾಳಿಂಗನಾಗೇಂದ್ರನ ಪತ್ನಿಯರಾದ ನಾಗಕನ್ನಿಕೆಯರು ಓಡಿಬಂದು ಕೃಷ್ಣನಿಗೆ ಸಾಷ್ಟಾಂಗವಾಗಿ ನಮಸ್ಕ ರಿಸಿ ಬಹಳವಾಗಿ ಸ್ತೋತ್ರಮಾಡಿ—ಎಲೈ ಮಹಾತ್ಮನೇ, ನಮ್ಮ ಪತಿಯನ್ನುಕಾಪಾಡಿ ನಮ್ಮ ಮುತ್ತೈದೆತನವನ್ನು ರಕ್ಷಿಸಬೇಕು ಎಂದು ದೀನತೆಯಿಂದ ಕೂಡಿ ಬೇಡಿಕೊಂ ಡುದರಿಂದ ಶ್ರೀಕೃಷ್ಣನು ಆ ಕಾಳಿಂಗನನ್ನು ಬಿಟ್ಟು—ಇನ್ನಿಲ್ಲಿರದೆ ಈ ಕ್ಷಣದಲ್ಲಿಯೇ ಇಲ್ಲಿಂದ ಹೊರಟುಹೋಗಿ ಸಮುದ್ರದಲ್ಲಿ ಸೇರಿಕೋ ಎಂದು ಅಪ್ಪಣೆಯನ್ನು ಕೊಟ್ಟು ದರಿಂದ ಅದು ಆ ಸ್ಥಳವನ್ನು ಬಿಟ್ಟು ಹೊರಟು ತನ್ನ ಸಂಸಾರಸಹಿತವಾಗಿ ಹೋಗಿ ಸಮುದ್ರವನ್ನು ಸೇರಿಕೊಂಡಿತು. ತರುವಾಯ ನಂದಗೋಪನೇ ಮೊದಲಾದ ಗೊಲ್ಲ ರೆಲ್ಲಾ ಈ ಮಹದಾಶ್ಚರ್ಯವನ್ನು ಕಂಡು—ಈ ಬಾಲಕನು ಸಾಮಾನ್ಯ ಬಾಲಕನಲ್ಲ. ದೇವಾಂಶಸಂಭೂತನಾದ ಬಾಲಕನೇ ಸರಿ ಎಂದು ಒಬ್ಬರಿಗೊಬ್ಬರು ಮಾತಾಡಿ ಕೊಂಡು ಸಂತೋಷಪಡುತ್ತಿದ್ದರು.

ಮತ್ತೊಂದು ದಿವಸ ಶ್ರೀಕೃಷ್ಣನು ತನಗೆ ದನಗಳನ್ನು ಕಾಯುವ ಪ್ರಾಯವಾ ದುದರಿಂದ ಬಲರಾಮನ ಜೊತೆಯಲ್ಲಿ ದನಗಳನ್ನು ಕಾಯುವ ಹುಡುಗರ ಸಂಗಡ ತನ್ನ ಮನೆಯ ದನಗಳನ್ನೂ ಅಟ್ಟಿಕೊಂಡು ಹೋಗಿ ಗೋವರ್ಧನಗಿರಿಯ ತಪ್ಪಲಲ್ಲಿ ಅವುಗಳನ್ನು ಮೇಯಿಸುತ್ತ ಆ ಗಿರಿಯ ಸಮೀಪದಲ್ಲಿರುವ ತಾಳೀವನವನ್ನು ಕಂಡು ಜೊತೆಯ ಹುಡುಗರನ್ನು ಕರೆದು—ಇಲ್ಲಿ ನೋಡಿರಿ ; ಈ ವನದಲ್ಲಿ ಓಲೆಯ ಹಣ್ಣು ಗಳು ಎಷ್ಟು ಚೆನ್ನಾಗಿರುವುವು. ಅವುಗಳನ್ನು ಕೆಡಹಿಕೊಂಡು ತಿನ್ನೋಣ ಬನ್ನಿರಿ ಎಂದು ಹೇಳಲು ; ಅವರೆಲ್ಲರೂ—ಅಯ್ಯೋ, ಅಪ್ಪಾ ! ಆಗದಾಗದು ! ಮಹಾವಿ ಪತ್ತು ಸಂಭವಿಸುವುದು ! ನಾವು ತಿರುಗಿ ಹೋಗಿ ನಮ್ಮ ತಾಯಿತಂದೆಗಳ ಮುಖಗ ಳನ್ನು ನೋಡುವುದಿಲ್ಲ. ಇದು ನಿಜ. ಈ ವನದಲ್ಲಿ ಉಂಟಾಗುವ ಹೆಂಡವು ಪ್ರತಿ ನಿತ್ಯದಲ್ಲೂ ಕಂಸಾಸುರನ ಪತ್ನಿಯರ ಪಾನಾರ್ಥವಾಗಿ ಸಾಗಿಹೋಗುತ್ತಿರುವುದು. ಈ ವನದಲ್ಲಿ ಧೇನುಕನೆಂಬ ಕತ್ತೆಯ ರೂಪಿನ ಒಬ್ಬ ದುಷ್ಟರಾಕ್ಷಸನಿರುವನು. ಮೊದಲು ಒಂದುಸಾರಿ ಶಚೀಸಮೇತನಾದ ಇಂದ್ರನು ಈ ಓಲೆಮರಗಳ ಹೆಂಡವನ್ನು ಕುಡಿಯಬೇಕೆಂಬ ಅಪೇಕ್ಷೆಯಿಂದ ಬಂದು ಆ ಕತ್ತೆಯ ಕಾಲಿನಿಂದ ಒದಿಸಿಕೊಂಡು ನೋವು ತಿಂದು ಭಯಪಟ್ಟು ಹಿಂದಿರುಗಿ ನೋಡದೆ ಅಮರಾವತಿಗೆ ಓಡಿಹೋದನು. ನಾವು ಇಂಥ ವನಕ್ಕೆ ಹೋದರೆ ಬದುಕುವೆವೇನಪ್ಪಾ ? ನಮಗೆ ಬೇಡಪ್ಪಾ ! ನಾವು ಖಂಡಿತವಾಗಿ ಬರುವುದಿಲ್ಲ ಎಂದು ಹೇಳಿದರು. ಅದಕ್ಕೆ ಕೃಷ್ಣನು ಅವರನ್ನು ನೋಡಿ ನಕ್ಕು—ಅಯ್ಯೋ ಬಾಳೇ! ನಿಮ್ಮ ಧೈರ್ಯವು ಕಂಡ ಹಾಗಾಯಿತು ! ಒಂದು ಕತ್ತೆಗೆ ಹೆದರಿಕೊಂಡು ಅಲ್ಲಿಗೆ ಹೋಗಿ ದಿವ್ಯವಾದ ಹಣ್ಣುಗಳನ್ನು ತಿನ್ನದೆ ಇರಬಹುದೋ? ಇ ದು ಗಂಡಸುತನವೋ? ಎಂದು ಹೇಳಿ ತಾನು ಶೀಘ್ರವಾಗಿ ಅಲ್ಲಿಗೆ ಹೋಗಿ ವನವನ್ನು ಹೊಕ್ಕನು. ಜೊತೆಯ ಹುಡುಗರೆಲ್ಲರೂ ಭಯಪಟ್ಟು ಹೋಗಲಾರದೆ ಕೃಷ್ಣನು ಏನಾ ಗುವನೋ ಎಂದು ಯೋಚಿಸುತ್ತ ನೋಡುತ್ತ ದೂರದಲ್ಲೇ ನಿಂತಿದ್ದರು. ತರುವಾಯ

ಕತ್ತೆಯ ರೂಪಿನ ಧೇನುಕನೆಂಬ ರಾಕ್ಷಸನು ಕೃಷ್ಣನು ವನಕ್ಕೆ ಬಂದುದನ್ನು ಕಂಡು— ಇವನನ್ನು ಕಚ್ಚಿ ಒದೆದು ಕೊಂದು ತಿಂದುಹಾಕುವೆನೆಂದು ಯೋಚಿಸಿಕೊಂಡು ಆತನ ಬಳಿಗೆ ಓಡಿಬರಲು ; ಕೃಷ್ಣನು ಅದರ ಆರ್ಭಟಕ್ಕೆ ಸ್ವಲ್ಪವಾದರೂ ಅಂಜದೆ ಹತ್ತಿರಕ್ಕೆ ಹೋಗಿ ಆ ಕತ್ತೆಯ ನಾಲ್ಕು ಕಾಲುಗಳನ್ನು ಜೋಡಿಸಿ ಹಿಡಿದುಕೊಂಡು—ಓಲೆಮ ರಗಳ ಮೇಲಿರುವ ಹಣ್ಣಿನ ಗೊನೆಗಳನ್ನು ಕೆಡಹುವುದಕ್ಕೆ ಒಳ್ಳೆಯ ಸಹಾಯವಾಯಿ ತೆಂದು ಹೇಳಿ ಗರ್‍ರನೆ ಬೀಸಿ ಮರದ ಮೇಲಿರುವ ಗೊನೆಗಳಿಗೆ ಗುರಿಕಟ್ಟಿ ಎಸೆಯುತ್ತ ಬಿದ್ದು ಎಚ್ಚೆತ್ತುಕೊಳ್ಳುವುದಕ್ಕೆ ಸ್ವಲ್ಪವಾದರೂ ಅವಕಾಶವನ್ನು ಕೊಡದೆ ತಿರಿಗಿ ತೆಗೆದುಕೊಂಡು ಇಡುತ್ತ ಇದೇ ರೀತಿಯಾಗಿ ಮಾಡುತ್ತ ಬಂದುದರಿಂದ ಆ ರಕ್ಕಸನು ನೊಂದು ಬಳಲಿ ಕಂಗೆಟ್ಟು ಮೈಮರೆತು ಸತ್ತುಹೋದನು. ಆ ಮೇಲೆ ಕೃಷ್ಣನು ಜೊತೆಯ ಹುಡುಗರನ್ನೆಲ್ಲಾ ಕರೆದು—ಇದೋ, ಹೆದರಬೇಡಿರಿ. ನೀವು ಹೇಳಿದ ಕತ್ತೆಯು ಸತ್ತುಬಿದ್ದಿದೆ, ನೋಡಿರಿ. ಓಲೆಯ ಹಣ್ಣಿನ ಗೊನೆಗಳು ಅಪರಿಮಿತವಾಗಿ ಬಿದ್ದಿವೆ. ತಿನ್ನೋಣ, ಬನ್ನಿರಿ ಎಂದು ಹೇಳಲು ; ಅವರೆಲ್ಲರೂ ಬಂದು ನೋಡಿ ಕೃಷ್ಣನ ಸಾಮ ರ್ಥ್ಯಕ್ಕೆ ಆಶ್ಚರ್ಯಪಟ್ಟು ಸಂತೋಷದಿಂದ ಬೇಕಾದಷ್ಟು ಹಣ್ಣುಗಳನ್ನು ತಿಂದು ಸಾಯಂಕಾಲದ ವೇಳೆಯಲ್ಲಿ ಹಣ್ಣಿನ ಗೊನೆಗಳನ್ನು ಹೊತ್ತುಕೊಂಡು ತಮ್ಮ ಹಳ್ಳಿಗೆ ಬಂದು ಈ ವರ್ತಮಾನವನ್ನು ನಂದಗೋಪಾದಿಗಳಿಗೆ ತಿಳಿಸಿದರು. ಅವರೆಲ್ಲರೂ ಕೇಳಿ ಬಹಳ ಸಂತೋಷಾಶ್ಚರ್ಯಮನಸ್ಕರಾಗಿ—ಈ ಕೃಷ್ಣನು ಮನುಷ್ಯಮಾತ್ರನಲ್ಲ. ಇವನ ಸಾಮರ್ಥ್ಯವನ್ನು ಇಷ್ಟೆಂದು ತಿಳಿಯಲಾಗದು ಎಂದು ಮಾತಾಡಿಕೊಳ್ಳುತ್ತಿದ್ದರು.

ತರುವಾಯ ಮತ್ತೊಂದು ದಿವಸ ಕೃಷ್ಣಬಲರಾಮರು ತಮ್ಮ ದನಗಳನ್ನು ಅಟ್ಟಿಕೊಂಡು ಜೊತೆಯ ಹುಡುಗರೊಡನೆ ಯಮುನಾನದಿಯ ಪ್ರಾಂತ್ಯದಲ್ಲಿ ದನಗ ಳಿಗೆ ಒಳ್ಳೆಯ ಎಳೇಹುಲ್ಲನ್ನು ಮೇಯಿಸುತ್ತ ಮಧ್ಯಾಹ್ನವಾದ ಕೂಡಲೆ ತಿಳಿನೀರನ್ನು ಕುಡಿಸಿ ಸಮೀಪದಲ್ಲಿರುವ ಭಾಂಡೀರವೆಂಬ ಒಂದು ದೊಡ್ಡ ಆಲದ ಮರದ ನೆರಳಿಗೆ ದನ ಗಳನ್ನೆಲ್ಲಾ ಅಟ್ಟಿಕೊಂಡು ಬಂದು ನಿಲ್ಲಿಸಲು; ಆಗ ದನಗಳೆಲ್ಲಾ ಅಲ್ಲಿ ಮಲಗಿಕೊಂಡು ಮೆಲಕುಹಾಕುತ್ತಿದ್ದುವು. ಆ ವೇಳೆಯಲ್ಲಿ ಕೃಷ್ಣನೇ ಮೊದಲಾದವರೆಲ್ಲರೂ ಕೂಡಿ— ಬಿಸಿಲು ಕಡಮೆಯಾಗುವ ವರೆಗೂ ಇಲ್ಲಿ ಕುದುರೆಚಂಡನ್ನು ಆಡೋಣ ! ಸೋತವರು ಗೆದ್ದವರನ್ನು ಹೊತ್ತುಕೊಂಡಿರಬೇಕೆಂದು ಗೊತ್ತುಮಾಡಿಕೊಂಡು ಆಟವನ್ನು ಆಡು ತ್ತಿರಲು ; ಆ ಸಮಯದಲ್ಲಿ ಕಂಸನಿಂದ ಕಳುಹಿಸಲ್ಪಟ್ಟ ಪ್ರಲಂಬಾಸುರನೆಂಬ ದೈತ್ಯನು ಆ ದನಗಳನ್ನು ಕಾಯುವ ಹುಡುಗರಂತೆ ವೇಷವನ್ನು ಹಾಕಿಕೊಂಡು ಅವರೊಳಗೆ ಬಂದು ಸೇರಿ ಕೃಷ್ಣನನ್ನು ಕೊಲ್ಲುವುದಕ್ಕೆ ತನ್ನಿಂದ ಅಸಾಧ್ಯವೆಂದೆಣಿಸಿ ಬಲರಾಮನ ಜೊತೆಯಲ್ಲಿ ಆಡುವುದಕ್ಕೆ ತೊಡಗಿ ಕಡೆಗೆ ತಾನವನಿಗೆ ಸೋತು ಆತನನ್ನು ಹೊತ್ತು ಕೊಂಡು ಆಕಾಶಕ್ಕೆ ಹಾರಿಹೋಗಲು ; ಕೃಷ್ಣನು ನೋಡಿ—ಎಲೈ ಅಣ್ಣಾ, ಇವನು ಕಪಟಿಯಾದ ರಾಕ್ಷಸನು ! ನಿನಗೆ ಮೋಸಮಾಡಿದನು ! ಬೇಗನೆ ಅವನನ್ನು ಕೊಂದು ಹಾಕು! ತಡಮಾಡಬೇಡ ಎಂದು ಕೂಗಿ ಹೇಳಿದುದರಿಂದ ಬಲರಾಮನು ಅವನೆರಡು ಕೈಗಳನ್ನೂ ಹಿಡಿದುಕೊಂಡು ಕೆಳಕ್ಕೆ ತುಳಿದು ಕುಂಬಾರರ ಗಾಲಿಯಂತೆ ಗಿರ್‍ರನೆ ತಿರು

ಗಿಸಿ ನೆಲಕ್ಕೆ ಬಡಿದು ಅಪ್ಪಳಿಸಿ ಕೊಂದು ಬೀಸಾಡಿದನು. ಆ ಮೇಲೆ ಸಾಯಂಕಾಲ ವಾಗಲು ಎಲ್ಲರೂ ಹಳ್ಳಿಗೆ ಬಂದು ಆ ದಿವಸ ನಡೆದ ಸಮಾಚಾರವನ್ನೆಲ್ಲಾ ತಿಳಿಸಲು ; ಆಗ ಗೋಪಾಲಕರೆಲ್ಲರೂ—ಈ ಕೃಷ್ಣನು ಮಹಾತ್ಮನೆಂದು ತಿಳಿದು ಭಯಭಕ್ತಿ ಯಿಂದ ನಡೆದುಕೊಳ್ಳುತ್ತಿದ್ದರು.

ಅನಂತರದಲ್ಲಿ ಶರತ್ಕಾಲವು ಸಂಪ್ರಾಪ್ತವಾಗಲು ; ನಂದಗೋಪಾದಿ ಗೋಪಾ ಲಕರೆಲ್ಲರೂ ಕೂಡಿ—ನಾವು ಈ ಶರತ್ಕಾಲದಲ್ಲಿ ಪ್ರತಿಸಂವತ್ಸರದಲ್ಲೂ ಮಾಡು ತ್ತಿದ್ದ ಪದ್ಧತಿಯ ಪ್ರಕಾರ ದೇವೇಂದ್ರನನ್ನು ಪೂಜಿಸಬೇಕೆಂದು ಯೋಚಿಸಿ ತರು ವಾಯ ಎಲ್ಲರೂ ದೇವೇಂದ್ರನ ಹಬ್ಬಕ್ಕೆ ಬೇಕಾದ ಸಾಮಗ್ರಿಗಳನ್ನು ಕೂಡಿಸುತ್ತಿ ರಲು ; ಆಗ ಕೃಷ್ಣನು ಅವರ ಬಳಿಗೆ ಹೋಗಿ—ಈ ರೀತಿಯಾಗಿ ಸಾಮಗ್ರಿಗಳನ್ನು ಏಕೆ ಕೂಡಿಸುತ್ತಿರುವಿರಿ ? ಎಂದು ಕೇಳಲು ; ಅದಕ್ಕೆ ಅವರು—ಎಲೈ ಕೃಷ್ಣನೇ, ಮಹಾತ್ಮನಾದ ದೇವೇಂದ್ರನು ಕಾಲಕಾಲಕ್ಕೆ ಮಳೆಗಳನ್ನು ಕರೆಯುವುದರಿಂದ ಕಾಡುಗಳಲ್ಲೂ ಗಿರಿಗಳಲ್ಲೂ ಬೇಕಾದ ಹಾಗೆ ಹುಲ್ಲುನೀರುಗಳುಂಟಾಗಿ ನಮ್ಮ ದನಗಳು ಸೊಂಪಿನಿಂದ ಮೇಯ್ದು ಕುಡಿದು ವೃದ್ಧಿಯಾಗುವುದರಿಂದಲ್ಲವೇ ? ನಾವು ಸುಖದಿಂದ ಬದುಕುವುದು. ಆದುದರಿಂದ ನಮಗೆ ಉಪಕಾರವನ್ನು ಮಾಡುತ್ತಿರುವ ದೇವೇಂದ್ರನನ್ನು ಆರಾಧಿಸುತ್ತೇವೆ ಎಂದು ಹೇಳಿದರು. ಆ ಮಾತುಗಳನ್ನು ಕೇಳಿ ಕೃಷ್ಣನು—ದೇವೇಂದ್ರನಿಂದ ನಮಗೇನು ಪ್ರಯೋಜನ ? ನಮ್ಮ ದನಗಳಿಗೆ ಹುಲ್ಲು ನೀರುಗಳನ್ನು ಕೊಡುತ್ತಿರುವುದು ಈ ಗೋವರ್ಧನ ಪರ್ವತವು. ಅದುಕಾರಣ ನಾವು ಈ ಪರ್ವತದ ಹಬ್ಬವನ್ನು ಮಾಡಬೇಕು ಎನ್ನಲು ; ಅವರೆಲ್ಲರೂ ಕೃಷ್ಣನ ಮಾತುಗ ಳಿಗೆ ಒಪ್ಪಿಕೊಂಡು ಆ ಗೋವರ್ಧನ ಪರ್ವತಕ್ಕೆ ಹಬ್ಬ ಮಾಡಿದುದರಿಂದ ದೇವೇಂ ದ್ರನು ಬಹಳವಾಗಿ ಕೋಪಿಸಿಕೊಂಡು ಗೊಲ್ಲರ ಹಳ್ಳಿಗಳೆಲ್ಲಾ ತೇಲಿಹೋಗುವ ಹಾಗೆ ವಿಪರೀತವಾದ ಮಳೆಯನ್ನು ಕರೆಯುವುದಕ್ಕೆ ಆರಂಭಿಸಿದನು. ಆಗ ಕೃಷ್ಣನು ಗೋವ ರ್ಧನಗಿರಿಯನ್ನು ಮೇಲೆತ್ತಿ ಕೊಡೆಯಂತೆ ಹಿಡಿದು ಸ್ವಲ್ಪವೂ ಅಪಾಯವಿಲ್ಲದಂತೆ ಗೋವುಗಳನ್ನೂ ಗೊಲ್ಲರನ್ನೂ ಕಾಪಾಡಿದನು.

ಅನಂತರದಲ್ಲಿ ಮಧುರಾನಗರದಲ್ಲಿ ರಾಜ್ಯಭಾರಮಾಡುತ್ತಿದ್ದ ಕಂಸಾಸುರನು ನಾರದಮಹಾಮುನಿಯ ಮುಖವಚನದಿಂದ ತನ್ನನ್ನು ಕೊಲ್ಲುವ ದೇವಕಿಯ ಎಂಟ ನೆಯ ಮಗನಾದ ಕೃಷ್ಣನು ಗೋಕುಲದಲ್ಲಿ ಬೆಳೆಯುತ್ತಿರುವುದಾಗಿಯೂ ತಾನು ಕಳು ಹಿಸಿದ್ದ ಪೂತನಿಯೇ ಮೊದಲಾದ ರಾಕ್ಷಸರನ್ನು ಆತನೇ ಕೊಂದುಹಾಕಿದನೆಂಬುದಾ ಗಿಯೂ ಕೇಳಿ ಬಹಳ ಚಿಂತಾಕ್ರಾಂತನಾಗಿ—ಹಗೆಯನ್ನು ಹೆಚ್ಚಾಗಿ ಬೆಳಿಸಬಾರದು, ಬಾಲ್ಯದಲ್ಲಿಯೇ ಕೊಂದು ಹಾಕಬೇಕೆಂದೆಣಿಸಿ ಅಕ್ರೂರನೆಂಬ ದೈತ್ಯನನ್ನು ಬೃಂದಾವ ನಕ್ಕೆ ಕಳುಹಿಸಿ ರಾಮಕೃಷ್ಣರನ್ನು ಮಧುರಾಪುರಕ್ಕೆ ಕರಿಸಿಕೊಂಡು ಕುವಲಯಾಪೀ ಡವೆಂಬ ಮಹಾಗಜವನ್ನೂ ಮುಷ್ಟಿಕಚಾಣೂರರೆಂಬ ಜಟ್ಟಿಗಳನ್ನೂ ಕರೆದು ಅವರನ್ನು ಕೊಂದುಹಾಕುವ ಹಾಗೆ ಹೇಳಿ ಕಳುಹಿಸಿಲು ; ಆಗ ರಾಮಕೃಷ್ಣರಿಬ್ಬರೂ ಮಲ್ಲ ಯುದ್ಧಕ್ಕೆ ತೊಡಗಿ ಆ ಆನೆಯನ್ನೂ ಇಬ್ಬರು ಜಟ್ಟಿಗಳನ್ನೂ ಕೊಂದುಹಾಕಿದರು.

ಆ ಮೇಲೆ ಕೃಷ್ಣನು ಸಿಂಹಾಸನದ ಮೇಲೆ ಕುಳಿತಿರುವ ಕಂಸನ ಬಳಿಗೆ ಹೋಗಿ ಅವನ ಜುಟ್ಟು ಹಿಡಿದೆಳೆದು ಕೆಳಗೆ ಕೆಡುಹಿಕೊಂಡು ತನ್ನ ಕಾಲಿನಿಂದ ಒದೆದು ತುಳಿದು ಕೊಂದುಹಾಕಿ ಯಥಾಪ್ರಕಾರವಾಗಿ ಅವನ ತಂದೆಯಾದ ಉಗ್ರಸೇನನಿಗೆ ಯಾದವ ಪಟ್ಟವನ್ನು ಕಟ್ಟಿ ನರಕಾಸುರನೆಂಬ ದೈತ್ಯನನ್ನೂ ಕೊಂದು ಅವನು ಸೆರೆಯಲ್ಲಿಟ್ಟಿದ್ದ ಹದಿನಾರು ಸಾವಿರ ದೇವಕನ್ನಿಕೆಯರನ್ನೂ ರುಕ್ಮಿಣೀ ಸತ್ಯಭಾಮೆಯರೇ ಮೊದಲಾದ ಅಷ್ಟಮಹಿಷಿಯರನ್ನೂ ತಾನು ಮದುವೆಯಾಗಿ ಅವರಲ್ಲಿ ಸಾಂಬ ಮನ್ಮಥರೆಂಬವರೇ ಮೊದಲಾದ ಮಕ್ಕಳುಗಳನ್ನು ಪಡೆದು ಇನ್ನೂ ಹಂಸ ಡಿಬಿಕ ಮುರ ಸಾಲ್ವಾದ್ಯನೇಕ ದೈತ್ಯರನ್ನು ಸಂಹರಿಸಿ ವೈಕುಂಠ ದ್ವಾರಪಾಲಕರಾದ ಜಯವಿಜಯರು ಮೂರನೆಯ ಜನ್ಮದಲ್ಲಿ ಶಿಶುಪಾಲ ದಂತವಕ್ರರೆಂಬ ಹೆಸರಿನಿಂದ ಹುಟ್ಟಿದುದರಿಂದ ಅವರಿಬ್ಬರನ್ನೂ ಸಂಹರಿಸಿ ಪಾಂಡವರಿಗೆ ಸಹಾಯವನ್ನು ಮಾಡಿ ಭಾರತಯುದ್ಧದಲ್ಲಿ ಜರಾಸಂಧ ಕೌರವ ಜಯದ್ರಥ ಶಲ್ಯ ದ್ರುಪದ ಕೇಕಯ ವಿರಾಟ ತ್ರಿಗರ್ತ ಭೂರಿಶ್ರವ ಎಂಬವರೇ ಮೊದಲಾದ ಅನೇಕ ದುಷ್ಟ ರಾಜರುಗಳನ್ನೂ ಕೊಲ್ಲಿಸಿ ಭೂಭಾರವನ್ನಿಳಿಸಿ ಹಸ್ತಿನಾವತೀ ನಗರದಲ್ಲಿ ಸತ್ಯಸಂಧನಾದ ಧರ್ಮರಾಜನಿಗೆ ಪಟ್ಟಾಭಿಷೇಕವನ್ನು ಮಾಡಿ ಭೂಲೋಕದಲ್ಲಿ ತನ್ನ ಮಾನವದೇಹವನ್ನು ಬಿಟ್ಟು ವೈಕುಂಠಕ್ಕೆ ತೆರಳಿದನು.

---

## 8. THE NINTH OR BAUDDHA INCARNATION.

## ೮. ಬೌದ್ಧಾವತಾರದ ಕಥೆ.

ಪೂರ್ವಕಾಲದಲ್ಲಿ ತಾರಕಾಸುರನೆಂಬ ರಾಕ್ಷಸನು ಮಹಾ ಪರಾಕ್ರಮಶಾಲಿಯಾಗಿ ಇಂದ್ರಾದಿ ದೇವತೆಗಳಿಗೆ ಬಹಳವಾಗಿ ತೊಂದರೆಯನ್ನುಂಟುಮಾಡುತ್ತಿದ್ದನು. ಅದುಕಾರಣ ದೇವತೆಗಳೆಲ್ಲರೂ ಬಹುವಿಧವಾಗಿ ಪ್ರಾರ್ಥನೆಯನ್ನು ಮಾಡಿಕೊಂಡುದರಿಂದ ಈಶ್ವರನ ಮಗನಾದ ಷಣ್ಮುಖನು ಆ ದೇವಸೇನಾಪತಿತ್ವವನ್ನು ವಹಿಸಿ ಆ ದುಷ್ಟನಾದ ದೈತ್ಯನನ್ನು ಸಂಹರಿಸಿದನು. ಅವನ ಮಕ್ಕಳಾದ ತಾರಕಾಕ್ಷ ಕಮಲಾಕ್ಷ ವಿದ್ಯುನ್ಮಾಲಿ ಎಂಬ ಮೂರುಮಂದಿಯೂ ಸರೋಜಸಂಭವನನ್ನು ಕುರಿತು ಬಹಳವಾಗಿ ತಪಸ್ಸುಮಾಡಿ ಮೆಚ್ಚಿಸಿ ಪ್ರತ್ಯಕ್ಷನಾಗಿ ಬಂದ ಬ್ರಹ್ಮನನ್ನು ನೋಡಿ ತಮ್ಮ ತಂದೆಯಾದ ತಾರಕಾಸುರನನ್ನು ಕೊಲ್ಲಿಸಿದ ದೇವತೆಗಳೆಂಬ ಮೃಗಗಳನ್ನು ಬೇಟೆಯಾಡಬೇಕೆಂದು ತಮ್ಮ ಮನಸ್ಸಿನಲ್ಲಿ ಯೋಚಿಸಿಕೊಂಡು—ಎಲೈ ಚತುರ್ಮುಖನೇ, ನಮಗೆ ಅಮರತ್ವವುಂಟಾಗುವ ಹಾಗೂ ದೇವಾಸುರಾದಿಗಳೆಲ್ಲರೂ ನಮಗೆ ಸೇವಕರಾಗಿ ನಮ್ಮನ್ನು ಓಲೈಸಿಕೊಂಡಿರುವ ಹಾಗೂ ನಮ್ಮ ವಾಸಕ್ಕೆ ಯೋಗ್ಯವಾಗಿ ಯಾರಿಂದಲೂ ಜಯಿಸಲಶಕ್ಯವಾದ ಮೂರು ಪಟ್ಟಣಗಳು ಆಕಾಶಮಾರ್ಗದಲ್ಲಿ ಉಂಟಾಗುವ ಹಾಗೂ ಈ ಮೂರು ವರಗಳನ್ನೂ ನಮಗೆ ಕೊಡಬೇಕೆಂದು ಬೇಡಿಕೊಂಡರು. ಆಗ ಬ್ರಹ್ಮನು—ಆಹಾ! ಇದಕ್ಕೇನು ಮಾಡಬೇಕು ? ನಾನು ಹುಲಿಗೆ ಧೈರ್ಯವನ್ನೂ ಕತ್ತಲೆಗೆ ಕಾಠಿಣ್ಯವನ್ನೂ ಕುಲಗಿರಿಗಳಿಗೆ ಚೈತನ್ಯವನ್ನೂ ಆನೆಗಳಿಗೆ ಸೂಕ್ಷ್ಮಬುದ್ಧಿಯನ್ನೂ ಕೊಲೆಗಾರರಿಗೆ ನಿತ್ಯದೇಹವನ್ನೂ ಒಲಿದು ಕೊಟ್ಟರೆ ಲೋಕಕ್ಕೆ ಲೇಸಾಗುವುದೇ ? ಎಂದಿಗೂ

ಇಲ್ಲ. ಈ ದುರಾತ್ಮರು ಇಂಥ ಮಹಾವರಗಳನ್ನು ಕೇಳಿಕೊಂಡರಲ್ಲಾ ! ಶಿವ ಶಿವಾ ! ಈ ಅನಿವಾರ್ಯವಾದ ಕಾರ್ಯಕ್ಕೆ ನಾನು ಮಾಡತಕ್ಕ ಯೋಚನೆ ಯಾವುದು ಎಂದು ಒಂದು ಗಳಿಗೆಯ ವರೆಗೂ ಯೋಚಿಸಿ ತರುವಾಯ ಆ ಮೂರು ಮಂದಿಯನ್ನೂ ಕುರಿತು—ನಿಮ್ಮ ಕೋರಿಕೆಯಂತೆ ನಿಮಗೆ ಆಕಾಶದಲ್ಲಿ ಮೂರು ಪಟ್ಟಣಗಳು ಉಂಟಾಗುವುವು. ಮಹಾಶೂರರಾದ ನೀವು ಇಂದ್ರಾದಿದೇವತೆಗಳೆಂಬ ನೊರಜುಗಳನ್ನು ಒಡಿದು ನಿಮ್ಮ ಸೇವೆ ಮಾಡಿಸಿಕೊಳ್ಳಿರಿ. ನಿಮ್ಮ ಮೂರು ಪಟ್ಟಣಗಳು ದಿವ್ಯ ಸಹಸ್ರ ಸಂವತ್ಸರಗಳಿಗೊಂದುಸಾರಿ ಒಂದು ಸ್ಥಾನದಲ್ಲಿ ಕೂಡುವುವು. ಆ ವೇಳೆಯಲ್ಲಿ ಯಾವ ಮಹಾತ್ಮನು ಆ ನಿಮ್ಮ ಮೂರು ನಗರಗಳನ್ನು ಒಂದೇ ಬಾಣದಿಂದ ಕಡಿದು ಹಾಕುವನೋ ಆ ಸಮಯದಲ್ಲಿ ನಿಮಗೆ ಸಾವುಂಟಾಗುವುದೇ ಹೊರತು ಅನ್ಯಥಾ ನೀವು ಯಾವ ವಿಧದಿಂದಲೂ ಸಾಯುವುದಿಲ್ಲ ಹೋಗಿರಿ ಎಂದು ಹೇಳಿ ಅದೃಶ್ಯನಾದನು.

ತರುವಾಯ ಆ ದುಷ್ಟರು ಅಂಥ ಕಾಲವು ಬಂದಾಗ ನೋಡಿಕೊಳ್ಳೋಣ ಎಂದು ಸಂತೋಷದಿಂದ ಕೂಡಿ ಅಲ್ಲಿಂದ ಹೊರಟುಬಂದು ದೈತ್ಯರ ಬಡಗಿಯಾದ ಮಯನನ್ನು ಕರಿಸಿ ಆಕಾಶದಲ್ಲಿ ತ್ರಿಪುರಗಳನ್ನು ನಿರ್ಮಾಣಮಾಡಿಸಿಕೊಂಡು ಇಂದ್ರಾದಿ ದೇವತೆಗಳನ್ನೆಲ್ಲಾ ಬಡಿದು ಅವರಿಂದ ನಿರಂತರದಲ್ಲೂ ಸೇವೆಯನ್ನು ಮಾಡಿಸಿಕೊಳ್ಳುತ್ತ ಅತಿ ಪ್ರಬಲರಾಗಿದ್ದರು. ಆ ಮೇಲೆ ಇಂದ್ರಾದಿ ದೇವತೆಗಳೆಲ್ಲಾ ಕೂಡಿ ಯೋಚಿಸಿ ಯಾವ ವಿಧದಿಂದಲೂ ಆ ದೈತ್ಯರ ಸಂಹಾರೋಪಾಯವನ್ನು ಕಾಣದೆ ಕಡೆಗೆ ಅವರೆಲ್ಲರೂ ಹೊರಟು ಕೈಲಾಸಕ್ಕೆ ಹೋಗಿ ಪ್ರಮಥಾಧಿಪನಿಗೆ ಅಡ್ಡಬಿದ್ದು ತಮಗೆ ಸಂಭವಿಸಿರುವ ತಾರಕನ ಮಕ್ಕಳ ಬಾಧೆಯನ್ನು ಹೇಳಿಕೊಂಡು ಮೊರೆಯಿಡಲು, ಆಗ ಶಂಕರನು—ಎಲೈ ದೇವತೆಗಳಿರಾ, ತಾರಕನ ಮಕ್ಕಳು ವೇದಮಾರ್ಗಗಳಲ್ಲಿ ಎಳ್ಳಷ್ಟಾದರೂ ತಪ್ಪದೆ ವೇದೋಕ್ತವಾದ ಕರ್ಮಗಳನ್ನು ಮಾಡುತ್ತ ಬಹಳ ಪರಿಶುದ್ಧರಾಗಿರುವರು. ಇಂಥವರನ್ನು ನಿಷ್ಕಾರಣವಾಗಿ ಸಂಹರಿಸುವುದು ಹೇಗೆ? ನೀವು ಈಗಲೇ ಹೋಗಿ ವಿಷ್ಣುವಿಗೆ ಈ ಸಂಗತಿಯನ್ನು ತಿಳಿಸಿರಿ ಎಂದು ಹೇಳಲು ; ಆಗ ಅವರೆಲ್ಲರೂ ವಿಷ್ಣುವಿನ ಒಳಿಗೆ ಬಂದು ಈಶ್ವರವಚನವನ್ನು ತಿಳಿಸಿ ತಮ್ಮ ಕಷ್ಟವನ್ನು ಹೇಳಿಕೊಂಡು ಗೋಳಾಡಲು ; ಆಗ ಕರುಣಾಳುವಾದ ಹರಿಯು ಬೌದ್ಧಾವತಾರವನ್ನು ಮಾಡಿ ಯುಕ್ತಿಯಿಂದ ಸೌಗತವೆಂಬ ಒಂದು ಶಾಸ್ತ್ರವನ್ನು ಕಲ್ಪಿಸಿ ಆ ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು ಹೋಗಿ ಆ ತ್ರಿಪುರಗಳನ್ನು ಪ್ರವೇಶಿಸಿ ಆ ತಾರಕನ ಮಕ್ಕಳಿಗೆ ಕಾಣಿಸಿಕೊಳ್ಳಲು; ಅವರು ಈತನ ಅನ್ಯಾದೃಶವಾದ ತೇಜಸ್ಸನ್ನು ನೋಡಿ—ಇವನಾರೋ ಮಹಾ ಪುರುಷನೆಂದು ಯೋಚಿಸಿ ಎದುರೆದ್ದು ಬಂದು ಆತನಿಗೆ ನಮಸ್ಕಾರವನ್ನು ಮಾಡಿ ದಿವ್ಯಪೀಠಾಗ್ರದಲ್ಲಿ ಕುಳ್ಳಿರಿಸಿ ಷೋಡಶೋಪಚಾರಗಳಿಂದ ಪೂಜಿಸಿ—ಎಲೈ ಮಹಾನುಭಾವರೇ, ತಾವು ಎಲ್ಲಿಂದ ಬಂದಿರಿ ? ಪವಿತ್ರರಾದ ನಿಮ್ಮ ಸಂದರ್ಶನದಿಂದ ನಾವು ಧನ್ಯರಾದೆವು. ಇಲ್ಲಿ ಬಂದ ಕಾರ್ಯವೇನು ? ಎಂದು ಭಯಭಕ್ತಿಯಿಂದ ಕೂಡಿ ಕುಶಲಪ್ರಶ್ನೆಯನ್ನು ಮಾಡಲು ; ಬೌದ್ಧವೇಷಧಾರಿಯಾದ ವಿಷ್ಣುವು ಅವರನ್ನು ಕುರಿತು—ನಾವು ಭಿಕ್ಷುಕರು. ನಮಗೆ ಊರೆಲ್ಲಿರುವುದು ? ನಮ್ಮ ತಪಸ್ಸು ನಿರಾತಂಕವಾಗಿ ನಡೆಯುವ ಹಾಗೆ ಮಾಡಿ ನಮ್ಮನ್ನು ಯಾರು ಪ್ರೀತಿಯಿಂದಿ

ರಿಸಿಕೊಂಡಿರುವರೋ ಅಂಥವರಲ್ಲೇ ಇದ್ದುಕೊಂಡು ತತ್ವನಿರ್ಣಯಗಳನ್ನೂ ಧರ್ಮ
ರಹಸ್ಯಗಳನ್ನೂ ಉಪದೇಶಿಸಿ ಅವರಿಗೆ ಇಷ್ಟಾರ್ಥಗಳು ಸಿದ್ಧಿಸುವಂತೆ ಆಶೀರ್ವಾದ
ವನ್ನು ಮಾಡುತ್ತ ಅವರ ಶ್ರೇಯಸ್ಸನ್ನೇ ಪ್ರಾರ್ಥಿಸಿಕೊಂಡಿರುವೆವು ಎಂದು ಹೇಳಲು ;
ಅವರು ಆ ಮಾತನ್ನು ಕೇಳಿ ಬಹು ಸಂತೋಷವುಳ್ಳವರಾಗಿ—ಆತನಿಗೆ ಒಂದು
ಮಠವನ್ನು ಕಟ್ಟಿಸಿ ಅಲ್ಲಿರಿಸಿ ಪ್ರಾತಃಕಾಲದಲ್ಲೂ ಸಾಯಂಕಾಲದಲ್ಲೂ ಆತನ
ಬಳಿಗೆ ಹೋಗಿ ವಂದಿಸಿ ಬರುತ್ತಿದ್ದರು. ಆ ಮೇಲೆ ಆ ಕಪಟ ಬೌದ್ಧವೇಷಧಾರಿಯಾದ
ಹರಿಯು ತಾನು ಚತುರೋಪಾಯದಿಂದ ಮಾಡಿದ ಬುದ್ಧಮತತತ್ವವನ್ನು ಅವರಿಗೆ
ಬೋಧಿಸುತ್ತ ಲೌಕಿಕಯುಕ್ತಿಯಿಂದ—ಈ ಶಾಸ್ತ್ರವೇ ಸತ್ಯವಾದುದು. ಇತರವಾದ
ವೇದಶಾಸ್ತ್ರಗಳೆಲ್ಲಾ ಅಸತ್ಯವಾದುವುಗಳು ಎಂದು ಅವರು ಸಂಪೂರ್ಣವಾಗಿ ನಂಬುವ
ಹಾಗೆ ಮಾಡಲು ; ಅವರು ಆ ಮಾತುಗಳಿಂದ ಮೋಹಿತರಾಗಿ ವೇದೋಕ್ತಕರ್ಮಗಳ
ನ್ನೆಲ್ಲಾ ಬಿಟ್ಟು ಸೌಗತಧರ್ಮವನ್ನು ಕೈಕೊಂಡು ತಮ್ಮ ಮನಸ್ಸಿಗೆ ಬಂದ ಹಾಗೆ ನಡೆ
ಯುವುದಕ್ಕೆ ಆರಂಭಿಸಿದರು.

ಆ ಮೇಲೆ ಈಶ್ವರನು ದೇವತೆಗಳಿಗೆ ಕ್ಷೇಮವನ್ನುಂಟುಮಾಡುವುದಕ್ಕೆ ಇದು
ಸಮಯವೆಂದು ಆ ರಕ್ಕಸರೊಡನೆ ಯುದ್ಧೋನ್ಮುಖನಾಗಿ—ಭೂಮಿಯೇ ರಥವು
ಅದಕ್ಕೆ ಸೂರ್ಯಚಂದ್ರರೇ ಗಾಲಿಗಳು, ಚತುರ್ವೇದಗಳೇ ಕುದುರೆಗಳು, ಚತುರ್ಮು
ಖಬ್ರಹ್ಮನೇ ಸಾರಥಿಯು, ಮೇರುಪರ್ವತವೇ ಧನುಸ್ಸು, ಅದಕ್ಕೆ ಆದಿಶೇಷನೇ ಹೆದೆಯು,
ವಿಷ್ಣುವೇ ಬಾಣವು, ಈ ರೀತಿಯಾಗಿ ಸಿದ್ಧಮಾಡಿಕೊಂಡು ಆ ಪುರತ್ರಯಗಳು ಸೇರುವ
ಕಾಲವನ್ನು ನಿರೀಕ್ಷಿಸಿಕೊಂಡಿದ್ದು ಕಡೆಗೆ ರಾಕ್ಷಸ ಸಮೇತಗಳಾದ ಆ ಪಟ್ಟಣಗ
ಳನ್ನು ಸುಟ್ಟು ಬೂದಿಮಾಡಿ ದೇವತೆಗಳಿಗೆ ಕ್ಷೇಮವನ್ನುಂಟುಮಾಡಿದನು. ತರು
ವಾಯ ಲೋಕದಲ್ಲಿ ಬಹುಜನರು ಆಗ ವಿಷ್ಣುಕಲ್ಪಿತ ಶಾಸ್ತ್ರಧರ್ಮವನ್ನು ಅನುಸರಿಸಿ
ನಡೆದುಕೊಳ್ಳುತ್ತ ಬೌದ್ಧರೆನ್ನಿಸಿಕೊಂಡಿದ್ದಾರೆ.

---

## 9. THE TENTH OR HORSE INCARNATION.

## ೯. ಕಲ್ಕ್ಯವತಾರದ ಕಥೆ.

ಕಲಿಯುಗದ ಅಂತ್ಯದಲ್ಲಿ ಭೂಲೋಕದೊಳಗೆ ಮ್ಲೇಚ್ಛ ಕಿರಾತ ಶಕ ಚೀಣ
ರೆಂಬುವರೇ ಮೊದಲಾದ ದುಷ್ಟಜನರು ಪ್ರಭುಗಳಾಗಿ ಪ್ರಬಲಿಸಿ ವೇದಮಾರ್ಗವನ್ನೂ
ಬ್ರಾಹ್ಮಣ್ಯವನ್ನೂ ಯಜ್ಞಾದಿ ಸತ್ಕರ್ಮಗಳನ್ನೂ ಕೆಡಿಸಿ ಜಾತಿಸಂಕರಗಳನ್ನುಂಟು
ಮಾಡುತ್ತ ಭೂಮಂಡಲವನ್ನೆಲ್ಲಾ ಆಕ್ರಮಿಸಿಕೊಳ್ಳುತ್ತ ಬರುತ್ತಿರಲು ; ಕೆಲ ಕಾಲದ
ಮೇಲೆ ತಾಮ್ರಪರ್ಣಿ ಎಂಬೊಂದು ನದೀತೀರದ ಅಗ್ರಹಾರನಿವಾಸಿಯಾದ ಒಬ್ಬ
ಬ್ರಾಹ್ಮಣನಿಗೆ ಮಹಾವಿಷ್ಣುವು ಕುಮಾರಭಾವದಿಂದ ಅಶ್ವಮುಖನಾಗಿ ಅವತರಿಸಿ
ಕಲ್ಕಿಯೆಂಬ ಹೆಸರುಳ್ಳವನಾಗಿ ಕುದುರೆಯ ಮೇಲೆ ಏರಿಕೊಂಡು ಅಸಹಾಯಶೂರ
ನಾಗಿ ಹೊರಟು ತನ್ನ ಕೈಕತ್ತಿಯಿಂದ ವೇದಮಾರ್ಗನಿಂದಕರಾಗಿ ದುಷ್ಟರಾದ ಜನರ
ನ್ನೆಲ್ಲಾ ಕಡಿದು ಕೊಂದು ಶಿಷ್ಟರನ್ನೆಲ್ಲಾ ಸಂರಕ್ಷಿಸಿ ಧರ್ಮಸಂಸ್ಥಾಪನೆಯನ್ನು
ಮಾಡಿ ಭೂಲೋಕವನ್ನು ಸಂರಕ್ಷಿಸುವನು.

## ೬ನೆಯ ಭಾಗ

# PROVERBS—ಗಾದೆಗಳು

ಅಂಕೆಯಿಲ್ಲದ ಕಪಿ ಲಂಕೆಸುಟ್ಟಿತು.
ಅಂಜಿದವನ ಮೇಲೆ ಕಪ್ಪೆ ಹಾಕಿದ ಹಾಗೆ.
ಅಂತೂ ಇಂತೂ ಕುಂತೀ ಮಕ್ಕಳಿಗೆ ರಾಜ್ಯವಿಲ್ಲ.
ಅಂದಿಗೆ ಅದೇ ಸುಖ, ಇಂದಿಗೆ ಇದೇ ಸುಖ
ಅಂಬಲೀ ಕುಡಿಯುವವನಿಗೆ ಮೀಸೆ ತಿಕ್ಕುವವನೊಬ್ಬ.
ಅಕ್ಕ ತಂಗಿಯರಾದಾಗ್ಯೂ ಅಕ್ಕಸಾಲೆ ಬಿಡ.
ಅಕ್ಕನ ಸೇವೆ ಭಾವನ ಕಠಾರಿ.
ಅಕ್ಕರೆಯಿಂದ ಗಿಣೀ ಸಾಕಿ ಬೆಕ್ಕಿನ ಬಾಯಿಗೆ ಕೊಟ್ಟಾರೇ ?
ಅಕ್ಕಸಾಲೆ ಕಿವಿ ಚುಚ್ಚಿದರೆ ನೋವಿಲ್ಲ.
ಅಕ್ಕೀ ಕೊಟ್ಟು ಅಕ್ಕನ ಮನೆಯೇ ?
ಅಕ್ಕಿಯೂ ಜೋಕೆಯಾಗಿರಬೇಕು, ಅಕ್ಕನ ಮಕ್ಕಳೂ ಜೋಕೆಯಾಗಿರಬೇಕು.
ಅಗಸರ ಕತ್ತೆ ಕೊಂಡು ಹೋಗಿ ದೊಂಬರರಿಗೆ ತ್ಯಾಗಹಾಕಿದ ಹಾಗೆ.
ಅಜ್ಜೀ ಮನೆಗೆ ಅಜ್ಜ ಬಂದ ಹಾಗೆ.
ಅಟ್ಟದಿಂದ ಬಿದ್ದವನನ್ನು ದಡಿಯಿಂದ ಚಚ್ಚಿದ ಹಾಗೆ.
ಅಟ್ಟ ಪಾಯಸದಲ್ಲಿ ಕೆರಾ ಇಟ್ಟ ಹಾಗೆ.
ಅಡವಿಗೆ ಹೋದರೂ ಚಿಗಟದ ಕಾಟ ತಪ್ಪದು.
ಅಡಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು.
ಅಡಿಕೆಯನ್ನು ಉಡಿಯಲ್ಲಿ ಹಾಕಬಹುದು, ಮರವಾದ ಮೇಲೆ ಕೂಡದು.
ಅತಿ ಸ್ನೇಹ ಗತಿ ಕೆಡಿಸಿತು.
ಅತ್ತೆಯೊಡೆದ ಪಾತ್ರೆಗೆ ಬೆಲೆಯಿಲ್ಲ.
ಅದಕ್ಕದು ಉಳಿ ಕೊಡತಿಯ ನ್ಯಾಯ.
ಅಪ್ಪ ನೆಟ್ಟ ಆಲದ ಮರವೆಂದು ನೇಣು ಹಾಕಿಕೊಳ್ಳಬಹುದೇ ?
ಅಭ್ಯಾಸವಿಲ್ಲದ ಬ್ರಾಹ್ಮಣ ಹೋಮಾ ಮಾಡಿ, ಗಡ್ಡ ಮೀಸೆ ಸುಟ್ಟುಕೊಂಡ.
ಅರಸನ ಕುದುರೆ ಕಾಲು ತುಳಿದರೆ ಇವನಿಗೆ ಬಂದ ಭಾಗ್ಯವೇನು ?
ಅರಸನ ಕುದುರೆ ಲಾಯದಲ್ಲಿಯೇ ಮುಪ್ಪಾಯಿತು.
ಅಲ್ಪ ಕಾರ್ಯಕ್ಕೆ ಅರಮನೆಗೆ ಹೋಗಬಾರದು.

ಅಲ್ಪನಿಗೆ ಐಶ್ವರ್ಯ ಬಂದಾಗ ಅರ್ಧ ರಾತ್ರಿಯಲ್ಲಿ ಕೊಡೇ ಹಿಡಿಸಿಕೊಂಡ.
ಅಲ್ಪರ ಸಂಗ ಅಭಿಮಾನ ಭಂಗ.
ಅಲ್ಲಾಡುವ ಹಲ್ಲಿನ ಮೇಲೆ ಹಲಗೇ ಕಲ್ಲು ಬಿದ್ದಂತೆ.
ಅವನ ಮಾತು ಕೆಸರಿನಲ್ಲಿ ನೆಟ್ಟ ಕಂಬದ ಹಾಗೆ.
ಅವನ ಸಾಕ್ಷಿ ಅಡ್ಡ ಗೋಡೆಯ ಮೇಗಣ ದೀಪದ ಹಾಗೆ.
ಅಶನವಸನಕ್ಕಿದ್ದ ಮೇಲೆ ವ್ಯಸನವೇಕೆ?
ಅಳಿದ ಊರಿಗೆ ಉಳಿದವನೇ ಗೌಡ.
ಆಕಳು ಕಪ್ಪಾದರೆ ಹಾಲು ಕಪ್ಪೇ?
ಆಗದ ಕಾರ್ಯಕ್ಕೆ ಆಶೆ ಪಟ್ಟರೆ ಸಾಗುವದಿಲ್ಲ ಹೋಗುವದಿಲ್ಲ.
ಆಟಕ್ಕೆ ತಕ್ಕ ವೇಷ, ವೇಷಕ್ಕೆ ತಕ್ಕ ಭಾಷೆ.
ಆನೆಗೆ ಗುಂಗುರು ಕಾಡಿದ ಹಾಗೆ.
ಆನೇ ಕಂಡು ಶ್ವಾನ ಬೊಗುಳಿದ ಹಾಗೆ.
ಆನೇ ಕೈಲಿ ಕಬ್ಬು ಕೊಟ್ಟ ಹಾಗೆ.
ಆನೇ ಮೇಲೆ ಹೋಗುವವನನ್ನು ಸುಣ್ಣಾ ಕೇಳಿದ ಹಾಗೆ.
ಆರಾಳು ಮೂರು ಫೌಜು.
ಆಶೆಗೆ ನಾಶವಿಲ್ಲ.
ಇಡೀ ಮುಳುಗಿದ ಮೇಲೆ ಚಳಿಯೇನು ಗಾಳಿಯೇನು?
ಇರುಳು ಕಂಡ ಬಾವಿಯಲ್ಲಿ ಹಗಲು ಬಿದ್ದನು.
ಇಲಿ ಬೆಕ್ಕಿಗೆ ಸಾಕ್ಷಿ.
ಇಲಿಗೆ ಹೆದರಿ ಹುಲಿಯ ಬಾಯಲ್ಲಿ ಬಿದ್ದನು.
ಇವನವನಿಗೆ ಎಣ್ಣೆ ಸೀಗೆ.
ಈಚಲು ಮರದ ಕೆಳಗೆ ಮಜ್ಜಿಗೇ ಕುಡಿದರೆ ನಾಚಿಕೆಗೇಡಾಗದೇ?
ಉಂಟುಮಾಡಿದ ದೇವರು ಊಟವ ಕೊಡಲಾರನೋ?
ಉಂಡದ್ದು ಉಂಡ ಹಾಗೆ ಹೋದರೆ ವೈದ್ಯನ ಹಂಗೇನು?
ಉಂಬೋಕ್ಕೆ ಉಡೋಕ್ಕೆ ಅಣ್ಣಾಪ್ಪ, ಕೆಲಸಕ್ಕೆ ಮಾತ್ರ ದೊಣ್ಣಾಪ್ಪ.
ಊರೆಲ್ಲಾ ಸೂರೆ ಆದ ಮೇಲೆ ಬಾಗಿಲು ಹಾಕಿದರು.
ಎಣ್ಣೇ ಬರುವಾಗ ಗಾಣಾ ಮುರಿಯಿತು.
ಎಣ್ಣೇ ಅಳದ ಮಾನದ ಜಿಡ್ಡು ಹೋದೀತೇ?
ಎತ್ತ ಹೋದರೂ ಮೃತ್ಯು ಬಿಡದು.
ಎತ್ತಿನ ಮುಂದೆ ತೆಂಗಿನ ಕಾಯಿ ಹಾಕಿದ ಹಾಗೆ.
ಎತ್ತು ಹಾರುವುದಕ್ಕಿಂತ ಮುಂಚೆ ಕೌದಿ ಹಾರಿತು.
ಎಮ್ಮೇ ಮೇಲೆ ಮಳೆಗರೆದ ಹಾಗೆ.
ಎಲ್ಲಾ ಹೊಕ್ಕಿತು, ಬಾಲ ಮಾತ್ರ ಉಳಿಯಿತು.

ಒಂದು ಕಣ್ಣಿಗೆ ಬೆಣ್ಣೆ ಮತ್ತೊಂದು ಕಣ್ಣಿಗೆ ಸುಣ್ಣ ತೊಡೆಯಬಹುದೇ ?
ಒಡಂಬಡಿಕೆಯಿಂದ ಆಗುವದು ದಡಂಬಡಿಕೆಯಿಂದ ಆದೀತೇ ?
ಒಪ್ಪೊತ್ತುಂಡುವ ಯೋಗಿ, ಎರಡೊತ್ತುಂಡವ ಭೋಗಿ, ಮೂರ್‍ಹೊತ್ತುಂಡವ ರೋಗಿ,
ನಾಲ್ಕೊತ್ತುಂಡುವನ ಹೊತ್ತುಕೊಂಡು ಹೋಗಿ.
ಒರಳಲ್ಲಿ ಕೂತರೆ ಒನಕೇ ಪೆಟ್ಟು ತಪ್ಪೀತೇ ?
ಓದಿ ಓದಿ ಮರುಳಾದ.
ಕಂಕುಳಲ್ಲಿ ದೊಣ್ಣೆ, ಕೈಯಲ್ಲಿ ಶರಣಾರ್ಥಿ.
ಕಂಡದ್ದು ಮಾತನಾಡಿದರೆ ಕೆಂಡದಂಥ ಕೋಪ.
ಕಂಡವರ ಮಕ್ಕಳನ್ನು ಬಾವಿಯಲ್ಲಿ ದೂಡಿ ಆಳಾ ನೋಡಿದ ಹಾಗೆ.
ಕಚ್ಚೋ ನಾಯಿ ಬೊಗಳದು, ಬೊಗಳೋ ನಾಯಿ ಕಚ್ಚದು.
ಕಡು ಕೋಪ ಬಂದಾಗ ತಡಕೊಂಡವನೇ ಜಾಣ.
ಕಡ್ಲೆಗೆ ಬಾಯಿ ತೆರೆದು ಕಡಿವಾಣಕ್ಕೆ ಬಾಯಿ ಮುಚ್ಚಿದರೆ ಆದೀತೇ ?
ಕತ್ತೆ ಕಸ್ತೂರೀ ಹೊತ್ತ ಹಾಗೆ.
ಕತ್ತೇ ಮೊಲೆಯಲ್ಲಿ ಖಂಡುಗ ಹಾಲಿದ್ದರೇನು ?
ಕಪ್ಪೆ ಕೂಗಿ ಮಳೇ ಬರಿಸಿದ ಹಾಗೆ.
ಕಬ್ಬಿಣ ಗಡಾರಿ ನುಂಗಿ ಶುಂಠೀ ಕಷಾಯಾ ಕುಡಿದ ಹಾಗೆ.
ಕಬ್ಬು ಡೊಂಕಾದರೆ ಸವಿ ಡೊಂಕೇ ?
ಕರಡಿಗೆ ಕೂದಲು ಯಾವದು, ರೋಮವು ಯಾವದು ?
ಕರಡೀ ಕೈಗೆ ಹೆದರದವ ಕರೀ ಕಂಬಳಿಗೆ ಹೆದರ್‍ಯಾನೇ ?
ಕರೆಯುವ ಹಸಾ ಕೊಟ್ಟು ಒದೆಯುವ ಕತ್ತೇ ತಂದ ಹಾಗೆ.
ಕಳ್ಳ ಕಳ್ಳಗೆ ಬಲ್ಲ.
ಕಾಗೆ ಕೋಗಿಲೆಯು ಹಾಗಿದ್ದರೂ ರಾಗದಲ್ಲಿ ಭೇದವಿಲ್ಲವೇ ?
ಕಾಡಲ್ಲಿ ಹೊಂಬಾಳೆ ಬಯಸಿದ ಹಾಗೆ.
ಕಾಡಿನಲ್ಲಿ ತಿರುಗಿ ಕಟ್ಟಿಗೆ ಇಲ್ಲ ಅಂದ ಹಾಗೆ.
ಕಿಚ್ಚೆದ್ದಾಗ ಬಾವೀ ತೋಡಿದ.
ಕಿಟಕಿಯಿಂದ ನುಸುಳುವವ ಹೆಬ್ಬಾಗಿಲಿಂದ ಬಾರನೇ ?
ಕಿಡಿಯಿಂದ ಕಾಡ ಸುಡಬಹುದು.
ಕೀಟ ಸಣ್ಣದಾದರೂ ಕಾಟ ಬಹಳ.
ಕುಂಬಾರನಿಗೆ ವರುಷ, ದೊಣ್ಣೆಗೆ ನಿಮಿಷ.
ಕುರುಬನ ಮಂದೇ ತೋಳ ಕಾದ ಹಾಗೆ.
ಕುಲವನ್ನು ನಾಲಿಗೆ ಹೇಳುವದು.
ಕೂಸು ಕಾಸು ಬಾಳದು, ಜೋಗುಳ ಮುಗಿಲ ಮುಟ್ಟಿತು.
ಕೂಳ ಚೆಲ್ಲಿದ ಕಡೆ ಸಾವಿರ ಕಾಗೆ.

ಕೆರದ ಅಳತೆಗೆ ಕಾಲು ಕೊಯಿಸಿದ ಹಾಗೆ.
ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ.
ಕೊಯಿದ ಕಾಲು ನಾಯಿ ತಿಂದರೇನು, ನರಿ ತಿಂದರೇನು ?
ಕೋಟಿ ವಿದ್ಯೆಯೂ ಕೂಳಿಗೋಸ್ಕರವೇ.
ಕೋಣನ ಮುಂದೆ ಕಿನ್ನರೀ ಬಾರಿಸಿದ ಹಾಗೆ.
ಗಂಗೆಗೆ ಹೋಗಿ ತೆಂಗಿನ ಓಟೆ ತಂದ ಹಾಗೆ.
ಗಂಡಹೆಂಡಿರ ಜಗಳದಲ್ಲಿ ಕೂಸು ನಾಶವಾಯಿತು.
ಗಾಳಿ ಬಂದಾಗಲೇ ತೂರಿಕೊಳ್ಳಬೇಕು.
ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೇ ?
ಗುರುವಿನಂತೆ ಶಿಷ್ಯ, ತಂದೆಯಂತೆ ಮಗ.
ಗೇಣು ಬಿಟ್ಟು ಅಗಳು ದಾಟಿದ ಹಾಗೆ.
ಚರ್ಮ ತೊಳೆದರೆ ಕರ್ಮ ಹೋದೀತೇ ?
ಚಿಂತೆಯೇ ಮುಪ್ಪು, ಸಂತೋಷವೇ ಯೌವನ
ಚಿನ್ನದ ಚೂರಿ ಎಂದು ಕುತ್ತಿಗೆ ಕೊಯಿಸಿಕೊಳ್ಳಬಹುದೇ ?
ಚೇಳಿನ ಮಂತ್ರವನ್ನರಿಯದವನು ಹಾವಿನ ಹುತ್ತಕ್ಕೆ ಕೈಯಿಕ್ಕಿದ ಹಾಗೆ.
ಜಗದೀಶ್ವರನ ದಯೆ ಒಂದಿದ್ದರೆ ಜಗತ್ತೆಲ್ಲಾ ನನ್ನದು.
ಜನ ಮರುಳೋ ! ಜಾತ್ರೆ ಮರುಳೋ !
ಜೋಗಿಗೆ ಜೋಗಿ ತಬ್ಬಿಕೊಂಡರೆ ಮೈಯೆಲ್ಲಾ ಬೂದಿ.
ಜ್ಞಾನವಂತನಿಗೆ ಸ್ನಾನವೇಕೆ ?
ತಟಸ್ಥನಾದವನಿಗೆ ತಂಟೆಯೇನು ?
ತರ್ಕ ಮಾಡುವವ ಮೂರ್ಖನಿಗಿಂತ ಕಡೆ.
ತಲೆ ಗಟ್ಟಿ ಎಂದು ಕಲ್ಲನ್ನು ಹಾಯಬಾರದು.
ತಾ ಕಳ್ಳನಾದರೆ ಪರರನ್ನು ನಂಬ.
ತಾನಾಗಿ ಬೀಳುವ ಮರಕ್ಕೆ ಕೊಡಲಿಯೇಕೆ ?
ತಾನು ಮಾಡಿದ್ದು ಉತ್ತಮ, ಮಗ ಮಾಡಿದ್ದು ಮಧ್ಯಮ, ಆಳು ಮಾಡಿದ್ದು ಹಾಳು.
ತಾಸಿಗೊಂದು ಕೂಸು ಹೆತ್ತರೆ ಈಸೀಸು ಮುತ್ತು.
ತಾಳಿದವ ಬಾಳಿಯಾನು.
ತಿಪ್ಪೇ ಮೇಲೆ ಮಲಗಿ ಉಪ್ಪರಿಗೇ ಕನಸ ಕಂಡ ಹಾಗೆ.
ತೀರಕ್ಕೆ ಬಂದ ಮೇಲೆ ತೆರೆಯ ಭಯವೇ ?
ತೀರದಲ್ಲಿರುವ ಮರಕ್ಕೆ ನೀರು ಏಕೆ ?
ತುಂಟ ಕುದುರೆಗೆ ಗಂಟು ಲಗಾಮು.
ತುಂಡಿಲ್ಲದವನಿಗೆ ತುಂಟನ ಭಯವೇನು ?
ತುಂತುರು ಮಳೆಯಿಂದ ತೂಬಿನ ಕೆರೆ ತುಂಬೀತೇ ?
ತುಂಬಿದ ಕೊಡ ತುಳುಕುವದಿಲ್ಲ.

ತುಚ್ಛನ ಸಂಗಡ ಬಾಳೋದಕ್ಕಿಂತ ಹುಚ್ಚನ ಸಂಗಡ ಬೀಳೋದು ವಾಸಿ.
ತುಚ್ಛ ಮಾತಾಡುವವನು ಹುಚ್ಚನಿಗಿಂತ ಕಡೆ.
ತುದಿಯಲ್ಲಿ ಕಾಣುವದು ಮದುವೇ ಗುಣ.
ದಣಿದ ಎತ್ತಿಗೆ ಮಣವೇ ಭಾರ.
ದಾರಿ ತಪ್ಪಿದ ಮೇಲೆ ಹಾರಿ ಏನು ಫಲ?
ದಾಸ್ಯೆಯ ತಿರುಪತಿಗೆ ಹೋದ ಹಾಗೆ.
ದಾಹ ಹತ್ತಿದವನಿಗೆ ಹತ್ತೀ ಕುಡಿಯೋದಕ್ಕೆ ಕೊಟ್ಟ ಹಾಗೆ.
ದಿಕ್ಕಿಲ್ಲದ ಮನುಷ್ಯನಿಗೆ ದೇವರೇ ಗತಿ.
ದಿಕ್ಕು ದಿಕ್ಕಿಗೆ ಹೋದರೂ ದುಃಖ ತಪ್ಪೀತೇ?
ದುಃಖದ ಮೇಲೆ ಸುಖ; ಸುಖದ ಮೇಲೆ ದುಃಖ.
ದುಮ್ಮಿನಿಂದ ಹಮ್ಮ ಕಳಕೊಂಡ.
ದೂರಕ್ಕೆ ಬೆಟ್ಟ ನುಣ್ಣಗೆ.
ದೆಬ್ಬೆ ಕೊಟ್ಟು ಬೊಬ್ಬೇ ಕೊಂಡ.
ದೇವರು ಕೊಟ್ಟರೂ ಪೂಜಾರಿ ಕೊಡ.
ದೇಶಾಂತರ ಹೋದರೆ ದೈವ ಬಿಟ್ಟೀತೇ?
ದೊಣ್ಣೇ ಹಿಂಡಿದರೆ ಎಣ್ಣೆ ಬೀಳುವದೇ?
ದೋತ್ರ ದೊಡ್ಡದಾದರೆ ಗೋತ್ರ ದೊಡ್ಡದೇ?
ದೋಷಾ ಮಾಡುವವನಿಗೆ ರೋಷ ಬಹಳ.
ದ್ರಾಕ್ಷಿ ಸೀ ಎಂದು ಬಳ್ಳಿ ಸಹಾ ತಿನ್ನಬಾರದು.
ಧರ್ಮಕ್ಕೆ ಕೊಟ್ಟ ಎಮ್ಮೇ ಹಲ್ಲು ಹಿಡಿದು ನೋಡಿದನು.
ಧರ್ಮಕ್ಕೆ ಕೊಟ್ಟ ದಟ್ಟೀ ಹಿತ್ತಲಿಗೆ ಹೋಗಿ ಮೊಳಾ ಹಾಕಿ ನೋಡಿದನು.
ಧೂಪಾ ಹಾಕಿದರೆ ಪಾಪ ಹೋದೀತೇ?
ಧೈರ್ಯವುಂಟಾದವನಿಗೆ ದೈವ ಸಹಾಯವುಂಟು.
ಧೊರೆಯಿಂದ ಆಗುವಂಥಾದ್ದು ನರಿಯಿಂದ ಆದೀತೇ?
ಧೊರೆ ಹೇಳಿದನೆಂದರೆ ಮರದ ಕಾಯಿ ಬಿದ್ದೀತೇ?
ನಡಗುವವನ ಮೇಲೆ ಸತ್ತ ಹಾವು ಬಿದ್ದ ಹಾಗೆ.
ನಯವಿದ್ದಲ್ಲಿ ಭಯವಿಲ್ಲ.
ನಯಶಾಲಿಯಾದವ ಜಯಶಾಲಿಯಾದಾನು.
ನರಕಕ್ಕೆ ನವದ್ವಾರ, ನಾಕಕ್ಕೆ ಒಂದೇ ದ್ವಾರ.
ನರಿಯ ಹೊಟ್ಟೆಯಲ್ಲಿ ಸಿಂಹದ ಮರಿ ಹುಟ್ಟೀತೇ?
ನರ್ಮದೆಗೆ ಹೋದರೆ ಕರ್ಮ ತಪ್ಪೀತೇ!
ನವಿಲು ಕುಣಿಯೋದ ನೋಡಿ ಕೆಂಬೋತಿ ಪುಕ್ಕಾ ತೆರೆಯಿತು.
ನಷ್ಟ ಬಿದ್ದರೂ ಭ್ರಷ್ಟನಾಗಬಾರದು.

ನಾಕದವರಿಗೆ ಲೋಕದ ಭಯವೇನು ?
ನಾಕದ ಸಂತೋಷ ಸೂಕರಗೆ ತಿಳಿದೀತೇ ?
ನಾಚಿಕೆಯಿಲ್ಲದವಳ ಕಂಡರೆ ಆಚೆಗೆ ಹೋಗಬೇಕು.
ನಾಡಿಗೆ ಇಬ್ಬರು ಅರಸುಗಳಾದರೆ ಕೇಡು ಒಪ್ಪದು ತಪ್ಪದು.
ನಾಡೀ ನೋಡದೆ ಮದ್ದು ಕೊಟ್ಟರೆ ಕಾಡುರೋಗ ಬರೋದು.
ನಾಡೀ ಪರೀಕ್ಷೆ ಆಡು ಬಲ್ಲದೇ ?
ನಾದವಿದ್ದರೆ ಘಂಟೆ, ವಾದವಿದ್ದರೆ ತಂಟೆ.
ನಾಮವಿದ್ದವಗೆ ಕಾಮ ಕಡಿಮೆಯೇ ?
ನಾಯಿ ಕೂಗಿದರೆ ದೇವಲೋಕ ಹಾಳಾದೀತೇ ?
ನಾಯಿ ಬಡೀಲಿಕ್ಕೆ ಬಣ್ಣದ ಕೋಲೇ ?
ನಾಯಿಯ ಬಾಲಾ ಲಳಿಗೇಲಿ ಹಾಕಿದರೆ ಡೊಂಕು ಬಿಟ್ಟೀತೇ ?
ನಾಳೇ ಎಂಬೋದು ಗಣಪತೀ ಮದುವೆಯ ಹಾಗೆ.
ನಿಜವಾಡಿದರೆ ನಿಷ್ಠೂರ.
ನಿತ್ಯ ದರಿದ್ರನಿಗೆ ನಿಶ್ಚಿಂತೆ
ನೀರಲ್ಲಿ ಬರೆದ ಬರಹದ ಹಾಗೆ.
ನೀರಿನ ಮೇಲಣ ಗುಳ್ಳೆಯ ಹಾಗೆ.
ನೀರಿಲ್ಲದ ತಾವಿನಲ್ಲಿ ಊರ ಕಟ್ಟಿದ ಹಾಗೆ.
ನೀರು ಇದ್ದರೆ ಊರು, ನಾರಿ ಇದ್ದರೆ ಮನೆ.
ನೀರುಳ್ಳಿ ನೀರಲ್ಲಿ ತೊಳೆದರೆ ನಾರೋದು ತಪ್ಪೀತೇ ?
ನೀರುಳ್ಳಿಯವನ ಸಂಗಡ ಹೋರಾಟಕ್ಕೆ ಹೋದರೆ ಮೋರೇ ಎಲ್ಲಾ ನಾರದೇ ?
ನೀರೊಳಗೆ ಹೋಮಾ ಮಾಡಿದ ಹಾಗೆ.
ನುಂಗಿದ ತುತ್ತಿನ ರುಚಿ ಮತ್ತೆ ಬಯಸಿದ ಹಾಗೆ.
ನುಗ್ಗಿದವನಿಗೆ ಹಗ್ಗ ತಪ್ಪೀತೇ ?
ನುಡಿ ಪುರಾತನ, ನಡೆ ಕಿರಾತನ.
ನೆಚ್ಚಿದ ಎಮ್ಮೆ ಕೋಣನಾಯಿತು.
ನೋಟ ಇಲ್ಲದೆ ಓಟಾ ಮಾಡಿದರೆ ಕಾಟ ತಪ್ಪದು.
ನೋಟ ನೆಟ್ಟಗಿದ್ದರೆ ಕಾಟ ಹ್ಯಾಗೆ ಬಂದೀತು ?
ನೋಡಿದರೆ ಕಾಣದ್ದು ಓಡಿದರೆ ಸಿಕ್ಕೀತೇ ?
ನೋಡಿ ನಡಿಯೋನಿಗೆ ಕೇಡು ಬಾರದು.
ಪಂಜರದಲ್ಲಿ ಕಾಗೆ ಇಟ್ಟರೆ ಪಂಚಮಸ್ವರ ಕೊಟ್ಟೀತೇ ?
ಪರಡಿಯ ರುಚಿ ಕರಡಿಗೆ ತಿಳಿದೀತೇ ?
ಪಕ್ಷಿಗೆ ಆಕಾಶವೇ ಬಲ, ಮತ್ಸ್ಯಕ್ಕೆ ನೀರೇ ಬಲ.
ಪ್ರಾಯ ಹೆಚ್ಚಾದರೂ ಬಾಯಿ ಚಂದಾಗಿರ ಬೇಕು.

ಪ್ರೇತದ ಭೀತಿ ಹೋದರೂ ನಾತದ ಭೀತಿ ಹೋಗಲಿಲ್ಲ.
ಬಂಕಾಪುರಕ್ಕೆ ಹೋದರೆ ಡೊಂಕು ಬಿಟ್ಟೀತೇ ?
ಬಂದ ದಿವಸ ನಂಟ, ಮರುದಿವಸ ಭಂಟ, ಮೂರನೇ ದಿವಸ ಕಂಟ.
ಬಲತ್ಕಾರದಿಂದ ತಂದ ನಾಯಿ ಮೊಲಾ ಹಿಡಿದೀತೇ ?
ಬಲೆಗೆ ಸಿಕ್ಕದ್ದು ಕೋಲಿಗೆ ಸಿಕ್ಕೀತೇ ?
ಬಲ್ಲವನೇ ಬಲ್ಲ ಬೆಲ್ಲದ ಸವಿ.
ಬಸವನ ಹಿಂದೆ ಬಾಲ.
ಬಾಣದ ಗುರಿ ನೊಣದ ಮೇಲೆಯೇ ?
ಬಾಳೇ ತೋಟಕ್ಕೆ ಆನೆ ಬಂದ ಹಾಗೆ.
ಬಾಳೇ ಹಣ್ಣಿಗೆ ಗರಗಸವೇಕೆ ?
ಬುದ್ಧೀ ಹೇಳಿದವರ ಸಂಗಡ ಗುದ್ದಾಟಕ್ಕೆ ಹೋದ ಹಾಗೆ.
ಬೂರುಗದ ಮರವನ್ನ ಗಿಣಿ ಕಾದ ಹಾಗೆ.
ಬೆಂದ ಮನೆಗೆ ಹಿರಿದದ್ದೇ ಲಾಭ.
ಬೆಕ್ಕಿಗೆ ಆಟ, ಇಲಿಗೆ ಪ್ರಾಣಸಂಕಟ.
ಬೆಟ್ಟಾ ಅಗಿದು ಇಲೀ ಹಿಡಿದ ಹಾಗೆ.
ಬೆಟ್ಟಕ್ಕೆ ಹೋಗುವವನ ಸೊಂಟದಲ್ಲಿ ಕೊಡಲೀ ಸಿಕ್ಕಿಸಿದ ಹಾಗೆ.
ಬೆರಳು ತೋರಿದರೆ ಮುಂಗೈ ತನಕ ನುಂಗುತ್ತಾನೆ.
ಬೆಳಗಾನಾ ರಾಮಾಯಣಾ ಕೇಳಿ ಸೀತೆಯೂ ರಾಮನೂ ಏನಾಗಬೇಕೆಂದ ಹಾಗೆ.
ಬೆಳಗೂ ಕಡೆದ ಬೆಣ್ಣೆ ಮೋಳ ಬೆಕ್ಕಿನ ಪಾಲಾಯಿತು.
ಬೆಳೆಯ ಸಿರಿ ಮೊಳೆಯಲ್ಲೇ ಕಾಣುವುದು.
ಬೇಕು ಅಂದಾಕ್ಷಣ ನಾಕಾ ಸೇರುವನೇ ?
ಬೇರು ಬಲ್ಲಾತನಿಗೆ ಎಲೇ ತೋರಿಸಬೇಕೇ ?
ಬೇಲಿ ಎದ್ದು ಹೊಲಾ ಮೇಯಿದರೆ ಕಾಯುವವರ್ಯಾರು ?
ಬೋರೇ ಗಿಡದಲ್ಲಿ ಕಾರೇ ಹಣ್ಣಾದೀತೇ ?
ಭಲಾ ಜಟ್ಟಿ ಅಂದರೆ ಕೆಮ್ಮಣ್ಣು ಮುಕ್ಕಿದ.
ಭಾಗ್ಯ ಬರುವುದನ್ನು ಭಾಗಮ್ಮ ತಡೆದಾಳೇ ?
ಭಾರವಾದ ಪಾಪಕ್ಕೆ ಘೋರವಾದ ನರಕ.
ಭಾವೀ ನೀರಾದರೆ ಭಾವಿಸಿದರೆ ಬಂದೀತೇ ?
ಭೇದಾ ತಿಳಿಯದಿದ್ದರೂ ವಾದಾ ಬಿಡುವುದಿಲ್ಲ.
ಭೋಗಿಗೆ ಯೋಗಿ ಮರಳು, ಯೋಗಿಗೆ ಭೋಗಿ ಮರುಳು.
ಭ್ರಷ್ಟನಾದರೂ ಕಷ್ಟ ತಪ್ಪದು.
ಭ್ರಾಂತಿ ಹಿಡಿದವನಿಗೆ ವಾಂತೀ ಕೊಟ್ಟರೆ ಹೋದೀತೇ ?
ಮಂಗನ ಕೈಯಲ್ಲಿ ಮಾಣಿಕ ಕೊಟ್ಟ ಹಾಗೆ.
ಮಂಗನ ಪಾರುಪತ್ಯ ಹೊಂಗೇಮರದ ಮೇಲೆ.

ಮಂತ್ರಿಸಿದರೆ ಮಾವಿನ ಕಾಯಿಬಿದ್ದೀತೇ ?
ಮುಂದೇ ಬಳಿಗೆ ತೋಳ ಬಂದರೆ ತಂದೇ ಬಳಿಗೆ ಓಡಿಹೋದ ಹಾಗೆ.
ಮಕ್ಕಳಿಲ್ಲದವನಿಗೆ ಒಕ್ಕಳ ಹೊನ್ನಿದ್ದರೇನು ?
ಮಜ್ಜಿಗೆಗೆ ಹೋದವನಿಗೆ ಎಮ್ಮೇ ಕ್ರಯವೇಕೆ ?
ಮಟ್ಟು ತಿಳಿಯದೆ ಮಾತನಾಡಬಾರದು.
ಮಠಪತಿಯಾದರೂ ಶಠತನ ಬಿಡಲಿಲ್ಲ.
ಮಡಕೇ ಒಡೆಯುವದಕ್ಕೆ ಅಡಿಕೇ ಮರ ಬೇಕೇ ?
ಮಣ್ಣು ಕಾಲು ನೀರಿಗಾಗದು, ಮರದ ಕಾಲು ಬೆಂಕಿಗಾಗದು.
ಮಣ್ಣು ದೇವರಿಗೆ ಮಜ್ಜನವೇ ಸಾಕ್ಷಿ.
ಮತಿಯಿಲ್ಲದವನಿಗೆ ಗತಿಯಿಲ್ಲ.
ಮತ್ತನಾದವನ ಹತ್ತರ ಕತ್ತಿಯಿದ್ದರೇನು ?
ಮದುವೆಗೆ ತಂದ ಅಕ್ಕಿಯೆಲ್ಲಾ ಸೇಸೆಗೆ ತೀರಿಹೋಯಿತು.
ಮನೇ ಕಟ್ಟ ಬಹುದು, ಮನಸ್ಸು ಕಟ್ಟ ಕೂಡದು.
ಮನೇ ಕಟ್ಟಿ ನೋಡು, ಮದುವೇ ಮಾಡಿ ನೋಡು.
ಮನೆಗೆ ಮಾರಿ, ಹೆರರಿಗೆ ಉಪಕಾರಿ.
ಮನೇ ಬಲ್ಲೆ, ದಾರಿ ಅರಿಯೆ.
ಮನೇ ದೀಪವಾದರೆ ಮುತ್ತು ಕೊಡಬಹುದೇ ?
ಮನೇ ತಿಂಬುವನಿಗೆ ಕದ ಹಪ್ಪಳ ಸಂಡಿಗೆ.
ಮಳೆಗೆ ಹೆದರಿ ಹೊಳೆಗೆ ಬಿದ್ದ ಹಾಗೆ.
ಮಳೆಗೆ ತಡೆಯದ ಕೊಡೆ ಸಿಡಿಲಿಗೆ ತಡದೀತೇ ?
ಮಳೇ ನೀರು ಬಿಟ್ಟು ಮಂಜಿನ ನೀರಿಗೆ ಕೈ ಒಡ್ಡಿದ ಹಾಗೆ.
ಮಳೇ ಹನಿ ಬಿಟ್ಟರೂ ಮರದ ಹನಿ ಬಿಡಲಿಲ್ಲ.
ಮಾಡಬಾರದ್ದು ಮಾಡಿದರೆ ಆಗಬಾರದ್ದಾಗುವುದು.
ಮಾಡಿದ ಪಾಪಕ್ಕೆ ಮನವೇ ಸಾಕ್ಷಿ ತೋಡಿದ ಬಾವಿಗೆ ಜಲವೇ ಸಾಕ್ಷಿ.
ಮಾಡೋದು ದುರಾಚಾರ, ಮನೆಯ ಮುಂದೆ ಬೃಂದಾವನ.
ಮಾಣಿಕ್ಯವನ್ನು ಮಸೀ ಅರವೇಲಿ ಕಟ್ಟಿದ ಹಾಗೆ.
ಮಾತು ಕೊಂಡುಹೋದವ ಉಂಡ, ಮಾಣಿಕ್ಯ ಕೊಂಡುಹೋದವ ಹಸಿದು ಬಂದ.
ಮಾತು ಬಂದಾಗ ಸೋತು ಹೋದವನೇ ಜಾಣ.
ಮಾನದಲ್ಲಿ ಆನೆ ಹಿಡಿದೀತೇ ?
ಮಾನಹೋದ ಮೇಲೆ ಮರಣವಾದ ಹಾಗೆ.
ಮಾರಿಯ ಕಣ್ಣು ಹೋತನ ಮೇಲೆ.
ಮಾರಿಯ ಮನೆಗೆ ಹೋತ ಕನ್ನಾ ಕೊರದ ಹಾಗೆ.
ಮಾರಮ್ಮ ಅರಿಯದ ಕೋಣೆಯೋ ?

ಮೀನು ನೀರಿನಲ್ಲಿ ಮುಳುಗಿದರೆ ಸ್ನಾನದ ಫಲ ಬಂದೀತೇ ?
ಮುತ್ತಿನ ಚಲುವು ಕತ್ತೆಗೆ ತಿಳಿದೀತೇ ?
ಮುತ್ತು ಕೆಟ್ಟರೆ ಭತ್ತಕ್ಕಿಂತ ಕಡೆಯೇ ?
ಮೂಕನೆದುರಿಗೆ ಮೂಗು ತುರಿಸಿಕೊಂಡ ಹಾಗೆ
ಮೂಗಿಗಿಂತ ಮೂಗುತಿ ಭಾರ.
ಮೂಗು ಕೊಯಿದು ಮೊಗ್ಗಿನ ತುರಾಯಿ ಕೊಟ್ಟ ಹಾಗೆ.
ಮೂರ್ಖಗೆ ಹೇಳಿದ ಬುದ್ಧಿ ಗೋರ್ಕಲ್ಲಿನ ಮೇಲೆ ಮಳೆ ಹೊಯಿದ ಹಾಗೆ.
ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು.
ಮೂವರ ಕಿವಿಗೆ ಮುಟ್ಟಿದ್ದು ಮೂರು ಲೋಕಕ್ಕೆ ಮುಟ್ಟುವುದು.
ಮೂರೆತ್ತಿನ ಬಂಡಿ ಹೊಲಕ್ಕೂ ಹೋಗದು, ಮನೆಗೂ ಬಾರದು.
ಮೆಚ್ಚಿದವನಿಗೆ ಮಸಣವೇ ಸುಖ.
ಮೆಟ್ಟಿದಲ್ಲದೆ ಹಾವು ಕಡಿಯದು.
ಮೆಟ್ಟಿದಾಕ್ಷಣ ಗಟ್ಟ ತಗ್ಗೀತೇ?
ಮೈಯಲ್ಲಿ ಹುಟ್ಟಿದ ರೋಗಕ್ಕಿಂತ ಕಾಡಲ್ಲಿ ಹುಟ್ಟಿದ ಔಷಧ ಮೇಲು.
ಮೊಗೇ ಮಾಡದ ಕುಂಬಾರ ಗುಡಾಣಾ ಮಾಡಾನೇ ?
ಮೊಳಕೈ ಆಡಿದರೆ ಮುಂಗೈ ಆಡುತ್ತದೆ.
ಯಾತ ತಲೇ ತೂಗಿದರೆ ಪಾತಾಳದ ನೀರು ಹರಿಯುತ್ತದೆ; ತಾತ ತಲೇ ತೂಗಿದರೆ ಪಾಗು ಬೀಳುತ್ತದೆ.
ಯಾರೂ ಇಲ್ಲದ ಊರಿಗೆ ಅಗಸರ ಮಾಳಿಯೇ ಮುತ್ತೈದೆ.
ಯಾರೂ ಇಲ್ಲದ ಊರಿಗೆ ಹೋಗಿ ನೀರ ಮಜ್ಜಿಗೆ ಬಯಸಿದ ಹಾಗೆ.
ಯಾವ ರಾಯನಿಗೆ ರಾಜ್ಯವಾದರೂ ರಾಗಿಬೀಸೋದು ತಪ್ಪದು.
ಯೋಗಿಯಾದರೂ ಭೋಗಾ ಬಿಡ.
ಯೋಗ್ಯತೆ ಅರಿಯದ ಧೊರೆಯೂ ರೋಗವರಿಯದ ವೈದ್ಯನೂ ಒಂದೇ.
ರಂಗನ ಮುಂದೆ ಸಿಂಗನೇ ?
ರಾಗ ನುಡಿಸುವಾಗ ತಂತೀ ಹರಿಯಿತು.
ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡ.
ರಾಯರ ಪಾದದಾಣೆ ಹಾರೇ ನುಂಗು.
ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆಯೇ!
ಲಂಗು ಹರಿದ ಮೇಲೆ ಜಂಗಮನ ಹಂಗೇನು ?
ಲೆತ್ತಾ ಹಾಕಲಿಕ್ಕೆ ಹೋದರೆ ಬೋಕೀ ಬಿತ್ತು.
ಲೋಕದವರೆಲ್ಲಾ ಸತ್ತರೆ ಶೋಕಾ ಮಾಡುವವರ್‍ಯಾರು ?
ವಂಚಕನಿಗೆ ಸಂಚು ಕೊಟ್ಟ ಹಾಗೆ.
ವನವಾಸಕ್ಕೆ ಹೋದರೂ ಘನ ಕಷ್ಟ ಬಿಡಲಿಲ್ಲ.
ವಾಸಿ ಆಗದ ರೋಗಕ್ಕೆ ರಾಶಿ ಮದ್ದು ಮಾಡಿದರೂ ವ್ಯರ್ಥ.

ಏತ್ತಕ್ಕೆ ತಕ್ಕ ವಿಭವ.
ವೀರನ ಶೌರ್ಯ ಹಾರುವನ ಮೇಲೆಯೇ ?
ವೈರವಿದ್ದವನಿಂದ ಕ್ಷೌರಾ ಮಾಡಿಸಿಕೊಂಡ ಹಾಗೆ.
ವೈರಾಗ್ಯವುಳ್ಳವನಾದರೂ ವೈರತ್ವ ಬಿಡಲಿಲ್ಲ.
ಶಕುನದ ಹಕ್ಕಿಯು ಗೋಣು ಮುರಿದ ಹಾಗೆ.
ಶಕ್ತಿಯಿದ್ದವನಾದರೂ ಯುಕ್ತಿಯಿದ್ದವನ ಕೆಳಗೆ.
ಶಾಪಾ ಕೊಡುವವ ಪಾಪಕ್ಕೆ ಹೆದರ.
ಶಾಂತಿ ಮಾಡಿದರೂ ಭ್ರಾಂತಿ ಹೋಗಲಿಲ್ಲ.
ಶ್ಯಾನುಭೋಗನ ಸಂಬಳ ಸಂತೋ ಎಂದು ಕೇಳ ಬೇಡ; ಹೆಂಡತೀ ದೆಸೆಯವರು ಉಂಡರೋ ಎಂದು ಕೇಳ ಬೇಡ.
ಶ್ವಾನನ ಮುಂದೆ ಗಾನಾ ಹಾಡಿದ ಹಾಗೆ.
ಶಿವಾ ಅಂದರೆ ಸೆರಗು ಸುತ್ತಿಕೊಂಡ; ಭವಾ ಅಂದರೆ ಭೈರವಾಸು ಹರಿದು ಬಿಟ್ಟ.
ಸಂಕಟ ಬಂದರೆ ವೆಂಕಟರಮಣ.
ಸಂಚು ನಡಿಸಲಿಕ್ಕೆ ಸಂಚಕಾರಾ ಕೊಡಬೇಕೇ ?
ಸಂತೇ ನೆರೆಯುವದಕ್ಕಿಂತ ಮುಂಚೆ ಗಂಟುಕಳ್ಳರು ನೆರೆದ ಹಾಗೆ.
ಸಂತೆ ಹೊತ್ತಿಗೆ ಮೂರು ಮೊಳಾ ನೇದ ಹಾಗೆ.
ಸಜ್ಜನನಿಗೂ ಸಜ್ಜನನಿಗೂ ಮೂರು ದಾರಿ; ಸಜ್ಜನನಿಗೂ ದುರ್ಜನನಿಗೂ ಎರಡು ದಾರಿ; ದುರ್ಜನನಿಗೂ ದುರ್ಜನನಿಗೂ ಒಂದೇ ದಾರಿ.
ಸಟೆ ಆಡುವವನಿಗೆ ಮಠದ ಪೂಜೆ ಸಿಕ್ಕೀತೇ ?
ಸಣ್ಣ ತಲೆಗೆ ದೊಡ್ಡ ಮುಂಡಾಸು.
ಸತ್ತ ಕುರಿ ಕಿಚ್ಚಿಗೆ ಅಂಜೀತೇ ?
ಸತ್ಯವಿದ್ದರೆ ಎತ್ತಲೂ ಭಯವಿಲ್ಲ.
ಸಮಯಕ್ಕಾಗದ ಅರ್ಥ ಸಹಸ್ರವಿದ್ದರೂ ವ್ಯರ್ಥ ?
ಸಮಯಕ್ಕಾದವನೇ ನಂಟ, ಸಾಹಸಕ್ಕೊದಗಿದವನೇ ಭಂಟ.
ಸಮುದ್ರದ ನಂಟು, ಉಪ್ಪಿಗೆ ಬಡತನ.
ಸಮುದ್ರದ ಮುಂದೆ ಅರವಟಿಗೆ.
ಸಮುದ್ರ ದೊಡ್ಡದಾದರೂ ಪಾತ್ರೆ ಇದ್ದಷ್ಟೇ ನೀರು ಸಿಕ್ಕೀತು.
ಸಮುದ್ರದ ಮೇರೆ ದಪ್ಪಿದರೆ ಯಾರು ಮಾಡೋದೇನು ?
ಸರಕು ಒಪ್ಪಿಸಿದ ಮೇಲೆ ಸುಂಕವೇ ?
ಸರ್ಪನ ಕೂಡೆ ಸರಸವೇ ?
ಸಾಧು ಎತ್ತಿಗೆ ಎರಡು ಹೇರು.
ಸಾಧಿಸಿದರೆ ಸಬಳಾ ನುಂಗಬಹುದು.
ಸಾಯುವ ತನಕ ಸಾಮು ಕಲಿತರೆ ಯುದ್ಧಾ ಮಾಡುವದ್ಯಾವಾಗ ?
ಸಾಯುವವನ ಕಣ್ಣಿಗೆ ಸುಳಿದವನೇ ಜವರಾಯ.

ಸಾವಿಗಂಜದವನು ನೋವಿಗೆ ಹೆದರಾನೇ ?
ಸಾವಿರ ಕುದುರೇ ಸರದಾರನಾದರೂ ಮನೇ ಹೆಂಡತೀ ಕಾಸ್ತಾರ.
ಸಾವಿರ ತನಕಾ ಸಾಲ, ಆ ಮೇಲೆ ಲೋಲ.
ಸಾವಿರ ವರಹಾ ತೂಕ ಚಿನ್ನಕ್ಕೆ ಹಾಗ ತೂಕ ಮಚ್ಚು.
ಸಾವಿರ ಬೆಕ್ಕು ಕೂಡಿದರೆ ಒಂದು ಹುಲಿಯಾದೀತೇ ?
ಸಾವಿರ ಬಾರಿ ಗೋವಿಂದಾ ಎನ್ನ ಬಹುದು; ಒಬ್ಬ ದಾಸ್ಯೆಯಗೆ ಇಕ್ಕೋದು ಕಷ್ಟ.
ಸೀತರೆ ಬೀಳುವ ಮೂಗು ಕೊಯಿದರೆ ನಿಂತೀತೇ ?
ಸಿಟ್ಟಿಗೆ ಕೊಯಿದ ಮೂಗು ಶಾಂತತ್ವದಿಂದ ಹತ್ತೀತೇ ?
ಸೀಸದ ಉಳಿಯಲ್ಲಿ ಶೈಲಾ ಒಡೆಯ ಬಹುದೇ ?
ಸುಂಕದವನ ಸಂಗಡ ಸುಖದುಃಖ ಹೇಳಿದರೆ ಕಂಕುಳಲ್ಲಿ ಏನು ಅಂದ ?
ಸುಂಕದವನು ಸುಳ್ಳ ಬಣಜಿಗ ಕಳ್ಳ.
ಸುಡಗಾಡಿಗೆ ಹೋದ ಹೆಣ ತಿರಿಗಿ ಬಂದೀತೇ ?
ಸುವ್ವೀ ಅಂದರೆ ತಿಳಿಯದೇ ? ಒನಿಕೇ ರಾಗ.
ಸುಳ್ಳು ದೇವರಿಗೆ ಕಳ್ಳ ಪೂಜಾರಿ.
ಸೂಜಿಗೆ ಸೂಜಿ ಮುತ್ತು ಕೊಟ್ಟ ಹಾಗೆ.
ಸೂಜಿಯಷ್ಟು ಬಾಯಿ, ಗುಡಾಣದಷ್ಟು ಹೊಟ್ಟೆ.
ಸೂಲು ತಪ್ಪಿದರೆ ಗೊಡ್ಡೇ.
ಸೆಕೆ ಹೆಚ್ಚಾಯಿತೆಂದು ಕಂಬಳೀ ಹೊದ್ದುಕೊಂಡ.
ಸೆಟ್ಟಿ ಬಿಟ್ಟಲ್ಲೇ ಪಟ್ಟಣ.
ಸೆಟ್ಟಿಯ ಬಾಳು ಸತ್ತಲ್ಲದೆ ತಿಳಿಯದು.
ಸೆಟ್ಟಿ ಶೃಂಗಾರವಾಗುವಾಗ್ಗೆ ಪಟ್ಟಣವೆಲ್ಲಾ ಸೂರೆ ಹೋಯಿತು.
ಸೆಟ್ಟಿ ಸವಾಸೇರು, ಲಿಂಗ ಅಡೀ ಸೇರು.
ಸೇದಿದ ನೀರು ಹಾದೀಲಿ ಹಾಕ್ಯಾರೇ ?
ಸೇರದ ಗಂಡನಿಗೆ ಮೊಸರಲ್ಲಿ ಕಲ್ಲು ಸಿಕ್ಕಿತು.
ಸೇರು ರಾಜ, ಮಣವು ಭಂಟ.
ಸ್ಥಿತಿಯಿಲ್ಲದಿದ್ದರೂ, ಗತಿ ಕೆಡಬಾರದು.
ಸ್ಮರಣೆ ತಪ್ಪಿದರೂ ಸ್ಥೈರಣೆ ಇರಬೇಕು
ಸ್ವಪ್ನದಲ್ಲಿ ದಂಡಿಗೇ ಏರಿ ಗೊಂಡೇ ಹಿಡಿದ ಹಾಗೆ.
ಸ್ವಾಮಿದ್ರೋಹೀ ಮನೆಗೆ ಪಂಚಮಹಾಪಾತಕದ ಬಾಗಲು.
ಹಂಗಾಳಾದ ಮೇಲೆ ಮಂಗನ ಹಾಗೆ ಮಾಡಬೇಕು.
ಹಂಗು ಹರಿದ ಮೇಲೆ ತೊಂಗೇನು ? ತೊಡರೇನು ?
ಹಂಚಿನಲ್ಲುಣ್ಣುವವರಿಗೆ ಹರಿವಾಣವೇಕೆ ?
ಹಂದಿ ತೊಳೆದರೂ ಕೆಸರಿನಲ್ಲಿ ಹೊರಳೋದು ಬಿಡದು.

ಹಣವಿದ್ದವನಿಗೆ ಗುಣವಿಲ್ಲ, ಗುಣವಿದ್ದವನಿಗೆ ಹಣವಿಲ್ಲ.
ಹಣವಿಲ್ಲದವ ಹೆಣ.
ಹಣವೆಂದರೆ ಹೆಣಾ ಬಾಯಿ ಬಿಡುತ್ತೆ.
ಹಣ್ಣು ಜಾರಿ ಹಾಲಿನಲ್ಲಿ ಬಿದ್ದ ಹಾಗೆ. ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದ ಹಾಗೆ.
ಹಣ್ಣೆಂದು ಶಲಭ ದೀಪದ ಮೇಲೆ ಬಿದ್ದು ಸತ್ತ ಹಾಗೆ.
ಹತ್ತಿರ ಸಾವು ಮದುವೇ ಸಮಾನ.
ಹತ್ತಿರ ಹಲ್ಲ ಕಡ್ಡಿ ಒಬ್ಬನ ತಲೆ ಹೊರೆ.
ಹನಿಗೂಡಿದರೆ ಹಳ್ಳ, ತೆನೆಗೂಡಿದರೆ ಭತ್ತ.
ಹನುಮಂತರಾಯ ಹಗ್ಗಾ ತಿನ್ನುವಲ್ಲಿ ಪೂಜಾರ್ಯೆಯ ಸೇವಿಗೇ ಬಯಸಿದ.
ಹನ್ನೆರಡು ವರುಷ ಸಾಧಕಾ ಮಾಡಿ ಮನೇ ಮುದುಕಿ ಸೊಂಟಾ ಮುರಿದ ಹಾಗೆ.
ಹಬೆಗೆ ತಾಳದೆ ಉರಿಯೊಳಗೆ ಬಿದ್ದನಂತೆ.
ಹರಿವಿಯ ಅನ್ನದಲ್ಲಿ ಒಂದಗುಳು ನೋಡಿದರೆ ಸರಿ.
ಹರಿಯೋ ಪರಿಯಂತರ ಎಳೆಯಬಾರದು; ಮುರಿಯೋ ಪರಿಯಂತರ ಬೊಗ್ಗಿಸಬಾರದು.
ಹಲವು ಸಮಗಾರರು ಕೂಡಿ ತೊಗಲು ಹದಾ ಕೆಡಿಸಿದರು.
ಹಲ್ಲು ಇರುವಾಗಲೇ ಕಡ್ಲೆ ತಿನ್ನಬೇಕು.
ಹಸೀ ಗೋಡೆಗೆ ಕಲ್ಲು ಹೊಡೆದ ಹಾಗೆ.
ಹಳೆದು ಮಾರಿ ಹೊಸದಿಲ್ಲ; ಬಿಳಿದು ಮಾರಿ ಬಣ್ಣವಿಲ್ಲ.
ಹಳ್ಳೀ ಕುರುಬರಿಗೆ ಗಾಜೇ ಮಾಣಿಕ್ಯ.
ಹಾಕುವದಕ್ಕೆ ತೆಗೆಯುವದಕ್ಕೆ ಗೌಡನ ಕೋಳವೇ ?
ಹಾಕೋದು ಬಿತ್ತೋದು ನನ್ನಿಚ್ಛೆ; ಆಗೋದು ಹೋಗೋದು ದೇವರಿಚ್ಛೆ.
ಹಾಗದ ಗೋಧಿ ಮುಪ್ಪಾಗದ ಬೆಲ್ಲಾ ತಿಂತು.
ಹಾಗಲವಾಡಿಗೆ ಹೋದರೆಗೀದರೆ ಹಾಗಕ್ಕೊಂದೆಮ್ಮೆ ತಂದರೆಗಿಂದರೆ ಕರೆದರೆಗಿರೆದರೆ
ನಿಮ್ಮವರಿಗೆ ಮಜ್ಜಿಗೆಗಿಜ್ಜಿಗೆ ಕೊಟ್ಟಗಿಟ್ಟೀಯಾ !
ಹಾಡಿದ್ದೇ ಹಾಡೋ ಕಿಸುಬಾಯಿ ದಾಸ.
ಹಾದೀ ಜಗಳವ ಹಣವಡ್ಡಕ್ಕೆ ಕೊಂಡ.
ಹಾರೋ ಗುಬ್ಬಿಗೆ ಗೋಧೀ ಕಲ್ಲು ಕಟ್ಟಿದ ಹಾಗೆ.
ಹಾಲಕ್ಕಿಯಾದರೆ ಹಾಲ ಕರದೀತೇ ?
ಹಾಲಿದ್ದಾಗಲೇ ಹಬ್ಬಾ ಮಾಡು.
ಹಾವಿಗೆ ಹಾಲೆರೆದರೆ ತನ್ನ ವಿಷಾಬಿಟ್ಟೀತೇ ?
ಹಾವಿನ ಕೂಡೆ ಕಪ್ಪೆಗೆ ಸಗಸವೇ ?
ಹಾವ ಕೊಂದು ಹದ್ದಿನ ಮುಂದೆ ಹಾಕಿದ ಹಾಗೆ.
ಹಾವು ಮುಪ್ಪಾದರೆ ವಿಷ ಮುಪ್ಪೇ.
ಹಾಸಿಗೇ ಅರಿತು ಕಾಲ್ನೀಡಬೇಕು.

ಹಾಳು ತೋಟಕ್ಕೆ ನೀರು ಹಾಕಿ ಬೀಳು ರಟ್ಟೆ ಬಿದ್ದುಹೋಯಿತು.
ಹಿಗ್ಗಿದವ ಮುಗ್ಗ್ಯಾನು, ತಗ್ಗಿದವ ಜಯಿಸ್ಯಾನು.
ಹಿಡಿದದ್ದು ತಪ್ಪಿತು; ಮೆಟ್ಟಿದ್ದು ಮುರಿಯಿತು.
ಹಿಡಿತುಂಬಾ ಹಣಕೊಟ್ಟರೂ ನುಡಿ ಚೆನ್ನಾಗಿರಬೇಕು.
ಹಿಡಿಯುವದಕ್ಕೆ ಘಟ್ಟಿಲ್ಲ, ನಿಲ್ಲುವದಕ್ಕೆ ಕೊನೆಯಿಲ್ಲ.
ಹಿರಿಯಕ್ಕನ ಚಾಳಿ ಮನೇ ಮಕ್ಕಳಿಗೆಲ್ಲಾ.
ಹುತ್ತಾ ಬಡಿದರೆ ಹಾವು ಸಾಯುವದೇ?
ಹುಬ್ಬೇ ಮಳೇಲಿ ಬಿತ್ತಿದರೆ ಹುಲ್ಲೂ ಇಲ್ಲ ಕಾಳೂ ಇಲ್ಲ.
ಹುರುಳೀ ಸಾರಿಗೆ ಹೋಗಿ ಕುದುರೆ ಬೆಲೆ ಕೇಳಿದ ಹಾಗೆ.
ಹುಲೀ ಬಣ್ಣಕ್ಕೆ ನರೀ ಮೈಸುಟ್ಟುಕೊಂಡ ಹಾಗೆ.
ಹುಲೀ ಮರೀ ಹುಲ್ಲು ಮೇದೀತೆ?
ಹುಲ್ಲೇ ಹಾರಿದ್ದಕ್ಕೂ ಹುಲಿ ಅಡಗಿದ್ದಕ್ಕೂ ಸರಿಬಂದೀತೇ?
ಹೂ ಮಾರಿದ ಊರಲ್ಲಿ ಹುರೀ ಮಾರಬಾರದು.
ಹೂವಿನಿಂದ ನಾರು ಮಂಡೇ ಮೇಲೆ.
ಹೆಗ್ಗಣ ಪರದೇಶಕ್ಕೆ ಹೋದರೆ ನೆಲಾ ಕೆರೆಯುವದು ಬಿಟ್ಟೀತೇ?
ಹೆಣ್ಣು ಚೆಲ್ವೆ, ಕಣ್ಣು ಮಾತ್ರ ಕಾಣುವದಿಲ್ಲ.
ಹೆತ್ತೈಯನ ಅರಿಯದವ ಮುತ್ತೈಯನ ಬಲ್ಲನೇ?
ಹೆತ್ತವರಿಗೆ ಹೆಗ್ಗಣ ಮುದ್ದು.
ಹೆಸರು ಮಾತ್ರ ಗಂಗಾಭವಾನಿ, ಕುಡಿಯುವದಕ್ಕೆ ನೀರಿಲ್ಲ.
ಹೇಳಿಕೊಟ್ಟ ಬುದ್ಧಿ ಕಟ್ಟಿಕೊಟ್ಟ ಬುತ್ತಿ ಎಲ್ಲಿ ತನಕಾ ಬರುವದು?
ಹೇಳುವವರು ಹೆಡ್ಡರಾದರೆ ಕೇಳುವವರಿಗೆ ಮತಿಯಿಲ್ಲವೇ?
ಹೊಟ್ಟು ಕುಟ್ಟಿ ಕೈಯೆಲ್ಲಾ ಗುಳ್ಳೆ.
ಹೊರಗೆ ಹೋಗುವ ಮಾರಿ ನನ್ನ ಮನೆ ಹೊಕ್ಕು ಹೋಗು ಅಂದ ಹಾಗೆ.
ಹೊಸ ವೈದ್ಯನಿಗಿಂತ ಹಳೇ ರೋಗಿ ವಾಸಿ.
ಹೊಸ್ತಿಲ ಸಾರಿಸಿದ ಮಾತ್ರದಲ್ಲಿಯೇ ಹಬ್ಬವಾಯಿತೋ?
ಹೊಳೆ ದಾಟಿದ ಮೇಲೆ ಅಂಬಿಗನ ಮಿಂಡ.
ಹೊಳೆಗೆ ನೆನೆಯದ ಕಲ್ಲು ಮಳಗೆ ನೆನೆದೀತೇ?
ಹೊಳೇ ನೀರಿಗೆ ದೊಣ್ಣಪ್ಪನಾಯಕನ ಅಪ್ಪಣೆಯೇ?
ಹೊಳೆ ಮೂಗಾವುದವಿರುವಾಗ ಕೆರಾ ಕಳಚುವರುಂಟೇ?
ಹೋಗದ ಊರಿಗೆ ದಾರೀ ಕೇಳಿದ ಹಾಗೆ.
ಹೋದರೆ ಒಂದು ಕಲ್ಲು, ಬಿದ್ದರೆ ಒಂದು ಹಣ್ಣು.
ಕ್ಷೌರದ ಕತ್ತಿ ಚಲೋದು. ಯಾಕೆ ಅಳುತ್ತೀರಮ್ಮಾ?
ಕ್ಷೌರಕ್ಕೆ ಕೂತಲ್ಲಿ ಸೀನು ಬಂದ ಹಾಗೆ.